S.M.S.O. Publication No. 172

# ಶ್ರೀಮದ್ಭಾಗವತ

## ತೃತೀಯಸ್ಕಂಧ ಸಂಪುಟ 2

ಅಧ್ಯಾಯ 18 ರಿಂದ ಸಮಾಪ್ತಿಯವರೆಗೆ

ಸ್ವತೇಜಸಾ ಧ್ವಸ್ತಗುಣಪ್ರವಾಹಂ ವಂದೇ ವಿಷ್ಣುಂ ಕಪಿಲಂ ವೇದಗರ್ಭಂ



ಅನುವಾದ ಹಾಗೂ ಸಂಪಾದನೆ

ಪಂ. ಪೂ. ಶ್ರೀ ಗುತ್ತಲ ರಂಗಾಚಾರ್ಯರು

ಕುಲಪತಿಗಳು ಶ್ರೀ ಜಯತೀರ್ಥ ವಿದ್ಯಾಪೀಠ

S.M.S.O SABHA PUBLICATION No 172

# ಶ್ರೀಮದ್ ಭಾಗವತ

## ತೃತೀಯಸ್ಕಂಧ - ಸಂಪುಟ - 2

ಅಧ್ಯಾಯ ೧೮ ರಿಂದ ಸಮಾಪ್ತಿಯವರೆಗೆ

*ಅನುವಾದ ಹಾಗೂ ಸಂಪಾದನೆ*

**ಪಂ.ಪೂ.ಗುತ್ತಲ ರಂಗಾಚಾರ್ಯರು**

ಕುಲಪತಿಗಳು ಶ್ರೀಜಯತೀರ್ಥ ವಿದ್ಯಾಪೀಠ

ಸಹ ಸಂಪಾದನೆ :

**ಪಂ. ಕೃಷ್ಣಾಚಾರ್ಯ ಉಪಾಧ್ಯಾಯ**

ಅಧ್ಯಾಪಕರು ಶ್ರೀಜಯತೀರ್ಥ ವಿದ್ಯಾಪೀಠ

ಪ್ರಕಾಶಕರು

ಶ್ರೀಮನ್ ಮಧ್ವಸಿದ್ಧಾಂತೋನ್ನಾಹಿನೀ ಸಭಾ

ತಿರುಚಾನೂರು.

**2005**

**Srimad Bhagavata** Tritiyaskandha in Kannada

by **Pandita Rangacharya Guttala**, Kulapati of Sri Jayateertha Vidyapitha, Published by S.M.S.O. SABHA,Tiruchanuru.

Copies : 1000

First Edition : July 2005

No.of Pages : X+430



**Price . 150/-**

Copies can be had from :
1. **Hon. Secretary**
S.M.S.O Tiruchanuru, (A.P)

2. **Jayateertha Vidyapeetha**
Sri Uttaradi Math Basavanagudi
Shankarapurm, 5th Cross
Basavanagudi, Bangalore - 04

ಮುಖಪುಟ ವಿನ್ಯಾಸ : ಶೇಷಗಿರಿ ಕೆ ಎಂ

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

Printed by : **Jayanth Printers** Phone : 080 30914815
Mobil : 93412 15527

## ಲೇಖಕನ ನುಡಿ

ಮುಕ್ತಿಗೆ ಭಕ್ತಿಯೇ ಮಾರ್ಗ. ಭಕ್ತಿಗೆ ಶ್ರೀಮದ್ಭಾಗವತ ಸೋಪಾನ. ಭಕ್ತಿಗೆ ಉದ್ದೀಪಕವಾದ ವರಾಹ ಚರಿತೆ ಕಪಿಲ ಚರಿತೆ ತೃತೀಯಸ್ಕಂಧದಲ್ಲಿ ಹಾಸು ಹೊಕ್ಕಾಗಿದೆ. ಕಪಿಲೋಪದೇಶದಲ್ಲಿಯಂತೂ ವೈರಾಗ್ಯದಿಂದ ಯುಕ್ತವಾದ ಭಕ್ತಿಯು ಮೋಕ್ಷ ಮಾರ್ಗವೆಂದು ಹೆಜ್ಜೆ ಹೆಜ್ಜೆಗೂ ಕಾಣುತ್ತೇವೆ. ಇಂತಹ ತೃತೀಯಸ್ಕಂಧದ ಅನುವಾದವನ್ನು ಕೈಕೊಂಡು ಪ್ರಕಾಶಿಸಿ ಪ್ರಥಮ ಸಂಪುಟವನ್ನು ಪವಿತ್ರವಾದ ಆಷಾಢ ಶುದ್ಧ ದಶಮಿಯ ದಿನದಂದು "ಕರ್ಮನಿರ್ಣಯ ಪಾಠದ ಸುಮಂಗಲ ಸಂದರ್ಭದಲ್ಲಿ ಗುರುಗಳ ಮೂಲಕ ಭಗವಂತನಿಗೆ ಸಮರ್ಪಿಸಿದೇವು. ಆ ಪ್ರಸಾದವನ್ನು ನಿಮಗೆಲ್ಲರಿಗೂ ಹಂಚಿದೆವು. ಇದೀಗ ದ್ವಿತೀಯಸಂಪುಟವನ್ನು ಭಾಗವತದ ವ್ಯಾಖ್ಯಾನವನ್ನು ಮಾಡಿ ಭಾಗವತ ಧರ್ಮಾಚರಣೆಯಿಂದ ಪಾವನರಾದ ಶ್ರೀ ೧೦೦೮ ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಆರಾಧನಾ ಸಂದರ್ಭದಲ್ಲಿ ಆ ಗುರುಗಳ ಸನ್ನಿಧಾನದಲ್ಲಿ ಗುರುಗಳಾದ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ ಹಾಗೂ ಸಮಸ್ತಗುರುಗಳ ಅಂತರ್ಯಾಮಿಯಾದ ಭಗವಂತನಿಗೆ ಈ ಗ್ರಂಥಕುಸುಮವನ್ನು ಅರ್ಪಿಸುತ್ತಿದ್ದೇವೆ.

ಈ ಆರಾಧನಾ ಸಂದರ್ಭದಲ್ಲಿ ಪ್ರಾತಸ್ಮರಣೀಯರಾದ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಪಾದಕಮಲಗಳಲ್ಲಿ ಅನಂತಾನಂತ ಭಕ್ತಿಶ್ರದ್ಧಾಪೂರ್ವಕವಾದ ಸಾಷ್ಟಾಂಗಪ್ರಣಾಮಗಳನ್ನು ಅರ್ಪಿಸುತ್ತೇನೆ.

ಈ ಗ್ರಂಥವನ್ನು ಬಿಡುಗಡೆ ಮಾಡಿದ ಪರಮಪೂಜ್ಯರಾದ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರಿಗೆ ಭಕ್ತಿಶ್ರದ್ಧಾಪೂರ್ವಕವಾದ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಅದರಂತೆಯೇ ಕೂಡಲೀ ಮಠಾಧೀಶರಾದ ಉಭಯ ಶ್ರೀಗಳವರಿಗೂ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಇದರ ಮುದ್ರಣದ ಭಾರವನ್ನು ಹೊತ್ತ ತಿರುಚಾನೂರಿನ ಎಸ್.ಎಮ್.ಎಸ್. ಓ ಸಭಾ ಅಧ್ಯಕ್ಷರಾದ ಪೂಜ್ಯ ಕೂಸನೂರು ಆಚಾರ್ಯರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಕಾರ್ಯದರ್ಶಿಗಳಾದ ಆರ್ ಅನಂತನ್ ಅವರಿಗೂ ನನ್ನ ಹಾರ್ದಿಕ ಅಭಿನಂದನೆಗಳು.

ಕೊನೆಯಲ್ಲಿ ಈ ಜ್ಞಾನಸೇವೆಯನ್ನು ಪೂರ್ಣಮಾಡಿದ ಮುಖ್ಯಪ್ರಾಣಪತಿ ಶ್ರೀರಾಮಚಂದ್ರನಿಗೆ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

## PUBLISHER'S NOTE

We feel proud to publish this 172 publication of our esteemed Sabha relating to Srimad Bhagavatham Third Skandha in second volume.

It has been earlier captulated to publish the entire consolidation of third skandha in a single volume. Because of the prohibitive volume and size , it has been decided to publish in two volumes and the first volume has already been published in July, 2005. Our learned Dharmadhikari Pandit Shri Guttal Rangacharya has taken this holy task of compilation of various tippanis and also moola of Bhagavatha Thatparyanirnaya of our Srimadwacharya and has succeeded to a great extent in bringing the first volume in Kannada in an appreciable manner. The first volume had a good reception and has been accepted as a very good literature in this aspect by one and all.

The second volume concentrates from the 18th Chapter to end of the Third Skandha of Srimad Bhagavatham in which Kapilopadesa is more vividly described. If our Acharya's Bhagavatha Thatparyanirnaya is read, one can found that Acharya Bhashya by volume for this skandha is the biggest after the 11th skandha. The circumstances leading to the birth of Hiranyaksha and Hiranyakasipu, the destruction of Hiranyaksha, the story of Kardama Prajapati leading up to the birth of Kapila & Kapilopadesa philosophy of love and knowledge to his mother Devahuti. The Jiva's cycle on births and deaths has been vividly described by Kapilopadesa and it is the cardinal principle to be followed by one and all. As delivered in this skandha whoever hears or teachings with faith and devotion this most profound exposition, will acquire a strong devotion to the feet of Lord Vishuu.

SMSO Sabha profoundly thanks to Pandit Guttal Rangacharya for this very valuable work whose results will stand against time. Shri Guttal Rangacharya has already published Srimad Bhagavathams 11th skandha through our Sabha and we genuinely pray that this holy work will please Lord Vishnu. We also thank the printer of the publication JAYANTA PRINTERS who has printed the book in an attractive manner. As said in this Third Skandha may the readers of the book acquire unshakeable devotion to the feet of Lord Vishnu.

**R.Ananthan, B.Sc., F.C.A.,**
Chartered Accountant,
Honorary Secretary,
S.M.S.O.Sabha, Tiruchanoor.

Tirupur

## ವಿಷಯಾನುಕ್ರಮಣಿಕಾ

### ಅಧ್ಯಾಯ - ೧೮



### ಅಧ್ಯಾಯ - ೧೯



### ಅಧ್ಯಾಯ - ೨೦



### ಅಧ್ಯಾಯ - ೨೧

## PUBLISHER'S NOTE

We feel proud to publish this 172 publication of our esteemed Sabha relating to Srimad Bhagavatham Third Skandha in second volume.

It has been earlier captulated to publish the entire consolidation of third skandha in a single volume. Because of the prohibitive volume and size , it has been decided to publish in two volumes and the first volume has already been published in July, 2005. Our learned Dharmadhikari Pandit Shri Guttal Rangacharya has taken this holy task of compilation of various tippanis and also moola of Bhagavatha Thatparyanirnaya of our Srimadwacharya and has succeeded to a great extent in bringing the first volume in Kannada in an appreciable manner. The first volume had a good reception and has been accepted as a very good literature in this aspect by one and all.

The second volume concentrates from the 18th Chapter to end of the Third Skandha of Srimad Bhagavatham in which Kapilopadesa is more vividly described. If our Acharya's Bhagavatha Thatparyanirnaya is read, one can found that Acharya Bhashya by volume for this skandha is the biggest after the 11th skandha. The circumstances leading to the birth of Hiranyaksha and Hiranyakasipu, the destruction of Hiranyaksha, the story of Kardama Prajapati leading up to the birth of Kapila & Kapilopadesa philosophy of love and knowledge to his mother Devahuti. The Jiva's cycle on births and deaths has been vividly described by Kapilopadesa and it is the cardinal principle to be followed by one and all. As delivered in this skandha whoever hears or teachings with faith and devotion this most profound exposition, will acquire a strong devotion to the feet of Lord Vishuu.

SMSO Sabha profoundly thanks to Pandit Guttal Rangacharya for this very valuable work whose results will stand against time. Shri Guttal Rangacharya has already published Srimad Bhagavathams 11th skandha through our Sabha and we genuinely pray that this holy work will please Lord Vishnu. We also thank the printer of the publication JAYANTA PRINTERS who has printed the book in an attractive manner. As said in this Third Skandha may the readers of the book acquire unshakeable devotion to the feet of Lord Vishnu.

Tirupur

**R.Ananthan, B.Sc., F.C.A.,**
Chartered Accountant,
Honorary Secretary,
S.M.S.O.Sabha, Tiruchanoor.

## ವಿಷಯಾನುಕ್ರಮಣಿಕಾ

## ಅಧ್ಯಾಯ - ೨೨



## ಅಧ್ಯಾಯ - ೨೩



## ಅಧ್ಯಾಯ - ೨೪

### ಅಧ್ಯಾಯ - ೨೫



### ಅಧ್ಯಾಯ - ೨೬



### ಅಧ್ಯಾಯ - ೨೭



### ಅಧ್ಯಾಯ - ೨೮



ನಮೋ ನಮಸ್ತೇಽಖಿಲಯಜ್ಞತಂತವೇ
ಸ್ಥಿತೌ ಗೃಹೀತಾಮಲಸತ್ತ್ವಮೂರ್ತಯೇ ।
ದಿಷ್ಟ್ಯಾ ಹತೋಽಯಂ ಜಗತಾಮರುಂತುದ-
ಸ್ತ್ವತ್ಪಾದಭಕ್ತ್ಯಾ ವಯಮೀಶ ! ನಿರ್ವೃತಾಃ ॥



# ಅಥ ಅಷ್ಟಾದಶೋಽಧ್ಯಾಯಃ

ಯಾರಿಂದಲೂ ಕೊಲ್ಲಲಾಗದ ಹಿರಣ್ಯಕಶಿಪು ಹಿರಣ್ಯಾಕ್ಷರನ್ನು ಕೊಲ್ಲಲು ಸಾಮರ್ಥ್ಯವುಳ್ಳವನು ಶ್ರೀಹರಿಯೇ ಎಂದು ತಿಳಿದಿದ್ದರಿಂದ ಅವನಲ್ಲಿ ಭಕ್ತಿ ಮಾಡಬೇಕು ಎಂದು ಈ ಮುಂದಿನ ಎರಡು ಅಧ್ಯಾಯಗಳಲ್ಲಿ ಶ್ರೀಹರಿಯ ಮಹಿಮೆಯನ್ನು ಹೇಳುವರು. ಮೊದಲಿಗೆ ದೇವತೆಗಳು ಸ್ವರ್ಗಕ್ಕೆ ಹೋದದ್ದನ್ನು ಹೇಳುವರು–

**ಮೈತ್ರೇಯ ಉವಾಚ**

**ನಿಶಮ್ಯಾತ್ಮಭುವಾ ಗೀತಂ ಕಾರಣಂ ಶಂಕಯೋಜ್ಝಿತಾಃ ।**
**ತತಃ ಸರ್ವೇ ನ್ಯವರ್ತಂತ ತ್ರಿದಿವಾಯ ದಿವೌಕಸಃ ॥೧॥**

ದಿವೌಕಸಃ=ದೇವತೆಗಳು ಆತ್ಮಭುವಾ=ಬ್ರಹ್ಮದೇವರಿಂದ ಗೀತಂ=ಹೇಳಲ್ಪಟ್ಟ ಕಾರಣಂ=ತಮಗಾದ ತೊಂದರೆಯ ಕಾರಣವನ್ನು ನಿಶಮ್ಯ=ಕೇಳಿ ಶಂಕಯಾ ಉಜ್ಝಿತಾಃ=ಸಂಶಯ ರಹಿತರಾಗಿ ತತಃ=ಬ್ರಹ್ಮಸದನದಿಂದ ತ್ರಿದಿವಾಯ=ಸ್ವರ್ಗಕ್ಕೆ ನ್ಯವರ್ತಂತ=ತೆರಳಿದರು ॥೧॥

**ದಿತಿಸ್ತು ಭರ್ತುರಾದೇಶಾದಪತ್ಯಪರಿಶಂಕಿನೀ ।**
**ಪೂರ್ಣೇ ವರ್ಷಶತೇ ಸಾಧ್ವೀ ಪುತ್ರೌ ಪ್ರಸುಷುವೇ ಯಮೌ ॥೨॥**

ಸಾಧ್ವೀ=ಪತಿವ್ರತೆಯಾದ ಅಪತ್ಯಪರಿಶಂಕಿನೀ=ತನ್ನ ಮಕ್ಕಳಿಗೆ ಶ್ರೀಹರಿಯಿಂದ ನಾಶವಾಗುವದೆಂಬ ಶಂಕೆಯಿಂದ (ಪ್ರಸವಿಸದೇ) ವರ್ಷಶತೇ ಪೂರ್ಣೇ=ಒಂದು ನೂರುವರ್ಷ ಮುಗಿಯುತ್ತಿರಲು (ಗರ್ಭಧಾರಣ ಮಾಡಿ) ಭರ್ತುಃ ಆದೇಶಾತ್=ಪತಿಯ ಆಜ್ಞೆಯಂತೆ ಯಮೌ ಪುತ್ರೌ ಪ್ರಸುಷುವೇ=ಅವಳಿಗಂಡುಮಕ್ಕಳಿಗೆ ಜನ್ಮವಿತ್ತಳು ॥೨॥

**ಉತ್ಪಾತಾ ಬಹವಸ್ತತ್ರ ನಿಪೇತುರ್ಜಾಯಮಾನಯೋಃ ।**
**ದಿವಿ ಭುವ್ಯಂತರಿಕ್ಷೇ ಚ ಲೋಕಸ್ಯ ಚ ಭಯಾವಹಾಃ ॥೩॥**

ತತ್ರ ಜಾಯಮಾನಯೋಃ ಈ ಮಕ್ಕಳು ಜನಿಸುವ ಕಾಲದಲ್ಲಿ ದಿವಿ ಭುವಿ ಅಂತರಿಕ್ಷೇ ಚ=ಭೂಲೋಕ, ಸ್ವರ್ಗಲೋಕ ಅಂತರಿಕ್ಷಗಳಲ್ಲಿ ಲೋಕಸ್ಯ=ಜನರಿಗೆ ಭಯಾವಹಾಃ=ಭಯವನ್ನುಂಟು ಮಾಡುವ ಬಹವಾಃ=ಅನೇಕ ಉತ್ಪಾತಾಃ ನಿಪೇತುಃ=ಅಪಶಕನುಗಳುಂಟಾದವು ॥೩॥

ಅಪಶಕುನಗಳನ್ನೇ ವಿವರಿಸುವರು –

**ಸಹಾಚಲಾ ಭುವಶ್ಚೇಲುರ್ದಿಶಃ ಸರ್ವಾಃ ಪ್ರಜಜ್ವಲುಃ ।**
**ಸೋಲ್ಕಾ ಶ್ಚಾಶನಯಃ ಪೇತುಃ ಕೇತವಶ್ಚಾರ್ತಿಹೇತವಃ ॥೪॥**

ಸಹಾಚಲಾಃ ಪರ್ವತಸಹಿತವಾದ ಭುವಃ=ಭೂಪ್ರದೇಶಗಳು ಚೇಲುಃ= ನಡುಗಿದವು. ಸರ್ವಾಃ ದಿಶಃ ಪ್ರಜಜ್ವಲುಃ=ಎಲ್ಲ ದಿಕ್ಕುಗಳು ಉರಿಯತೊಡಗಿದವು. ಸೋಲ್ಕಾಃ=ಕೊಳ್ಳಿಯಿಂದ ಸಹಿತವಾದ ಅಶನಯಃ=ಸಿಡಿಲುಗಳು ಪೇತುಃ=ಬಿದ್ದವು. ಆರ್ತಿಹೇತವಃ=ದುಃಖಸೂಚಕಗಳಾದ ಕೇತವಃ ಉದಯಾಂ ಚಕ್ರುಃ=ಧೂಮ-ಕೇತುಗಳು ಕಾಣಸಿಕೊಂಡವು. ॥೪॥

**ವವೌ ವಾಯುಃ ಸುದುಸ್ಪರ್ಶಃ ಫಟ್‌ಕಾರಾರಾವವಾನ್ ಮುಹುಃ ।**
**ಉನ್ಮೂಲಯನ್ ನಗಪತೀನ್ ವಾತ್ಯಾನೀಕೋ ರಜೋಧ್ವಜಃ ॥೫॥**

ರಜೋಧ್ವಜಃ=ಧೂಳಿಯೇ ಧ್ವಜವಾಗಿವುಳ್ಳ ವಾತ್ಯಾನಿಕಃ=ಸುಂಟರಗಾಳಿಯೇ ಸೇನೆಯಾಗಿವುಳ್ಳ ಫಟ್‌ಕಾರಾರಾವವಾನ್=ಗಾಳಿಗೆ ಇರುವ ಶಬ್ದವುಳ್ಳ ಸುದುಸ್ಪರ್ಶಃ =ಅತ್ಯಂತ ಮುಟ್ಟಲಾಗದ ದುಃಖಕರಸ್ಪರ್ಶವುಳ್ಳ ವಾಯುಃ=ಗಾಳಿಯು ನಗಪತೀನ್ =ಮಹಾವೃಕ್ಷಗಳನ್ನು ಉನ್ಮೂಲಯನ್=ನೆಲಕ್ಕುರುಳಿಸುತ್ತಾ ಮುಹುಃ=ಪುನಃ ಪುನಃ ವವೌ=ಬೀಸಿತು.

ಇಲ್ಲಿ ಫಟ್‌ಕಾರ ಎಂಬ ಶಬ್ದಉಳ್ಳ ಎಂದರ್ಥವಾಗುವುದು ಕಾರಣ ತಾತ್ಪರ್ಯ ಹೇಳುವರು.

**ಫಟ್‌ಕಾರಶ್ಚೈವ ಘತ್ಕಾರಸ್ತಥಾ ಕಿಲಕಿಲಾದಯಃ ।**
**ಅನುಕಾರಶಬ್ದಾ ವಿಜ್ಞೇಯಾ ಯೇ ಚಾನ್ಯೇ ತಾದೃಶಾ ಮತಾಃ ॥**

ಇತ್ಯಭಿಧಾನಂ ।

ಮಳೆಯ ಶಬ್ದವನ್ನು ಅನುಕರಣೆ ಮಾಡುವಾಗ ರಪರಪಮಳೆಯನ್ನುವಂತೆ ಪಟ ಪಟ ಗಾಳಿ ಬೀಸಿತು, ಎಂದು ಗಾಳಿಯ ಶಬ್ದದ ಅನುಕರಣ ಮಾಡಿರುವರು.ಮುಂದೆ ವರಿಶಬ್ದದ ಅನುಕರಣ ಟಂಕಾರ ಎಂಬುದು ಮುಂತಾಗಿ ತಿಳಿಯಬೇಕು ॥೫॥

**ಉಲ್ಲಸತ್ತಡಿದಂಭೋದಘಟಯಾ ನಷ್ಟಭಾಗಣೇ ।**
**ವ್ಯೋಮ್ನಿ ಪ್ರವಿಷ್ಟತಮಸಾ ನ ಸ್ಮ ವ್ಯಾದೃಶ್ಯತೇ ಪದಂ ॥೬॥**

ಉಲ್ಲಸತ್=ಪ್ರಕಾಶಮಾನವಾದ ತಡಿದಂಭೋದ=ಮಿಂಚುಗಳುಳ್ಳ ಮೋಡಗಳ ಘಟಯಾ ಸಮೂಹದಿಂದ ನಷ್ಟಭಾಗಣೇ=ಸೂರ್ಯಮುಂತಾದವುಗಳ ಪ್ರಭೆಯು ಕಾಣದಾಗುತ್ತಿರಲು ಅಥವಾ ನಕ್ಷತ್ರಗಳು ಕಾಣದಾಗಲು ವ್ಯೋಮ್ನಿ=ಆಕಾಶದಲ್ಲಿ ಪ್ರವಿಷ್ಟತಮಸಾ=ಆವರಿಸಿದ ಕತ್ತಲೆಯಿಂದ ಪದಂ=ಸ್ಥಾನವು ನ ವ್ಯಾದೃಶ್ಯತೇ ಸ್ಮ= ಕಾಣುತ್ತಿರಲಿಲ್ಲ ॥೬॥

**ಚುಕ್ರೋಶ ವಿಮನಾ ವಾರ್ಧಿರುದೂರ್ಮಿಕ್ಷುಭಿತೋದರಃ ।**
**ಸೋದಪಾನಾಶ್ಚ ಸರಿತಶ್ಚುಕ್ಷುಭುಃ ಶುಷ್ಕಪಂಕಜಾಃ ॥೭॥**

ಉದೂರ್ಮಿಕ್ಷುಭಿತೋದರಃ=ಉತ್ಕೃಷ್ಟವಾದ (ಎತ್ತರವಾದ) ತೆರೆಗಳಿಂದ ಕ್ಷೋಭೆಗೊಂಡ ಮಧ್ಯಭಾಗಉಳ್ಳ ವಾರ್ಧಿಃ=ಸಮುದ್ರವು ವಿಮನಾ ಇವ=ದುಃಖಿತ-ವಾದಂತೆ ಚುಕ್ರೋಶ=ಕೂಗಿತು. ಶುಷ್ಕಪಂಕಜಾಃ=ಒಣಗಿದ ಕಮಲಗಳುಳ್ಳ ಸೋದಪಾನಾಃ=ಬಾವಿಕೆರೆ ಮುಂತಾದವುಗಳಿಂದ ಸಹಿತಗಳಾದ ಸರಿತಃ=ನದಿಗಳು ಚುಕ್ಷುಭುಃ=ಕ್ಷೋಭೆಗೊಂಡವು ॥೭॥

**ಮುಹುಃ ಪರಿಧಯೋಽಭೂವನ್ ಸರಾಹ್ವೋಃ ಶಶಿಸೂರ್ಯಯೋಃ ।**
**ನಿರ್ಘಾತರವನಿರ್ಹ್ರಾದಾ ವಿವರೇಭ್ಯಃ ಪ್ರಜಜ್ಞಿರೇ ॥೮॥**

ಸರಾಹ್ವೋಃ=ರಾಹುಗ್ರಸ್ತರಾದ ಶಶಿಸೂರ್ಯಯೋಃ=ಚಂದ್ರಸೂರ್ಯರಿಗೆ ಮುಹುಃ=ಪುನಃ ಪುನಃ ಪರಿಧಯಃ ಅಭೂವನ್=ಖಣಕಟ್ಟಿದವು (ಸುತ್ತಲೂ ಒಂದು ವಿಧ ಪ್ರಕಾಶ ಬೀಳುವುದು) ವಿವರೇಭ್ಯಃ=ಪರ್ವತಗುಹೆಗಳಿಂದ ನಿರ್ಘಾತ-ರವನಿರ್ಹ್ರಾದಾಃ=ಮೋಡವಿಲ್ಲದೆ ಉಂಟಾದ ಗುಡುಗಿನ ಪ್ರತಿಧ್ವನಿಗಳು ಪ್ರಜಜ್ಞಿರೇ =ಉಂಟಾದವು ॥೮॥

**ಅಂತರ್ಗ್ರಾಮೇಷು ಮುಖತೋ ವಮಂತ್ಯೋ ವಹ್ನಿಮುಲ್ಬಣಂ ।**
**ಸೃಗಾಲಾ ಅಪಿ ಟಂಕಾರೈಃ ಪ್ರಣೇದುರಶಿವಾಃ ಶಿವಾಃ ॥೯॥**

ಗ್ರಾಮೇಷು ಅಂತಃ=ಊರುಗಳ ಮಧ್ಯದಲ್ಲಿ ಮುಖತಃ=ಬಾಯಿಯಿಂದ ಉಲ್ಬಣಂ=ಕ್ರೂರವಾದ ವಹ್ನಿಂ=ಬೆಂಕಿಯನ್ನು ವಮಂತ್ಯಃ=ಕಾರುತ್ತ ಸೃಗಾಲಾಃ ಗಂಡು ನರಿಗಳು ಅಶಿವಾಃ=ಅಮಂಗಲಕರವಾದ ಶಿವಾಃ=ಅಪಿ ಹೆಣ್ಣು ನರಿಗಳೂ ಸಹ ಟಂಕಾರೈಃ=ತಮ್ಮ ಜಾತಿಯ ಸ್ವರಕ್ಕೆ ವ್ಯತಿರಿಕ್ತವಾದ ಸ್ವರದಿಂದ ಪ್ರಣೇದುಃ=ಕೂಗಿದವು.

ಟಂಕಾರಶಬ್ದಾರ್ಥವಾಗದ್ದರಿಂದಲೂ ಶಿವಾ ಎಂದರೂ ನರಿ, ಸೃಗಾಲ. ಎಂದರೂ ನರಿ ಆದ್ದರಿಂದ ಪುನರುಕ್ತವಾಗುವುದು ಕಾರಣ ವ್ಯಾಖ್ಯಾನಿಸುವರು.

**ಟಂಕಾರೋಽಪಿ ಅನುಕಾರಶಬ್ದಃ । ಸೃಗಾಲಾಃ ತತ್ರ ಪುಂಮಾಸಃ ॥**

ಹಿಂದೆ ಹೇಳಿದ ಫಟ್‌ಕಾರದಂತೆ ಟಂಕಾರವು ನರಿಯ ಅನುಕರಣ ಶಬ್ದವಾಗಿದೆ. ಸೃಗಾಲ ಶಿವಾ ಎರಡೂ ನರಿಯಾಗಿದ್ದರೂ ಅವುಗಳಲ್ಲಿ ಸೃಗಾಲವೆಂದರೆ ಗಂಡುನರಿ. ಶಿವಾ ಎಂದರೆ ಹೆಣ್ಣು. ಆದ್ದರಿಂದ ಪುನರುಕ್ತಿ ಇಲ್ಲವೆಂದು ಭಾವ. ಹೀಗೇಕೆ ಎಂದರೆ ಬೇರೆ ಸ್ಥಳದಲ್ಲಿಯೂ ಸೃಗಾಲ ಶಿವಾ ಶಬ್ದಗಳನ್ನು ಜೊತೆ ಜೊತೆಗೆ ಉಪಯೋಗಿಸು-ದ್ದುಂಟು ಎಂದು ಹೇಳುವರು.

**''ನಾಶಸ್ತತ್ರ ಸೃಗಾಲಾನಾಂ ಶಿವಾನಾಂ ಚಾನ್ಯಥಾ ಸ್ವರೇ'' ॥ ಇತ್ಯಾಗ್ನೇಯೆ ।**

ಗಂಡು ಹೆಣ್ಣು ನರಿಗಳು ಅಪಸ್ವರದಿಂದ ಕೂಗಿದರೆ ನಾಶಕ್ಕೆ ಸೂಚಕವೆಂದು ತಿಳಿಯಬೇಕೆಂದು ಆಗ್ನೇಯ ಪುರಾಣದಲ್ಲಿದೆ ॥೯॥

**ಸಂಗೀತವದ್ ರೋದನವದುನ್ನಮಯ್ಯ ಶಿರೋಧರಾನ್ ।**
**ವ್ಯಮುಂಚನ್ ವಿವಿಧಾ ವಾಚೋ ಗ್ರಾಮಸಿಂಹಾಸ್ತತಸ್ತತಃ ॥೧೦॥**

ಗ್ರಾಮಸಿಂಹಾಃ=ನಾಯಿಗಳು ಶಿರೋಧರಾನ್=ಕುತ್ತಿಗೆಗಳನ್ನು ಉನ್ನಮಯ್ಯ= ಮೇಲೆ ಮಾಡಿ ಸಂಗೀತವತ್=ಹಾಡುವಂತೆ ರೋದನವತ್=ಅಳುವಂತೆ ತತಃ ತತಃ =ಅಲ್ಲಲ್ಲಿ ವಿವಿಧಾಃ ವಾಚಃ=ವ್ಯಮುಂಚನ್=ಅನೇಕ ರೀತಿಯಾಗಿ ಬೊಗಳಿದವು. ॥೧೦॥

**ಖರೋಷ್ಟ್ರಾಃ ಕರ್ಕಶೈಃ ಕ್ಷತ್ತಃ ಖುರೈರ್ಘ್ನಂತೋ ಧರಾತಲಂ ।**
**ಖಾತ್ಕಾರರಭಸಾ ಮತ್ತಾಃ ಪರ್ಯಧಾವನ್ ವರೂಥಶಃ ॥೧೧॥**

ಹೇ ಕ್ಷತ್ತಃ=ಎಲೋ ವಿದುರನೇ ! ಖರೋಷ್ಟ್ರಾಃ=ಕತ್ತೆ ಮತ್ತು ಒಂಟೆಗಳು ಕರ್ಕಶೈಃ =ಕಠಿಣವಾದ ಖುರೈಃ ಉಗುರುಗಳಿಂದ ಧರಾತಲಂ ಭೂಮಿಯನ್ನು ಘ್ನಂತಃ= ಕೆದರುತ್ತ ಖಾತ್ಕಾರರಭಸಾಃ=ತನ್ನ ಜಾತಿಯ ವ್ಯತ್ಯಸ್ತಸ್ವರ ಹಾಗೂ ಹರ್ಷವೇಗವುಳ್ಳ-ವುಗಳಾಗಿ ಮತ್ತಾಃ=ಮದವುಳ್ಳವಗಳು ವರೂಥಶಃ ಹಿಂಡುಹಿಂಡಾಗಿ ಪರ್ಯ-ಧಾವನ್=ಓಡಿದವು ॥೧೧॥

**ರುದಂತೋ ರಾಸಭತ್ರಸ್ತಾ ನೀಡಾದುದಪತನ್ ಖಗಾಃ ।**
**ಘೋಷೇಽರಣ್ಯೇ ಚ ಪಶವಃ ಶಕೃನ್ಮೂತ್ರಮಕುರ್ವತ ॥೧೨॥**

ರಾಸಭತ್ರಸ್ತಾಃ=ಕತ್ತೆಯ ಧ್ವನಿಯಿಂದ ಹೆದರಿದ ಖಗಾಃ=ಪಕ್ಷಿಗಳು ರುದಂತಃ= ಅಳುತ್ತ ನೀಡಾತ್ ಗೂಡಿನಿಂದ ಉದಪತನ್=ಕೆಳಗೆ ಬಿದ್ದವು.

ಘೋಷೇ ಹಳ್ಳಿಗಳಲ್ಲಿಯೂ ಅರಣ್ಯೇಚ=ಅಡವಿಗಳಲ್ಲಿಯೂ ಪಶವಃ=ದನಗಳು ಶಕೃನ್ಮೂತ್ರಂ ಅಕುರ್ವತ=ಮಲಮೂತ್ರ ವಿಸರ್ಜಿಸಿದವು. ॥೧೨॥

**ಗಾವೋಽತ್ರಸನ್ನಸೃಗ್ದೋಹಾಸ್ತೋಯದಾಃ ಪೂಯವರ್ಷಿಣಃ ।**
**ವ್ಯರುದನ್ ದೇವಲಿಂಗಾನಿ ದ್ರುಮಾಃ ಪೇತುರ್ವಿನಾಽನಿಲಂ ॥೧೩॥**

ಗಾವಃ=ಆಕಳುಗಳು ಅತ್ರಸನ್=ಭಯಗೊಂಡವು. ಅಸೃದ್ದೋಹಾಃ ಬಭೂವುಃ= ರಕ್ತವನ್ನು ಹಿಂಡಲಾರಂಭಿಸಿದವು. ತೋಯದಾಃ=ಮೋಡಗಳು ಪೂಯವರ್ಷಿಣಃ= ಕೀವಿನ ಮಳೆಗರೆದವು. ದೇವಲಿಂಗಾನಿ=ಪ್ರತಿಮೆಗಳು ವ್ಯರುದನ್=ಅತ್ತವು. ಅಂದರೆ ಅವು ಕಣ್ಣಿನಿಂದ ನೀರು ಸುರಿಸಿದವು. ವಿನಾ ಅನಿಲಂ=ಗಾಳಿಯಿಲ್ಲದೇ ದ್ರುಮಾಃ= ಗಿಡಗಳು ಪೇತುಃ=ಉರಳಿದವು ॥೧೩॥

**ಗ್ರಹಾನ್ ಪುಣ್ಯತಮಾನನ್ಯೇ ಭಗಣಾಂಶ್ಚಾಪಿ ದೀಪಿತಾಃ ।**
**ಅತಿಚೇರುರ್ವಕ್ರಗತ್ಯಾ ಯುಯುಧುಶ್ಚ ಪರಸ್ಪರಂ ॥೧೪॥**

ಪುಣ್ಯತಮಾನ್ ಗ್ರಹಾನ್=ಮಂಗಲಕರವಾದ ಬೃಹಸ್ಪತಿ ಮೊದಲಾದ ಗ್ರಹಗಳನ್ನು ಭಗಣಾನ್ ಚ=ಅನೇಕ ನಕ್ಷತ್ರಗಳನ್ನು ಸಹ ಅನ್ಯೇ=ಕ್ರೂರವಾದ ಮಂಗಳ ಮುಂತಾದ ಗ್ರಹಗಳು ಅತಿಚೇರುಃ=ಅತಿಕ್ರಮಿಸಿ ಮುಂದೆ ಹೋದವು. ವಕ್ರಗತ್ಯಾ= ತಿರುಗಿ ಬಂದು ಪರಸ್ಪರಂ=ಅನ್ಯೋನ್ಯವಾಗಿಯು ಯುಯುಧುಃ ಚ=ಯುದ್ಧವನ್ನು ಮಾಡಿದವು. ॥೧೪॥

**ದೃಷ್ಟ್ವಾಽನ್ಯಾಂಶ್ಚ ಮಹೋತ್ಪಾತಾನ್ ನ ತತ್ತತ್ತ್ವವಿದಃ ಪ್ರಜಾಃ ।**
**ಬ್ರಹ್ಮಪುತ್ರಾನೃತೇ ಭೀತಾಃ ಮೇನಿರೇ ವಿಶ್ವಸಂಪ್ಲವಂ ॥೧೫॥**

ಅನ್ಯಾನ್ ಚ=ಇನ್ನೂ ಬೇರೆ ಬೇರೆ ಮಹೋತ್ಪಾತಾನ್=ದುಷ್ಟಶಕುನಗಳನ್ನು ದೃಷ್ಟ್ವಾ= ನೋಡಿ ನ ತತ್ತತ್ತ್ವವಿದಃ=ಆ ದುರ್ನಿಮಿತ್ತಗಳ ಕಾರಣವನ್ನರಿಯದ ಪ್ರಜಾಃ=ಜನರು ಬ್ರಹ್ಮಪುತ್ರಾನ್ ಋತೇ=ಸನಕಾದಿಗಳನ್ನು ಬಿಟ್ಟು ಭೀತಾಃ= ಹೆದರಿದರು. ವಿಶ್ವಸಂಪ್ಲವಂ=ಮೇನಿರೆ ಜಗತ್ತಿನ ಪ್ರಳಯ ಸಂಭವಿಸುವುದೆಂದು ತಿಳಿದರು. ॥೧೫॥

**ತಾವಾದಿದೈತ್ಯೌ ಸಹಸಾ ವ್ಯಜ್ಯಮಾನಾತ್ಮಪೌರುಷೌ ।**
**ವವೃಧಾತೇಽಶ್ಮಸಾರೇಣ ಕಾಯೇನಾದ್ರಿಪತೀ ಇವ ॥೧೬॥**

ಸಹಸಾ=ಬಲದಿಂದ ವ್ಯಜ್ಯಮಾನಾತ್ಮಪೌರುಷೌ=ವ್ಯಕ್ತವಾಗುತ್ತಿರುವ ತಮ್ಮ ಪರಾಕ್ರಮವುಳ್ಳ ತೌ=ಆ ಆದಿದೈತ್ಯೌ=ಆದಿದೈತ್ಯರಿಂದ ಆವಿಷ್ಟರಾದ ಹಿರಣ್ಯಕಶಿಪು ಹಿರಣ್ಯಾಕ್ಷರು, ಅಸ್ಮಸಾರೇಣ=ಕಲ್ಲಿನಂತೆ ದೃಢವಾದ ಕಾಯೇನ=ದೇಹದಿಂದ ಅದ್ರಿಪತೀ ಇವ=ಪರ್ವತದಂತೆ ವವೃಧಾತೇ=ಬೆಳೆದರು ॥೧೬॥

**ದಿವಿಸ್ಪೃಶೌ ಹೇಮಕಿರೀಟಕೋಟಿಭಿ-**
**ರ್ನಿರುದ್ಧಕಾಷ್ಠೌ ಸ್ಫುರದಂಗದೈರ್ಭುಜೈಃ ।**
**ಗಾಂ ಕಂಪಯಂತೌ ಚರಣೈಃ ಪದೇ ಪದೇ**
**ಕಟ್ಯಾ ಸುಕಾಂಚ್ಯಾಽರ್ಕಮತೀತ್ಯ ತಸ್ಥತುಃ ॥೧೭॥**

ದಿವಿಸ್ಪೃಶೌ=ಆಕಾಶವನ್ನು ಮುಟ್ಟುವ ಹೇಮಕಿರೀಟಕೋಟಿಭಿಃ=ಬಂಗಾರ-ಮಯವಾದ ಕಿರೀಟಗಳ ತುದಿಯಿಂದ ನಿರುದ್ಧಕಾಷ್ಠೌ=ದಿಕ್ಕುಗಳನ್ನು ತಡೆಯುವ ಸ್ಫುರದಂಗದೈಃ ಭುಜೈಃ=ಹೊಳೆಯುವ ಕಂಕಣಗಳುಳ್ಳ ಬಾಹುಗಳಿಂದ ಚರಣೈಃ=ಕಾಲುಗಳಿಂದ ಪದೇ ಪದೇ=ಹೆಜ್ಜೆ ಹೆಜ್ಜೆಗೆ ಗಾಂ=ಭುವಿಯನ್ನು ಕಂಪಯಂತೌ=ನಡುಗಿಸುತ್ತ ಕಟ್ಯಾ=ಟೊಂಕದಲ್ಲಿರುವ ಸುಕಾಂಚ್ಯಾ=ಶೋಭನವಾದ ಉಡುದಾರ-ದಿಂದ ಅರ್ಕಂ=ಸೂರ್ಯನನ್ನು ಅತೀತ್ಯ ತಸ್ಥತುಃ=ಮೀರಿ ನಿಂತರು ॥೧೭॥

**ಪ್ರಜಾಪತಿರ್ನಾಮ ತಯೋರಕಾರ್ಷೀದ್**
**ಯಃ ಪ್ರಾಕ್ ಸ್ವದೇಹಾದ್ ಯಮಯೋರಜಾಯತ ।**
**ತಂ ವೈ ಹಿರಣ್ಯಕಶಿಪುಂ ವಿದುಃ ಪ್ರಜಾ**
**ಯಂ ತಂ ಹಿರಣ್ಯಾಕ್ಷಮಸೂತ ಸಾಗ್ರತಃ ॥೧೮॥**

ಪ್ರಜಾಪತಿಃ=ಕಶ್ಯಪರು ತಯೋಃ=ಅವರಿಗೆ ನಾಮ ಅಕಾರ್ಷಿತ್=ಹೆಸರಿಟ್ಟರು ಪ್ರಜಾಃ=ಜನರು ಯಃ=ಯಾವ ಜೀವನು ಸ್ವದೇಹಾತ್=ತನ್ನ(ಕಶ್ಯಪರ)ದೇಹೋದ್ಭವ ವೀರ್ಯದಿಂದ ಯಮಯೋಃ=ಅವಳಿಗಳಲ್ಲಿ ಪ್ರಾಕ್=ಮೊದಲಿಗೆ ಅಜಾಯತ=ಗರ್ಭವನ್ನು ಪ್ರವೇಶಿಸಿದನೋ ತಂ=ಅವನನ್ನು ಹಿರಣ್ಯಕಶಿಪುಂ=ಹಿರಣ್ಯಕಶಿಪು ಎಂದು ವಿದುಃ=ತಿಳಿದರು. ಸಾ=ದಿತಿದೇವಿಯು ಯಂ=ವೀರ್ಯದ್ವಾರಾ ಅನಂತರ ಪ್ರವೇಶ ಮಾಡಿದವನನ್ನು ಅಗ್ರತಃ=ಅಸೂತ ಮೊದಲಿಗೆ ಪ್ರಸವಿಸಿದಳೋ ತಂ=ಅವನನ್ನು ಹಿರಣ್ಯಾಕ್ಷಂ ವಿದುಃ=ಹಿರಣ್ಯಕ್ಷನೆಂದು ತಿಳಿದರು.

ಗರ್ಭಾಧಾನಸಮಯದಲ್ಲಿ ಪುರುಷನಿಂದ ಸೇಚಿಸಲ್ಪಟ್ಟ ವೀರ್ಯವು ಎರಡು ಭಾಗವಾಗಿ ಯಾವಾಗ ಹಿಂದು ಮುಂದಾಗಿ ಗರ್ಭವನ್ನು ಪ್ರವೇಶಿಸುವುದೋ ಆಗ ಅವಳಿಮಕ್ಕಳಾಗುವುವು. ಅದರಲ್ಲಿ ಯಾರು ವೀರ್ಯದ್ವಾರ ನಂತರ ಪ್ರವೇಶಿಸುವರೋ

ಅವರೇ ಮೊದಲಿಗೆ ಜನಿಸುವರು. ಮೊದಲು ಪ್ರವೇಶಿಸಿದವರು ನಂತರ ಜನಿಸುವರು ಈ ಅಭಿಪ್ರಾಯದಿಂದ 'ಸ್ವದೇಹಾದಜಾಯತ, ಅಗ್ರತಃ ಸಾ ಅಸೂತ' ಎಂದಿದ್ದಾರೆ ಎಂದು ತಿಳಿಯಬೇಕು.

**ಚಕ್ರೇ ಹಿರಣ್ಯಕಶಿಪುರ್ದೋರ್ಭ್ಯಾಂ ಬ್ರಹ್ಮವರೇಣ ಚ ।**
**ವಶೇ ಸಪಾಲಾನ್ ಲೋಕಾಂಸ್ತ್ರೀನಕುತೋಮೃತ್ಯುರುದ್ಧತಃ ॥೧೯॥**

ಬ್ರಹ್ಮವರೇಣ=ಬ್ರಹ್ಮದೇವರವರಿಂದ ಅಕುತೋಮೃತ್ಯುಃ=ಯಾರಿಂದಲೂ ಮರಣವಿಲ್ಲದ ಹಿರಣ್ಯಕಶಿಪುಃ=ಹಿರಣ್ಯಕಶಿಪುವು ದೋರ್ಭ್ಯಾಂ ತನ್ನ ಬಾಹುಗಳಿಂದ ಸಪಾಲಾನ್=ಲೋಕಪಾಲಕರಿಂದ ಸಹಿತವಾದ ತ್ರೀನ್ ಲೋಕಾನ್=ಮೂರುಲೋಕ-ಗಳನ್ನು ವಶೇಚಕ್ರೇ=ಸ್ವಾಧೀನಮಾಡಿಕೊಂಡನು ॥೧೯॥

**ಹಿರಣ್ಯಾಕ್ಷೋಽನುಜಸ್ತಸ್ಯ ಪ್ರಿಯಃ ಪ್ರೀತಿಕೃದನ್ವಹಂ ।**
**ಗದಾಪಾಣಿರ್ದಿವಂ ಯಾತೋ ಯುಯುತ್ಸುರ್ಮೃಗಯನ್ ರಣಂ ॥**

ತಸ್ಯ=ಹಿರಣ್ಯಕಶಿಪುವಿನ ಪ್ರಿಯಃ=ಪ್ರೀತಿಪಾತ್ರನಾದ ಅನುಜಃ=ತಮ್ಮನಾದ ಹಿರಣ್ಯಾಕ್ಷಃ=ಹಿರಣ್ಯಾಕ್ಷನು ಅನ್ವಹಂ=ಪ್ರತಿದಿನವು ಪ್ರೀತಿಕೃತ್=ಅಣ್ಣನನ್ನು ಪ್ರೀತಿಸುವನು ಯುಯುತ್ಸುಃ=ಯುದ್ಧಮಾಡುವ ಇಚ್ಛೆವುಳ್ಳವನಾಗಿ ರಣಂ ಮೃಗಯನ್= ಯುದ್ಧವನ್ನು ಹುಡುಕುತ್ತ ಗದಾಪಾಣಿಃ=ಗದೆಯನ್ನು ಹಿಡಿದು ದಿವಂ ಯಾತಃ= ಸ್ವರ್ಗಕ್ಕೆ ತೆರಳಿದನು. ॥೨೦॥

**ತಂ ವೀಕ್ಷ್ಯ ದುಃಸಹಜವಂ ರಣತ್ಕಾಂಚನನೂಪುರಂ ।**
**ವೈಜಯಂತ್ಯಾ ಸ್ರಜಾ ಜುಷ್ಟಮಸನ್ಯಸ್ತಮಹಾಗದಮ್ ॥೨೧॥**

ದುಃಸಹಜವಂ=ತಡೆಯಲಾಗದ ವೇಗವುಳ್ಳ ರಣತ್ಕಾಂಚನನೂಪುರಂ=ಧ್ವನಿ ಮಾಡುವ ಚಿನ್ನದ ಗೆಜ್ಜೆಯನ್ನು ಧರಿಸಿದ ವೈಜಯಂತ್ಯಾ ಸ್ರಜಾ ಜುಷ್ಟಂ= ವೈಜಯಂತೀಮಾಲೆಯನ್ನು ಧರಿಸಿದ ಅಂಸನ್ಯಸ್ತಮಹಾಗದಂ=ಗದೆಯನ್ನು ಹೆಗಲ ಮೇಲೆ ಇಟ್ಟುಕೊಂಡ ತಂ=ಹಿರಣ್ಯಾಕ್ಷನನ್ನು ವೀಕ್ಷ್ಯ=ನೋಡಿ ॥೨೧॥

**ಮನೋವೀರ್ಯಮದೋತ್ಸಿಕ್ತಮಧೃಷ್ಯಮಕುತೋಭಯಂ ।**
**ಭೀತಾ ನಿಲಿಲ್ಯಿರೇ ದೇವಾಸ್ತಾರ್ಕ್ಷ್ಯತ್ರಸ್ತಾ ಇವಾಹಯಃ ॥೨೨॥**

ಮನಸಾ=ಧೈರ್ಯದಿಂದ ವೀರ್ಯಮದೋತ್ಸಿಕ್ತಂ=ಸಾಮರ್ಥ್ಯದ ಮದ-ದಿಂದಲೂ ಉದ್ರಿಕ್ತನಾದ ಅಧೃಷ್ಯಂ=ತಡೆಯಲಾಗದ ಅಕುತೋಭಯಂ= ಯಾರಿಂದಲೂ ಭಯವಿಲ್ಲದವನನ್ನೂ ನೋಡಿ ಭೀತಾಃ=ಹೆದರಿಂದ ದೇವಾಃ

ದೇವತೆಗಳು ತಾರ್ಕ್ಷ್ಯತ್ರಸ್ತಾಃ= ಗರುಡನಿಂದ ಹೆದರಿದ ಅಹಯಃ ಇವ=ಹಾವುಗಳಂತೆ ನಿಲಿಲ್ಯಿರೇ=ಅಡಗಿಕೊಂಡರು. ॥೨೨॥

**ಸ ವೈ ತಿರೋಹಿತಾನ್ ದೃಷ್ಟ್ವಾ ಮಹಸಾ ಸ್ವೇನ ದೈತ್ಯರಾಟ್ ।**
**ಸೇಂದ್ರಾನ್ ದೇವಗಣಾನ್ ಕ್ಲೀಬಾನಪಶ್ಯದ್ ವ್ಯನದದ್ ಭೃಶಂ॥೨೩॥**

ದೈತ್ಯರಾಟ್ ಸಃ=ಹಿರಣ್ಯಾಕ್ಷನು ಸ್ವೇನ ಮಹಸಾ=ತನ್ನ ಸಾಮರ್ಥ್ಯದಿಂದ ತಿರೋಹಿತಾನ್ ದೃಷ್ಟ್ವಾ=ಅಡಗಿದ್ದನ್ನು ಕಂಡು ಸೇಂದ್ರಾನ್=ಇಂದ್ರಸಹಿತವಾದ ದೇವಗಣಾನ್=ದೇವತೆಗಳ ಸಮೂಹವನ್ನು ಕ್ಲೀಬಾನ್ ಅಪಶ್ಯತ=ಷಂಢರೆಂದು ತಿಳಿದನು ಭೃಶಂ=ಬಹಳವಾಗಿ ವ್ಯನದತ್=ಗರ್ಜನೆ ಮಾಡಿದನು. ॥೨೩॥

**ತತೋ ನಿವೃತ್ತಃ ಕ್ರೀಡಿಷ್ಯನ್ ಗಂಭೀರಂ ಭೀಮನಿಸ್ವನಃ ।**
**ವಿಜಗಾಹೇ ಮಹಾಸತ್ತ್ವೋ ವಾರ್ಧಿಂ ಮತ್ತ ಇವ ದ್ವಿಪಃ ॥೨೪॥**

ತತಃ=ಅಲ್ಲಿಂದ ನಿವೃತ್ತಃ=ಹೊರಟವನಾಗಿ ಗಂಭೀರಂ=ಕ್ರೀಡಿಷ್ಯನ್ ಗಂಭೀರವಾಗಿ ಆಟವಾಡುತ್ತ ಭೀಮನಿಸ್ವನಃ=ಭಯಂಕರ ಧ್ವನಿ ಮಾಡುತ್ತ ಮತ್ತಃ ದ್ವಿಪ ಇವ= ಮದಿಸಿದ ಆನೆಯಂತೆ ಮಹಾಸತ್ತ್ವಃ=ಬಲಶಾಲಿಯಾದವನು ವಾರ್ಧಿಂ ವಿಜಗಾಹೇ =ಸಮುದ್ರವನ್ನು ವಿಲೋಡನೆ(ಅಲ್ಲೋಲಕಲ್ಲೋಲ) ಮಾಡಿದನು. ॥೨೪॥

**ತಸ್ಮಿನ್ ಪ್ರವಿಷ್ಟೇ ವರುಣಸ್ಯ ಸೈನಿಕಾಃ**
**ಯಾದೋಗಣಾಂ ಸನ್ನಧಿಯಃ ಸಸಾಧ್ವಸಾಃ ।**
**ಅಹನ್ಯಮಾನಾ ಅಪಿ ತಸ್ಯ ವರ್ಚಸಾ**
**ಪ್ರಧರ್ಷಿತಾ ದೂರತರಂ ಪ್ರದುದ್ರುವುಃ ॥೨೫॥**

ತಸ್ಮಿನ್=ಹಿರಣ್ಯಾಕ್ಷನು ಪ್ರವಿಷ್ಟೇ ಸತಿ ಸಮುದ್ರಪ್ರವೇಶ ಮಾಡುತ್ತಿರಲು ವರುಣಸ್ಯ ಸೈನಿಕಾಃ ವರುಣನ ಸೈನಿಕರಾದ ಯಾದೋಗಣಾಃ=ಜಲಚರಪ್ರಾಣಿಗಳು ಸನ್ನಧಿಯಃ=ಬುದ್ಧಿಯನ್ನು ಕಳೆದುಕೊಡು ಸಸಾಧ್ವಸಾಃ=ಭಯ ಸಹಿತರಾಗಿ ಅಹನ್ಯ-ಮಾನಾಃ ಅಪಿ ಹೊಡೆಯದಿದ್ದರೂ ತಸ್ಯ ವರ್ಚಸಾ=ಅವನ ಕಾಂತಿಯಿಂದ ಪ್ರಧರ್ಷಿತಾಃ ಪೀಡಿತರಾಗಿ ದೂರತರಂ=ಬಹಳ ದೂರ ಪ್ರದುದ್ರುವುಃ=ಓಡಿ ಹೋದವು. ॥೨೫॥

**ಸ ವರ್ಷಪೂಗಾನುದಧೌ ಮಹಾಬಲ-**
**ಶ್ಚರನ್ ಮಹೋರ್ಮೀಃ ಶ್ವಸನೇರಿತಾ ಮುಹುಃ ।**

**ಗುರ್ವ್ಯಾಭಿಜಘ್ನೇ ಗದಯಾ ವಿಭಾವರೀ-**
**ಮಾಸೇದಿವಾಂಸ್ತಾತ ಪುರಂ ಪ್ರಚೇತಸಃ ॥೨೬॥**

ಹೇ ತಾತ=ಎಲೋ ವಿದುರನೇ ಮಹಾಬಲಃ=ಪರಾಕ್ರಮಿಯಾದ ಸಃ= ಹಿರಣ್ಯಾಕ್ಷನು ಉದಧೌ=ಸಮುದ್ರದಲ್ಲಿ ಶ್ವಸನೇರಿತಾಃ=ಗಾಳಿಯಿಂದ ಪ್ರೇರಿತವಾದ ಮಹೋರ್ಮೀಃ=ದೊಡ್ಡ ತೆರೆಗಳನ್ನು ಮುಹುಃ=ಪುನಃ ಪುನಃ ವರ್ಷಪೂಗಾನ್= ಅನೇಕ ವರ್ಷಗಳವರೆಗೆ ಚರನ್=ಸಂಚರಿಸುತ್ತ ಗುರ್ವ್ಯಾಗದಯಾ ದೊಡ್ಡಗದೆ- ಯಿಂದ ಅಬಿಜಘ್ನೇ=ಹೊಡೆದನು ಪ್ರಚೇತಸಃ=ವರುಣನ ವಿಭಾವರೀಂ ಪುರಂ= ವಿಭಾವರಿ ಎಂಬ ಪಟ್ಟಣವನ್ನು ಆಸೇದಿವಾನ್=ಹೊಂದಿದನು. ॥೨೬॥

**ತತ್ರೋಪಲಭ್ಯಾಸುರಲೋಕಪಾಲಕೋ.**
**ಯಾದೋಗಣಾನಾಮೃಷಭಂ ಪ್ರಚೇತಸಂ ।**
**ಸ್ಮಯನ್ ಪ್ರಲಬ್ಧುಂ ಪ್ರಣಿಪತ್ಯ ನೀಚವ-**
**ಜ್ಜಗಾದ ಮೇದೇಹ್ಯಧಿರಾಜ ಸಂಗರಂ ॥೨೭॥**

ತತ್ರ=ಆ ವಿಭಾವರೀ ಎಂಬ ಪಟ್ಟಣದಲ್ಲಿ ಅಸುರಲೋಕಪಾಲಕಃ=ದೈತ್ಯರಕ್ಷಕ- ನಾದ ಹಿರಣ್ಯಾಕ್ಷನು ಯಾದೋಗಣಾನಾಂ=ಜಲಚರ ಪ್ರಾಣಿಗಳಿಗೆ ಋಷಭಂ= ಶ್ರೇಷ್ಠನಾದ ರಾಜನಾದ ಪ್ರಚೇತಸಂ=ವರುಣನನ್ನು ಉಪಲಬ್ಯ=ಹೊಂದಿ ಸ್ಮಯನ್= ಗರ್ವಯುಕ್ತನಾಗಿ ಪ್ರಲಭ್ಧುಂ=ಪರಿಹಾಸ ಮಾಡಲು ವಂಚಿಸಲು ನೀಚವತ್ ಪ್ರಣಿಪತ್ಯ=ಮುಸಲ್ಮಾನರಂತೆ ಒಂದೇ ಕೈಯಿಂದ ನಮಸ್ಕರಿಸಿ (ಸಲಾಮು ಮಾಡಿ) ಹೇ ಅಧಿರಾಜ=ವರುಣನೆ ಮೇ=ನನಗೆ ಸಂಗರಂ ದೇಹಿ=ಯುದ್ಧವನ್ನು ನೀಡು ಎಂದು ಜಗಾದ ಹೇಳಿದನು. ॥೨೭॥

**ತ್ವಂ ಲೋಕಪಾಲಾಧಿಪತಿರ್ಬೃಹಚ್ಛ್ರವಾ**
**ವೀರ್ಯಾವಹೋ ದುರ್ಮದವೀರಮಾನಿನಾಮ್ ।**
**ವಿಜಿತ್ಯ ಲೋಕೇಽಖಿಲದೈತ್ಯದಾನವಾನ್**
**ಯದ್‌ರಾಜಸೂಯೇನ ಪುರಾಽಯಜತ್ ಪ್ರಭೋ ॥೨೮॥**

ಹೇ ಪ್ರಭೋ=ವರುಣನೇ ತ್ವಂ=ನೀನು ಲೋಕಪಾಲಾಧಿಪತಿಃ=ಲೋಕಪಾಲ- ರಿಗೆ ರಾಜನು ಬ್ರಹಚ್ಛ್ರವಾಃ=ವ್ಯಾಪ್ತವಾದ ಕೀರ್ತಿಯುಳ್ಳವನು ದುರ್ಮದವೀರ- ಮಾನಿನಾಂ=ದುಷ್ಟವಾದ ಮದದಿಂದ (ಸೊಕ್ಕಿನಿಂದ) ತಮ್ಮನ್ನು ವೀರರೆಂದು ತಿಳಿದವರ ವೀರ್ಯಾವಹಃ=ಸಾಮರ್ಥ್ಯವನ್ನು ಪರಿಹರಿಸುವವನು ಲೋಕೇ ಜಗತ್ತಿನಲ್ಲಿ ಅಖಿಲದೈತ್ಯದಾನವಾನ್=ಎಲ್ಲ ದುಷ್ಟರನ್ನು ವಿಜಿತ್ಯ=ಗೆದ್ದು ಪುರಾ=ಹಿಂದೆ

ಯತ್=ಯಾವ ಕಾರಣ ರಾಜಸೂಯೇನ ಅಯಜತ್=ರಾಜಸೂಯ ಯಾಗ ಮಾಡಿರುವಿಯೋ ತತ್=ಆಕಾರಣದಿಂದ ನನಗೆ ಯುದ್ಧವನ್ನು ನೀಡು ಎಂದು ಅನ್ವಯ ॥೨೮॥

**ಸ ಏವಮುತ್ಸಿಕ್ತಮದೇನ ವಿದ್ವಿಷಾ**
**ದೃಢಂ ಪ್ರಲಬ್ಧೋ ಭಗವಾನಪಾಂಪತಿಃ ।**
**ರೋಷಂ ಸಮುತ್ಥಂ ಶಮಯನ್ ಸ್ವಯಾ ಧಿಯಾ**
**ವ್ಯವೋಚದಂಗೋಪಶಮಂ ಗತಾ ವಯಮ್ ॥೨೯॥**

ಏವಂ=ಈ ರೀತಿಯಾಗಿ ಉತ್ಸಿಕ್ತಮದೇನ=ಅತಿಯಾದ ಗರ್ವವುಳ್ಳ ವಿದ್ವಿಷಾ= ದೇವದ್ವೇಷಿಯಾದ ಹಿರಣ್ಯಾಕ್ಷನಿಂದ ದೃಢಂ=ಗಟ್ಟಿಯಾಗಿ ಪ್ರಲಬ್ಧಃ=ವಂಚಿತನಾಗಿ ಅಪಹಸಿತನಾಗಿ ಸಃಭಗವಾನ್ ಅಪಾಂಪತಿಃ=ಆ ಪೂಜ್ಯನಾದ ವರುಣನು ಸಮುತ್ಥಂ =ರೋಷಂ=ಉಂಟಾದ ಸಿಟ್ಟನ್ನು ಸ್ವಯಾ ಧಿಯಾ=ತನ್ನ ವಿವೇಕ ಬುದ್ಧಿಯಿಂದ ಶಮಯನ್=ತಡೆದು ಹೇ ಅಂಗ=ಮಗುವೆ ವಯಂ=ನಾವು ಉಪಶಮಂ ಗತಾಃ= ಯುದ್ಧ ಮುಂತಾದ ಕೌತುಕಗಳಿಂದ ವಿರಾಮ ಹೊಂದಿರುವೆವು ಎಂದು ವ್ಯವೋಚತ್=ನಿಷೇಧಾತ್ಮಕ ಉತ್ತರ ಹೇಳಿದನು ಅಥವಾ ವಿ=ಪರಮಾತ್ಮನನ್ನೇ ಅವೋಚತ್=ಹೇಳಿದನು ಎಂದು ಭಾವ ॥೨೯॥

**ಪಶ್ಯಾಮಿ ನಾನ್ಯಂ ಪುರುಷಾತ್ ಪುರಾತನಾದ್**
**ಯಃ ಸಂಯುಗೇ ತ್ವಾಂ ರಣರಂಗಕೋವಿದಂ ।**
**ಆವಾರಯಿಷ್ಯತ್ಯಸುರರ್ಷಭಾಹಿತಂ**
**ಮನಸ್ವಿನೋ ಯಂ ವೃಣುತೇ ಭವಾದೃಶಾಃ ॥೩೦॥**

ಹೇ ಅಸುರರ್ಷಭ=ಹಿರಣ್ಯಾಕ್ಷನೇ ಅಹಿತಂ=ವೈರಿಯಾದ ರಣರಂಗಕೋವಿದಂ =ಯುದ್ಧಕುಶಲನಾದ ತ್ವಾಂ=ನಿನ್ನನ್ನು ಯಃ=ಯಾವನು ಸಂಯುಗೇ ಯುದ್ಧದಲ್ಲಿ ಅವಾರಯಿಷ್ಯತಿ=ಚೆನ್ನಾಗಿ ನಿವಾರಿಸುವನೋ ಮತ್ತು ಭವಾದೃಶಾಃ=ನಿನ್ನಂತಹ ಮನಸ್ವಿನಃ=ಮನಸ್ಸುಳ್ಳವರು ಯಂ=ಯಾವಾತನನ್ನು ವೃಣುತೇ=ಇಚ್ಛಿಸುವರೋ ಅಂಥವನನ್ನು ಪುರಾಣಾತ್‌ಪುರುಷಾತ್ ಅನ್ಯಂ ನ ಪಶ್ಯಾಮಿ=ಅನಾದಿಯಾದ ಶ್ರೀಹರಿಯನ್ನು ಬಿಟ್ಟು ಬೇರೆಯವನನ್ನು ಕಂಡಿಲ್ಲ "ಅಸುರರ್ಷಭೇಹಿತಂ" ಎಂಬ ಪಾಠದಲ್ಲಿ ತಂ=ಅವನನ್ನು ಕುರಿತು ಇಹಿ=ಹೋಗು ಎಂದು ವ್ಯಾಖ್ಯಾನಿಸಬೇಕು ॥೩೦॥

**ತಂ ವೀರಮಾರಾದಭಿಪದ್ಯ ವಿಸ್ಮಯಃ**
**ಶಯಿಷ್ಯತೇ ವೀರಶಯೇ ಶ್ವಭಿರ್ವೃತಃ ।**
**ಯಸ್ತ್ವದ್ವಿಧಾನಾಮಸತಾಂ ಪ್ರಶಾಂತಯೇ**
**ರೂಪಾಣಿ ಧತ್ತೇ ಸದನುಗ್ರಹೇಚ್ಛಯಾ ॥೩೧॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಅಷ್ಟಾದಶೋಽಧ್ಯಾಯಃ ॥***

ಯಃ=ಯಾವ ಪರಮಾತ್ಮನು ಸದನುಗ್ರಹೇಚ್ಛಯಾ=ಸಜ್ಜನರಿಗೆ ಅನುಗ್ರಹ ಮಾಡಲು ಮತ್ತು ತ್ವದ್ವಿಧಾನಾಂ ಅಸತಾಂ=ನಿನ್ನಂತಹ ಅಸಜ್ಜನರ ಪ್ರಶಾಂತಯೇ= ನಾಶಕ್ಕಾಗಿ ರೂಪಾಣಿ ಧತ್ತೇ=ವರಹಾದಿರೂಪಗಳನ್ನು ಸ್ವೀಕರಿಸುವನೋ ತಂ ವೀರಂ =ಅಂಥ ನಿಜವಾದ ಪರಾಕ್ರಮಿಯನ್ನು ಅಭಿಪದ್ಯ=ಹೊಂದಿ ಆರಾತ್=ಶೀಘ್ರದಲ್ಲಿ ವೀರಶಯೇ=ರಣರಂಗದಲ್ಲಿ ಶ್ವಭಿಃ=ನಾಯಿಗಳಿಂದ ವೃತಃ=ಸುತ್ತುವರಿದು ಶಯಿಷ್ಯಸೇ=ಮಲಗುವಿ.

ಈ ಶ್ಲೋಕದಲ್ಲಿ ಸ್ವರ್ಗಸ್ಥರಾದ ದೇವತೆಗಳಿಗೂ ವರುಣನಿಗೂ ಹಿರಣ್ಯನಿಂದ ಪರಾಭವ ಹೇಳಿದ್ದು ಹೇಗೆ ಯುಕ್ತವಾಗುವುದು. ದೇವತೆಗಳು ದ್ವಾರಪಾಲಕರಿಗಿಂತ ಉತ್ತಮರು. ಅವರಲ್ಲಿರುವ ದೈತ್ಯರೂ ದೇವತೆಗಳಗಿಂತ ದುರ್ಬಲರೇ ಆದ್ದರಿಂದ ಇದು ಹೇಗೆ ? ಸಮಂಜಸ ಎಂಬ ಶಂಕೆಗೆ ಅಭಿಪ್ರಾಯವನ್ನು ಪ್ರಮಾಣದಿಂದ ಹೇಳುವರು -

**ನ ದೇವಾನಾಂ ಪ್ರಜಾಪಾನಾಂ ವಿಜೇತಾ ವರತೋ ವಿನಾ ।**
**ಬಲೇನ ವಿದ್ಯಯಾ ವಾಪಿ ನ ಸಮಸ್ತತ್ವತೀನ್ ವಿನಾ ॥**
**ವರೋಽಪಿ ತಾದೃಶೋ ಯಾವಚ್ಛರೀರಂ ನಾನ್ಯದೇಹಗಃ ॥** ಇತಿ ತತ್ವನಿರ್ಣಯೇ

ವರವಿಲ್ಲದಲೇ ಪ್ರಜೇಶ್ವರರಾದ ದೇವತೆಗಳನ್ನು ಗೆಲ್ಲುವವರಿಲ್ಲ. ಬಲದಿಂದಾಗಲಿ ವಿದ್ಯೆಯಿಂದಾಗಲಿ ಸಮರಿಲ್ಲ. ಎಲ್ಲ ದೇವತೆಗಳನ್ನು ಜಯಿಸುವ ವರವು ಸಹ ಆ ಶರೀರ ಇರುವಾಗ ಮಾತ್ರ. (ವರಪಡೆದ) ಬೇರೆ ದೇಹ ಪ್ರವೇಶ ಮಾಡಿದಾಗಲ್ಲ. ಇದು ದೈತ್ಯರಿಗೆ ಸಂಬಂಧಪಟ್ಟಿದ್ದು ಕಾರಣ 'ಸರ್ವೈರಜೇಯುಃ ಸಚ ಕುಂಭಕರ್ಣಃ ಪುರಾತನೇ ಜನ್ಮನಿ ಧಾತುರೇವ ।ವರಾತ್'ಮುಂತಾಗಿ ಹೇಳಿದ್ದರಿಂದ ವಿರೋಧವಿಲ್ಲ. ಅದು ಪಾರ್ಷದ ವಿಷಯಕವಾದುದು. ಇಲ್ಲಿ ಹಿರಣ್ಯಾಕ್ಷನು ವರದಿಂದ ದೇವತೆಗಳನ್ನು ಜಯಿಸಿದನೇ ಹೊರತು ಸ್ವಾಭಾವಿಕ ಬಲದಿಂದಲ್ಲ ಕಾರಣ ವಿರೋಧವಿಲ್ಲ. ದೈತ್ಯರಿಗೆ ದೊರೆತ ವರ ಒಂದೇ ಜನ್ಮಕ್ಕೆ ಸೀಮಿತ.(ಪಾರ್ಷದರಿಗೆ) ದೇವತೆಗಳಿಗೆ ಜನ್ಮಾಂತರಕ್ಕೂ ವರ ಉಪಯೋಗವಾಗುವುದು ಎಂದು ಭಾವ. ॥೩೧॥

***ಇಲ್ಲಿಗೆ ಹದಿನೆಂಟನೆಯ ಅಧ್ಯಾಯವು ಮುಗಿಯಿತು.***

# ಹದಿನೆಂಟನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ಬ್ರಹ್ಮದೇವರು ಹೇಳಿದ ಈ ಕಾರಣವನ್ನು ತಿಳಿದ ಇಂದ್ರಾದಿದೇವತೆಗಳು ತಮ್ಮ ಅಸಾಮರ್ಥ್ಯದ ವಿಷಯದಲ್ಲಿ ಭಯವಿಲ್ಲದವರಾಗಿ ಸ್ವರ್ಗಕ್ಕೆ ಹಿಂತಿರುಗಿದರು.

ಕಶ್ಯಪರ ಮಾತು ದಿತಿದೇವಿಯ ಮನಸ್ಸಿನಲ್ಲಿ ಭಯವನ್ನುಂಟುಮುಡಿತ್ತು. ತನ್ನ ಮಕ್ಕಳನ್ನು ಶ್ರೀಹರಿಯು ಕೊಲ್ಲುವನಲ್ಲಾ ಎಂದು ಆಶಂಕಿಸುತ್ತಿದ್ದಳು. ಒಂದು ನೂರುವರ್ಷ ಮುಗಿದ ನಂತರ ಅವಳು ಅವಳಿಮಕ್ಕಳಿಗೆ ಜನ್ಮವಿತ್ತಳು. ಆ ಮಕ್ಕಳು ಹುಟ್ಟುವ ಸಮಯದಲ್ಲಿ ಜನರ ಮನಸ್ಸಿನಲ್ಲಿ ಭಯವನ್ನು ತುಂಬುವ ಅನೇಕ ಉತ್ಪಾತಗಳು ಸ್ವರ್ಗ, ಅಂತರಿಕ್ಷ ಮತ್ತು ಭೂಲೋಕಗಳಲ್ಲಿ ಕಾಣಿಸಿಕೊಂಡವು. ಬೆಟ್ಟಗಳೊಂದಿಗೆ ಅನೇಕ ಭೂಪ್ರದೇಶಗಳು ಕಂಪಿಸಿದುವು; ದಿಕ್ಕುಗಳು ಉರಿದವು; ಸಿಡಿಲುಗಳು ಕೆಂಡಗಳನ್ನುಗುಳಿದವು; ದುಃಖ ಸೂಚಕಗಳಾದ ಧೂಮಕೇತುಗಳು ಕಾಣಿಸಿಕೊಂಡವು; ತಡೆಯಲಾಗದ ವೇಗದಲ್ಲಿ ಶಬ್ದಮಾಡುತ್ತ ಗಾಳಿಯು ಬೀಸಿತು; ಗಿಡಗಳು ಬೇರುಸಹಿತ ಕಳಚಿಬಿದ್ದವು; ಎಲ್ಲೆಲ್ಲಿ ನೋಡಿದರೂ ಸುಂಟರಗಾಳಿ ಧೂಳನ್ನೆಬ್ಬಿಸಿತ್ತು. ಮಿಂಚಿನಿಂದ ಕೂಡಿದ ಕಾರ್ಮೋಡಗಳಿಂದ ಆಕಾಶವೇ ಮುಚ್ಚಿಹೋಯಿತು. ನಕ್ಷತ್ರಗಳು ಕಾಣಿಸುತ್ತಿರಲಿಲ್ಲ; ಕಗ್ಗತ್ತಲೆಯಿಂದ ಯಾರಿಗೂ ದಾರಿಯೇ ಕಾಣುತ್ತಿರಲಿಲ್ಲ. ಎತ್ತರವಾದ ಅಲೆಗಳಿಂದ ಕ್ಷುಬ್ಧವಾಗಿದ್ದ ಸಮುದ್ರವು ಭೋರ್ಗರೆಯಿತು. ನದಿಗಳು ಉಕ್ಕಿಹರಿದು ಭಾವಿ ಕೊಳಗಳನ್ನು ಮುಚ್ಚಿದುವು. ಎಲ್ಲೆಲ್ಲ ನೋಡಿದರೂ ಕಮಲಗಳು ಬಾಡಿದ್ದುವು. ಮೇಲಿಂದಮೇಲೆ ಸೂರ್ಯಚಂದ್ರರ ಸುತ್ತ ಮಂಡಲವು ಕಾಣಿಸುತ್ತಿತ್ತು. ಗ್ರಹಣ ಹಿಡಿಯುತ್ತಿತ್ತು. ಪರ್ವತದ ಗುಹೆಗಳಿಂದ ಗುಡುಗಿನ ಮಾರ್ದನಿಗಳು ಬರುತ್ತಿದ್ದುವು. ನರಿಗಳು ಊರಿನೊಳಕ್ಕೆ ನುಗ್ಗಿ ಬೆಂಕಿಯನ್ನು ಉಗುಳುತ್ತಾ ಕೀಳುದನಿಯಿಂದ ಕಿರುಚುತ್ತಿದ್ದವು. ನಾಯಿಗಳು ಅತ್ತಿತ್ತ ಓಡಾಡುತ್ತಾ ಕತ್ತನ್ನು ಮೇಲಕ್ಕೆತ್ತಿ ಕೆಲವುವೇಳೆ ಹಾಡುತ್ತಿರುವಂತೆ, ಕೆಲವುವೇಳೆ ಅಳುತ್ತಿರುವಂತೆ ಶಬ್ದಮಾಡಿದುವು. ಒಂಟೆಗಳು ಮದವೇರಿ ಭೂಮಿಯನ್ನು ಕೆರೆಯುತ್ತಾ ಗುಂಪು ಗುಂಪಾಗಿ ಓಡಹತ್ತಿದುವು. ಕತ್ತೆಗಳ ಕಿರುಚಾಟಕ್ಕೆ ಹೆದರಿದ ಹಕ್ಕಿಗಳು ಗೂಡುಗಳಿಂದ ಹಾರಿಹೋದುವು. ಹಳ್ಳಿ ಹಳ್ಳಿಗಳಲ್ಲಿಯೂ ದನಗಳು ಕಣ್ಣೀರಿಟ್ಟು ಹೆದರಿಕೆಯಿಂದ ಸಗಣಿಗಂಜಲಗಳನ್ನು ಹಾಕುತ್ತಿದ್ದುವು. ಹೆದರಿದ ಹಸುಗಳು ರಕ್ತವನ್ನು ಕರೆಯುತ್ತಿದ್ದುವು; ಗಾಳಿಯ ಬಡಿತವಿಲ್ಲದೆಯೇ ಗಿಡಗಳುರುಳಿದವು; ಮೋಡಗಳು ಕೀವು ಸುರಿಸಿದವು; ಪ್ರತಿಮೆಗಳು ಗೋಳಿಟ್ಟುವು. ಗ್ರಹಗಳ ಅತಿಚಾರದಿಂದ ಗ್ರಹಯುದ್ಧಗಳು ಆದವು.

ಇವೇ ಮೊದಲಾದ ಇನ್ನೂ ಅನೇಕ ಉತ್ಪಾತಗಳನ್ನು ಕಂಡ ಜನರಿಗೆ ಇದಕ್ಕೆ ಕಾರಣವು ಗೊತ್ತಾಗಲಿಲ್ಲ. ಜಗತ್ತೇ ಲಯವಾಗುವುದೆಂದು ಅವರು ಹೆದರಿದರು. ಸನಕಾದಿಗಳು ಮಾತ್ರ ವಿಷಯವನ್ನು ತಿಳಿದಿದ್ದರಾದ್ದರಿಂದ ಹೆದರಲಿಲ್ಲ. ಹಿರಣ್ಯಕಶಿಪು ಹಿರಣ್ಯಾಕ್ಷರೆಂಬ ಆ ದೈತ್ಯರಿಬ್ಬರೂ ಬಲದಿಂದ ತಮ್ಮ ಪೌರುಷವನ್ನು ಪ್ರದರ್ಶಿಸುವರಾಗಿ ಕಲ್ಲಿನಂತೆ ಕಠಿಣವಾದ ತಮ್ಮ ದೇಹದಿಂದ ಬೆಟ್ಟಗಳಂತೆ ಬೆಳೆದರು. ಅವರಿಟ್ಟುಕೊಂಡಿದ್ದ ಬಂಗಾರದ ಕೀರಿಟದಕೊನೆಗಳು ಆಕಾಶವನ್ನು ಮುಟ್ಟಿದುವು; ಅವರ ಅಲಂಕೃತವಾದ ತೋಳುಗಳು ದಿಕ್ಕುಗಳನ್ನು ಮುಟ್ಟಿದವು; ಅವರಿಡುತ್ತಿದ್ದ ಹೆಜ್ಜೆ ಹೆಜ್ಜೆಗೂ ಭೂಮಿ ಅಲ್ಲಾಡುತ್ತಿತ್ತು; ನಡುಪಟ್ಟಿಯಿಂದ ಕೂಡಿದ್ದ ಅವರ ಮಧ್ಯಪ್ರದೇಶವು ಸೂರ್ಯನನ್ನೂ ಮೀರಿತ್ತು. ಆ ಅವಳಿಮಕ್ಕಳಲ್ಲಿ ಮೊದಲು ಹುಟ್ಟಿದವನಿಗೆ ಹಿರಣ್ಯಕಶಿಪುವೆಂದೂ ಅನಂತರ ಹುಟ್ಟಿದವನಿಗೆ ಹಿರಣ್ಯಾಕ್ಷನೆಂದೂ ಕಶ್ಯಪರು ನಾಮಕರಣಮಾಡಿದರು. ಹಿರಣ್ಯಕಶಿಪುವು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಯಾವುದರಿಂದಲೂ ತನಗೆ ಮೃತ್ಯುವಿಲ್ಲದಂತಹ ವರವನ್ನು ಪಡೆದು ನಿರ್ಭಯನಾಗಿದ್ದನು. ಉದ್ಧತನಾದ ಇವನು ತನ್ನ ಬಾಹುಬಲದಿಂದ ಇಂದ್ರ ಮೊದಲಾದ ದಿಕ್ಪಾಲಕರನ್ನು ಗೆದ್ದು ಮೂರುಲೋಕಗಳನ್ನು ತನ್ನ ಅಧೀನವನ್ನಾಗಿ ಮಾಡಿಕೊಂಡನು. ತಮ್ಮನಾದ ಹಿರಣ್ಯಾಕ್ಷನು ಅಣ್ಣನ ಇಷ್ಟದಂತೆ ನಡೆಯುತ್ತಾ ಅವನ ಪ್ರೀತಿಗೆ ಪಾತ್ರನಾಗಿದ್ದನು. ಅವನಿಗೆ ಯುದ್ಧಮಾಡಬೇಕೆಂಬಾಸೆ. ಕೈಯಲ್ಲಿ ಗದೆಯನ್ನು ಹಿಡಿದು ಶತ್ರುವನ್ನು ಹುಡುಕುತ್ತ ಸ್ವರ್ಗಕ್ಕೆ ಹೋದನು. ಅವನ ವೇಗವನ್ನು ತಡೆಯಲಾಗುತ್ತಿರಲಿಲ್ಲ. ಅವನು ನಡೆಯುತ್ತಿದ್ದಂತೆ ಅವನ ಕಾಲಿನಲ್ಲಿದ್ದ ಭಂಗಾರದ ಆಭರಣಗಳು ಶಬ್ದ ಮಾಡುತ್ತಿದ್ದುವು ನಾಲ್ಕು ಎಳೆಯ ಹೂವಿನ ಸರದಿಂದ ಅವನ ಕತ್ತು ಶೋಭಿಸುತ್ತಿತ್ತು. ಹೆಗಲಮೇಲೆ ದೊಡ್ಡಗದೆಯನ್ನಿಟ್ಟು ಕೊಂಡಿದ್ದನು. ತಾನು ಮಹಾವೀರನೆಂದು ಹೆಮ್ಮೆಯಿಂದ ಉಕ್ಕಿದ್ದನು. ಅವನನ್ನು ಹೆದರಿಸುವ ವೀರರೇ ಇರಲಿಲ್ಲ. ಯಾರಿಗೂ ಹೆದರದ ಇವನನ್ನು ಕಂಡು ದೇವತೆಗಳು ಗರುಡನನ್ನು ಕಂಡ ಸರ್ಪಗಳಂತೆ ಅಲ್ಲಲ್ಲಿಯೇ ಅಡಗಿಕೊಂಡರು. ದೇವತೆಗಳು ಸಹಜವಾಗಿ ವಿಜಯಶಾಲಿಗಳಾದರೂ ಬ್ರಹ್ಮದೇವರ ವರವಿದ್ದ ಹಿರಣ್ಯಾಕ್ಷ ಹಿರಣ್ಯಕಶಿಪುಗಳಿಗೆ ಸೋಲಬೇಕಾಯಿತು. ತನ್ನ ಸಾಮರ್ಥ್ಯಕ್ಕೆ ಹೆದರಿ ಅಡಗಿಕೊಂಡರೆಂದು ದೇವತೆಗಳನ್ನು ತಿಳಿದ ಹಿರಣ್ಯಾಕ್ಷನು ಇಂದ್ರನೇ ಮೊದಲಾದ ದೇವತೆಗಳ ಸಮೂಹವು ಪೌರುಷವಿಲ್ಲದ್ದೆಂದು ಬಗೆದನು. ಹೆಮ್ಮೆಯಿಂದ ಸಿಂಹನಾದ ಮಾಡಿದ ಆ ದೈತ್ಯನು ಅಲ್ಲಿಂದ ಹೊರಟು ಆಟಕ್ಕಾಗಿ ಆನೆಯು ನೀರನ್ನು ಪ್ರವೇಶಿಸುವಂತೆ ಆಳವಾದ ಸಮುದ್ರವನ್ನು ಪ್ರವೇಶಿಸಿದನು. ಅವನು ಪ್ರವೇಶಿಸಿದ ರಭಸಕ್ಕೆ ಸಮುದ್ರಾಧಿಪತಿಯಾದ ವರುಣನ ಸೈನಿಕರೆನಿಸಿದ ಮೊಸಳೆ ಮೊದಲಾದ

ಪ್ರಾಣಿಗಳು ಹೆದರಿದವು. ಅವುಗಳಿಗೆ ಬುದ್ಧಿಯೇ ಕೆಟ್ಟು ಹೋಯಿತು. ಅವನು ಹೊಡೆಯದಿದ್ದರೂ ಅವನ ಸಾಮರ್ಥ್ಯಕ್ಕೆ ಹೆದರಿದ ಅವು ದೂರದೂರ ಓಡಿದುವು. ಬಲಿಷ್ಠನಾದ ಹಿರಣ್ಯಾಕ್ಷನು ಉಸಿರುಬಿಡುತ್ತಿದ್ದರೆ ನೀರಿನ ಅಲೆಗಳು ಬಹಳ ಎತ್ತರಕ್ಕೆ ಏಳುತ್ತಿದ್ದುವು. ಹೀಗೆ ಅನೇಕ ವರ್ಷಗಳು ಸಮುದ್ರದಲ್ಲಿ ಆಟವಾಡಿದ ಅವನು ವರುಣನ ರಾಜಧಾನಿಯಾದ ವಿಭಾವರೀಪುರಕ್ಕೆ ಬಂದು ಒಂದು ಸಲ ತನ್ನ ದೊಡ್ಡಗದೆಯಿಂದ ಅಪ್ಪಳಿಸಿದನು. ಜಲಜಂತುಗಳಿಗೆ ಸ್ವಾಮಿಯಾದ ವರುಣನನ್ನು ಅಲ್ಲಿ ಕಂಡ ಆ ದೈತ್ಯರಾಜನು ಹೆಮ್ಮೆಯ ನಗುವನ್ನು ನಕ್ಕು ಮ್ಲೇಚ್ಛರಂತೆ ಒಂದು ಕೈಯಲ್ಲಿ ನಮಸ್ಕಾರಮಾಡಿ ವಂಚಿಸಲು ಹೇಳಿದನು. 'ವರುಣ ! ನೀನು ರಾಜಾಧಿರಾಜನೆಂದು ಪ್ರಸಿದ್ಧನಾಗಿರುವೆ. ಎಲ್ಲ ಲೋಕಪಾಲಕರಿಗೂ ಅಧಿಪತಿಯಾಗಿರುವೆ. ನಿನ್ನ ಕೀರ್ತಿಯು ಎಲ್ಲೆಲ್ಲಿಯೂ ಹರಡಿರುವುದು. ತಾವು ವೀರರೆಂದು ಹೆಮ್ಮೆಪಡುವವರ ಪರಾಕ್ರಮವನ್ನು ಇಲ್ಲವೆನ್ನಿಸುವವನು ನೀನು. ನೀನೇ ಅಲ್ಲವೇ ಎಲ್ಲ ದೈತ್ಯರನ್ನೂ ಗೆದ್ದು ಹಿಂದೆ ರಾಜಸೂಯಾಗವನ್ನು ಮಾಡಿದವನು ! ಆದ್ದರಿಂದ ನಿನ್ನ ಈ ಕೀರ್ತಿಯನ್ನು ಉಳಿಸಿಕೊಳ್ಳಬೇಕಾದರೆ ನನ್ನೊಡನೆ ಯುದ್ಧಕ್ಕೆ ಬಾ; ಎಂದು ಹಮ್ಮಿನಿಂದ ನುಡಿದನು. ಕೊಬ್ಬಿದ ಶತ್ರುವಿನ ಮಾತುಗಳನ್ನು ಕೇಳಿ ವರುಣನಿಗೆ ಕೋಪಬಂತು. ಅವನು ಅದನ್ನು ತಡೆದುಕೊಂಡು ಶ್ರೀಹರಿಯ ಇಷ್ಟವನ್ನು ನೆನಸಿದನು. "ಅಯ್ಯಾ ! ದೈತ್ಯರಾಜ ! ನಾವಾಗಲೇ ಶಕ್ತಿಕುಂದಿ ಉಪಶಾಂತರಾಗಿದ್ದೇವೆ. ಶ್ರೀಹರಿಯನ್ನೇ ಶರಣುಹೊಂದಿದ್ದೇವೆ. ಸರ್ವಜಗತ್ತಿಗಿಂತ ಭಿನ್ನನೂ ಉತ್ತಮನೂ ಆದ ಶ್ರೀಹರಿಯೇ ನಿನಗೆ ತಕ್ಕ ಪಡಿಯಾಳು. ನಾವಲ್ಲ. ನೀನಾದರೋ ಯುದ್ಧ ವಿದ್ಯೆಯಲ್ಲಿ ನಿಪುಣನು. ದೈತ್ಯಶ್ರೇಷ್ಠನಾದ ನಿನ್ನ ಇಷ್ಟವನ್ನು ನೆರವೇರಿಸಬೇಕಾದರೆ ನಿನ್ನನ್ನು ಯುದ್ಧದಲ್ಲಿ ತಡೆದು ಸೋಲಿಸಬೇಕಾದರೆ ಆ ಪುರಾಣಪುರುಷನ ವಿನಹ ಮತ್ತೊಬ್ಬನು ಸಮರ್ಥನೆಂದು ನನಗನ್ನಿಸುವುದಿಲ್ಲ. ನಿನ್ನಂತಹ ಯುದ್ಧಾಪೇಕ್ಷಿಗಳಾದ ವೀರರು ಯುದ್ಧಕ್ಕಾಗಿ ಅವನನ್ನೇ ಬೇಡುವರು. ಸಜ್ಜನರನ್ನು ಅನುಗ್ರಹಿಸಬೇಕೆಂಬ ಇಚ್ಛೆಯಿಂದ ಅವನು ನ್ನಿಂತಹ ದುಷ್ಟರ ಸಂಹಾರಕ್ಕಾಗಿ ಅನೇಕ ರೂಪಗಳನ್ನು ಧರಿಸುವನು. ಈಗವನು ವರಾಹರೂಪಿಯಾಗಿರುವನು. ಸಮೀಪದಲ್ಲಿಯೇ ನೀನವನನ್ನು ಯುದ್ಧದಲ್ಲಿ ಎದುರಿಸಿ ಅವನಿಂದ ಸಂಹೃತನಾಗಿ ರಣರಂಗದಲ್ಲಿ ಬಿದ್ದು ನಾಯಿಗಳ ಪಾಲಾಗುವೆ." ಎಂದು ವರುಣದೇವನು ಉತ್ತರ ಕೊಟ್ಟನು.



## ಅಥ ಏಕೋನವಿಂಶೋಽಧ್ಯಾಯಃ

**ಮೈತ್ರೇಯ ಉವಾಚ**

**ತದೇವಮಾಕರ್ಣ್ಯ ಜಲೇಶಭಾಷಿತಂ**
**ಮಹಾಮನಾಸ್ತದ್ ವಿಗಣಯ್ಯ ದುರ್ಮದಃ ।**
**ಹರೇರ್ವಿದಿತ್ವಾ ಗತಿಮಂಗ ನಾರದಾದ್**
**ರಸಾತಲಂ ಸಂವಿವಿಶೇ ತ್ವರಾನ್ವಿತಃ ॥೧॥**

ಏವಂ=ಈ ವಿಧವಾಗಿ, ಜಲೇಶಭಾಷಿತಂ=ವರುಣನ ಮಾತನ್ನು, ಆಕರ್ಣ್ಯ= ಕೇಳಿ, ದುರ್ಮದಃ=ದುಷ್ಟವಾದ ಮದವುಳ್ಳ, ಮಹಾಮನಾಃ=ಎದುರಾಳಿ ಇರುವುದನ್ನು ಕೇಳಿ ದೊಡ್ಡ ಮನಸುಳ್ಳ ಹಿರಣ್ಯಾಕ್ಷನು, ತತ್=ರಣ ಭೂಮಿಯಲ್ಲಿ ಮಲಗುವಿ ಎಂದು ಹೇಳಿದ್ದನ್ನು, ವಿಗಣಯ್ಯ=ಲೆಕ್ಕಿಸದೆ, ನಾರಾದಾತ್=ನಾರದರಿಂದ, ಹರೇಃ=ಶ್ರೀಹರಿಯ, ಗತಿಂ=ರಸಾತಲಗಮನವನ್ನು, ವಿದಿತ್ವಾ=ತಿಳಿದು, ತ್ವರಾನ್ವಿತಃ= ವೇಗದಿಂದ ಕೂಡಿದವನಾಗಿ, ಸಂವಿವಿಶೇ=ನೀರಿನಲ್ಲಿ ಪ್ರವೇಶ ಮಾಡಿದನು. ॥೧॥

**ದದರ್ಶ ತತ್ರಾವಿಜಿತಂ ಧರಾಧರಂ**
**ಪ್ರೋನ್ನೀಯಮಾನಾವನಿಮಗ್ರದಂಷ್ಟ್ರಯಾ ।**
**ಮುಷ್ಣಂತಮಕ್ಷ್ಣಾಂಬುರುಹಾರುಣಶ್ರಿಯಂ**
**ಜಹಾಸ ಚಾಹೋ ವನಗೋಚರೋ ಮೃಗಃ ॥೨॥**

ತತ್ರ=ನೀರಿನಲ್ಲಿ, ಅವಿಜಿತಂ=ಸೋಲಿಲ್ಲದ, ಅಗ್ರದಂಷ್ಟ್ರಯಾ=ಮುಂದಿನ ಕೋರೆ ಹಲ್ಲಿನಿಂದ, ಪ್ರೋನ್ನಿಯಮಾನಾವನಿಂ=ಚೆನ್ನಾಗಿ ಭೂಮಿಯನ್ನು ಮೇಲೆತ್ತುತ್ತಿರುವ, ಅಕ್ಷ್ಣಾ=ತನ್ನ ಕಣ್ಣಿನಿಂದ, ಅಂಬುರುಹಾರುಣಶ್ರಿಯಂ=ಕಮಲದ ಕೆಂಪುಕಾಂತಿ- ಯನ್ನು, ಮುಷ್ಣಂತಂ=ಅಪಹರಿಸುವ ಧರಾಧರಂ=ಭೂವರಾಹನನ್ನು, ದದರ್ಶ= ನೋಡಿದನು, ವನಗೋಚರೋ ಮೃಗಃ ಇತಿ ಜಹಾಸ ಚ ಅಹೋ=ಅಡವಿಯಲ್ಲಿ ಭೂಮಿಯಲ್ಲಿ ಸಂಚರಿಸುವ ವರಾಹ ಅಥವಾ ನೀರು ಭೂಮಿಗಳಲ್ಲಿ ಸಂಚರಿಸುವ ಮೃಗವು ಇದು ಹೇಗೆ ನನಗೆ ಪ್ರತಿವೀರ ಎಂದು ಹೇಳಲ್ಪಟ್ಟಿತು ಎಂದು ನಕ್ಕನು. ॥೨॥

ಆಹೈನಮೇಹ್ಯಜ್ಞ ಮಹೀಂ ವಿಮುಂಚ ನೋ
ರಸೌಕಸಾಂ ವಿಶ್ವಸೃಜೇಯಮರ್ಪಿತಾ ।
ನ ಸ್ವಸ್ತಿ ಯಾಸ್ಯಸ್ಯಮುಯಾ ಮಯೇಕ್ಷಿತಃ
ಸುರಾಧಮಾಸಾದಿತಸೂಕರಾಕೃತೇ ॥೩॥

ಆಸಾದಿತಸೂಕರಾಕೃತೇ=ನಮ್ಮನ್ನು ವಂಚಿಸಲು ಹಂದಿಯ ರೂಪವನ್ನು ತಾಳಿದವನೆ, ಸುರಾಧಮ=ನೀಚದೇವತೆಯೇ, ಅಜ್ಞ=ಮಂದನೇ, ಏಹಿ=ಬಾ. ವಿಶ್ವಸೃಜಾ=ಬ್ರಹ್ಮನಿಂದ, ರಸೌಕಸಾಂ=ರಸಾತಲನಿವಾಸಿಗಳಾದ ನಃ=ನಮಗೆ, ಇಯಂ ಅರ್ಪಿತಾ=ಭೂಮಿಯು ಕೊಡಲ್ಪಟ್ಟಿರುವಳು, ಆದ್ದರಿಂದ ಮಹೀಂ=ಭೂಮಿಯನ್ನು ವಿಮುಂಚ=ಬಿಟ್ಟುಬಿಡು, ಯತಃ=ಯಾವ ಕಾರಣ, ಮಯಾ=ನನ್ನಿಂದ, ಈಕ್ಷಿತಃ=ನೋಡಲ್ಪಟ್ಟ ನೀನು, ಅಮುಯಾ=ಇವಳೊಡನೆ, ಸ್ವಸ್ತಿ ನ ಯಾಸ್ಯಸಿ=ಸುಖವಾಗಿ ಹೋಗಲಾರಿ ಎಂದು. ಏನಂ=ವರಾಹರೂಪಿ ಹರಿಯನ್ನು ಕುರಿತು, ಆಹ=ಹೇಳಿದನು. ॥೩॥

ತ್ವಂ ನಃ ಸಪತ್ನೈರಭಯಾಯ ಕಿಂ ವೃತೋ
ಯೋ ಮಾಯಯಾ ಹಂಸ್ಯಸುರಾನ್ ಪರೋಕ್ಷಜಿತ್ ।
ತ್ವಾಂ ಯೋಗಮಾಯಾಬಲಮಲ್ಪಪೌರುಷಂ
ಸಂಸ್ಥಾಪ್ಯ ಮೂಢಂ ಪ್ರಮೃಜೇ ಸುಹೃಚ್ಛುಚಃ ॥೪॥

ತ್ವಂ=ನೀನು, ಸಪತ್ನೈಃ=ನಮ್ಮ ಶತ್ರುಗಳಾದ ದೇವತೆಗಳಿಂದ, ಅಭಯಾಯ= ಭಯ ಪರಿಹರಿಸಲು, ವೃತಃ ಕಿಂ=ಸ್ವೀಕರಿಸಲ್ಪಟ್ಟಿರುವೆಯಾ ? ಯಃ=ಯಾವ ನೀನು, ಮಾಯಯಾ=ಹಂದಿ ಮುಂತಾದ ರೂಪಧಾರಣೆ ಮಾಡಿ,ಅಸುರಾನ್=ದೈತ್ಯರನ್ನು ಹಂಸಿ=ಸಂಹರಿಸುವಿ. ಪರೋಕ್ಷಜಿತ್=ಅಪ್ರತ್ಯಕ್ಷವಾಗಿ ಕಳ್ಳತನದಿಂದ ಗೆಲ್ಲುವಿ, ಯೋಗಮಾಯಾಬಲಂ=ಕಪಟ ಉಪಾಯಬಲವುಳ್ಳ, ಆದ್ದರಿಂದಲೇ ಅಲ್ಪಪೌರುಷಂ =ಸಾಮರ್ಥ್ಯವಿಲ್ಲದ, ಮೂಢಂ=ಮೂರ್ಖನಾದ, ತ್ವಾಂ=ನಿನ್ನನ್ನು, ಸಂಸ್ಥಾಪ್ಯ= ಕೊಂದು, ಸುಹೃಚ್ಛುಚಃ ಪ್ರಮೃಜೇ=ನಮ್ಮ ಭಾಂಧವರ ದುಃಖವನ್ನು ಕಳೆಯುವೆನು. ॥೪॥

ತ್ವಯಿ ಸ್ಥಿತೇ ಗದಯಾ ಶೀರ್ಣಶೀರ್ಷ-
ಣ್ಯಸ್ಮದ್ಭುಜಚ್ಯುತಯಾ ಯೇ ಚ ತುಭ್ಯಂ ।
ಬಲಿಂ ಹರಂತ್ಯೃಷಯೋ ಯೇ ಚ ದೇವಾಃ
ಸ್ವಯಂ ಸರ್ವೇ ನ ಭವಿಷ್ಯಂತ್ಯಮೂಲಾಃ ॥೫॥

ಅಸ್ಮದ್ಭುಜಚ್ಯುತಯಾ=ನನ್ನ ಕೈಯಿಂದ ಹೊರಟ, (ಎಸೆಯಲ್ಪಟ್ಟ) ಗದಯಾ= ಗದೆಯಿಂದ, ತ್ವಯಿ=ನೀನು, ಶೀರ್ಣಶೀರ್ಷಣಿ=ತಲೆ ಒಡೆದವನಾಗಿ, ಸ್ಥಿತೇ= ಇರುತ್ತಿರಲು,(ಸಾಯುತ್ತಿರಲು)ಯೇ ಚ=ಯಾರು, ತುಭ್ಯಂ=ನಿನಗೆ, ಬಲಿಂ ಹರಂತಿ =ಪೂಜಿಸುವರೋ ಅಂಥ, ಋಷಯಃ=ಮುನಿಗಳು, ದೇವಾಃ=ದೇವತೆಗಳು, ಅಮೂಲಾಃ=ಆಶ್ರಯವಿಲ್ಲದಂತಾಗಿ, ಸರ್ವೇ=ಎಲ್ಲರೂ, ಸ್ವಯಂ=ತಾವಾಗಿಯೇ, ನ ಭವಿಷ್ಯಂತಿ=ಇಲ್ಲದಾಗುವರು ಮೃತರಾಗುವರು. ॥೫॥

**ಸ ತುದ್ಯಮಾನೋಽರಿದುರುಕ್ತತೋಮರೈ-**
**ರ್ದಂಷ್ಟ್ರಾಗ್ರಗಾಂ ಗಾಮುಪಲಭ್ಯ ಭೀತಾಂ ।**
**ತೋದಂ ಮೃಷನ್ ನಿರಗಾದಂಬುಮಧ್ಯಾ-**
**ದ್ಗ್ರಾಹಾಹತಃ ಸಕರೇಣುರ್ಯಥೇಭಃ ॥೬॥**

ಸಃ=ಶ್ರೀಹರಿಯು ಅರಿದುರುಕ್ತತೋಮರೈಃ=ಶತ್ರುವಿನ ದುಷ್ಟವಚನಗಳೆಂಬ ತೋಮರವೆಂಬ ಶಸ್ತ್ರದಿಂದ ತುದ್ಯಮಾನಃ=ವ್ಯಥೆಗೊಂಡು ಭೀತಾಂ=ಹೆದರಿಂದ ದಂಷ್ಟ್ರಾಗ್ರಗಾಂ=ಹಲ್ಲಿನ ತುದಿಯಲ್ಲಿರುವ ಗಾಂ=ಪೃಥ್ವಿಯನ್ನು ಉಪಲಭ್ಯ= ಕರೆದುಕೊಂಡು ತೋದಂ=ವ್ಯಥೆಯನ್ನು ಮೃಷನ್=ಸಹಿಸಿಕೊಂಡು ಸಕರೇಣುಃ= ಹೆಣ್ಣಾನೆಯಿಂದ ಸಹಿತವಾದ ಇಭಃ ಯಥಾ=ಆನೆಯಂತೆ ಅಂಬುಮಧ್ಯಾತ್ ನಿರಗಾತ್=ನೀರಿನಿಂದ ಹೊರಬಂದನು. ॥೬॥

**ತಂ ನಿಃಸರಂತಂ ಸಲಿಲಾದನುದ್ರುತೋ**
**ಹಿರಣ್ಯಕೇಶೋ ದ್ವಿರದಂ ಯಥಾ ಝಷಃ ।**
**ಕರಾಲದಂಷ್ಟ್ರೋಽಶನಿನಿಃಸ್ವನೋಽಬ್ರವೀದ್**
**ಗತಹ್ರಿಯಾಂ ಕಿಂ ನ್ವಸತಾಂ ವಿಗರ್ಹಿತಮ್ ॥೭॥**

ಸಲಿಲಾತ್=ನೀರಿನಿಂದ ನಿಃಸರಂತಂ=ಹೊರ ಬರುತ್ತಿರುವ ತಂ ಶ್ರೀಹರಿಯನ್ನು ದ್ವಿರದಂ=ಆನೆಯನ್ನು ಝಷಃ=ಯಥಾ ಮೀನಿನಂತೆ ಅನುದ್ರುತಃ=ಹಿಂಬಾಲಿಸಿದ ಕರಾಲದಂಷ್ಟ್ರಃ=ಕ್ರೂರವಾದ ಹಲ್ಲುಗಳುಳ್ಳ ಅಶನಿನಿಃಸ್ವನಃ=ಸಿಡಿಲಿನಂತಿರುವ ಧ್ವನಿಯುಳ್ಳ ಹಿರಣ್ಯಕೇಶಃ=ಹಿರಣ್ಯಾಕ್ಷನು ಗತಹ್ರಿಯಾಂ=ಲಜ್ಜೆ ಇಲ್ಲದ ಅಸತಾಂ= ಅಸಜ್ಜನರಿಗೆ ವಿಗರ್ಹಿತಂ ಕಿಂ ನು=ನಿಂದಿತವಾದುದು ಯಾವುದು ? ಯಾವುದೂ ಇಲ್ಲ ಪ್ರಕೃತದಲ್ಲಿ ಯುದ್ಧದಲ್ಲಿ ನೀನು ಓಡಿ ಹೋಗುವುದು ನಿಂದಿತವೆಂದು ಭಾವ. ॥೭॥

**ಸ ಗಾಮುದಸ್ತಾತ್ ಸಲಿಲಸ್ಯ ಗೋಚರೇ**
**ವಿನ್ಯಸ್ಯ ತಸ್ಯಾಮದಧಾತ್ ಸ್ವಸತ್ವಮ್ ।**
**ಅಭಿಷ್ಟುತೋ ವಿಶ್ವಸೃಜಾಂ ಪ್ರಸೂನೈ-**
**ರಾಪೂರ್ಯಮಾಣೋ ವಿಬುಧೈಃ ಪಶ್ಯತೋಽರೇಃ ॥೮॥**

ಸಃ=ಶ್ರೀಹರಿಯು ಗಾಂ=ಭೂಮಿಯನ್ನು ಸಲಿಲಸ್ಯ=ನೀರಿನ ಉದಸ್ತಾತ್=ಮೇಲೆ ಗೋಚರೇ=ಭೂಮಿಗೆ ಇರಲು ಯೋಗ್ಯವಾದಸ್ಥಳದಲ್ಲಿ ವಿನ್ಯಸ್ಯ=ಇಟ್ಟು ತಸ್ಯಾಂ= ಅಭೂಮಿಯಲ್ಲಿ ಸ್ವಸತ್ವಂ=ತನ್ನ ಬಲವನ್ನು ಅದಧಾತ್=ನೀರಿನ ಮಧ್ಯದಲ್ಲಿ ಚಲಿಸಿದಂತೆ ಇರುವುದಕ್ಕಾಗಿ ಇಟ್ಟನು. ಅರೇಃ ಪಶ್ಯತಃ ಸತಃ=ಶತ್ರುವು ನೋಡುತ್ತಿರು ವಾಗಲೇ ವಿಶ್ವಸೃಜಾಂ=ಬ್ರಹ್ಮಾದಿದೇವತೆಗಳಿಂದ ಪ್ರಸೂನೈಃ=ಪುಷ್ಪಗಳಿದ ಆಪೂರ್ಯ- ಮಾಣಃ=ತುಂಬಲ್ಪಟ್ಟು ವಿಬುಧೈಃ=ದೇವತೆಗಳಿಂದ ಅಭಿಷ್ಟುತಃ=ಸ್ತುತಿಸಲ್ಪಟ್ಟನು. ದೇವತೆಗಳು ಪುಷ್ಪ ವೃಷ್ಟಿಮಾಡಿ ಸ್ತುತಿಸಿದರೆಂದು ಭಾವ. ॥೮॥

**ಪರಾನುಷಕ್ತಂ ತಪನೀಯೋಪಕಲ್ಪ-**
**ಮಹಾಗದಂ ಕಾಂಚನಚಿತ್ರಿತಾಂಗಮ್ ।**
**ಮರ್ಮಾಣ್ಯಭೀಕ್ಷ್ಣಂ ಪ್ರತುದಂತಂ ದುರುಕ್ತೈಃ**
**ಪ್ರಚಂಡಮನ್ಯುಃ ಪ್ರಹಸಂಸ್ತಂ ಬಭಾಷೇ ॥೯॥**

ಪರಾನುಷಕ್ತಂ=ವೈರಿಯನ್ನು ಅನುಸರಿಸಿ ಬರುತ್ತಿರುವ ತಪನಿಯೋಪಕಲ್ಪ ಮಹಾಗದಂ=ಚಿನ್ನದ ಆಭರಣಗಳಿಂದ ಅಲಂಕೃತವಾದ ದೊಡ್ಡದಾದ ಗದೆಯುಳ್ಳ ಕಾಂಚನಚಿತ್ರಿತಾಂಗಂ=ಬಂಗಾರದ ಆಭರಣಗಳಿಂದ ಅಲಂಕರಿಸಿದ ಅವಯವಗಳುಳ್ಳ ಅಭೀಕ್ಷ್ಣಂ=ಬಹಳವಾಗಿ ಮರ್ಮಾಣಿ=ಮರ್ಮಸ್ಥಳಗಳನ್ನು ದುರುಕ್ತೈಃ=ದುಷ್ಟ ಮಾತುಗಳಿಂದ ಪ್ರತುದಂತಂ=ವ್ಯಥೆಗೊಳಿಸುವ ತಂ=ಹಿರಣ್ಯನನ್ನು ಕುರಿತು ಪ್ರಚಂಡ- ಮನ್ಯುಃ=ಬಹಳ ಕೋಪಗೊಂಡ ಶ್ರೀಹರಿಯು ಪ್ರಹಸನ್=ನಗುತ್ತ ಬಭಾಷೇ= ಮಾತಾಡಿದನು. (ಇದರಿಂದ ಕೊಪವನ್ನು ಮುಚ್ಚಿದನೆಂದು ಸೂಚಿತ) ॥೯॥

ಶ್ರೀಭಗವಾನುವಾಚ

**ಸತ್ಯಂ ವಯಂ ಭೋ ವನಗೋಚರಾ ಮೃಗಾ**
**ಯುಷ್ಮದ್ವಿಧಾನ್ ಮೃಗಯೇ ಗ್ರಾಮಸಿಂಹಾನ್ ।**
**ನ ಮೃತ್ಯುಪಾಶೈಃ ಪ್ರತಿಯುಕ್ತಸ್ಯ ವೀರಾಃ**
**ವಿಕತ್ಥನಂ ತವ ಗೃಹ್ಣಂತ್ಯಭದ್ರ ॥೧೦॥**

ಭೋ ಅಭದ್ರ=ಅಮಂಗಲನಾದ ಎಲೆ ಹಿರಣ್ಯಾಕ್ಷನೇ ವಯಂ=ನಾವು ವನಗೋಚರಾಃ ಮೃಗಾಃ ಇತಿ ಸತ್ಯಂ=ಅಡವಿಯಲ್ಲಿ ಕಾಣುವ ಮೃಗವೆಂಬುದು ನಿಜವೇ ! ಆದರೆ ಯುಷ್ಮದ್ವಿಧಾನ್=ನಿನ್ನಂತಹ ಗ್ರಾಮಸಿಂಹಾನ್=ನಾಯಿಗಳನ್ನು ಮೃಗಯೇ=ಬೇಟೆಯಾಡುವೆವು (ಹುಡುಕುವೆವು) ವೀರಾಃ=ಸಮರ್ಥರಾದವರು ಮೃತ್ಯುಪಾಶೈಃ ಪ್ರಯುಕ್ತಸ್ಯ=ಮರಣ ಸಂಕೋಲೆಯಿಂದ ಬದ್ಧನಾದ ತವ=ನಿನ್ನ ವಿಕತ್ಥನಂ=ಅಸಂಬದ್ಧ ಮಾತುಗಳನ್ನು ನ ಗೃಹ್ಣಂತಿ=ಸ್ವೀಕರಿಸುವುದಿಲ್ಲ. ॥೧೦॥

**ಏತೇ ವಯಂ ನ್ಯಾಸಹರಾ ರಸೌಕಸಾಂ**
**ಗತಹ್ರಿಯೋ ಗದಯಾ ದ್ರಾವಿತಾಸ್ತೇ ।**
**ತಿಷ್ಠಾಮಹೇಽಥಾಪಿ ಕಥಂಚಿದಾಜೌ**
**ಸ್ಥೇಯಂ ಕ್ವ ಯಾಮೋ ಬಲಿನೋತ್ಪಾದ್ಯ ವೈರಂ ॥೧೧॥**

ಏತೇ ವಯಂ=ಈ ನಾವು ರಸೌಕಸಾಂ=ರಸಾತಲನಿವಾಸಿಗಳ ನ್ಯಾಸಹರಾಃ= ನಿಕ್ಷೇಪವನ್ನಪಹರಿಸದವರು ತೇ ಗದಯಾ ದ್ರಾವಿತಾಃ=ನಿನ್ನ ಗದೆಯಿಂದ ಓಡಿಸಲ್ಪಟ್ಟ- ವರು ಅಥಾಪಿ=ಆದರೂ ಗತಹ್ರಿಯಃ=ನಿರ್ಲಜ್ಜರು ಆದ್ದರಿಂದ ತಿಷ್ಠಾಮಹೇ= ನಿಲ್ಲುವೆವು. ಬಲಿನಾ ವೈರಂ ಉತ್ಪಾದ್ಯ=ಬಲಿಷ್ಠನ ಜೊತೆಗೆ ದ್ವೇಷವನ್ನು ಮಾಡಿ ಕ್ವ ಯಾಮಃ=ಎಲ್ಲಿ ಹೋಗುವೆವು ? ಕಥಂಚಿತ್ ಹೇಗೋ ಆಜೌ=ಯುದ್ಧದಲ್ಲಿ ಸ್ಥೇಯಂ=ನಿಲ್ಲಲೇಬೇಕು. ॥೧೧॥

**ತ್ವಂ ಯದ್ ರಥಾನಾಂ ಕಿಲ ಯೂಥಪಾಧಿಪೋ**
**ಘಟಸ್ವ ನೋಽಸ್ವಸ್ತಯ ಆಶ್ವದುದ್ರುಹಃ ।**
**ಸಂಸ್ಥಾಪ್ಯಚಾಸ್ಮಾನ್ ಪ್ರಮೃಜಾಶ್ರು ಸ್ವಕಾನಾಂ**
**ಯಃ ಸ್ವಾಂ ಪ್ರತಿಜ್ಞಾಂ ನಾತಿಪಿಪರ್ತ್ಯಸಭ್ಯಃ ॥೧೨॥**

ಯಃ ತ್ವಂ ಯಾವ ನೀನು ನಃ=ನಮ್ಮನ್ನು ಅದುದ್ರುಹಃ=ದುಷ್ಟ ಮಾತುಗಳನ್ನಾಡಿ ದ್ರೋಹ ಬಗೆದಿರುವಿ ಸಃ ತ್ವಂ=ಆ ನೀನು ರಥಾನಾಂ=ರಥಿಕರ ಯೂಥಾಪಾಧಿಪಃ= ಅಧಿಪತಿಗಳಿಗೂ ಒಡೆಯನಾಗಿರುವಿಯಷ್ಟೇ ! ಆದ್ದರಿಂದ ನಃ ಅಸ್ವಸ್ತಯೇ=ನಮ್ಮ ಅಮಂಗಲಕ್ಕಾಗಿ ಆಶು=ಬೇಗನೆ ಘಟಸ್ವ=ಪ್ರಯತ್ನಿಸು. ಅಸ್ಮಾನ್ ಸಂಸ್ಥಾಪ್ಯ= ನಮ್ಮನ್ನು ಸಂಹರಿಸಿ ಸ್ವಕಾನಾಂ=ನಿನ್ನವರ ಅಶ್ರು=ಕಣ್ಣೀರನ್ನು ಪ್ರಮೃಜ=ಒರೆಸು ಅಸಭ್ಯಃ=ಅಸಜ್ಜನರು ಸ್ವಾಂ ಪ್ರತಿಜ್ಞಾಂ=ತಮ್ಮ ಪ್ರತಿಜ್ಞೆಯನ್ನು ನ ಅತಿಪಿಪರ್ತಿ ಪೂರೈಸಲಾರರು. (ನೀ ಹಾಗಲ್ಲವಲ್ಲವೆ ! ಎಂದು ಅಪಹಾಸ ॥೧೨॥

**ಸೋಽಧಿಕ್ಷಿಪ್ತೋ ಭಗವತಾ ಪ್ರಲಬ್ಧಶ್ಚ ರುಷಾ ಭೃಶಂ ।**
**ಆಜಹಾರೋಲ್ಬಣಂ ಕ್ರೋಧಂ ಕ್ರೀಡ್ಯಮಾನೋಽಹಿರಾಡಿವ ॥೧೩॥**

ಭಗವತಾ=ಶ್ರೀಹರಿಯಿಂದ 'ಅಧಿಕ್ಷಿಪ್ತಃ=ಸತ್ಯಂ ವಯಂ' ಮುಂತಾಗಿ ಆಪೇಕ್ಷಿಸಲ್ಪಟ್ಟ ಪ್ರಲಬ್ಧಶ್ಚ=ಏತೇಂವಯ ಮುಂತಾಗಿ ಉಪಹಾಸ ಮಾಡಲ್ಪಟ್ಟ ಕ್ರೀಡ್ಯಮಾನಃ=ಅನಿಷ್ಟ ಕ್ರೀಡೆಗಳನ್ನು ಮಾಡಿಸಲ್ಪಟ್ಟ ಪೀಡ್ಯಮಾನಃ (ಪಾಠಾಂತರ) ಪೀಡಿಸಲ್ಪಟ್ಟ ಸಃ= ಹಿರಣ್ಯಾಕ್ಷನು ಅಹಿರಾಡಿವ=ಹಾವಿನಂತೆ ಭೃಶಂ ರುಷಾ=ಬಹಳ ಸಿಟ್ಟಿನಿಂದ ಉಲ್ಬಣಂ =ಕ್ರೂರವಾದ ಕ್ರೋಧಂ ಆಜಹಾರ=ಸಂತಾಪವನ್ನು ವ್ಯಕ್ತಗೊಳಿಸಿದನು. ॥೧೩॥

**ವಿಸೃಜನ್ನಹಿವಚ್ಛ್ವಾಸಂ ಮನ್ಯುಪ್ರಚಲಿತೇಂದ್ರಿಯಃ ।**
**ಆಸಾದ್ಯ ತರಸಾ ದೈತ್ಯೋ ಗದಯಾಽಭ್ಯಹನದ್ಧರಿಮ್ ॥೧೪॥**

ಮನ್ಯುಪ್ರಚಲಿತೇಂದ್ರಿಯಃ=ಸಿಟ್ಟಿನಿಂದ ನಡುಗುತ್ತಿರುವ (ಕ್ಷೋಭಗೊಂಡ) ಇಂದ್ರಿಯಗಳುಳ್ಳ ದೈತ್ಯಃ=ಹಿರಣ್ಯಾಕ್ಷನು ಅಹಿವತ್=ಹಾವಿನಂತೆ ಶ್ವಾಸಂ ವಿಸೃಜನ್ =ನಿಟ್ಟುಸಿರು ಬಿಡುತ್ತ ತರಸಾ=ವೇಗದಿಂದ ಆಸಾದ್ಯ=ಸಮೀಪಿಸಿ ಗದಯಾ= ಗದೆಯಿಂದ ಹರಿಂ ಶ್ರೀಹರಿಯನ್ನು ಅಭ್ಯಹನತ್=ಹೊಡೆದನು. ॥೧೪॥

**ಭಗವಾಂಸ್ತು ಗದಾವೇಗಂ ವಿಸೃಷ್ಟಂ ರಿಪುಣೋರಸಿ ।**
**ಅವಂಚಯತ್ ತಿರಶ್ಚೀನೋ ಯೋಗಾರೂಢ ಇವಾಂತಿಕಂ ॥೧೫॥**

ಭಗವಾನ್ ತು=ಶ್ರೀಹರಿಯಾದರೂ ರಿಪುಣಾ=ಶತ್ರುವಿನಿಂದ ಉರಸಿ= ಎದೆಯಲ್ಲಿ ವಿಸೃಷ್ಟಂ=ಬಿಡಲ್ಪಟ್ಟ ಗದಾವೇಗಂ ಗದೆಯ ವೇಗವನ್ನು ಯೋಗಾರೂಢಃ= ಯೋಗಸಿದ್ಧಿಯುಳ್ಳವನು ಅಂತಕಂ ಇವ ಮೃತ್ಯುವನ್ನು ವಂಚಿಸುವಂತೆ ತಿರಶ್ಚೀನಂ= ಬಗ್ಗಿದವನಾಗಿ ಅವಂಚಯತ್=ತಪ್ಪಿಸಿಕೊಂಡನು. ॥೧೫॥

**ಪುನರ್ಗದಾಂ ಸ್ವಾಮಾದಾಯ ಭ್ರಾಮಯಂತಮಭೀಕ್ಷ್ಣಶಃ ।**
**ಅಭ್ಯಧಾವದ್ಧರಿಃ ಕ್ರುದ್ಧಃ ಸರಂಭಾದ್ ದಷ್ಟದಚ್ಛದಃ ॥೧೬॥**

ಪುನಃ=ಮತ್ತೆ ಸ್ವಾಂ ತನ್ನ ಗದಾಂ=ಗದೆಯನ್ನು ಆದಾಯ ಸ್ವೀಕರಿಸಿ ಅಭೀಕ್ಷ್ಣಶಃ=ಮತ್ತೆ ಮತ್ತೆ ಭ್ರಾಮಯಂತಂ=ತಿರುಗಿಸುವ ಹಿರಣ್ಯನ ಮೇಲೆ ಕ್ರುದ್ಧಃ= ಕುಪಿತನಾದ ಸಂರಂಭಾತ್=ರೋಷದಿಂದ ದಷ್ಟದಚ್ಛದಃ=ತುಟಿಗಚ್ಚಿದ ಹರಿಃ= ಶ್ರೀಹರಿಯು ಅಭ್ಯಧಾವತ್=ಎರಗಿದನು ಎದುರಿಸಿದನು. ॥೧೬॥

**ತತಃ ಸ್ವಗದಯಾऽರಾತಿಂ ದಕ್ಷಿಣಾಂಸಭುವಿ ಪ್ರಭುಃ ।**
**ಆಜಘ್ನೇ ಸ ತು ತಾಂ ಸೌಮ್ಯ ಗದಯಾ ಕೋವಿದೋऽಹನತ್ ॥೧೭॥**

ಹೇ ಸೌಮ್ಯ=ವಿದುರನೇ ತತಃ=ನಂತರ ಸ್ವಗದಯಾ=ತನ್ನ ಗದೆಯಿಂದ ಅರಾತಿಂ =ಶತ್ರುವನ್ನು ದಕ್ಷಿಣಾಂಸಭುವಿ=ಬಲಭುಜ ಪ್ರದೇಶದಲ್ಲಿ ಪ್ರಭುಃ ಸಮರ್ಥನಾದ ಶ್ರೀಹರಿಯು ಆಜಘ್ನೇ ಹೊಡೆದನು. ಕೋವಿದಃ=ಗದಾಯುದ್ಧ ವಿಶಾರದನಾದ ಸತು ಹಿರಣ್ಯನಾದರೂ ತಾಂ=ಗದೆಯನ್ನು ಗದಯಾ ಅಹನ್ತ್=ತನ್ನ ಗದೆಯಿಂದ ಹೊಡೆದನು. ॥೧೭॥

**ಏವಂ ಗದಾಭ್ಯಾಂ ಗುರ್ವೀಭ್ಯಾಂ ಹರ್ಯಕ್ಷೋ ಹರಿರೇವ ಚ ।**
**ಜಿಗೀಷಯಾ ಸುಸಂರಬ್ಧಾವನ್ಯೋನ್ಯಮಭಿಜಘ್ನತುಃ ॥೧೮॥**

ಏವಂ=ಈ ರೀತಿಯಾಗಿ ಹರ್ಯಕ್ಷಃ=ಹಿರಣ್ಯಾಕ್ಷನು ಹರಿಃ=ಶ್ರೀಹರಿಯು ಜಿಗೀಷಯಾ ಏವ=ಗೆಲ್ಲಬೇಕೆಂಬ ಇಚ್ಛೆಯಿಂದಲೇ ಸುಸಂರಬ್ಧೌ=ಸನ್ನದ್ಧರಾದ ಈರ್ವರೂ ಗುರ್ವೀಭ್ಯಾಂ=ದೊಡ್ಡ ಗದಾಭ್ಯಾಂ=ಗದೆಗಳಿಂದ ಅನ್ಯೋನ್ಯಂ= ಪರಸ್ಪರವಾಗಿ ಅಭಿಜಗ್ನತುಃ=ಹೊಡೆದರು ॥೧೮॥

**ತಯೋಃ ಸ್ಪೃಧೋಃ ಸ್ನಿಗ್ಧಗದಾಹತಾಂಗಯೋಃ**
**ಕ್ಷತಸ್ರವಾಘ್ರಾಣವಿವೃದ್ಧಯುದ್ಧಯೋಃ ।**
**ವಿಚಿತ್ರಮಾರ್ಗಾಂಶ್ಚರತೋರ್ಜಿಗೀಷಯಾ**
**ವ್ಯಭಾಧಿಲಾಯಾಮಿವ ಶುಷ್ಮಿಣೋರ್ಮೃಧಃ ॥೧೯॥**

ಜಿಗೀಷಯಾ=ಗೆಲ್ಲುವ ಇಚ್ಛೆಯಿಂದ ವಿಚಿತ್ರಮಾರ್ಗಾನ್ ಚರತೋಃ=ಅನೇಕ ರೀತಿಯಾಗಿ ಸಂಚರಿಸುವ ಕ್ಷತಸ್ರವಾಘ್ರಾಣವಿವೃದ್ಧಯುದ್ಧಯೋಃ=ಗಾಯದಿಂದ ಹರಿದು ಬಂದ ರಕ್ತದ ವಾಸನೆಯನ್ನು ಆಘ್ರಾಣಿಸುವುದರಿಂದ ಬೆಳೆದ ಯುದ್ಧವುಳ್ಳ ಸ್ನಿಗ್ಧಗದಾಹತಾಂಗಯೋಃ=ಸಂಬದ್ಧವಾದ ಗದೆಯಿಂದ ತಾಡಿತವಾದ ಅವಯವ- ಗಳುಳ್ಳ ಸ್ಪೃಧೋಃ=ಸ್ಪರ್ಧಿಸುವ ತಯೋಃ=ಹಿರಣ್ಯಾಕ್ಷ ಮತ್ತು ಶ್ರೀ ಹರಿಗೂ ನಡೆದ ಮೃಧಃ ಯುದ್ಧವು ಶುಷ್ಮಿಣೋಃ ಬಲಿಷ್ಟವಾದ ಗೂಳಿಗಳಿಗೆ ಇಲಾಯಾಂ ಇವ= ಆಕಳಿಗಾಗಿ ನಡೆದಂತೆ ಭೂಮಿಗಾಗಿ ಯುದ್ಧವು ವ್ಯಭಾತ್=ವಿಶೇಷವಾಗಿ ಪ್ರಕಾಶಿತವಾಯಿತು. ॥೧೯॥

**ದೈತ್ಯಸ್ಯ ಯಜ್ಞಾವಯವಸ್ಯ ಮಾಯಯಾ**
**ಗೃಹಿತವಾರಾಹತನೋರ್ಮಹಾತ್ಮನಃ ।**

**ತತಃ ಸ್ವಗದಯಾऽರಾತಿಂ ದಕ್ಷಿಣಾಂಸಭುವಿ ಪ್ರಭುಃ ।**
**ಆಜಘ್ನೇ ಸ ತು ತಾಂ ಸೌಮ್ಯ ಗದಯಾ ಕೋವಿದೋऽಹನತ್ ॥೧೭॥**

ಹೇ ಸೌಮ್ಯ=ವಿದುರನೇ ತತಃ=ನಂತರ ಸ್ವಗದಯಾ=ತನ್ನ ಗದೆಯಿಂದ ಅರಾತಿಂ =ಶತ್ರುವನ್ನು ದಕ್ಷಿಣಾಂಸಭುವಿ=ಬಲಭುಜ ಪ್ರದೇಶದಲ್ಲಿ ಪ್ರಭುಃ ಸಮರ್ಥನಾದ ಶ್ರೀಹರಿಯು ಆಜಘ್ನೇ ಹೊಡೆದನು. ಕೋವಿದಃ=ಗದಾಯುದ್ಧ ವಿಶಾರದನಾದ ಸತು ಹಿರಣ್ಯನಾದರೂ ತಾಂ=ಗದೆಯನ್ನು ಗದಯಾ ಅಹನ್‌ತ್=ತನ್ನ ಗದೆಯಿಂದ ಹೊಡೆದನು. ॥೧೭॥

**ಏವಂ ಗದಾಭ್ಯಾಂ ಗುರ್ವೀಭ್ಯಾಂ ಹರ್ಯಕ್ಷೋ ಹರಿರೇವ ಚ ।**
**ಜಿಗೀಷಯಾ ಸುಸಂರಬ್ಧಾವನ್ಯೋನ್ಯಮಭಿಜಘ್ನತುಃ ॥೧೮॥**

ಏವಂ=ಈ ರೀತಿಯಾಗಿ ಹರ್ಯಕ್ಷಃ=ಹಿರಣ್ಯಾಕ್ಷನು ಹರಿಃ=ಶ್ರೀಹರಿಯು ಜಿಗೀಷಯಾ ಏವ=ಗೆಲ್ಲಬೇಕೆಂಬ ಇಚ್ಛೆಯಿಂದಲೇ ಸುಸಂರಬ್ಧೌ=ಸನ್ನದ್ಧರಾದ ಈರ್ವರೂ ಗುರ್ವೀಭ್ಯಾಂ=ದೊಡ್ಡ ಗದಾಭ್ಯಾಂ=ಗದೆಗಳಿಂದ ಅನ್ಯೋನ್ಯಂ= ಪರಸ್ಪರವಾಗಿ ಅಭಿಜಗ್ನತುಃ=ಹೊಡೆದರು ॥೧೮॥

**ತಯೋಃ ಸ್ಪೃಧೋಃ ಸ್ನಿಗ್ಧಗದಾಹತಾಂಗಯೋಃ**
**ಕ್ಷತಸ್ರವಾಘ್ರಾಣವಿವೃದ್ಧಯುದ್ಧಯೋಃ ।**
**ವಿಚಿತ್ರಮಾರ್ಗಾಂಶ್ಚರತೋರ್ಜಿಗೀಷಯಾ**
**ವ್ಯಭಾಧಿಲಾಯಾಮಿವ ಶುಷ್ಮಿಣೋರ್ಮೃಧಃ ॥೧೯॥**

ಜಿಗೀಷಯಾ=ಗೆಲ್ಲುವ ಇಚ್ಛೆಯಿಂದ ವಿಚಿತ್ರಮಾರ್ಗಾನ್ ಚರತೋಃ=ಅನೇಕ ರೀತಿಯಾಗಿ ಸಂಚರಿಸುವ ಕ್ಷತಸ್ರವಾಘ್ರಾಣವಿವೃದ್ಧಯುದ್ಧಯೋಃ=ಗಾಯದಿಂದ ಹರಿದು ಬಂದ ರಕ್ತದ ವಾಸನೆಯನ್ನು ಆಘ್ರಾಣಿಸುವುದರಿಂದ ಬೆಳೆದ ಯುದ್ಧವುಳ್ಳ ಸ್ನಿಗ್ಧಗದಾಹತಾಂಗಯೋಃ=ಸಂಬದ್ಧವಾದ ಗದೆಯಿಂದ ತಾಡಿತವಾದ ಅವಯವ-ಗಳುಳ್ಳ ಸ್ಪೃಧೋಃ=ಸ್ಪರ್ಧಿಸುವ ತಯೋಃ=ಹಿರಣ್ಯಾಕ್ಷ ಮತ್ತು ಶ್ರೀ ಹರಿಗೂ ನಡೆದ ಮೃಧಃ ಯುದ್ಧವು ಶುಷ್ಮಿಣೋಃ ಬಲಿಷ್ಟವಾದ ಗೂಳಿಗಳಿಗೆ ಇಲಾಯಾಂ ಇವ= ಆಕಳಿಗಾಗಿ ನಡೆದಂತೆ ಭೂಮಿಗಾಗಿ ಯುದ್ಧವು ವ್ಯಭಾತ್=ವಿಶೇಷವಾಗಿ ಪ್ರಕಾಶಿತವಾಯಿತು. ॥೧೯॥

**ದೈತ್ಯಸ್ಯ ಯಜ್ಞಾವಯವಸ್ಯ ಮಾಯಯಾ**
**ಗೃಹಿತವಾರಾಹತನೋರ್ಮಹಾತ್ಮನಃ ।**

**ಕೌರವ್ಯ ಮಹ್ಯಾಂ ದ್ವಿಷತೋರ್ವಿಮರ್ದನಂ**
**ದಿದೃಕ್ಷುರಾಗಾದ್ ಋಷಿಭಿರ್ವೃತಃ ಸ್ವರಾಟ್ ॥೨೦॥**

ಹೇ ಕೌರವ್ಯ=ವಿದುರನೇ ದೈತ್ಯಸ್ಯ=ಹಿರಣ್ಯಾಕ್ಷನ ಯಜ್ಞಾವಯವಸ್ಯ=ಯಜ್ಞ ಮತ್ತು ಯಜ್ಞ ಸಾಧನಗಳಿಗೆ ಆಶ್ರಯವಾದ ಅವಯವುಳ್ಳ ಮಾಯಯಾ=ತನ್ನ ಇಚ್ಛೆಯಿಂದ ಗೃಹೀತ=ಸ್ವೀಕರಿಸಿದ ವಾರಾಹತನೋಃ=ವರಾಹ ಶರೀರವುಳ್ಳ ಮಹಾತ್ಮನಃ=ಶ್ರೀಹರಿಯ ಮಹ್ಯಾಂ=ಭೂಮಿಯನಿಮಿತ್ತ ದ್ವಿಷತೋಃ=ದ್ವೇಷಿಸುವ ಇವರ ವಿಮರ್ದನಂ=ಯುದ್ಧವನ್ನು ದಿದೃಕ್ಷುಃ=ನೋಡುವ ಇಚ್ಛೆಯುಳ್ಳ ಸ್ವರಾಟ್ ಮೇಲಿನ ಲೋಕಪಾಲಕನಾದ ಬ್ರಹ್ಮದೇವನು ಋಷಿಭಿಃ ವೃತಃ=ಋಷಿಗಳಿಂದ ಸಹಿತನಾಗಿ ಆಗಾತ್=ಬಂದನು. ॥೨೦॥

**ಆಸನ್ನಶೌಂಡೀರಮಪೇತಸಾಧ್ವಸಂ**
**ಕೃತಪ್ರತೀಕಾರಮಹಾರ್ಯವಿಕ್ರಮಂ ।**
**ವಿಲಕ್ಷ್ಯ ದೈತ್ಯಂ ಭಗವಾನ್ ಸಹಸ್ರಣೀ-**
**ರ್ಜಗಾದ ನಾರಾಯಣಮಾದಿಸೂಕರಮ್ ॥೨೧॥**

ಆಸನ್ನಶೌಂಡೀರಂ=ಯುದ್ಧಕೌಶಲವನ್ನು ಪಡೆದ ಅಪೇತಸಾಧ್ವಸಂ=ಭಯರಹಿತ ನಾದ ಕೃತಪ್ರತೀಕಾರಂ=ವಿರೋಧ ಮಾಡಿದ ಅಹಾರ್ಯವಿಕ್ರಮಂ=ಪಹರಿಸ-ಲಾಗದ ಪರಾಕ್ರಮವುಳ್ಳ ದೈತ್ಯಂ ವಿಲಕ್ಷ್ಯ=ಹಿರಣ್ಯಾಕ್ಷನನ್ನು ನೋಡಿ ಭಗವಾನ್=ಪೂಜ್ಯನಾದ ಸಹಸ್ರಣೀಃ=ಅನೇಕ ದೈನಂದಿನಕಲ್ಪದ ಜನರ ನೇತಾರನಾದ ಬ್ರಹ್ಮದೇವನು ಆದಿಸೂಕರಂ=ಮೊದಲನೆ ವರಾಹರೂಪಿಯಾದ ನಾರಾಯಣಂ ನಾರಾಯಣನಿಗೆ ಜಗಾದ=ಹೇಳಿದನು. ಇದರಿಂದ ಬ್ರಹ್ಮದೇವನು ಕೇವಲ ಯುದ್ಧ ನೋಡಲು ಮಾತ್ರ ಬಂದವನಲ್ಲ ದೈತ್ಯವಧೋಪಾಯವನ್ನು ನಿವೇದನೆ ಮಾಡುವುದಕ್ಕಾಗಿಯೂ ಎಂದು ತಿಳಿಯುವುದು. ಬುದ್ಧಿವಂತನು ಆಪತ್ತಿನಲ್ಲಿ ಉಪಾಯ ಹೇಳಬೇಕೆಂಬ ನೀತಿಯನ್ನು ತಿಳಿಸಲು ಹೇಳಿದ್ದು ಹೊರತು ಹರಿಗೆ ಅಜ್ಞಾನ ಅಲ್ಲ.

'ಸಹಸ್ರಣೀಃ' ಎಂಬ ಶಬ್ದಾರ್ಥವನ್ನು ತಿಳಿಸುವರು-

**''ಅನೇಕ ಕಲ್ಪ ಜನನೇತೃತ್ವಾತ್ ಸಹಸ್ರಣೀಃ''**

ಇಲ್ಲಿ ಕಲ್ಪಶಬ್ದವು ದೈನಂದಿನಪರವಾಗಿದೆ. ಅನೇಕ ದೈನಂದಿನ ಕಲ್ಪದ ಜನರ ನೇತಾರನಾದುದರಿಂದ ಸಹಸ್ರಣೀಃ ಎನ್ನುವರು ಬ್ರಹ್ಮದೇವನಿಗೆ ಎಂದರ್ಥ.

೧೯ನೇ ಶ್ಲೋಕದಲ್ಲಿ 'ಕ್ಷತಸ್ರವಾ' ಎಂದದ್ದರಿಂದ ಭಗವಂತನಿಗೆ ಗಾಯವು 'ಶುಷ್ಮಿಣೇರಿವ' ಎಂದು ವೈರಿಸಾಮ್ಯವು, ಮುಂದಿನ ಅಧ್ಯಾಯದಲ್ಲಿ 'ಸಾ ಹತಾ ತೇನ ಗದಯಾ ವಿಗತಾ ಭಗವತ್ಕರಾತ್' ಮುಂತಾಗಿ ಸೋಲು, 'ಜಗಾದನಾರಾಯಣಂ' ಎಂದು ಭಗವಂತನಿಗೆ ಚತುರ್ಮುಖನ ಉಪದೇಶ ಹೇಳಿದ್ದರಿಂದ ಅಜ್ಞಾನವೂ ತೋರುವುದು ಕಾರಣ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು –

**ಅಕ್ಷತಃ ಕ್ಷತವದ್ವಿಷ್ಣುರಸಮಃ ಸಮವತ್ತಥಾ ।**
**ಅಜಿತೋ ಜಿತವಚ್ಚೈವ ಜ್ಞೋಽಜ್ಞವಚ್ಚ ಪ್ರಕಾಶಯೇತ್ ॥**
**ಸರ್ವರೂಪೇಷ್ವನಂತೋಽಪಿ ಬ್ರಹ್ಮಾದ್ಯಾಶ್ಚೈವ ತನ್ಮತೇಃ ।**
**ಅನುಸಾರಿತಯಾ ಬ್ರೂಯುಃ ಕುರ್ಯುಶ್ಚ ಸ ನ ದುಃಖಭಾಕ್ ॥**

**ಇತಿ ಬ್ರಹ್ಮಾಂಡೇ ।**

ಶ್ರೀಹರಿಯು ಎಲ್ಲರೂಪಗಳಲ್ಲಿ ತ್ರಿವಿಧಾನಂತ್ಯವುಳ್ಳವನಾದರೂ ಗಾಯವಿಲ್ಲ-ದಿದ್ದರೂ ಗಾಯವಿದ್ದಂತೆ, ಅಸಮನಾದರೂ' ಸಮನಂತೆ, ಸೋಲಿಲ್ಲದಿದ್ದರೂ ಸೋತಂತೆ ಜ್ಞಾನಿಯಾದರೂ ಅಜ್ಞಾನಿಯಂತೆ ತೋರಿಸುವನು. ಬ್ರಹ್ಮಾದಿದೇವತೆ-ಗಳು ಅವನ ಸಮ್ಮತಿಯಿಂದಲೇ ಅವನ ಅಭಿಪ್ರಾಯದಂತೆ ಹೇಳುವರು, ಮತ್ತು ಕಾರ್ಯ ಮಾಡುವರು. ಅವನು ದುಃಖ ಹೊಂದುವುದಿಲ್ಲ. ಎಲ್ಲವೂ ಅಸುರಜನ ಮೋಹನಕ್ಕಾಗಿ ಎಂದು ತಿಳಿಯಬೇಕು. (ಇವರು ಹೇಳಿದ್ದು ಅವನು ತೋರಿಸಿದ್ದೂ ಎರಡು ಮೋಹಕ) ॥೨೧॥

ದೈತ್ಯನನ್ನು ಕೊಲ್ಲಲು ಬೇಕಾದ ಅವನ ದೋಷಗಳನ್ನು ಹೇಳುವರು.

**ಬ್ರಹ್ಮೋವಾಚ**

**ಏಷ ತೇ ದೇವದೇವಾನಾಮಂಘ್ರಿಮೂಲಮುಪೇಯುಷಾಂ ।**
**ವಿಪ್ರಾಣಾಂ ಸೌರಭೇಯೀಣಾಂ ಭೂತಾನಾಮಪ್ಯನಾಗಸಾಂ ॥೨೨॥**

ಹೇ ದೇವ=ಸ್ವಾಮಿಯೇ ತೇ=ನಿನ್ನ ಅಂಘ್ರಿಮೂಲಂ=ಪಾದಗಳನ್ನು ಉಪೇಯುಷಾಂ =ಹೊಂದುವ(ಸೇವೆಗಾಗಿ) ದೇವಾನಾಂ=ದೇವತೆಗಳಿಗೂ ವಿಪ್ರಾಣಾಂ=ಬ್ರಾಹ್ಮಣರಿಗೂ ಸೌರಭೇಯೀಣಾಂ=ಗೋವುಗಳಿಗೂ ಅನಾಗಸಾಂ=ನಿರಪರಾಧಿಗಳಾದ ಭೂತಾನಾಂ ಅಪಿ ಪ್ರಾಣಿಗಳಿಗೂ ॥೨೨॥

**ಆಗಸ್ಕೃದ್ ಭಯಕೃದ್ದುಷ್ಕೃದಸ್ಮಲ್ಲಬ್ಧವರೋಽಸುರಃ ।**
**ಅನ್ವೇಷಯನ್ನಪ್ರತಿರಥೋ ಲೋಕಾನಟತಿ ಕಂಟಕಃ ॥೨೩॥**

ಅಸ್ಮಲ್ಲಬ್ಧವರಃ=ನಮ್ಮಿಂದ ವರಪಡೆದ ಅಸುರಃ ಹಿರಣ್ಯಾಕ್ಷನು ಆಗಸ್ಕೃತ್=ಹಣ ಹೆಂಡತಿ ಮುಂತಾದುವನ್ನಪಹರಿಸಿ ಅಪರಾಧ ಮಾಡಿರುವನು. ಭಯಕೃತ್= ಅಗ್ನಿಹೋತ್ರ ಮುಂತಾದುವನ್ನು ನಾಶ ಮಾಡಿ ವಧೆಮಾಡಿ ಭಯ ಉಂಟು ಮಾಡಿರುವನು. ದುಷ್ಕೃತ್=ಪಾಪ ಕಾರ್ಯವನ್ನು ಮಾಡಿರುವನು. ಅನ್ವೇಷಯನ್ =ಪ್ರತಿಭಟರನ್ನು ಹುಡುಕುತ್ತ ಅಪ್ರತಿರಥಃ=ಎದುರಾಳಿಗಳಿಲ್ಲದೆ ಕಂಟಕಃ= ಮುಳ್ಳಿನಂತೆ ದುಃಖಪ್ರದನಾಗಿ ಲೋಕಾನ್ ಅಟತಿ=ಲೋಕಗಳಲ್ಲಿ ತಿರುಗುವನು.

**ಮೈನಂ ಮಾಯಾವಿನಂ ದೃಪ್ತಂ ನಿರಂಕುಶಮಸತ್ತಮಂ ।**
**ಆಕ್ರೀಡ ಬಾಲವದ್ದೇವ ಯದಾಶೀವಿಷಮುತ್ಥಿತಮ್ ॥೨೪॥**

ಹೇ ದೇವ=ಸ್ವಾಮಿಯೇ ಮಾಯಾವಿನಂ=ಕಪಟಿಯಾದ ದೃಪ್ತಂ=ಗರ್ವಿಷ್ಠನಾದ ನಿರಂಕುಶಂ ಅಂಕುಶವಿಲ್ಲದ (ತಡೆಯುವವರಿಲ್ಲದ) ಅಸತ್ತಮಂ=ಅತ್ಯಂತ ದುಷ್ಟನಾದ ಏನಂ=ಇವನನ್ನು ಯತ್=ಯಾವ ಕಾರಣ ಆಶೀವಿಷಂ=ಕೃಷ್ಣಸರ್ಪದ ವಿಷವು (ವಿಷ ಶಬ್ದಕ್ಕೆ ಆವೃತ್ತಿ) ಉತ್ಥಿತಂ ಪ್ರಜ್ವಲಿಸುತ್ತಿದೆ ತತ್=ಆದ್ದರಿಂದ ಮಾ ಆಕ್ರೀಡ=ಆಟವಾಡಬೇಡ. ॥೨೪॥

**ನ ಯಾವದೇಷ ವರ್ಧೇತ ಸ್ವಾಂ ವೇಲಾಂ ಪ್ರಾಪ್ಯ ದಾರುಣಃ ।**
**ಸ್ವಾಂ ದೇವಮಾಯಾಂ ಆಸ್ಥಾಯ ತಾವಜ್ಜಹ್ಯೇನ ಮಚ್ಯುತ ॥೨೫॥**

ಹೇ ದೇವ ಅಚ್ಯುತ=ಕ್ರೀಡಾದಿಗುಣ ವಿಶಿಷ್ಟನೆ, ಚ್ಯುತಿರಹಿತನೇ ಯಾವತ್ ಯಾವಾಗ ಸ್ವಾಂ ವೇಲಾಂ ಪ್ರಾಪ್ಯ=ತಮ್ಮ ಅಂದರೆ ಆಸುರವಾದ ಅಪರಾಹ್ನ ಕಾಲವನ್ನು ಹೊಂದಿ ದಾರುಣಃ=ಕ್ರೂರನು ವರ್ಧೇತ=ಬೆಳೆಯುವನೋ ತಾವತ್= ಅಷ್ಟರಲ್ಲಿ ಸ್ವಾಂ ಮಾಯಾಂ=ನಿನ್ನ ಮಹಿಮೆಯನ್ನು ಆಸ್ಥಾಯ=ಹೊಂದಿ (ಆಶ್ರಯಿಸಿ) ಏನಂ ಜಹಿ= ಇವನನ್ನು ಸಂಹರಿಸು. ॥೨೫॥

**ಏಷಾ ಘೋರತಮಾ ಸಂಧ್ಯಾ ಲೋಕಶಂಬಟ್‌ಕರೀ ಪ್ರಭೋ ।**
**ಉಪಸರ್ಪತಿ ಸರ್ವಾತ್ಮನ್ ಸುರಾಣಾಂ ಜಯಮಾವಹ ॥೨೬॥**

ಏಷಾ=ಈ ಘೋರತಮಾ=ಅತ್ಯಂತ ಕ್ರೂರವಾದ ಲೋಕಶಂಬಟ್‌ಕರೀ=ಎಲ್ಲ ಜನರನ್ನು ನಾಶ ಮಾಡುವ ಸಂಧ್ಯಾ=ಸಾಯಂಕಾಲವು ಉಪಸರ್ಪತಿ=ಬರುತ್ತಿದೆ ಪ್ರಭೋ ಸ್ವಾಮಿಯೇ ಸರ್ವಾತ್ಮನ್=ಎಲ್ಲರ ಅಂತರ್ಯಾಮಿಯೇ ಸುರಾಣಾಂ= ದೇವತೆಗಳಿಗೆ ಜಯಮಾವಹ ಜಯವನ್ನುಂಟು ಮಾಡು. ॥೨೬॥

ಈ ಶ್ಲೋಕದಲ್ಲಿಯ 'ಲೋಕಶಂಬಟ್‌ಕರಿ' ಶಬ್ದದ ಅರ್ಥ ತಿಳಿಸಲು ಅಭಿಧಾನ ಹೇಳುವರು–

**''ಆದರಂತು ಮುಖಂ ವಿಂದ್ಯಾತ್ ಶಂಬಟ್ಕಾರಂತು ಭಕ್ಷಣಂ'' ।**
**ಇತ್ಯಭಿಧಾನಂ ।**

'ಭಕ್ಷಣಂ ನಾಶನ ವಿದ್ಯಾತ್' ಎಂದು ಮುಂದೆ ಅನ್ವಯವಿರುವುದರಿಂದ ಶಂಭಟ 'ಕರಿಯಂದರೆ' ನಾಶಕವೆಂದರ್ಥ ತಿಳಿಯಬೇಕು. ॥೨೬॥

ಇದೆ ವಧೆ ಮಾಡಲು ಸರಿಯಾದ ಕಾಲವೆಂದು ಹೇಳುವರು -

**ಅಧುನೈವಾಭಿಜಿನ್ನಾಮ ಯೋಗೋ ಮೌಹೂರ್ತಿಕೋಽಭ್ಯಗಾತ್ ।**
**ಶಿವಾಯ ನಸ್ತ್ವಂ ಸುಹೃದಾಮಾಶು ನಿಸ್ತರ ದುಸ್ತರಂ ॥೨೭॥**

ಅಧುನಾ ಏವ=ಈಗಲೇ ಮೌಹೂರ್ತಿಕಃ=ಒಳ್ಳೆಯ ಮುಹೂರ್ತಸಂಬಂಧಿಯಾದ ಅಭಿಜಿತ್ ನಾಮ=ಅಭಿಜಿತ್ ಎಂಬ ಯೋಗಃ=ಕಾಲವು (ಮಧ್ಯಾಹ್ನ) ಅಭ್ಯಾಗಾತ್= ಪ್ರಾಪ್ತವಾಗಿದೆ ಸುಹೃದಾಂ ನಃ ಶಿವಾಯ=ಪ್ರಿಯರಾದ ನಮ್ಮ ಕಲ್ಯಾಣಕ್ಕಾಗಿ ತ್ವಂ=ನೀನು ದುಸ್ತರಂ=ಕಷ್ಟಸಾಧ್ಯನಾದ ಇವನನ್ನು ನಿಸ್ತರ=ಸಂಹರಿಸು.

ಇಲ್ಲಿ ಅಭಿಜಿತ್ ಶಬ್ದಾರ್ಥವನ್ನು ಪ್ರಮಾಣದಿಂದ ತಿಳಿಸುವರು -

**''ಮಧ್ಯಾನ್ಹಸ್ತ್ವಭಿಜಿತ್ ಪ್ರೋಕ್ತಃ ಆಷಾಢೋತ್ತರ ಏವ ಚ ।**
**ಶ್ರವಣಸ್ಯಾಪಿ ಪೂರ್ವಾರ್ಧೋ ವಿಷುವಂ ಚಾಭಿಜಿತ್ ಸ್ಮೃತಮ್''॥ಇತಿ ಚ**

ಮಧ್ಯಾನ್ಹ(ಹಗಲಿನ ಮಧ್ಯಭಾಗ ಸುಮಾರು ೧೨-೧) ಮತ್ತು ಉತ್ತರಾಷಾಡಾ ಉತ್ತರಾರ್ಧ, ಶ್ರವಣಾನಕ್ಷತ್ರದ ಪೂರ್ವಾರ್ಧ. ವಿಷವ ಎಂದರೆ ಹಗಲು ರಾತ್ರಿಗಳು ಸಮಾನವಿರುವ ಕಾಲಕ್ಕೆ ಅಭಿಜಿತ್ ಎನ್ನುವರು. ಪ್ರಕೃತದಲ್ಲಿ ಮಧ್ಯಾನ್ಹವೆ ಅಭಿಜಿತ್ ಎಂದು ವಿವಕ್ಷಿತ್‌ವಾಗಿದೆ ॥೨೭॥

**ದಿಷ್ಟ್ಯಾ ತ್ವಾ ವಿಹಿತಂ ಮೃತ್ಯುಮಯಮಾಸಾದಿತಃ ಸ್ವಯಂ ।**
**ವಿಕ್ರಮ್ಯೈನಂ ಮೃಧೇ ಹತ್ವಾ ಲೋಕಾನಾಧೇಹಿ ಶರ್ಮಣಿ ॥೨೮॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಏಕೋನವಿಂಶೋಽಧ್ಯಾಯಃ ॥*

ದಿಷ್ಟ್ಯಾ=ದೈವದಿಂದಾಗಿ ವಿಹಿತಂ ಮೃತ್ಯುಂ=ಮಾರಕನೆಂದು ವಿಹಿತನಾದ ತ್ವಾ= ನಿನ್ನನ್ನು ಸ್ವಯಂ ಆಸಾದಿತಃ=ತಾನಾಗಿಯೇ ಸಮೀಪಿಸಿದ್ದಾನೆ. ಏನಂ=ಇವನನ್ನು ವಿಕ್ರಮ್ಯ=ಆಕ್ರಮಿಸಿ ಮೃಧೆ=ಯುದ್ಧದಲ್ಲಿ ಹತ್ವಾ=ಸಂಹರಿಸಿ ಲೋಕಾನ್ ಶರ್ಮಣಿ ಆಧೇಹಿ=ಜಗತ್ತನ್ನು ಸುಖದಲ್ಲಿ ಸ್ಥಾಪಿಸು. ॥೨೮॥

*ಇಲ್ಲಿಗೆ ಹತ್ತೊಂಬತ್ತನೆಯ ಅಧ್ಯಯವು ಮುಗಿಯಿತು.*

# ಹತ್ತೊಂಬತ್ತನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ವಿದುರ ! ವರುಣನ ಈ ಮಾತುಗಳನ್ನು ಕೇಳಿದ ದೈತ್ಯನು ಅವುಗಳರ್ಥವನ್ನು ತಿಳಿದನು. ತಾನು ಸಾಯುವೆನೆಂಬುದನ್ನು ಲೆಕ್ಕಿಸಲಿಲ್ಲ. ಹರಿಯೊಡನೆ ಯುದ್ಧಕ್ಕೆ ತೊಡಗು ಎಂದೇ ಹೇಳಿದನೆಂದು ಬಗೆದನು. ನಾರದರಿಂದ ಶ್ರೀಹರಿಯು ವರಾಹನಾಗಿರುವುದನ್ನೂ ಅವನಿರುವ ಸ್ಥಲವನ್ನೂ ಅರಿತ ಆ ದೈತ್ಯನು ಬಹಳ ಆತುರತೆಯಿಂದ ಕಣ್ಣುಮುಚ್ಚಿ ನೀರಿನಲ್ಲಿ ಇಳಿದು ರಸಾತಳವನ್ನು ಸೇರಿದನು.

ಅಲ್ಲಿ ವರಾಹರೂಪಿಯು ನೀರಾಯಾಸವಾಗಿ ತನ್ನ ಹಲ್ಲಿನ ಕೊನೆಯಲ್ಲಿ ಭೂಮಿಯನ್ನು ಇಟ್ಟುಕೊಂಡು ಮೇಲಕ್ಕೆ ತರುತ್ತಿದ್ದನು. ಅವನ ಕೆಂಗಣ್ಣು ಕಮಲಗಳ ಅರುಣ ಕಾಂತಿಯನ್ನು ಅಪಹರಿಸುತ್ತಿತ್ತು. ಯಾರಿಂದಲೂ ಜಿತನಲ್ಲದ ಈ ಭೂಧರನನ್ನು ಕಂಡ ದೈತ್ಯನು ಗಹಗಹಿಸಿ ನಕ್ಕನು. ''ಇದೇನು ! ನೀರಿನಲ್ಲಿಯೂ ಭೂಮಿಯ ಮೇಲೂ ಸಂಚರಿಸುವ ಮೃಗವಿದು !'' ಎಂದು ಹೀಯಾಳಿಸಿದನು. ''ಎಲವೋ ! ಮೂಢ, ಭೂಮಿಯನ್ನು ಬಿಡು. ಇದನ್ನು ಸೃಷ್ಟಿಕರ್ತನು ದೈತ್ಯರಿಗಾಗಿ ಕೊಟ್ಟಿರುವನು. ನಿನಗೆ ಈ ಭೂಮಿಯಿಂದ ಯಾವ ಕ್ಷೇಮವೂ ಆಗಲಾರದು. ನನ್ನ ಕಣ್ಣಿಗೆ ಬಿದ್ದ ಮೇಲೆ ನೀನು ಉಳಿಯುವುದೆಲ್ಲಿ ಬಂತು ! ದೇವತೆಗಳಲ್ಲಿ ಬಹು ನೀಚನು ನೀನು. ಆದ್ದರಿಂದಲೇ ಹಂದಿಯ ಆಕಾರವನ್ನು ಹೊಂದಿರುವೆ ನಮ್ಮ ಶತ್ರುಗಳಾದ ದೇವತೆಗಳು ಪಾಪ ! ನಿನ್ನ ರಕ್ಷಿಸೆಂದು ಮೊರೆಹೊಕ್ಕಿರುವರೇನು ? ಕಳ್ಳಯುದ್ಧ ಮಾಡುವ ನೀನು ಮೋಸದಿಂದ ದೈತ್ಯರನ್ನು ಸಂಹರಿಸುವೆ. ಮೋಸವೇ ನಿನಗೆ ಬಲ. ನಿನಗೆ ಪೌರುಷವೆಲ್ಲಿಯದು ? ನಿನ್ನ ನಾಶವನ್ನೇ ಅರಿಯದ ಮೂಢನು ನೀನು. ನಿನ್ನನ್ನು ಸಂಹರಿಸಿ ನಮ್ಮ ಸ್ನೇಹಿತರ ಶೋಕವನ್ನು ಹೋಗಲಾಡಿಸುತ್ತೇನೆ. ನನ್ನ ತೋಳಿನಿಂದ ಹೊರಟ ಗದೆ ನಿನ್ನ ತಲೆಯನ್ನು ಜಜ್ಜದೆ ಬಿಡುವುದಿಲ್ಲ. ಆಗ ನಿನ್ನನ್ನು ಪೂಜಿಸುವ ಆ ಋಷಿಗಳೂ, ದೇವತೆಗಳೂ ಎಲ್ಲರೂ ಆಶ್ರಯ ರಹಿತರಾಗುವರು. ನಿರಾಶ್ರಯರಾದ ಅವರಿಗೆ ಉಳಿಗಾಲವೆಲ್ಲಿ ?'' ಎಂದು ಆ ಹಿರಣ್ಯಾಕ್ಷನೆಂಬ ದೈತ್ಯನ ರೀತಿ. ಆದರೆ ಅದೇ ದೇಹದಲ್ಲಿದ್ದ ವಿಜಯನೆಂಬ ದ್ವಾರಪಾಲಕನು ಶ್ರೀಹರಿಯ ಭಕ್ತನಾದ್ದರಿಂದ ''ದೇವ ! ನೀನು ಸಜ್ಜನರ ಜ್ಞಾನಕ್ಕೆ ವಿಷಯನು. ಭಕ್ತರಿಂದ ಅರಸಿ ಕಾಣಬೇಕಾದವನು. ಪರಿಪೂರ್ಣನು. ಜ್ಞಾನವಿಷಯನು. ಬ್ರಹ್ಮಾದಿ ದೇವತೆಗಳು

ನಿನಗಿಂತ ಕೆಳಗಿನವರು. ನೀನೇ ಸರ್ವೋತ್ತಮನು. ಭಕ್ತರಾದ ನಮ್ಮನ್ನು ಅನುಗ್ರಹಿಸಲು ಸೂಕರಾಕಾರವನ್ನು ಹೊಂದಿರುವೆ. ನಮ್ಮನ್ನು ಅನುಗ್ರಹಿಸು ಬಾ. ಭೂಮಿಯನ್ನು ನೀರಿನ ಮೇಲೆ ಇಡು. ಇದನ್ನು ಬ್ರಹ್ಮದೇವನು ಮನುಷ್ಯರಿಗಾಗಿ ಕೊಟ್ಟಿರುವನು. ಇದರಿಂದ ದೇವತೆಗಳಾದ ನಮಗೆ ಸ್ವರ್ಗದಲ್ಲಿದ್ದಷ್ಟು ಸುಖವಾಗುವುದಿಲ್ಲ. ನಿನ್ನ ಈ ಅವತಾರದ ಪ್ರಯೋಜನವನ್ನು ಭಕ್ತನಾದ ನನಗೆ ತಿಳಿಸಿ ಮೂಲರೂಪನ್ನು ಸೇರುವೆ. ನಮ್ಮ ಕ್ಷೇಮಕ್ಕಾಗಿ ಹೊರಟ ನಿನ್ನನ್ನು ನಮ್ಮ ಶತ್ರುಗಳಾದ ದೈತ್ಯರು ಆವರಿಸಿರುವರು. ನಿನಗೆ ದೈತ್ಯ ಸಂಹಾರವೇನೂ ಕಷ್ಟದ ಕೆಲಸವಲ್ಲ. ಕೇವಲ ಇಚ್ಛಾಮಾತ್ರದಿಂದ ಅವರನ್ನು ಸಂಹರಿಸುವೆ. ನೀನು ಇಂದ್ರಿಯಗಳಿಗೆ ಗೋಚರನಲ್ಲ. ಸರ್ವೋತ್ತಮನು. ಸ್ವರೂಪೇಚ್ಛೆಯೇ ನಿನ್ನ ಬಲ. ನಿನಗೆ ಸರಿಸಮರಾದ ಪುರುಷರೇ ಇಲ್ಲ. ನೀನು ಭಕ್ತರ ಮನಸ್ಸಿನಲ್ಲಿ ಏಕಾಗ್ರತೆಯಿಂದ ಧ್ಯಾನಕ್ಕೆ ವಿಷಯನಾಗುವವನು. ಭಕ್ತಿಯಿಂದ ನಿನ್ನನ್ನು ನನ್ನ ವಶನಾಗಿ ಮಾಡಿಕೊಂಡು ಈ ಸಂಸಾರ ದುಃಖವನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತೇನೆ'' ಎಂದು ಸ್ತೋತ್ರಮಾಡುತ್ತಿದ್ದನು.

ಹಿರಣ್ಯಾಕ್ಷನ ಮೂದಲಿಕೆಯ ಮಾತುಗಳು ಶ್ರೀಹರಿಯ ಮನಸ್ಸಿನ ಮೇಲೆ ಯಾವ ಪರಿಣಾವನ್ನೂ ಉಂಟುಮಾಡಲಿಲ್ಲ. ಹಲ್ಲಿನ ಕೊನೆಯಲ್ಲಿದ್ದ ಭೂಮಿಯು ಹೆದರಿರುವುದನ್ನು ತಿಳಿದ ವರಾಹನು ಹೆಣ್ಣಾನೆಯಿಂದ ಕೂಡಿದ ಸಲಗವು ಮೊಸಳೆಯ ಬಡಿತವನ್ನು ಲೆಕ್ಕಿಸದೆ ನೀರಿನಿಂದ ಹೊರಗೆ ಬರುವಂತೆ ನೀರಿನ ಮಧ್ಯದಿಂದ ಮೇಲಕ್ಕೆ ಬಂದನು. ಭಯಂಕರವಾದ ಹಲ್ಲುಗಳುಳ್ಳ ಸಿಡಿಲಹಾಗೆ ಗಡಸಾದ ಧ್ವನಿಯುಳ್ಳ ಹಿರಣ್ಯಾಕ್ಷನು ನೀರಿನಿಂದ ಮೇಲಕ್ಕೆ ಬರುತ್ತಿದ್ದ ಹರಿಯನ್ನೇ ಮೊಸಳೆಯು ಆನೆಯನ್ನು ಹಿಂಬಾಲಿಸುವಂತೆ ಹಿಂಬಾಲಿಸಿದನು. ಮತ್ತೆ ಮಾತನಾಡಿದನು. ನಾಚಿಕೆಯಿಲ್ಲದ ದುಷ್ಟರು ಮಾಡದ ಕೆಲಸವಾವುದು ? ಶ್ರೀಹರಿಯಾದರೋ ದೈತ್ಯನು ನೋಡುತ್ತಿದ್ದಂತೆಯೇ ಭೂಮಿಯನ್ನು ಸಮೀಪ-ದಲ್ಲಿಯೇ ನೀರಿನ ಮೇಲೆ ಸ್ಥಾಪಿಸಿದನು. ಅದಕ್ಕೆ ಸ್ಥೈರ್ಯವನ್ನು ಅನುಗ್ರಹಿಸಿದನು. ಬ್ರಹ್ಮದೇವರು ಸ್ತೋತ್ರಮಾಡಿದರು. ದೇವತೆಗಳು ಹೂಮಳೆಗೆರೆದರು. ಅನಂತರ ಹಿಂಬಾಲಿಸಿ ಬರುತ್ತಿದ್ದ ದೈತ್ಯನನ್ನು ಕಂಡನು. ಆ ದೈತ್ಯನ ಗದೆಯು ಭಂಗಾರದ ಆಭರಣಗಳಿಂದ ಭೂಷಿತವಾಗಿತ್ತು. ಅವನ ಪ್ರತಿಯೊಂದು ಅವಯವದಲ್ಲಿ ಭಂಗಾರದ ಒಡವೆಗಳಿದ್ದುವು. ಆ ದೈತ್ಯನು ಮತ್ತೆ ಮತ್ತೆ ಶ್ರೀಹರಿಯನ್ನು ಚುಚ್ಚುಮಾತುಗಳಿಂದ ಮೂದಲಿಸುತ್ತಿದ್ದನು. ಶ್ರೀಹರಿಯ ಕೋಪವನ್ನು ಯಾರೂ ಸಹಿಲಾರರು. ಶ್ರೀಹರಿಯು ದೈತ್ಯನ ಕಡೆಗೆ ನೋಡಿ ನಗುತ್ತ ''ಅಯ್ಯಾ ! ನೀನು ಹೇಳಿದುದು ನಿಜ. ನಾವು ವನಗೋಚರರಾದ ಮೃಗಗಳೇ, ನಾವು ಹುಡುಕುವುದು

ನಿಮ್ಮಂತ ಗ್ರಾಮಸಿಂಹಗಳನ್ನು. ಅಮಂಗಳನೇ, ಮೃತ್ಯುವಿನ ದವಡೆಯಲ್ಲಿರುವ ನಿನ್ನ ಅಸಂಬದ್ಧ ಪ್ರಲಾಪವನ್ನು ವೀರರಾದ ನಾವು ಲೆಕ್ಕಿಸುವುದಿಲ್ಲ. ಪಾಪ ! ನಾವು ದೈತ್ಯರಾದ ನಿಮ್ಮ ಒಡವೆಯಾದ ಭೂಮಿಯನ್ನು ಅಪಹರಿಸಿದೆವಲ್ಲವೆ ! ನಾಚಿಕೆಯಿಲ್ಲದ ನಿನ್ನ ಗದೆಯಿಂದ ಓಡಿಸಲ್ಪಟ್ಟೆವಲ್ಲವೆ ! ಆದರೂ ಇಲ್ಲಿಯೇ ಇದ್ದೇವೆ ನೋಡು. ನಮಗೆ ಹೋಗುವುದಕ್ಕೆ ಸ್ಥಳವೇ ಇಲ್ಲ. ಬಲಿಷ್ಠನಾದ ನಿನ್ನೊಡನೆ ಶತ್ರುತನವನ್ನು ಹೊಂದಿದ ಮೇಲೆ ಹೇಗಾದರೂ ಯುದ್ಧ ಮಾಡಲೇಬೇಕು. ನಿನ್ನಂತೆ ನಾವೆಂದೂ ಓಡುವವರಲ್ಲ. ನೀನು ಮಹಾರಥಿಕನೆಂದು ಹೇಳಿಕೊಂಡಿರುವೆ. ನಮ್ಮನ್ನು ನಾಶಪಡಿಸಲು ದ್ರೋಹಮಾಡಿದ ನಿನಗೆ ದೈತ್ಯನಿಗೆ ಇದು ಕ್ರಿಡೆಯಲ್ಲವೆ. ಹಿಂಸೆ ಮಾಡುವುದೇ ದೈತ್ಯರ ಸ್ವಭಾವ. ಬಾ ಯುದ್ಧಕ್ಕೆ ನಿಲ್ಲು. ನಮ್ಮನ್ನು ಸಂಹರಿಸಿ ನಿನ್ನವರ ಕಣ್ಣೀರನ್ನು ಒರೆಸು ಪಾಪ ! ಇದಲ್ಲವೇ ನಿನ್ನ ಪ್ರತಿಜ್ಞೆ ! ಪ್ರತಿಜ್ಞೆಮಾಡಿ ಅದನ್ನು ನಡೆಸಲಾಗದವನು ಅಸಭ್ಯನೇ ಸರಿ ! ಎಂದು ಮಾರ್ನುಡಿದನು.

ಶ್ರೀಹರಿಯು ಮಾಡಿದ ಈ ಹೇಳನವು ದೈತ್ಯನಿಗೆ ತುಂಬ ಕೋಪವನ್ನುಂಟು ಮಾಡಿತು. ಇಷ್ಟವಿಲ್ಲದ ಆಟಕ್ಕೆ ತೊಡಗಿಸಿದ ಹಾವಿನಂತೆ ಅವನು ಸಿಡಿಗುಟ್ಟಿದನು. ನಿಟ್ಟುಸಿರುಬಿಡುತ್ತಿದ್ದ ಅವನ ಇಂದ್ರಿಯಗಳು ಅವನ ವಶ ತಪ್ಪಿದವು. ವೇಗದಿಂದ ಹರಿಯನ್ನು ಸೇರಿದ ದೈತ್ಯನು ಗದೆಯಿಂದ ಬಲವಾಗಿ ಹೊಡೆದನು. ಶ್ರೀಹರಿಯ ವಕ್ಷಸ್ಥಲವನ್ನು ಭೇದಿಸುವಂತೆ ದೈತ್ಯನು ಗದೆಯನ್ನು ಬಹು ವೇಗದಿಂದ ಎಸೆದಿದ್ದನು. ವರಾಹನಾದರೋ ಯೋಗಸಿದ್ಧಿಯುಳ್ಳವನು. ಒದಗಬಂದ ಮೃತ್ಯುವನ್ನು ತಪ್ಪಿಸಿ ಕೊಳ್ಳುವಂತೆ ಅಡ್ಡಡ್ಡಲಾಗಿ ನಿಂದು ಅದನ್ನು ತಪ್ಪಿಸಿಕೊಂಡನು. ನಿರರ್ಥಕವಾದ ಆ ಗದೆಯನ್ನು ಮತ್ತೆ ತೆಗೆದುಕೊಂಡು ದೈತ್ಯನು ತಿರುಗಿಸಲಾರಂಭಿಸಿದನು. ಕುಪಿತನಂತೆ ಕಾಣಿಸಿಕೊಂಡ ವರಾಹನು ಔಡುಗಚ್ಚಿ ರೋಷದಿಂದ ಶತ್ರುವಿನ ಕಡೆಗೆ ಹಾರಿದನು. ಅವನ ಬಲ ಹೆಗಲಿನಲ್ಲಿ ಬಲವಾಗಿ ಹೊಡೆದನು. ಆ ದೈತ್ಯನಾದರೋ ಗದಾಯುದ್ಧದಲ್ಲಿ ನಿಪುಣನಾದ್ದರಿಂದ ತನ್ನ ಗದೆಯಿಂದ ಶ್ರೀಹರಿಯ ಗದೆಯನ್ನು ತಡೆದನು. ಹೀಗೆ ಹಿರಣ್ಯಾಕ್ಷನೂ ವರಾಹನೂ ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಇಚ್ಛೆಯಿಂದ ಕ್ರುದ್ಧರಾಗಿ ಪರಸ್ಪರ ಹೆಗ್ಗದೆಗಳಿಂದ ಹೋರಾಡಿದರು. ಶ್ರೀಹರಿಯ ಗದೆಯ ಪೆಟ್ಟಿನಿಂದ ದೈತ್ಯನ ಅವಯವಗಳು ಸಡಿಲಿದವು. ದೇಹದಿಂದ ರಕ್ತವು ಸುರಿಯುತ್ತಿತ್ತು. ವರಾಹರೂಪಿಯೂ ಅಪ್ರಾಕೃತ ದೇಹಿಯಾದರೂ ದೈತ್ಯನ ಗದೆಯಿಂದ ತನ್ನ ದೇಹದಲ್ಲಿಯೂ ರಕ್ತಸುರಿಯುತ್ತಿದ್ದಂತೆ ತೋರಿಸಿ ಮೋಹಗೊಳಿಸಿ-ದನು. ರಕ್ತದವಾಸನೆ ಬಂದಂತೆಲ್ಲ ಅವರಿಬ್ಬರ ಕ್ರೋಧವು ಇಮ್ಮಡಿಸುತ್ತಿತ್ತು. ಗೆಲ್ಲಬೇಕೆಂದಿದ್ದ ಅವರಿಬ್ಬರೂ ಗದಾಯುದ್ಧದ ಅನೇಕ ಮಾರ್ಗಗಳನ್ನು ತೋರುತ್ತಿದ್ದರು. ಅವರಿಬ್ಬರ ಜಗಳವು ಮದಿಸಿದ ಗೂಳಿಗಳ ಕಾಳಗದಂತೆ ಇತ್ತು.

ಸರ್ವೋತ್ತಮನಾದ ಶ್ರೀಹರಿಯು ಇಚ್ಛಾಮಾತ್ರದಿಂದ ವರಾಹರೂಪನಾಗಿ ತನ್ನ ಅವಯವಗಳಲ್ಲೆಲ್ಲ ಯಜ್ಞ ಮತ್ತು ಅದರ ಸಾಧನಗಳನ್ನು ಹೊಂದಿದ್ದನು. ಇವನ ಮತ್ತು ಹಿರಣ್ಯಾಕ್ಷನ ಯುದ್ಧವನ್ನು ನೋಡಬಯಸಿ ಬ್ರಹ್ಮದೇವರು ಋಷಿಗಳೊಡನೆ ಬಂದರು. ತಮ್ಮ ಕರ್ತವ್ಯವೆಂದು ಶ್ರೀಹರಿಗೆ ವಿಜ್ಞಾಪಿಸಲು ಅವರು ಬಂದಿದ್ದರು. ಅನೇಕ ಕಲ್ಪಗಳ ಸಾಧನೆಗಳುಳ್ಳ ಮುಕ್ತಿಯೋಗ್ಯಜೀವರನ್ನು ತಮ್ಮ ಉಪದೇಶದಿಂದ ಶ್ರೀಹರಿಯ ಬಳಿಗೆ ಒಯ್ಯುವ ಅವರಿಗೆ ಪರಮಾತ್ಮನ ಸಾಮರ್ಥ್ಯವು ತಿಳಿಯದೆ ಇಲ್ಲ. ದೈತ್ಯನಾದರೋ ಸಾಮಾನ್ಯರ ದೃಷ್ಟಿಯಲ್ಲಿ ಯುದ್ಧಪಟುವೂ, ನಿರ್ಭಯನೂ, ಅಜೇಯನೂ, ಪ್ರತೀಕಾರಪರನೂ ಆಗಿದ್ದನು. ಆದ್ದರಿಂದ ಅವರು ಸಾಮಾನ್ಯರ ಮನಸ್ಸನ್ನನುಸರಿಸಿ ಶ್ರೀಹರಿಗೆ ವಿಜ್ಞಾಪಿಸಿಕೊಂಡರು. "ಹೇ ದೇವ ! ಆ ದೈತ್ಯನು ನಿನ್ನನ್ನೇ ಆಶ್ರಯಿಸಿರುವ ದೇವತೆಗಳಿಗೂ, ಬ್ರಾಹ್ಮಣರಿಗೂ, ಗೋವುಗಳಿಗೂ ನಿರಪರಾಧಿಗಳಾದ ಸಮಸ್ತಭೂತಗಳಿಗೂ ಅಪರಾಧ ಮಾಡಿರುವನು; ಕೊಲೆಪಾತಕಿಯು; ದೂಷಕನು. ನಿನ್ನ ಇಚ್ಛೆಯಂತೆಯೇ ನಾನು ಕೊಟ್ಟ ವರಗಳಿಂದ ಈ ದೈತ್ಯನು ಹೀಗೆ ಲೋಕಕಂಟಕನಾಗಿರುವನು. ಪ್ರತಿದ್ವಂದ್ವಿಯನ್ನು ಹುಡುಕಿಕೊಂಡು ನನಗೆ ಸಮರಿಲ್ಲವೆಂದು ಲೋಕಗಳಲ್ಲಿ ಅಲೆಯುತ್ತಿರುವನು. ಇವನು ಮೋಸಗಾರ, ಅಹಂಕಾರಿ, ಯಾರ ಅಂಕೆಯಲ್ಲೂ ಇರದವನು ದುಷ್ಟರಲ್ಲಿ ಅಗ್ರಗಣ್ಯ. ಕೃಷ್ಣಸರ್ಪದ ವಿಷದಂತೆ ಪ್ರಜ್ವಲಿಸುತ್ತ ಲೋಕ ಮಾರಕನಾಗಿರುವನು. ಹುಡುಗನಂತೆ ಇವನೊಡನೆ ಆಟವಾಡಬೇಡ ಪ್ರಭೋ ! ಇವನಿಗೆ ಅನುಕೂಲಿಸುವ ಕಾಲವು ಸಮೀಪಿಸುತ್ತಿರುವುದು. ಈ ದುಷ್ಟನು ಆ ಕಾಲ ಬಂದರೆ ಮತ್ತಷ್ಟು ಬಲಶಾಲಿಯಾಗುವನು. ಅಷ್ಟರೊಳಗಾಗಿ ನಿನ್ನ ಇಚ್ಛೆಯಿಂದ ಅವನನ್ನು ಸಂಹರಿಸು. ನಿನಗೆ ಎಂದೂ ದುಃಖವಿಲ್ಲ. ಬರಲಿರುವ ಸಂಜೆಯು ಲೋಕವನ್ನೇ ನುಂಗುವುದಾದ್ದರಿಂದ ಭಯಂಕರವಾದುದು, ಸರ್ವಸ್ವಾಮಿಯಾದ ನೀನೇ ದೇವತೆಗಳಿಗೆ ಜಯವನ್ನು ತಂದುಕೊಡಬೇಕು. ಈಗ ನಡುಹಗಲಾದ್ದರಿಂದ ಅಭಿಜಿತ್ತೆಂಬ ಯೋಗ ವಿಶಿಷ್ಟವಾದ ಮುಹೂರ್ತವಿದು. ನಿನ್ನನ್ನೇ ನಿರ್ವ್ಯಾಜ ರಕ್ಷಕನೆಂದು ಉಪಾಸಿಸುವ ಈ ದೇವತೆಗಳಿಗೆ ಕ್ಷೇಮವನ್ನುಂಟುಮಾಡು. ಮತ್ತೊಬ್ಬರಿಂದ ಜಯಿಸಲಾಗದ ಈ ಶತ್ರುವನ್ನು ಜಾಗ್ರತೆಯಾಗಿ ಸಂಹರಿಸು. ನೀನೇ ಇವನಿಗೆ ಮೃತ್ಯುವು. ಇವನು ತಾನಾಗಿಯೇ ನಿನ್ನ ಬಳಿಗೆ ಬಂದಿರುವನು. ಯುದ್ಧದಲ್ಲಿ ನಿನ್ನ ಪರಾಕ್ರಮವನ್ನು ತೋರಿ ಇವನನ್ನು ಸಂಹರಿಸಿ ಲೋಕರನ್ನು ಸುಖಿಗಳನ್ನಾಗಿಸು ಎಂದು ಬಿನ್ನೈಸಿದರು.



# ಅಥ ವಿಂಶೋಽಧ್ಯಾಯಃ

**ಮೈತ್ರೇಯ ಉವಾಚ**

**ಅವಧಾರ್ಯ ವಿರಿಂಚಸ್ಯ ನಿರ್ವ್ಯಲೀಕಮೃತಂ ವಚಃ ।**
**ಪ್ರಹಸ್ಯ ಪ್ರೇಮಗರ್ಭೇಣ ತದಪಾಂಗೇನ ಸೋಽಗ್ರಹೀತ್ ॥**

ವಿರಿಂಚಸ್ಯ=ಬ್ರಹ್ಮದೇವರ ನಿರ್ವ್ಯಲೀಕಂ=ನಿಷ್ಕಪಟವಾದ ಋತಂ=ಸತ್ಯವಾದ ವಚಃ=ಮಾತನ್ನು ಅವಧಾರ್ಯ=ಕೇಳಿ ಪ್ರಹಸ್ಯ=ಕಾಲನಿಯಾಮಕನಾದ ನನಗೂ ಮುಹೂರ್ತ ಹೇಳುವನಲ್ಲ ಎಂದು ನಕ್ಕು ಪ್ರೇಮಗರ್ಭೇಣ ಅಪಾಂಗೇನ=ಪ್ರೀತಿ-ಪೂರ್ವಕ ಕಟಾಕ್ಷದಿಂದ ಸಃ=ಶ್ರೀಹರಿಯು ತತ್=ಆ ವಿಷಯವನ್ನು ಅಗ್ರಹೀತ್=ಸ್ವೀಕರಿಸಿದನು. ॥೧॥

**ತತಃ ಸಪತ್ನಂ ಮುಖತಶ್ಚರಂತಮಕುತೋಭಯಮ್ ।**
**ಜಘಾನೋತ್ಪತ್ಯ ಗದಯಾ ಹನಾವಸುರಮಕ್ಷತಃ ॥೨॥**

ತತಃ=ನಂತರ ಮುಖತಃ ಚರಂತಂ=ಎದುರಿಗೆ ಓಡಾಡುವ ಅಕುತೋಭಯಂ=ಯಾರಿಗೂ ಹೆದರದ ಸಪತ್ನಂ=ಶತ್ರುವಾದ ಅಸುರಂ=ಹಿರಣ್ಯಾಕ್ಷನನ್ನು ಉತ್ಪತ್ಯ=ಮೇಲೆ ಹಾರಿ ಹನೌ=ಗದ್ದದಲ್ಲಿ ಅಕ್ಷತಃ ಸ್ವಯಂಗಾಯಗೊಳ್ಳದೆ ಗದಯಾ ಜಘಾನ=ಗದೆಯಿಂದ ಹೊಡೆದನು. ॥೨॥

**ಸಾ ಹತಾ ತೇನ ಗದಯಾ ವಿಹತಾ ಭಗವತ್‌ಕರಾತ್ ।**
**ವಿಘೂರ್ಣಿತಾ(ಬೃಶಂ)ಪತತ್‌ದ್ರೇಜೇ ತದದ್ಭುತಮಿವಾಭವತ್ ॥೩॥**

ತೇನ=ಹಿರಣ್ಯಾಕ್ಷನಿಂದ ಗದಯಾ=ಗದೆಯಿಂದ ಹತಾ=ಹೊಡೆಯಲ್ಪಟ್ಟು ಸಾ=ಭಗವಂತನ ಗದೆಯು ಭಗವತ್‌ಕರಾತ್=ಶ್ರೀಹರಿಯಕೈಯಿಂದ ವಿಹತಾ (ವಿಗತಾ)=ಕೆಳಗೆ ಬಿದ್ದಿತು. ಬೃಶಂ=ಬಹಳವಾಗಿ ವಿಘೂರ್ಣಿತಾ=ವಿಶೇಷವಾಗಿ ತಿರುಗಿ ರೇಜೇ=ಶೋಭಿಸಿತು ತದದ್ಭುತಮಿವಾಭವತ್ ಗದಾಪಾತನವು ಆಶ್ಚರ್ಯಕರವಾಯಿತು. ॥೩॥

**ಸ ತದಾ ಲಬ್ಧವೀರ್ಯೋಽಪಿ ನ ಬಬಾಧೇ ನಿರಾಯುಧಂ ।**
**ಮಾನಯನ್ ಸ ಮೃಧೇ ಧರ್ಮಂ ವಿಶ್ವಕ್‌ಸೇನಂ ಪ್ರಕೋಪಯನ್ ॥**

ತದಾ=ಆಗ ಲಬ್ಧವಿರ್ಯೋಽಪಿ=ಅವಕಾಶ ದೊರೆತರೂ (ಸಾಮರ್ಥ್ಯ ಪಡೆದಿದ್ದರೂ) ಸಃ=ಹಿರಣ್ಯನು ನಿರಾಯುಧಂ=ಆಯುಧವಿಲ್ಲದ ಹರಿಯನ್ನು ಮೃಧೇ=ಯುದ್ಧದಲ್ಲಿ ಧರ್ಮಂ=ನಿರಾಯುಧನನ್ನು ಆಯುಧವಿದ್ದವನು ಹೊಡೆಯಬಾರದೆಂಬುದನ್ನು ಮಾನಯನ್=ಗೌರವಿಸಿ ವಿಶ್ವಕ್ಸೇನಂ=ಶ್ರೀಹರಿಯನ್ನು ಪ್ರಕೋಪಯನ್=ಸಿಟ್ಟಿಗೆ ತರಿಸುತ್ತ ನ ಬಬಾಧೆ=ಹೊಡೆಯಲಿಲ್ಲ. ॥೪॥

**ಗದಾಯಾಮಪವಿದ್ಧಾಯಾಂ ಹಾಹಾಕಾರೇ ಚ ನಿರ್ಗತೇ ।**
**ಮಾನಯಾಮಾಸ ತದ್ಧರ್ಮಂ ಸುನಾಭಂ ಚಾಸ್ಮರದ್ವಿಭುಃ ॥೫॥**

ಗದಾಯಾಂ=ಗದೆಯು ಅಪವಿದ್ಧಾಯಾಂ ಕೆಳಗೆ ಬೀಳುತ್ತಿರಲು ಹಾಹಾಕಾರೇ ಚ ನಿರ್ಗತೇ=ಹಾಹಾಕಾರವೂ ಉಂಟಾದಾಗ ತದ್ಧರ್ಮಂ=ನಿರಾಯುಧನನ್ನು ಹೊಡೆ-ಯದಿರುವುದನ್ನು ಮಾನಯಾಮಾಸ=ಸಾಧು ಎಂದು ಗೌರವಿಸಿದನು. ವಿಭುಃ= ಶ್ರೀಹರಿಯು ಸುನಾಭಂ=ಚಕ್ರವನ್ನು ಅಸ್ಮರತ್=ಸ್ಮರಿಸಿದನು. ಕೆಳಗೆ ಬಿದ್ದ ಗದೆಯನ್ನು ಮತ್ತೆ ಎತ್ತಿಕೊಳ್ಳುವುದು ಯೋಧರಿಗೆ ಜುಗುಪ್ಸಿತವು, ಕಾರಣ ಚಕ್ರ ಸ್ಮರಿಸಿದನು.

'ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತ್ಯೈಃಕೃತೋ ಹರೇಃ'ಎಂದಿರುವುದ-ರಿಂದ ಅಭಕ್ತನು ಮಾಡಿದುದು ಧರ್ಮ ಹೇಗಾದಿತು ? ಎಂದರೆ ಪ್ರಮಾಣದಿಂದ ಉತ್ತರಿಸುವರು.

**''ಧರ್ಮಃ ಸತ್ಯ ಇತಿ ಪ್ರೋಕ್ತೋ ಧರ್ಮಶ್ಚಾಪಿ ಹರೇಃ ಪ್ರಿಯಃ''।ಇತಿಬ್ರಾಹ್ಮೇ**
**''ಯಥೇಚ್ಛಯೈವ ಸರ್ವಂ ತು ಮನಸಾ ದೇಹತೋಽಪಿವಾ ।**
**ಕರ್ತುಂ ಶಕ್ತೋಽಪಿ ಶಸ್ತ್ರಾದ್ಯಾ ಲೀಲೈವಾನಂತಶಕ್ತಿತಃ'' ॥ಇತಿವಾರಾಹೇ ।**

ಜ್ಞಾನಿಗಳಿಂದ ಯಾವುದು ಸತ್ಯ,ಸಾಧು, ಎಂದರೆ ವಿಧ್ಯನುಸಾರಿಯಾಗಿದೆ ಎಂದು ಹೇಳಿದುದು ಧರ್ಮ ಮತ್ತು ಶ್ರೀಹರಿಗೆ ಪ್ರಿಯವಾವುದೋ ಅದೂ ಧರ್ಮ.ಅಂದರೆ ಅಸಾಧು ಎಂದು ಹೇಳಿದರೂ ಹರಿಪ್ರಿಯವಾಗಿದ್ದರೆ ಧರ್ಮ ಆದ್ದರಿಂದ ಭಕ್ತನೇ ಮಾಡಿದರೂ ಪ್ರಕೃತವಾದ ನಿರಾಯುಧನನ್ನೂ ಹೊಡೆಯದಿರುವುದು ಹರಿಗೆ ಅಪ್ರಿಯವಾದರೂ ಧರ್ಮವೆಂದು ಪ್ರೇಕ್ಷಾವಂತರು ಹೇಳುವುದಿಲ್ಲ. ಹರಿಯೇ ಯುದ್ಧ ಮರ್ಯಾದೆ ರಕ್ಷಣೆಗಾಗಿ ಸಾಧು ಎಂದಿದ್ದಾನೆ. ಕಾರಣ ಧರ್ಮವಾಗುವುದು ಆದ್ದರಿಂದ ಮಾನಯಾಮಾಸ ಎಂದಿದ್ದಾನೆ, ಹೊರತು ಪ್ರಿಯವೆಂದಲ್ಲ. ಚಕ್ರ ಸ್ಮರಣ ಮಾಡಿದ್ದರಿಂದ ಅದಿಲ್ಲದೆ ಶತ್ರುಸಂಹಾರ ಸಾಮರ್ಥ್ಯ-ವಿಲ್ಲವೆಂದು ತೋರುವುದು ಕಾರಣ ತಾತ್ಪರ್ಯ ''ಯಥೇಚ್ಛೆಯಾ'' ಎಂಬುದು ಅನಂತ ಶಕ್ತಿಯುಳ್ಳವನಾದ್ದರಿಂದ ಮನಸ್ಸಿನಿಂದಲೂ ದೇಹದಿಂದಲೂ ತನ್ನ ಇಚ್ಛೆಗೆ

ಬಂದುದನ್ನು ಇಚ್ಛೆಯಿಂದಲೂ ಮಾಡಲು ಸಮರ್ಥನಾಗಿದ್ದರೂ ಶಸ್ತ್ರಾದಿಗಳನ್ನು ಸ್ವೀಕರಿಸುವುದು ಕೇವಲ ಲೀಲೆಯಷ್ಟೇ ! ಎಂದು ವರಾಹಪುರಾಣದಲ್ಲಿದೆ. ॥೫॥

ಸರ್ವೋತ್ತಮನಾದರೂ ಇತರರಿಂದ ಹೇಳಿಸಿಕೊಂಡೇ ತನ್ನ ಕರ್ತವ್ಯ ಮಾಡುವನು ಎಂದರಿತ ದೇವತೆಗಳು ವಧೆ ಮಾಡಲು ಪ್ರೇರಿಸುವರು ಎಂದು ಹೇಳುವರು –

**ತಂ ವ್ಯಗ್ರಚಕ್ರಂ ದಿತಿಪುತ್ರಾಧಮೇನ**
**ಸ್ವಪಾರ್ಷದಮುಖ್ಯೇನ ವಿಷಜ್ಜಮಾನಮ್ ।**
**ಚಿತ್ರಾ ವಾಚಸ್ತದ್ವಿದಾಂ ಖೇಚರಾಣಾಂ**
**ತತ್ರ ಸ್ಮಾಸನ್ ಸ್ವಸ್ತಿ ತೇಽಮುಂ ಜಹೀತಿ ॥೬॥**

ವ್ಯಗ್ರಚಕ್ರಂ=ಶತ್ರುವನ್ನು ಸಂಹರಿಸಲು ಚಕ್ರವನ್ನು ತಿರುಗಿಸುತ್ತಿರುವ ದಿತಿಪುತ್ರಾಧಮೇನ=ದೈತ್ಯಾಧಮನಾದ(ಆವಿಷ್ಟ)ಸ್ವಪಾರ್ಷದಮುಖ್ಯೇನ=ತನ್ನ ದ್ವಾರಪಾಲನಿಂದ ವಿಷಜ್ಜಮಾನಂ=ವಿಶೇಷವಾದ ಸಂಗವನ್ನು ಹೊಂದುವಂತೆ ಶ್ರೀ ಹರಿಯನ್ನು ಕುರಿತು ತದ್ವಿದಾಂ=ಶ್ರೀಹರಿಯ ಸ್ವರೂಪವನ್ನರಿತ ಖೇಚರಾಣಾಂ=ಆಕಾಶದಲ್ಲಿ ಸಂಚರಿಸುವ ದೇವತೆಗಳು ತೇ=ನಿನಗೆ ಸ್ವಸ್ತಿ ಕಲ್ಯಾಣವಾಗಲಿ ಅಮುಂ ಜಹಿ=ಇವನನ್ನು ಸಂಹರಿಸು ಎಂದು ತತ್ರ=ಅಲ್ಲಿ ಚಿತ್ರಾಃ=ವಾಚಃ ಆಸನ್=ವಿಚಿತ್ರಮಾತುಗಳುಂಟಾದವು. ॥೬॥

**ಸ ತನ್ನಿಶಮ್ಯಾತ್ತರಥಾಂಗಮಗ್ರತೋ**
**ವ್ಯವಸ್ಥಿತಂ ಪದ್ಮಪಲಾಶಲೋಚನಮ್ ।**
**ವಿಲೋಕ್ಯ ಚಾಮರ್ಷಪರಿಪ್ಲುತೇಂದ್ರಿಯೋ**
**ರುಷಾ ಸ್ವದಂತಚ್ಛದಮಾದಶಚ್ಛ್ವಸನ್ ॥೭॥**

ಸಃ=ಹಿರಣ್ಯಾಕ್ಷನು ತತ್=ಖೇಚರರ ಮಾತನ್ನು ನಿಶಮ್ಯ=ಕೇಳಿ ಚ=ಮತ್ತು ಆತ್ತರಥಾಂಗಂ=ಚಕ್ರವನ್ನು ಸ್ವೀಕರಿಸಿದ ಅಗ್ರತಃ ವ್ಯವಸ್ಥಿತಂ=ಎದುರಿಗೆ ನಿಂತಿರುವ ಪದ್ಮಪಲಾಶಲೋಚನಂ=ಕಮಲದಳನಯನನಾದ ಶ್ರೀಹರಿಯನ್ನು ವಿಲೋಕ್ಯ=ನೋಡಿ ಅಮರ್ಷಪರಿಪ್ಲುತೇಂದ್ರಿಯಃ=ಅಸಹನೆಯಿಂದ ಕ್ಷೋಭೆಗೊಂಡ ಇಂದ್ರಿಯವುಳ್ಳವನಾಗಿ ರುಷಾ=ಸಿಟ್ಟಿನಿಂದ ಸ್ವದಂತಚ್ಛದಂ=ತನ್ನ ಕೆಳದುಟಿಯನ್ನು ಶ್ವಸನ್=ದೀರ್ಘಶ್ವಾಸ ಬಿಡುತ್ತ ಆದಶತ್=ಕಚ್ಚಿದನು. ॥೭॥

**ಕರಾಲದಂಷ್ಟ್ರಶ್ಚಕ್ಷುರ್ಭ್ಯಾಂ ಸಂಚಕ್ಷಾಣೋ ದಹನ್ನಿವ ।**
**ಅಭಿದ್ರುತ್ಯ ಸ್ವಗದಯಾ ಹತೋಽಸೀತ್ಯಹನದ್ಧರಿಮ್ ॥೮॥**

ಕರಾಲ=ಕ್ರೂರವಾದ ದಂಷ್ಟ್ರ=ಹಲ್ಲುಗಳುಳ್ಳ ಹಿರಣ್ಯನು ಚಕ್ಷುರ್ಭ್ಯಾಂ=ಕಣ್ಣು-ಗಳಿಂದ ದಹನ್ನಿವ=ಸುಡುವಂತೆ ಸಂಚಕ್ಷಾಣಃ=ನೋಡುತ್ತ ಅಭಿದ್ರುತ್ಯ ಎದುರಾಗಿ ಓಡಿ ಬಂದು ಸ್ವಗದಯಾ ತನ್ನ ಗದೆಯಿಂದ ಹತೋಽಸಿ ಇತಿ=ಸತ್ತಿ ಎನ್ನುತ್ತ ಹರಿಂ ಅಹನತ್=ಶ್ರೀಹರಿಯನ್ನು ಹೊಡೆದನು. ॥೮॥

**ಪದಾ ಸವ್ಯೇನ ತಾಂ ಸಾಧೋ ಭಗವಾನ್ ಯಜ್ಞಸೂಕರಃ ।**
**ಲೀಲಯಾ ಮಿಷತಃ ಶತ್ರೋಃ ಪ್ರಾಹರದ್ವಾತರಂಹಸಾ ॥೯॥**

ಸಾಧೋ=ವಿದುರನೇ ! ಭಗವಾನ್=ಐಶ್ವರ್ಯಶಾಲಿಯಾದ ಯಜ್ಞಸೂಕರಃ= ಯಜ್ಞ ವರಾಹನು ಶತ್ರೋಃ ಮಿಷತಃ=ಶತ್ರುವು ನೋಡುವಾಗಲೇ ಲೀಲಯಾ= ಅನಾಯಾಸವಾಗಿ ವಾತರಂಹಸಾ=ವಾಯುವೇಗವುಳ್ಳ ಸವ್ಯೇನ ಪದಾ=ಎಡಗಾಲಿ-ನಿಂದ ತಾಂ=ಅವನ ಗದೆಯನ್ನು ಪ್ರಹರತ್=ಒದ್ದನು. ॥೯॥

**ಆಹ ಚಾಯುಧಮಾಧತ್ಸ್ವ ಘಟಸ್ವ ತ್ವಂ ಜಿಗೀಷಸಿ ।**
**ಇತ್ಯುಕ್ತಃ ಸ ತಯಾ ಭೂಯಸ್ತಾಡಯನ್ ವ್ಯನದದ್ ಭೃಶಂ ॥೧೦॥**

ಚ=ಮತ್ತು ತ್ವಂ ಜಿಗೀಷಸಿ=ನೀನು ಗೆಲ್ಲಲಿಚ್ಛಿಸುವಿ ಆದ್ದರಿಂದ ಆಯುಧಂ ಆಧತ್ಸ್ವ=ಆಯುಧವನ್ನು ತೆಗೆದುಕೋ ಘಟಸ್ವ=ಪ್ರಯತ್ನ ಮಾಡು ಎಂದು ಆಹ= ಹೇಳಿದನು. ಇತ್ಯುಕ್ತಃ=ಈ ರೀತಿ ಹೇಳಿಸಿಕೊಂಡ ಸಃ=ಅಸುರನು ಭೂಯಃ=ಮತ್ತೆ ತಯಾ=ಆಗದೆಯಿಂದ ತಾಡಯನ್=ಹೊಡೆಯುತ್ತ ಭೃಶಂ ವ್ಯನದತ್= ಬಹಳವಾಗಿ ಗರ್ಜಿಸಿದನು. ॥೧೦॥

**ತಾಂ ಸ ಆಪತತೀಂ ವೀಕ್ಷ್ಯ ಭಗವಾನ್ ಸಮವಸ್ಥಿತಃ ।**
**ಜಗ್ರಾಹ ಲೀಲಯಾ ಪ್ರಾಪ್ತಾಂ ಗರುತ್ಮಾನಿವ ಪನ್ನಗೀಮ್ ॥೧೧॥**

ಸಃ ಭಗವಾನ್=ಆ ಶ್ರೀವರಾಹದೇವನು ಸಮವಸ್ಥಿತಃ=ನಿಂತಲ್ಲಿಯೇ ನಿಂತು ಆಪತತೀಂ=ಬಂದು ಬೀಳುತ್ತಿರುವ ತಾಂ=ಗದೆಯನ್ನು ವೀಕ್ಷ್ಯ ನೋಡಿ ಪ್ರಾಪ್ತಾಂ= ಸಮೀಪಿಸಿದ ಅದನ್ನು ಪನ್ನಗೀಂ=ಹಾವನ್ನು ಗರುತ್ಮಾನಿವ=ಗರುಡನಂತೆ ಲೀಲಯಾ ಜಗ್ರಾಹ=ಅನಾಯಾಸವಾಗಿ ಹಿಡಿದನು. ॥೧೧॥

**ಸ್ವಪೌರುಷೇ ಪ್ರತಿಹತೇ ಹತಮಾನೋ ಮಹಾಸುರಃ ।**
**ನೈಚ್ಛದ್ ಗದಾಂ ದೀಯಮಾನಾಂ ಹರಿಣಾ ವಿಗತಪ್ರಭಃ ॥೧೨॥**

ಸ್ವಪೌರುಷೇ=ತನ್ನ ಸಾಮರ್ಥ್ಯವು ಪ್ರತಿಹತೇ=ನಾಶವಾಗುತ್ತಿರಲು ಹತಮಾನಃ= ಗರ್ವವನ್ನು ಕಳೆದುಕೊಂಡ ಮಹಾಸುರಃ=ಹಿರಣ್ಯನು ವಿಗತಪ್ರಭಃ=ವರ್ಚಸ್ಸನ್ನು

ಕಳೆದುಕೊಂಡವನಾಗಿ ಹರಿಣಾ=ವರಾಹದೇವರಿಂದ ದೀಯಮಾನಾಂ=ಕೊಡುತ್ತಿ-
ರುವ ಗದಾಂ=ಗದೆಯನ್ನು ನೈಚ್ಛತ್=ಇಚ್ಛಿಸಿಲಿಲ್ಲ. ॥೧೨॥

**ಜಗ್ರಾಹ ತ್ರಿಶಿಖಂ ಶೂಲಂ ಜ್ವಲಂತಂ ಜ್ವಲನೋಪಮಂ ।**
**ಯಜ್ಞಾಯ ಧೃತರೂಪಾಯ ವಿಪ್ರಾಯಾಭಿಚರನ್ ಯಥಾ ॥೧೩॥**

ವಿಪ್ರಾಯ=ಬ್ರಾಹ್ಮಣನಿಗೆ ಅಭಿಚರನ್=ಕೃತ್ಯಾವನ್ನು ಬಿಡುವಂತೆ ಧೃತರೂಪಾಯ ವರಾಹರೂಪತಾಳಿದ ಯಜ್ಞಾಯ=ವಿಷ್ಣುವಿಗಾಗಿ ಜ್ವಲಂತಂ=ಉರಿಯುವ ಜ್ವಲ-ನೋಪಮಂ=ಬೆಂಕಿಯಂತಿರುವ ತ್ರಿಶಿಖಂ ಶೂಲಂ=ತ್ರಿಶೂಲವನ್ನೂ ಜಗ್ರಾಹ=ಸ್ವೀಕರಿಸಿದನು. ॥೧೩॥

**ತದೌಜಸಾ ದೈತ್ಯಮಹಾಭಟಾರ್ಪಿತಂ**
**ಚಕಾಸದಂತಃ ಖ ಉದೀರ್ಣದೀಧಿತಿ ।**
**ಚಕ್ರೇಣ ಚಿಚ್ಛೇದ ನಿಶಾತನೇಮಿನಾ**
**ಹರಿರ್ಯಥಾ ತಾರ್ಕ್ಷ್ಯಪತತ್ರಮುಜ್ಝಿತಮ್ ॥೧೪॥**

ಓಜಸಾ=ತನ್ನ ಸಾಮರ್ಥ್ಯದಿಂದ ದೈತ್ಯಮಹಾಭಟಾರ್ಪಿತಂ=ದೈತ್ಯಾವೇಶವುಳ್ಳ ತನ್ನ ಮುಖ್ಯಭಟನಿಂದ ಬಿಡಲ್ಪಟ್ಟ ಖೇ ಅಂತಃ ಚಕಾಸತ್=ಆಕಾಶಮಧ್ಯದಲ್ಲಿ ಪ್ರಕಾಶಿಸುವ ಉದೀರ್ಣದೀಧಿತಿ=ಉತ್ಕೃಷ್ಟವಾದ ಕಿರಣಗಳುಳ್ಳ ತ್ರಿಶೂಲವನ್ನು ನಿಶಾತನೇಮಿನಾ=ಹರಿತವಾದ ಅರಗಳುಳ್ಳ ಚಕ್ರೇಣ=ಚಕ್ರದಿಂದ ಹರಿಃ=ಇಂದ್ರನು ತಾರ್ಕ್ಷ್ಯಪತತ್ರಂ=ಗರುಡನ ರೆಕ್ಕೆಯನ್ನು ಕತ್ತರಿಸಿದಂತೆ ಚಿಚ್ಛೇದ=ಕತ್ತರಿಸಿದನು. ಗರುಡನು ಇಂದ್ರನಿಗಿಂತ ಅತಿಸಮರ್ಥನಾದ್ದರಿಂದ ಅವನ ರೆಕ್ಕೆಯನ್ನು ಇಂದ್ರನು ಕತ್ತರಿಸಿದ್ದು ಹೇಗೆ ? ಎಂಬ ಶಂಕೆಗೆ ಉತ್ತರಿಸಲು ಉಜ್ಝಿತಂ ಎಂದಿರುವರು. ಉಜ್ಝಿತಂ=ದೇವತೆಗಳನ್ನು ಗೆದ್ದು ತನ್ನ ತಾಯಿಗೆ ಅಮೃತವನ್ನು ಒಯ್ಯುವಾಗ ದಧೀಚಿ ಋಷಿಗಳ ಅಸ್ಥಿಯಿಂದ ನಿರ್ಮಿತವಾದ ವಜ್ರಾಯುದವು ವ್ಯರ್ಥವಾದರೆ ಋಷಿಗಳಿಗೆ ಅವಮಾನ ಮಾಡಿದಂತಾಗಿ ಕೋಪ ಬರುವದೆಂಬ ಭಯದಿಂದ, ವಜ್ರಾಯುಧಕ್ಕೆ ಸಾರ್ಥಕತೆ ಸಂಪಾದಿಸಲು ತಾನೆ ಬಿಟ್ಟ.

ಇದರಿಂದ ಇಂದ್ರನಿಗಿಂತ ಗರುಡ ಅತಿಸಮರ್ಥ, ಉತ್ತಮ ಅವನ ರೆಕ್ಕೆ ಹೇಗೆ ಕತ್ತರಿಸಿದ ? ಎಂಬ ಶಂಕೆ ಪರಿಹೃತವಾಯಿತು. ಇನ್ನು ಲೋಕಮರ್ಯಾದಾ ರಕ್ಷಣೆಗಾಗಿ ದೇವತೆಗಳು ಋಷಿಗಳನ್ನು ಗೌರವಿಸುವದಂತು ಪ್ರಸಿದ್ಧವೇ. ॥೧೪॥

**ವೃಕ್ಣೇ ಚ ಶೂಲೇ ಬಹುಧಾರಿಣಾ ಹರೇಃ**
**ಪ್ರತ್ಯೇತ್ಯ ವಿಸ್ತೀರ್ಣಮುರೋ ವಿಭೂತಿಮತ್ ।**
**ಪ್ರವೃದ್ಧರೋಷಃ ಸಕಠೋರಮುಷ್ಟಿನಾ**
**ನದನ್ ಪ್ರಹೃತ್ಯಾಂತರಧೀಯತಾಸುರಃ ॥೧೫॥**

ಹರೇಃ=ಶ್ರೀಹರಿಯ ಅರಿಣಾ=ಚಕ್ರದಿಂದ ಶೂಲೇ=ತ್ರಿಶೂಲವು ಬಹುಧಾ ವೃಕ್ಣೇ=ಅನೇಕ ತುಂಡಾಗಿ ಕತ್ತರಿಸಿದಾಗ ಪ್ರತ್ಯೇತ್ಯ=ಎದುರಾಗಿ ಬಂದು ಪ್ರವೃದ್ಧರೋಷಃ=ಬಹಳ ಸಿಟ್ಟಾಗಿ ಸಃ=ದೈತ್ಯನು ಕಠೋರಮುಷ್ಟಿನಾ=ಗಟ್ಟಿಯಾದ ಮುಷ್ಟಿಯಿಂದ ನದನ್=ಗರ್ಜಿಸುತ್ತ ವಿಭೂತಿಮತ್=ಲಕ್ಷ್ಮೀನಿವಾಸವಾದ ವಿಸ್ತೀರ್ಣಂ =ವಿಶಾಲವಾದ ಉರಃ=ಎದೆಯನ್ನು ಪ್ರವೃತ್ಯ=ಹೊಡೆದು ಅಸುರಃ=ಮಾಯೆಯಿಂದ ಇರುವ ಸ್ವಭಾವದವನಾದ ಹಿರಣ್ಯನು ಅಂತರಧೀಯತ=ಮರೆಯಾದನು. ॥೧೫॥

**ತೇನೆತ್ಥಮಾಹತೇ ಕ್ಷತ್ತರ್ಭಗವಾನಾದಿಸೂಕರಃ ।**
**ನಾಕಂಪತ ಮನಾಗ್ ಕ್ವಾಪಿ ಸ್ರಜಾಹತ ಇವ ದ್ವಿಪಃ ॥೧೬॥**

ಹೇ ಕ್ಷತ್ತಃ=ವಿದುರನೇ ಭಗವಾನ್ ಆದಿಸೂಕರಃ=ಐಶ್ವಯಶಾಲಿಯಾದಿ ವರಾಹ ದೇವನು ತೇನ=ದೈತ್ಯನಿಂದ ಇತ್ಥಂ=ಈ ರೀತಿ ಆಹತೇ=ಹೊಡೆಯಲ್ಪಟ್ಟಾಗ ಸ್ರಜಾಹತಃ=ಒಂದು ಹೂವಿನ ಮಾಲೆಯಿಂದ ಹೊಡೆಯಲ್ಪಟ್ಟ ದ್ವಿಪ ಇವ= ಆನೆಯಂತೆ ಕ್ವಾಪಿ=ಯಾವ ಅಂಶದಲ್ಲಿಯೂ ಮನಾಕ್=ಸ್ವಲ್ಪವೂ ನ ಅಕಂಪತ= ಚಲಿಸಲಿಲ್ಲ. ॥೧೬॥

**ಅಥೋರುಧಾಽಸೃಜನ್ಮಾಯಾಂ ಯೋಗಮಾಯೇಶ್ವರೇ ಹರೌ ।**
**ಯಾಂ ವಿಲೋಕ್ಯ ಪ್ರಜಾಸ್ತ್ರಸ್ತಾ ಮೇನಿರೇಽಸ್ಯೋಪಸಂಯಮಮ್ ॥**

ಅಥ=ಅನಂತರ ಯೋಗಮಾಯೇಶ್ವರೇ=ಯೋಗಸಾಮರ್ಥ್ಯವುಳ್ಳವರಿಗೆ ನಿಯಾಮಕನಾದ ಹರೌ=ಶ್ರೀಹರಿಯಲ್ಲಿ ಉರುಧಾ=ಬಹು ಪ್ರಕಾರವಾಗಿ ಮಾಯಾಂ=ಅಸುರಮಾಯೆಯನ್ನು ಅಸೃಜತ್=ಸೃಷ್ಟಿಸಿದನು ಯಾಂ=ಯಾವ ಮಾಯೆಯನ್ನು ವಿಲೋಕ್ಯ=ನೋಡಿ ಪ್ರಜಾಃ=ಜನರು ತ್ರಸ್ತಾಃ=ಭಯಗೊಂಡರು. ಅಸ್ಯ=ವಿಶ್ವದ ಉಪಸಂಯಮಂ=ಪ್ರಲಯವನ್ನು ಮೇನಿರೆ=ತಿಳಿದರು. ॥೧೭॥

**ಪ್ರವವುರ್ವಾಯವಶ್ಚಂಡಾಸ್ತಮಃ ಪಾಂಸವಮೀರಯನ್ ।**
**ದಿಗ್ಭ್ಯೋ ನಿಪೇತುರ್ಗ್ರಾವಾಣಃ ಕ್ಷೇಪಣೈಃ ಪ್ರಹಿತಾಃ ಇವ ॥೧೮॥**

ಪಾಂಸವಂ=ಧೂಳಿಮಯವಾದ ತಮಃ=ಕತ್ತಲೆಯನ್ನು ಈರಯನ್=ಪ್ರೇರಿಸುತ್ತ ಚಂಡಾಃ ವಾಯವಃ ಪ್ರವವುಃ=ಬಿರುಗಾಳಿಯು ಬೀಸಿತು. ಕ್ಷೇಪಣ್ಯೈಃ=ಕವಣೆಯಿಂದ ಪ್ರಹಿತಾಃ ಇವ=ಹೊಡೆದಂತೆ ದಿಗ್ಭ್ಯಃ=ದಿಕ್ಕುಗಳಿಂದ ಗ್ರಾವಾಣಃ=ಕಲ್ಲುಗಳು ನಿಪೇತುಃ =ಬಿದ್ದವು. ॥೧೮॥

**ದ್ಯೌರ್ನಷ್ಟ ಭಗಣಾಽಭ್ರೌಘೈಃ ಸವಿದ್ಯುತ್‌ಸ್ತನಯಿತ್ನುಭಿಃ ।**
**ವರ್ಷದ್ಭಿಃ ಪೂಯಕೇಶಾಸೃಗ್‌ವಿಣ್ಮೂತ್ರಾಸ್ಥೀನಿ ಚಾಸಕೃತ್ ॥೧೯॥**

ದ್ಯೌಃ=ಆಕಾಶವು ಸವಿದ್ಯುತ್‌ಸ್ತನಯಿತ್ನುಭಿಃ=ಮಿಂಚುಗುಡುಗುಗಳಿಂದ ಸಹಿತವಾಗಿ ಪೂಯ=ಕೀವು ಕೇಶ=ಕೂದಲು ಅಸೃಗ್=ರಕ್ತ ವಿಟ್=ಮಲಮೂತ್ರ ಅಸ್ಥೀನಿ= ಎಲುಬುಗಳನ್ನೂ ಅಸಕೃತ್=ಪುನಃ ಪುನಃ ವರ್ಷದ್ಭಿಃ=ಸುರಿಸುವ ಅಭ್ರೌಘೈಃ= ಮೋಡಗಳಿಂದ ನಷ್ಟ=ನಾಶಹೊಂದಿದ ಭಗಣಾ(ಅಭವತ್)=ನಕ್ಷತ್ರ ಸಮೂಹ ಉಳ್ಳದ್ದಾಯಿತು. ॥೧೯॥

**ಗಿರಯಃ ಪ್ರತ್ಯದೃಶ್ಯಂತ ನಾನಾಯುಧಮುಚೋಽನಘ ।**
**ದಿಗ್ವಾಸಸೋ ಯಾತುಧಾನ್ಯಂ ಶೂಲಿನ್ಯೋ ಮುಕ್ತಮೂರ್ಧಜಾಃ॥೨೦॥**

ಹೇ ಅನಘ=ಪಾಪರಹಿತನಾದ ವಿದುರನೇ ಗಿರಯಃ=ಪರ್ವತಗಳು ನಾನಾ-ಯುಧಮುಚಃ=ಅನೇಕ ಸಂಪ್ರಹರಗಳನ್ನು ಬಿಡುವವುಗಳಾಗಿ ಪ್ರತ್ಯದೃಶ್ಯಂತ= ಕಾಣಿಸಿದವು (ಯುಧ ಸಂಪ್ರಹಾರೆ ಎಂದು ಧಾತುವಿದೆ ಯುಧಾನಿ ಮುಂಚಂತೀತಿ ಯುಧಮುಚಃ ಅಂದರೆ ಯುದ್ಧ ಮಾಡುವಂತೆ ಕಾಣಿಸಿದವು ಇದು ಒಂದು ಅಪಶಕುನವೆ) ಶೂಲಿನ್ಯಃ=ಶೂಲಧಾರಿಗಳಾದ ದಿಗ್ವಾಸಸಃ=ನಗ್ನರಾದ ಯಾತುಧಾನ್ಯಃ =ರಾಕ್ಷಸಿಯರು ಪ್ರತ್ಯದೃಶ್ಯಂತ=ಕಾಣಿಸಿದರು. ॥೨೦॥

**ಬಹುರ್ಭಿರ್ಯಕ್ಷರಕ್ಷೋಭಿಃ ಪತ್ತ್ಯಶ್ವರಥಕುಂಜರೈಃ ।**
**ಆತತಾಯಿಭಿರುತ್ಸೃಷ್ಟಾ ಹಿಂಸ್ರಾ ವಾಚೋಽತಿವೈಶಸಃ ॥೨೧॥**

ಬಹುಭಿಃ=ಅನೇಕ ಯಕ್ಷರಕ್ಷೋಭಿಃ=ಯಕ್ಷರಾಕ್ಷಸರಿಂದಲೂ ಪತ್ತ್ಯಶ್ವರಥಕುಂಜರೈಃ =ಪದಾತಿಗಳು (ಪೇದೆ) ಆನೆಗಳು ಕುದುರೆಗಳಿಂದ ಸಹಿತವಾಗಿ ಆತತಾಯಿಭಿ= ಅಗ್ನಿದೋಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ । ಕ್ಷೇತ್ರದಾರಹರಶ್ಚೈವ ಷಡೇತೇ ಹ್ಯಾತತಾಯಿನಃ ॥ ಮುಂತಾಗಿ ಹೇಳಿದವರಿಂದ ಉತ್ಸೃಷ್ಟಾಃ=ಉಚ್ಚರಿಸಲ್ಪಟ್ಟ ಅತಿ-ವೈಶಸಃ=ಬಹುಕ್ರೂರವಾದ ಹಿಂಸ್ರಾಃ ವಾಚಃ=ಹಿಂಸಾವಿಷಯಕ ಮಾತುಗಳು ಹೊಡೆಯಿರಿ ಬಡಿಯಿರಿ ಕಡಿಯಿರಿ ಮುಂತಾಗಿ ಕೇಳಿಸಿದವು. ॥೨೧॥

**ಪ್ರಾದುಷ್ಕೃತಾನಾಂ ಮಾಯಾನಾಮಾಸುರೀಣಾಂ ವಿನಾಶನಂ ।**
**ಸುದರ್ಶನಾಸ್ತ್ರಂ ಭಗವಾನ್ ಪ್ರಾಯುಂಕ್ತ ಚ ತತಸ್ತ್ರಿಪಾತ್ ॥೨೨॥**

ತತಃ=ನಂತರ ತ್ರಿಪಾತ್='ಅಮೃತಂ ಕ್ಷೇಮಂ ಅಭಯಂ' ಎಂಬ ಮೂರು ಸ್ವರೂಪಾಂಶವುಳ್ಳ ಭಗವಾನ್=ಶ್ರೀಹರಿಯು ಪ್ರಾದುಷ್ಕೃತಾನಾಂ=ಉಂಟಾದ ಆಸುರೀಣಾಂ=ದೈತ್ಯಸಂಬಂಧಿಯಾದ ಮಾಯಾನಾಂ=ಮಾಯೆಗಳಿಗೆ ವಿನಾಶನಂ=ನಾಶಕವಾದ ಸುದರ್ಶನಾಸ್ತ್ರಂ ಪ್ರಾಯುಂಕ್ತ=ಚಕ್ರವನ್ನು ಬಿಟ್ಟನು. ॥೨೨॥

**ತದಾ ದಿತೇಃ ಸಮಭವತ್ ಸಹಸಾಹೃದಿ ವೇಪಥುಃ ।**
**ಸ್ಮರಂತ್ಯಾ ಭರ್ತುರಾದೇಶಂ ಸ್ತನಾಚ್ಚಾಸೃಕ್ ಪ್ರಸುಸ್ರುವೇ ॥೨೩॥**

ತದಾ=ಆಗ ಭರ್ತುಃ ಗಂಡನ ಆದೇಶಂ=ನಿನ್ನ ಮಕ್ಕಳನ್ನು ಭಗವಂತನು ಕೊಲ್ಲುವನು ಎಂಬ ಮಾತನ್ನು ಸ್ಮರಂತ್ಯಾಃ=ಸ್ಮರಿಸುವ ದಿತೇಃ=ದಿತಿದೇವಿಗೆ ಸಹಸಾ=ಒಮ್ಮೆಲೆ ಹೃದಿ=ಹೃದಯದಲ್ಲಿ ವೇಪಥುಃ ಸಮಭವತ್=ನಡುಕ ಉಂಟಾಯಿತು ಚ=ಮತ್ತು ಸ್ತನಾತ್=ಸ್ತನದಿಂದ ಅಸೃಕ್=ರಕ್ತವು ಪ್ರಸುಸ್ರುವೇ=ಹರಿಯಿತು. ॥೨೩॥

**ವ್ಯದಸ್ತಾಸು ಸ್ವಮಾಯಾಸು ಭೂಯಶ್ಚಾವ್ರಜ್ಯ ಕೇಶವಂ ।**
**ಉಪೋಪಗೂಹಮಾನೋಽಮುಂ ದದೃಶೇಽವಸ್ಥಿತಂ ಬಹಿಃ ॥೨೪॥**

ಸ್ವಮಾಯಾಸು=ತನ್ನ ಮಾಯೆಗಳು ವ್ಯದಸ್ತಾಸು=ನಾಶವಾಗುತ್ತಿರಲು ಭೂಯಃ =ಮತ್ತೆ ಕೇಶವಂ=ಶ್ರೀಹರಿಯನ್ನು ಆವ್ರಜ್ಯ=ಸಮೀಪಿಸಿ ಉಪೋಪ=ಅತ್ಯಂತ ಸಮೀಪದಲ್ಲಿರುವ ಅಮುಂ=ಶ್ರೀಹರಿಯನ್ನು ಗೂಹಮಾನಃ=ತನ್ನ ತೋಳತೆಕ್ಕೆಯಲ್ಲಿರಿಸುವವನಾಗಿ ಬಹಿಃ ಅವಸ್ಥಿತಂ ದದೃಶೇ=ಬಾಹುಬಂಧದಿಂದ ಹೊರಗಿರುವವನನ್ನು ಕಂಡನು. ॥೨೪॥

**ತಂ ಮುಷ್ಟಿಭಿರ್ವಿನಿಘ್ನಂತಂ ವಜ್ರಸಾರೈರಧೋಕ್ಷಜಃ ।**
**ಕರೇಣ ಕರ್ಣಮೂಲೇಽಹನ್ ಯಥಾ ತ್ವಾಷ್ಟ್ರಂ ಮರುತ್ಪತಿಃ ॥೨೫॥**

ವಜ್ರಸಾರೈಃ=ವಜ್ರಾಯುಧದಂತೆ ಗಟ್ಟಿಯಾದ ಮುಷ್ಟಿಭಿಃ=ಮುಷ್ಟಿಗಳಿಂದ ವಿನಿಘ್ನಂತಂ=ಹೊಡೆಯುತ್ತಿರುವ ತಂ=ಹಿರಣ್ಯನನ್ನು ಅಧೋಕ್ಷಜಃ=ಶ್ರೀಹರಿಯು ಮರುತ್ಪತಿಃ ಯಥಾ=ಹೇಗೆ ಇಂದ್ರನು ತ್ವಾಷ್ಟ್ರಂ=ವೃತ್ರಾಸುರನನ್ನು ಹೊಡೆದಂತೆ ಕರೇಣ=ಕೈಯಿಂದ ಕರ್ಣಮೂಲೇ=ಕಿವಿಯ ಕೆಳಗೆ (ಕಪಾಳಕ್ಕೆ) ಅಹನ್=ಹೊಡೆದನು. ॥೨೫॥

**ಸಮಾಹತೋ ವಿಶ್ವಸೃಜಾ ಹ್ಯವಜ್ಞಯಾ**
**ಪರಿಭ್ರಮದ್ಗಾತ್ರ ಉದಸ್ತಲೋಚನಃ ।**
**ವಿಶೀ(ಕಿ)ರ್ಣಬಾಹ್ವಂಘ್ರಿಶಿರೋಧರೋऽಪತದ್**
**ಯಥಾ ನಗೇಂದ್ರೋ ಲುಲಿತೋ ನಭಸ್ವತಾ ॥೨೬॥**

ವಿಶ್ವಸೃಜಾ=ಶ್ರೀಹರಿಯಿಂದ ಅವಜ್ಞಯಾ=ನಿರ್ಲಕ್ಷ್ಯವಾಗಿ ಅನಾಯಾಸವಾಗಿ ಸಮಾಹತಃ=ಹೊಡೆಯಲ್ಪಟ್ಟ ಅಸುರನು ಪರಿಭ್ರಮದ್ಗಾತ್ರಃ=ಶರೀರವು ತಿರುಗಿದವ-ನಾಗಿ ಉದಸ್ತಲೋಚನಃ=ಕಣ್ಣುಗಳು ಹೊರಗೆ ಬಂದವನಾಗಿ ಕೈ ಕಾಲುಕುತ್ತಿಗೆಗಳು ಮುರಿದು ನಭಸ್ವತಾ=ಗಾಳಿಯಿಂದ ಲುಲಿತಃ=ಬೇರುಸಹಿತ ಕಿತ್ತಲ್ಪಟ್ಟ ನಗೇಂದ್ರಃ ಯಥಾ=ಮರದಂತೆ ಅಪತತ್=ಬಿದ್ದನು. ॥೨೬॥

**ಕ್ಷಿತೌ ಶಯಾನಂ ತಮಕುಂಠವರ್ಚಸಂ**
**ಕರಾಲದಂಷ್ಟ್ರಂ ಪರಿದಷ್ಟದಚ್ಛದಮ್ ।**
**ಅಜಾದಯೋ ವೀಕ್ಷ್ಯ ಶಶಂಸುರಾಗತಾ**
**ಅಹೋ ಇಮಾಂ ಕೋ ನು ಲಭೇತ ಸಂಸ್ಥಿತಿಂ ॥೨೭॥**

ಕ್ಷಿತೌ=ಭೂಮಿಯಲ್ಲಿ ಶಯಾನಂ=ಬಿದ್ದಿರುವ(ಮಲಗಿರುವ) ಅಕುಂಠವರ್ಚಸಂ =ಕಳೆಗುಂದಿದ ಕರಾಲದಂಷ್ಟ್ರಂ=ಕ್ರೂರವಾದ ಹಲ್ಲುಗಳುಳ್ಳ ಪರಿದಷ್ಟದಚ್ಛದಂ= ಅವಡುಗಚ್ಚಿದ (ತುಟಿಯನ್ನು ಕಚ್ಚಿದ) ಅಸುರನನ್ನು ಆಗತಾಃ=ಬಂದಿರುವ ಅಜಾದಯಃ=ಬ್ರಹ್ಮಾದಿದೇವತೆಗಳು ವೀಕ್ಷ್ಯ=ನೋಡಿ ಇಮಾಂ ಸಂಸ್ಥಿತಿಂ=ಈ ವಿಧ ಮರಣವನ್ನು ಕೋನು ಲಭೇತ=ಯಾರು ಪಡೆಯಲು ಸಾಧ್ಯ ಎಂದು ಶಶಂಸುಃ= ಸ್ತುತಿಸಿದರು. ವೀರರಿಗೆ ರಣಾಂಗಣದಲ್ಲಿ ಸಾಯುವುದೇ ಪ್ರಶಸ್ತವಾದುದು. ಅದರಲ್ಲಿಯೂ ಭಗವಂತನ ಕೈಯಿಂದ ಮರಣವೆಂದ ಮೇಲೆ ಕೇಳುವುದೇನು ಎಂದು ಸ್ತುತಿಸಿದರು. ॥೨೭॥

**ಯಂ ಯೋಗಿನೋ ಯೋಗಸಮಾಧಿನಾ ಹರೇ-**
**ರ್ಧ್ಯಾಯಂತಿ ಲಿಂಗಾದಸತೋ ಮುಮುಕ್ಷವಃ ।**
**ತಸ್ಯೈಷ ದೈತ್ಯಋಷಭಃ ಪದಾಹತೋ**
**ಮುಖಂ ಪ್ರಪಶ್ಯಂಸ್ತನುಮುತ್ಸಸರ್ಜ ಹ ॥೨೮॥**

ಅಸತಃ=ಅಮಂಗಲವಾದ ಲಿಂಗಾತ್=ಸೂಕ್ಷ್ಮದೇಹದಿಂದ ಮುಮುಕ್ಷವಃ= ಬಿಡುಗಡೆಯನ್ನಿಚ್ಛಿಸುವ ಯೋಗಿನಃ=ಜ್ಞಾನಿಗಳು ಯಂ ಯಾವನನ್ನು ಯೋಗ-ಸಮಾಧಿನಾ=ಭಕ್ತಿ ಮನಃಸಮಾಧಾನಗಳಿಂದ ಧ್ಯಾಯಂತಿ=ಧ್ಯಾನಿಸುವರೋ ತಸ್ಯ=ಆ

ಶ್ರೀಹರಿಯ ಪದಾಹತಃ=ಕಾಲಿನಿಂದ ಒದೆಸಿಕೊಂಡು ಮುಖಂ ಪ್ರಪಶ್ಯನ್=ಮುಖವನ್ನು ನೋಡುತ್ತ ಏಷಃ ದೈತ್ಯಃ=ಹಿರಣ್ಯಾಕ್ಷನು ತನುಂ=ದೇಹವನ್ನು ಉತ್ಸಸರ್ಜ=ತ್ಯಜಿಸಿದನು. ಹ=ಪುನರ್ಜನ್ಮ ಬರುವುದು ಯೋಗಿಯಿಂದ ವಿಶೇಷ ವರಾಹಕ್ಕೆ ಮುಂದಿನ ಕಾಲುಗಳು ಕೈಗಳಾದ್ದರಿಂದ ಹಿಂದೆ ಕರೇಣ ಆಹನತ್ ಎಂದು ಹೇಳಿದ್ದರೂ ಇಲ್ಲಿ ಪದಾಹತಃ ಎಂದುದು ಯುಕ್ತವೇ ಮತ್ತು ಶ್ರೀಹರಿಯ ಕೈ ಕಾಲುಗಳಿಗೆ ಪರಸ್ಪರಕ್ರಿಯಾ ಸಾಮರ್ಥ್ಯವೂ ಇದೆ. ಶ್ರೀಹರಿಯ ಮುಖ ನೋಡುತ್ತ ಮೃತನಾದ್ದರಿಂದ ಪಾರ್ಷದನಿಗೇ ಹೆಚ್ಚಿನ ಪುಣ್ಯವಿದೆ, ಆವಿಷ್ಟ ಅಸುರನಿಗೇ ಅಲ್ಲ ॥೨೮॥

**ಏತೌ ಹಿ ಪಾರ್ಷದಾವಸ್ಯ ಶಾಪಾದ್ ಯಾತಾವಸದ್ಗತಿಂ ।**
**ಪುನಃ ಕತಿಪಯೈಃ ಸ್ಥಾನಂ ಪ್ರಪತ್ಸ್ಯೇತೆ ಹ ಜನ್ಮಭಿಃ ॥೨೯॥**

ಏತೌ=ಹಿರಣ್ಯಾಕ್ಷಹಿರಣ್ಯಕಶಿಪುಗಳು ಅಸ್ಯ=ಶ್ರೀಹರಿಯ ಪಾರ್ಷದೌ ದ್ವಾರಪಾಲಕರು ಶಾಪಾತ್=ಸನಾಕಾದಿಗಳ ಶಾಪದಿಂದ ಅಸದ್ಗತಿಂ=ಅಸುರಾವಿಷ್ಟ ದೇಹವನ್ನು ಯಾತೌ=ಹೊಂದಿರುವರು ಪುನಃ=ಮತ್ತೆ ಕತಿಪಯೈಃ ಜನ್ಮಭಿಃ=ಮೂರು-ಜನ್ಮಗಳಿಂದ ಶಾಪಫಲವನ್ನು ಅನುಭವಿಸಿ ಸ್ಥಾನಂ=ವೈಕುಂಠವನ್ನು ಪ್ರಪತ್ಸ್ಯೇತೆ=ಹೊಂದುವರು. ಹ=ಪ್ರಸಿದ್ಧವು. ಜನ್ಮಭಿಃ ಎಂಬ ಬಹುವಚನದಿಂದ ಶಾಪಫಲಾ-ನುಭವ ಮುಗಿದ ಮೇಲೆ ಜನ್ಮಾಂತರವನ್ನು ಪಡೆದು ಜ್ಞಾನವನ್ನು ಸಂಪಾದಿಸಿ ಮುಕ್ತಿಯನ್ನು ಹೊಂದುವರೆಂದು ಸೂಚಿಸುವರು. ॥೨೯॥

**ನಮೋ ನಮಸ್ತೇಽಖಿಲಯಜ್ಞತಂತವೇ**
**ಸ್ಥಿತೌ ಗೃಹೀತಾಮಲಸತ್ವಮೂರ್ತಯೇ ।**
**ದಿಷ್ಟ್ಯಾಹತೋಽಯಂ ಜಗತಾಮರುಂತುದ-**
**ಸ್ತ್ವತ್ಪಾದಭಕ್ತ್ಯಾ ವಯಮೀಶ ನಿರ್ವೃತಾಃ ॥೩೦॥**

ಅಖಿಲಯಜ್ಞತಂತವೇ=ಎಲ್ಲ ಯಜ್ಞಗಳ ವಿಸ್ತಾರಕನೆ ಸ್ಥಿತೌ=ಜಗತ್ತಿನ ಸ್ಥಿತಿಗಾಗಿ ಗೃಹಿತಾಮಲಸತ್ವಮೂರ್ತಯೇ=ಜ್ಞಾನಬಲಸಮೂಹಾರಾತ್ಮಕದೇಹನ್ನು ಸ್ವೀಕರಿಸಿದವನೇ ತೇ=ನಿನಗೆ ನಮೋ ನಮಃ=ನಮಸ್ಕಾರವು. ಜಗತಾಂ ಅರುಂತುದಃ =ಜಗತ್ತಿನ ಮರ್ಮಭೇದಕನಾದ ದುಃಖದಾಯಕನಾದ ಅಯಂ=ಹಿರಣ್ಯಾನು ದಿಷ್ಟ್ಯಾಹತಃ=ದೈವಾತ್ ಕೊಲ್ಲಲ್ಪಟ್ಟನು. ಹೇ ಈಶ=ಸ್ವಾಮಿಯೇ ತ್ವತ್ಪಾದಭಕ್ತ್ಯಾ=ನಿನ್ನ ಪಾದಾರವಿಂದದ ಭಕ್ತಿಯಿಂದ ವಯಂ=ನಾವು ನಿರ್ವೃತಾಃ ಅಭೂಮ=ಆನಂದ ಭರಿತರಾಗುವೆವು. ॥೩೦॥

**ಮೈತ್ರೇಯ ಉವಾಚ**

**ಏವಂ ಹಿರಣ್ಯಾಕ್ಷಮಸಹ್ಯವಿಕ್ರಮಂ**
**ಸಂಸಾದಯಿತ್ವಾ ಹರಿರಾದಿಸೂಕರಃ ।**
**ಜಗಾಮ ಲೋಕಂ ಸ್ವಮಖಂಡಿತೋತ್ಸವಂ**
**ಸಮೀಡಿತಃ ಪುಷ್ಕರವಿಷ್ಟರಾದಿಭಿಃ ॥೩೧॥**

ಆದಿಸೂಕರಃ ಹರಿಃ=ಮೊದಲನೆಯ ವರಾಹಾವತಾರಿಯಾದ ಶ್ರೀಹರಿಯು ಅಸಹ್ಯವಿಕ್ರಮಂ=ಸಹಿಸಲಾಗದ ಪರಾಕ್ರಮವುಳ್ಳ ಹಿರಣ್ಯಾಕ್ಷಂ=ಹಿರಣ್ಯಾಕ್ಷನನ್ನು ಏವಂ=ಈ ರೀತಿಯಾಗಿ ಸಂಸಾದಯಿತ್ವಾ=ಸಂಹಾರ ಮಾಡಿ ಪುಷ್ಕರವಿಷ್ಟರಾದಿಭಿಃ= ಕಮಲಾಸನನಾದ ಬ್ರಹ್ಮಾದಿಗಳಿಂದ ಸಮೀಡಿತಃ=ಚೆನ್ನಾಗಿ ಸ್ತುತಿಸಲ್ಪಟ್ಟವನಾಗಿ ಅಖಂಡಿತೋತ್ಸವಂ=ನಿತ್ಯೋತ್ಸವವುಳ್ಳ ಸ್ವಂ ಲೋಕಂ ಜಗಾಮ=ತನ್ನ ಲೋಕಕ್ಕೆ ತೆರಳಿದನು. ॥೩೧॥

**ಮಯಾ ಯಥಾನೂಕ್ತಮಥಾದಿತೋ ಹರೇಃ**
**ಕೃತಾವತಾರಸ್ಯ ಸುಮಿತ್ರ ಚೇಷ್ಟಿತಂ ।**
**ಯಥಾ ಹಿರಣ್ಯಾಕ್ಷ ಉದಾರವಿಕ್ರಮೋ**
**ಮಹಾಮೃಧೇ ಕ್ರೀಡನವನ್ನಿರಾಕೃತಃ ॥೩೨॥**

ಹೇ ಸುಮಿತ್ರ=ಸ್ನೇಹಿತನಾದ ವಿದುರನೇ ಮಯಾ=ನನ್ನಿಂದ ಕೃತಾವತಾರಸ್ಯ ಹರೇಃ=ವರಾಹವತಾರವನ್ನು ಮಾಡಿದ ಶ್ರೀಹರಿಯ ಚೇಷ್ಟಿತಂ=ವ್ಯಾಪಾರವು ಉದಾರವಿಕ್ರಮಃ=ಉತ್ತಮ ಬಲಶಾಲಿಯಾದ ಹಿರಣ್ಯಾಕ್ಷಃ=ಹಿರಣ್ಯಾಕ್ಷನು ಮಹಾಮೃಧೇ=ಯುದ್ಧದಲ್ಲಿ ಕ್ರೀಡನವತ್=ಆಟಿಗೆಯಂತೆ ಯಥಾ ನಿರಾಕೃತಃ= ಹೇಗೆ ಸಂಹರಿಸಲ್ಪಟ್ಟನು ಎಂಬುದು ಆದಿತಃ=ಮೊದಲಿನಿಂದಾರಂಭಿಸಿ ಅನೂಕ್ತಂ= ಗುರುಗಳ ಉಪದೇಶಾನುಸಾರ ಹೇಳಲ್ಪಟ್ಟಿತು. ॥೩೨॥

**ಶುಕ ಉವಾಚ**

**ಇತಿ ಕೌಷಾರವಾಖ್ಯಾತಾಮಾಶ್ರುತ್ಯ ಭಗವತ್ಕಥಾಂ ।**
**ಕ್ಷತ್ತಾऽऽನಂದಂ ಪರಂ ಲೇಭೇ ಮಹಾಭಾಗವತೋ ನೃಪ ॥೩೩॥**

ಹೇ ನೃಪ=ಪರೀಕ್ಷಿತನೇ ಇತಿ=ಈ ರೀತಿಯಾಗಿ ಕೌಷರವಾಖ್ಯಾತಾಂ=ಮೈತ್ರೇಯ ರಿಂದ ಹೇಳಿದ ಭಗವತ್ಕಥಾಂ=ಶ್ರೀಹರಿಯ ಕಥೆಯನ್ನು ಆಶ್ರುತ್ಯ=ಕೇಳಿ ಮಹಾ- ಭಾಗವತಃ=ಪರಮಭಗವದ್ಭಕ್ತನಾದ ಕ್ಷತ್ತಾ=ವಿದುರನು ಪರಂ ಆನಂದಂ ಲೇಭೇ= ಪರಮ ಸಂತೋಷವನ್ನು ಹೊಂದಿದನು. ॥೩೩।

**ಅನ್ಯೇಷಾಂ ಪುಣ್ಯಶ್ಲೋಕಾನಾಮುದ್ದಾಮಯಶಸಾಂ ಸತಾಮ್ ।**
**ಉಪಶ್ರುತ್ಯ ಭವೇನ್ಮೋದಃ ಶ್ರೀವತ್ಸಾಂಕಸ್ಯ ಕಿಂ ಪುನಃ ॥೩೪॥**

ಪುಣ್ಯಶ್ಲೋಕಾನಾಂ=ಪುಣ್ಯಕೀರ್ತಿಗಳಾದ ಉದ್ದಾಮಯಶಸಾಂ=ಉತ್ತಮ ಯಶಸ್ಸುಳ್ಳ ಸತಾಂ ಅನ್ಯೇಷಾಂ=ಬೇರ ಸಜ್ಜನರ ಕಥಾಂ=ಹಿಂದಿನವರ ಕಥೆಯನ್ನು ಉಪಶ್ರುತ್ಯು=ಕೇಳಿ ಮೋದಃ ಭವೇತ್=ಸಂತೋಷವಾಗುವುದು ಕಿಂ ಪುನಃ= ಶ್ರೀವತ್ಸಾಂಕಸ್ಯ=ಶ್ರೀವತ್ಸವೇ ಚಿನ್ಹವಾಗಿಯುಳ್ಳ ಶ್ರೀಹರಿಕಥಾಶ್ರವಣದಿಂದ ಪರಮಾ- ನಂದವಾಗುವದೇಂದೇನು ಬೇರೆ ಹೇಳುವುದು ? ಸಿದ್ಧವೇ ಎಂದರ್ಥ. ॥೩೪॥

**ಯೋ ಗಜೇಂದ್ರಂ ಝಷಗ್ರಸ್ತಂ ಧ್ಯಾಯಂತಂ ಚರಣಾಂಬುಜಂ ।**
**ಕ್ರೋಶಂತೀನಾಂ ಕರೇಣೂನಾಂ ಕೃಚ್ಛ್ರತೋಽಮೋಚಯದ್ ದ್ರುತಮ್ ॥**

ಯಃ=ಯಾವನು ಝಷಗ್ರಸ್ತಂ=ಮೊಸಳೆಯಿಂದ ಹಿಡಿಯಲ್ಪಟ್ಟ ಚರಣಾಂ- ಬುಜಂ=ಪಾದಕಮಲವನ್ನು ಧ್ಯಾಯಂತಂ=ಧ್ಯಾನ ಮಾಡುತ್ತಿರುವ ಗಜೇಂದ್ರಂ= ಗಜೇಂದ್ರನನ್ನು ಕರೇಣೂನಾಂ=ಹೆಣ್ಣಾನೆಗಳು ಕ್ರೋಶಂತೀನಾಂ ಸತಾಂ=ರೋದಿಸುತ್ತಿ ರಲು ದ್ರುತಂ=ಸ್ತುತಿಸಿದ ನಂತರ ವಿಲಂಬ ಮಾಡದೆ ಬೇಗನೆ ಕೃಚ್ಛ್ರತಃ=ಮರಣ- ದಿಂದ ಮೋಚಯಾಮಾಸ=ಬಿಡುಗಡೆ ಮಾಡಿದನು. ॥೩೫॥

**ತಂ ಸುಖಾರಾಧ್ಯಮೃಜುಭಿರನನ್ಯಶರಣೈರ್ನೃಭಿಃ ।**
**ಕೃತಜ್ಞಃ ಕೋ ನ ಸೇವೇತ ದುರಾರಾಧ್ಯಮಸಾಧುಭಿಃ ॥೩೬॥**

ಅಸಾಧುಭಿಃ=ಅಸಜ್ಜನರಿಂದ ದುರಾರಾಧ್ಯಂ ಆರಾಧಿಸಲಾಗದ ಅನನ್ಯಶರಣೈಃ= ಬೇರೆ ರಕ್ಷಕರಹಿತರಾದ ಋಜುಭಿಃ=ಮನೋವಾಕ್‌ಕಾಯಗಳಿಂದ ಏಕರೂಪರಾಗಿ- ರುವ ನೃಭಿಃ=ಜನರಿಂದ ಸುಖಾರಾಧ್ಯಂ=ಸುಖವಾಗಿ ಆರಾಧಿಸಲ್ಪಡುವ ತಂ= ಶ್ರೀಹರಿಯನ್ನು ಕೃತಜ್ಞಃ=ಅವನ ಉಪಕಾರ ಸ್ಮರಣ ಉಳ್ಳವನು ಕೋನಸೇವೇತ= ಯಾವನು ಸೇವಿಸಲಿಕ್ಕಿಲ್ಲ. ॥೩೬॥

**ಯೋ ವೈ ಹಿರಣ್ಯಾಕ್ಷವಧಂ ಮಹಾದ್ಭುತಂ**
**ವಿಕ್ರೀಡಿತಂ ಕಾರಣಸೂಕರಾತ್ಮನಃ ।**
**ಶೃಣೋತಿ ಗಾಯತ್ಯನುಮೋದತೇಽಂಜಸಾ**
**ವಿಮುಚ್ಯತೇ ಬ್ರಹ್ಮವಧಾದಪಿ ದ್ವಿಜಃ ॥೩೭॥**

ಯಃ=ಯಾವನು ಮಹಾದ್ಭುತಂ=ಬಹಳ ಆಶ್ಚರ್ಯಕರವಾದ ಕಾರಣಸೂಕ- ರಾತ್ಮನಃ=ಭೂಮಿಯನ್ನು ಮೇಲೆತ್ತುವ ಕಾರಣದಿಂದ ವರಾಹರೂಪತಾಳಿದ

ಶ್ರೀಹರಿಯ ಹಿರಾಣ್ಯಾಕ್ಷವಧಂ ವಿಕ್ರೀಡಿತಂ=ಹಿರಣ್ಯಾಕ್ಷವಧವೆಂಬ ವ್ಯಾಪಾರವನ್ನು ಶೃಣೋತಿ=ಕೇಳುವನು ಗಾಯತಿ=ಹಾಡುವನು (ಹೇಳುವನು) ಅನುಮೋದತೇ= ಶ್ರವಣ ಪಠಣಗಳಿಂದ ಸಂತೋಷಿಸುವನೋ (ಸಮ್ಮತಿಸುವನೋ) ಸಃದ್ವಿಜಃ=ಅಂಥ ಬ್ರಾಹ್ಮಣನು ಬ್ರಹ್ಮವಧಾದಪಿ=ಬ್ರಹ್ಮಹತ್ಯೆಯಿಂದಲೂ ಅಥವಾ ಬ್ರಹ್ಮಜ್ಞಾನದಿಂದ ನಾಶವಾಗುವ ಸಂಸಾರದಿಂದ ಅಂಜಸಾ ವಿಮುಚ್ಯತೇ=ಚೆನ್ನಾಗಿ ಮುಕ್ತನಾಗುವನು. (ಬ್ರಹಜ್ಞಾನೇನ ವಧ್ಯತೇ ಇತಿ ಬ್ರಹ್ಮವಧಃ ಸಂಸಾರಃ) ॥೩೮॥

**ಏತನ್ಮಹಾಪುಣ್ಯಫಲಂ ಪವಿತ್ರಂ**
**ಧನ್ಯಂ ಯಶಸ್ಯಂ ಪದಮಾಯುರಾಶಿಷಾಂ ।**
**ಪ್ರಾಣೇಂದ್ರಿಯಾಣಾಂ ಯುಧಿ ಶೌರ್ಯವರ್ಧನಂ**
**ನಾರಾಯಣೋಽಂತೆ ಗತಿರಂಗ ಶೃಣ್ವತಾಮ್ ॥೩೮॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ವಿಂಶೋಽಧ್ಯಾಯಃ ॥***

ಹೇ ಅಂಗ=ಪರೀಕ್ಷಿತನೆ ಏತತ್=ಶ್ರೀವರಾಹಚರಿತೆಯು ಶೃಣ್ವತಾಂ=ಶ್ರವಣ ಮಾಡುವರಿಗೆ ಮಹಾಪುಣ್ಯಫಲಂ=ಬಹುಪುಣ್ಯದ ಫಲರೂಪವು. ಅಥವಾ ಪುಣ್ಯವೆ ಫಲವಾಗಿವುಳ್ಳದ್ದು. ಪವಿತ್ರಂ=ಪಾವಿತ್ರ್ಯಜನಕವು ಧನ್ಯಂ=ಧನವನ್ನು ಕೊಡುವುದು ಯಶಸ್ಯಂ=ಕೀರ್ತಿಕರವು ಆಯುರಾಶಿಷಾಂಪದಂ=ಆಯುಷ್ಯಮನೋರಥಗಳಿಗೆ ಸ್ಥಾನವು. ವೃದ್ಧಿಕರವೆಂದರ್ಥ.ಪ್ರಾಣೇಂದ್ರಿಯಾಣಾಂ ಚ ಪದಂ=ಪ್ರಾಣ ಇಂದ್ರಿಯ-ಗಳಿಗೂ ವರ್ಧಕವು. ಯುಧಿ=ಯುದ್ಧದಲ್ಲಿ ಶೌರ್ಯವರ್ಧನಂ=ಬಲದಾಯಕವು ಅಂತೇ ನಾರಾಯಣಃ ಗತಿಃ=ಶ್ರವಣಮನನನಿಧಿಧ್ಯಾಸನ ಅಪರೋಕ್ಷಜ್ಞಾನ ಲಿಂಗ-ಶರೀರನಾಶವಾದ ನಂತರ ಕೊನೆಗೆ ನಾರಾಯಣನೇ ಗಮ್ಯನಾಗುವನು. ॥೩೮॥

**ಇಲ್ಲಿಗೆ ಇಪ್ಪತ್ತನೆಯ ಅಧ್ಯಾಯವು ಮುಗಿಯಿತು.**

# ಇಪ್ಪತ್ತನೆ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ನಿಷ್ಕಪಟವೂ ಪ್ರಿಯವೂ ಆದ ಈ ಬ್ರಹ್ಮದೇವರ ಮಾತನ್ನು ಶ್ರೀಹರಿಯು ಕೇಳಿ ನಕ್ಕನು. ಪ್ರೇಮಪೂರ್ಣವಾದ ಕುಡಿಗಣ್ಣಿನ ನೋಟದಿಂದ ಮಾತನ್ನು ಅಂಗೀಕರಿಸಿದನು.

ಶ್ರೀಹರಿಗೆ ಸ್ವಲ್ಪವಾದರೂ ನೋವಿಲ್ಲ. ಬ್ರಹ್ಮದೇವರ ವಿಜ್ಞಾಪನೆಯನ್ನು ಆಲಿಸಿದನು. ಎದುರಿಗಿದ್ದ ದೈತ್ಯನ ಮೇಲೆ ಹಾರಿ ಕಪೋಲದಲ್ಲಿ ಹೊಡೆದನು. ಶ್ರೀಹರಿಯು ಎಸೆದ ಆ ಗದೆಯನ್ನು ದೈತ್ಯನು ತನ್ನ ಗದೆಯಿಂದ ತಡೆದನು. ಆಗ ಅದು ಕೆಂಡದಂತೆ ಪ್ರಕಾಶಿಸುತ್ತಾ ಕೆಳಕ್ಕೆ ಬಿದ್ದಿತು. ಇದು ಆಶ್ಚರ್ಯವು. ಅವಕಾಶ ಸಿಕ್ಕಿದ್ದರೂ ಹಿರಣ್ಯಾಕ್ಷನು ತನ್ನ ಪರಾಕ್ರಮವನ್ನು ತೋರಿಸಲಿಲ್ಲ. ವರಾಹನ ಕೈಯಲ್ಲಿ ಆಯುಧವಿಲ್ಲವೆಂದು ಅವನನ್ನು ತೊಂದರೆ ಪಡಿಸಲಿಲ್ಲ. ಯುದ್ಧದಲ್ಲಿ ನಿರಾಯುಧನಾದ ಶತ್ರುವನ್ನು ಹೊಡೆಯಬಾರದೆಂಬ ಲೌಕಿಕ ನೀತಿಗೆ ಮನ್ನಣೆಕೊಟ್ಟು ಹಾಗೆ ಮಾಡಿದನು. ಆದರೆ ಚುಚ್ಚುಮಾತುಗಳಿಂದ ಶ್ರೀಹರಿಯನ್ನು ಸಿಟ್ಟಿಗೆಬ್ಬಿಸಿದನು. ಶ್ರೀಹರಿಯು ಎಸೆದಿದ್ದ ಗದೆಯು ಕೆಳಗೆ ಬಿದ್ದಕೂಡಲೆ ಜನರು ಹಾಹಾಕಾರ ಮಾಡಿದರು. ದೈತ್ಯನು ಈ ಸಂದರ್ಭದಲ್ಲಿ ಹೊಡೆಯದಿದ್ದುದಕ್ಕೆ ಶ್ರೀಹರಿಯು ಮೆಚ್ಚಿದನು. ಕೆಳಗೆ ಬಿದ್ದ ಗದೆಯನ್ನು ಮತ್ತೆ ತೆಗೆದುಕೊಳ್ಳದೆ ಚಕ್ರವನ್ನು ಸ್ಮರಿಸಿದ ಕೂಡಲೆ ಬಂದ ಚಕ್ರವನ್ನು ಹಾಗೆಯೇ ದೈತ್ಯನನ್ನು ಸಂಹರಿಸಲು ಸಮರ್ಥನಾದರೂ ಲೀಲೆಗಾಗಿ - ತಿರುಗಿಸಿ ದೈತ್ಯನ ಕಡೆಗೆ ಎಸೆಯುವುದರಲ್ಲಿದ್ದನು ಶ್ರೀಹರಿ. ಆಗ ಆಕಾಶಚಾರಿಗಳು 'ದೇವ ದೇವ ! ಇವನನ್ನು ಕೊಲ್ಲು' ಎಂದು ಹೇಳಿದರು.

ಈ ಮಾತುಗಳು ದೈತ್ಯನಿಗೂ ಕೇಳಿಸಿದವು. ಅವನ ಎದುರಿನಲ್ಲಿ ಶ್ರೀಹರಿಯು ಚಕ್ರವನ್ನು ತಿರುಗಿಸುತ್ತ ನಿಂತಿದ್ದನು. ಇದನ್ನು ಕಂಡ ದೈತ್ಯನಿಗೆ ದ್ವೇಷವು ಮತ್ತಷ್ಟು ಹೆಚ್ಚಿತು. ಕೋಪದಿಂದವನು ನಿಟ್ಟುಸಿರು ಬಿಡುತ್ತ ಕೆಳದುಟಿಯನ್ನು ಕಚ್ಚಿ ಕಣ್ಣಿನ ನೋಟದಿಂದ ಸುಡುವನಂತೆ ನೋಡುತ್ತ ಶ್ರೀಹರಿಯ ಕಡೆಗೆ ನುಗ್ಗಿ 'ಈಗಲೇ ನೀನು ಸತ್ತೆ' ಎಂದು ಹೇಳಿ ಗದೆಯಿಂದ ಅವನನ್ನು ಹೊಡೆದನು. ಯಜ್ಞವರಾಹ-ನಾದರೋ ಗಾಳಿಯ ವೇಗದಿಂದ ಅನಾಯಾಸವಾಗಿ ತನ್ನ ಎಡಗಾಲಿನಿಂದ ಆ

ಗದೆಯನ್ನು ಹಿಂದಟ್ಟಿದನು. ಇದನ್ನು ಶತ್ರುವು ನೋಡುತ್ತಲೇ ಇದ್ದನು. ಆಗ ಶ್ರೀಹರಿಯು 'ಎಲವೋ ದೈತ್ಯನೇ, ಆಯುಧವನ್ನು ತೆಗೆದುಕೋ; ಯುದ್ಧಕ್ಕೆ ಬಾ. ಪಾಪ ! ನೀನು ಗೆಲ್ಲಬೇಕೆಂದಿರುವೆಯಲ್ಲವೇ' ಎಂದನು. ದೈತ್ಯನು ಮತ್ತೆ ಗದೆಯಿಂದ ಶ್ರೀಹರಿಯನ್ನು ಹೊಡೆದು ಸಿಂಹನಾದ ಮಾಡಿದನು. ಗದೆಯು ಶ್ರೀಹರಿಯ ಕಡೆಗೆ ವೇಗದಿಂದ ಬರುತ್ತಿತ್ತು. ಕದಲದೆ ನಿಂತಿದ್ದ ವರಾಹನು ಗರುಡನು ಹಾವನ್ನು ಹಿಡಿಯುವಂತೆ ಅನಾಯಾಸದಿಂದ ಅದನ್ನು ಹಿಡಿದು ಬಿಟ್ಟನು. ದೈತ್ಯನ ಮುಖವು ಕಳೆಗುಂದಿತು. ತನ್ನ ಪರಾಕ್ರಮ ಹಾಳಾಯಿತೆಂದು ಅರಿತನು. ಅವನ ಗರ್ವವೆಲ್ಲವೂ ಇಳಿದುಹೋಯಿತು. ಶ್ರೀಹರಿಯು ತೆಗೆದುಕೋ ಎಂದು ಗದೆಯನ್ನು ಕೊಡುತ್ತಿದ್ದರೂ ಅದನ್ನು ತೆಗೆದುಕೊಳ್ಳಲವನಿಚ್ಛಿಸಲಿಲ್ಲ. ಉರಿಯುವ ಬೆಂಕಿಯಂತೆ ಜ್ವಲಿಸುವ ಮೂರು ಕೊನೆಗಳುಳ್ಳ ಶೂಲವನ್ನು ಕೈಯಲ್ಲಿ ಹಿಡಿದು ಮಾಟಮಾಡುವವನು ಬ್ರಾಹ್ಮಣನ ಮೇಲೆ ಮಾರಮೂರ್ತಿಯನ್ನು ಎಸೆಯುವಂತೆ ಯಜ್ಞವರಾಹನನ್ನು ಕೊಲ್ಲಲು ಅದನ್ನು ಅವನ ಕಡೆಗೆ ವೇಗದಿಂದ ಎಸೆದನು. ಅತ್ಯಂತ ಪ್ರಕಾಶಮಾನವಾದ ಆ ಶೂಲವು ಆಕಾಶದಲ್ಲಿ ಬರುತ್ತಿದ್ದಂತೆಯೇ ಶ್ರೀಹರಿಯು ಹಾಗೆಯೇ ಅದನ್ನು ತಡೆಯಲು ಸಮರ್ಥನಾಗಿದ್ದರೂ ಚೂಪಾದ ಕೊನೆಗಳುಳ್ಳ ಚಕ್ರಾಯುಧದಿಂದ ಚೂರು ಚೂರು ಮಾಡಿದನು. ಗರುಡನು ತಾನಾಗಿಯೇ ಬಿಟ್ಟಿದ್ದ ರೆಕ್ಕೆಯನ್ನು ಇಂದ್ರನು ವಜ್ರಾಯುಧದಿಂದ ಚೂರು ಮಾಡಿದಂತಿತ್ತು.

ಶೂಲವು ಚೂರು ಚೂರಾಗಿ ಕೆಳಕ್ಕೆ ಬಿದ್ದಿತು. ಶ್ರೀಹರಿಯ ಚಕ್ರದ ಈ ಮಹಿಮೆಯನ್ನು ಕಂಡ ದೈತ್ಯನಿಗೆ ಮತ್ತಷ್ಟು ಕೋಪಹೆಚ್ಚಿತು. ಅವನು ಸಿಂಹನಾದ ಮಾಡುತ್ತ ಶ್ರೀಹರಿಯತ್ತ ನುಗ್ಗಿ ವಿಶಾಲವೂ ಲಕ್ಷ್ಮೀದೇವಿಗೆ ನಿವಾಸಸ್ಥಾನವೂ ಆಗಿದ್ದ ಶ್ರೀಹರಿಯ ವಕ್ಷಸ್ಥಲದಲ್ಲಿ ಬಲವಾದ ಮುಷ್ಟಿಯಿಂದ ಪೆಟ್ಟಿತ್ತನು. ಹೊಡೆದವನೇ ಜನರ ಕಣ್ಣಿಗೆ ಕಾಣದಂತೆ ಅದೃಶ್ಯನಾಗಿ ನಿಂತನು. ಆ ದೈತ್ಯನ ಈ ಪೆಟ್ಟು ಶ್ರೀಹರಿಗೆ ಯಾವ ನೋವನ್ನೂ ಉಂಟು ಮಾಡಲಿಲ್ಲ. ಅವನು ಸ್ವಲ್ಪವಾದರೂ ಕದಲಲಿಲ್ಲ. ಆನೆಗೆ ಹೂವಿನಹಾರದಿಂದ ಹೊಡೆದರೆ ತಗಲುವುದೇ ? ದೈತ್ಯನು ಶ್ರೀಹರಿಯನ್ನು ವಂಚಿಸಲು ಅನೇಕಬಗೆಯ ಮಾಯೆಗಳನ್ನು ಸೃಷ್ಟಿಸಿದನು. ಆದರೆ ಶ್ರೀಹರಿಯ ಸ್ವರೂಪಭೂತವಾದ ಅಣಿಮಾ ಮೊದಲಾದ ಎಲ್ಲ ಮಹಾತ್ಮ್ಯಕ್ಕೂ ಒಡೆಯನಲ್ಲವೇ ! ಅವನಿಗೆ ಇವುಗಳಿಂದ ಏನು ಭಯ ? ಆದರೆ ಜನರು ಮಾತ್ರ ಹೆದರಿದರು. ಲೋಕದ ಪ್ರಳಯವು ಸನ್ನಿಹಿತವಾಗಿರುವುದೆಂದವರು ತಿಳಿದರು. ಭಯಂಕರವಾದ ಬಿರುಗಾಳಿಯೆದ್ದು ಎಲ್ಲೆಲ್ಲೂ ಧೂಳುತುಂಬಿ ಕತ್ತಲೆಯಿಟ್ಟಿತು. ಕಲ್ಲುಹೊಡೆಯುವ

ಯಂತ್ರಗಳಿಂದ ಬರುತ್ತಿರುವಂತೆ ಎಲ್ಲ ದಿಕ್ಕುಗಳಿಂದಲೂ ಕಲ್ಲುಗಳು ವೇಗದಿಂದ ಬರುತ್ತಿದ್ದವು. ಮಿಂಚು ಗುಡುಗುಗಳಿಂದ ಕೂಡಿದ ಮೋಡಗಳು ಆಕಾಶವನ್ನು ಮುಚ್ಚಿ ನಕ್ಷತ್ರಗಳು ಕೂಡ ಕಾಣದಂತೆ ಮಾಡಿದ್ದುವು. ಆಗಾಗ ಆ ಮೋಡಗಳಿಂದ ಕೀವು ರಕ್ತ ಕೂದಲು ಮಲ ಮೂತ್ರ ಮತ್ತು ಎಲುಬುಗಳು ಸುರಿಯುತ್ತಿದ್ದುವು. ಬೆಟ್ಟಗಳು ಬಗೆ ಬಗೆಯ ಆಯುಧಗಳನ್ನುಗುಳುತ್ತಿದ್ದುವು. ಕೈಯಲ್ಲಿ ಶೂಲಗಳನ್ನು ಹಿಡಿದ ಕೆದರಿದ ಕೂದಲಿನ ನಗ್ನ ಯಾತುಧಾನಿಯರು ಕಾಣಿಸಿಕೊಂಡರು. ಯಕ್ಷರು ರಾಕ್ಷಸರು ಪದಾತಿ ಕುದುರೆ ರಥ ಮತ್ತು ಆನೆಗಳು ಹಿಂಸಕರು ಇವರೇ ಮೊದಲಾದವರು ಮನ ನೋಯುವಂತೆ ಆಡುತ್ತಿದ್ದ ಚುಚ್ಚು ಮಾತುಗಳನ್ನು ಕೇಳಿ ಬರುತ್ತಿದ್ದುವು. ಅಸುರನ ಈ ಬಗೆಯ ಮಾಯೆಗಳನ್ನು ಶ್ರೀಹರಿಯು ಅರಿತನು. ಮೋಕ್ಷಕ್ಷೇಮ ಮತ್ತು ಅಭಯಗಳನ್ನು ಜಗತ್ತಿಗೆ ದಯಪಾಲಿಸುವ ಶ್ರೀಹರಿಯು ಈ ಮಾಯೆಗಳನ್ನು ನಾಶಪಡಿಸಲು ಚಕ್ರವನ್ನು ಪ್ರಯೋಗಿಸಿದನು. ಅನಂತ ಶಕ್ತಿಯುಳ್ಳ ಅವನಿಗೆ ಆಯುಧಗಳು ಬೇಕಾಗಿಲ್ಲ. ಆದರೂ ಕ್ರೀಡೆಗಾಗಿ ಅವುಗಳನ್ನು ಉಪಯೋಗಿಸುವನು.

ಶ್ರೀಹರಿಯು ಚಕ್ರವನ್ನು ಪ್ರಯೋಗಿಸಿದ ಕೂಡಲೆ ಹಿರಣ್ಯಾಕ್ಷನ ತಾಯಿಯಾದ ದಿತಿದೇವಿಯ ಎದೆ ನಡುಗಿತು. ಕಶ್ಯಪರು ಹೇಳಿದ್ದ ಮಾತು ನೆನಪಿಗೆ ಬಂದಿತು. ಸ್ತನದಿಂದ ರಕ್ತವು ಸುರಿಯಲಾರಂಭಿಸಿತು. ತನ್ನ ಮಾಯೆಗಳು ಹೋದುದನ್ನು ದೈತ್ಯನು ಕಂಡು ದ್ವಂದಯುದ್ಧದಿಂದ ಶ್ರೀಹರಿಯನ್ನು ಕೊಲ್ಲಲೆಳಸಿದನು. ಮತ್ತೆ ಹತ್ತಿರಕ್ಕೆ ಬಂದು ಶ್ರೀಹರಿಯನ್ನು ತೋಳುಗಳ ಮಧ್ಯದಲ್ಲಿ ಸಿಕ್ಕಿಸಿಕೊಂಡು ನಿಂತನು. ಆದರೆ ಬ್ರಹ್ಮಾದಿ ದೇವತೆಗಳಿಗೆ ನಿಯಾಮಕನಾದ ಶ್ರೀಹರಿಯು ಅವನ ತೋಳುಗಳಿಂದ ಹೊರಗೇ ನಿಂತಿದ್ದುದನ್ನು ಕಂಡನು. ವಜ್ರದಷ್ಟು ಕಠಿಣವಾದ ತನ್ನ ಮುಷ್ಟಿಗಳಿಂದ ಅಸುರನು ವರಾಹನನ್ನು ಗುದ್ದುತ್ತಿದ್ದನು. ಶ್ರೀಹರಿಯು ಯುದ್ಧದಾಟವನ್ನು ಮುಗಿಸಬಯಸಿ ಇಂದ್ರನು ವೃತ್ರನನ್ನು ಹೊಡೆದಂತೆ ತನ್ನ ಕೈಯಿಂದ ದೈತ್ಯನ ಕಿವಿಯ ಬುಡದಲ್ಲಿ ಹೊಡೆದನು. ಅವನ ದೇಹವು ಗಿರ್ರನೆ ತಿರುಗಿತು. ಕಣ್ಣಿನ ಗುಡ್ಡೆಗಳು ಹೊರಕ್ಕೆ ಬಂದವು. ಕೈಕಾಲು ಚಾಚಿ ನೆಲಕ್ಕುರುಳಿದನು. ಕತ್ತು ಬಿದ್ದುಹೋಯಿತು. ಗಾಳಿಗೆ ಬೇರುಸಹಿತ ಕಿತ್ತು ನೆಲಕ್ಕುರುಳುವ ಮರದಂತೆ ಬಿದ್ದನು. ಭಯಂಕರಗಳಾದ ಕೋರೆಹಲ್ಲುಗಳುಳ್ಳ ಆ ದೈತ್ಯನು ತುಟಿಯನ್ನು ಕಚ್ಚಿಕೊಂಡು ನೆಲದಲ್ಲಿ ಬಿದ್ದಿದ್ದನು. ಆದರೆ ಆ ದೇಹದಲ್ಲಿ ಭಗವದ್ಭಕ್ತನಾದ ವಿಜಯನೂ ಇದ್ದುದರಿಂದ ಮುಖದ ವರ್ಚಸ್ಸು ಕಡಿಮೆಯಾಗಿರ-ಲಿಲ್ಲ. ಯುದ್ಧವನ್ನು ನೋಡಲು ಬಂದಿದ್ದ ಬ್ರಹ್ಮ ಮೊದಲಾದ ದೇವತೆಗಳು ಈ

ರೀತಿಯನ್ನು ಕಂಡು 'ಅಹಾ ! ಈರೀತಿ ಮರಣವು ಯಾರಿಗೆ ತಾನೆ ಲಭಿಸೀತು.!' ಎಂದು ಪ್ರಶಂಸಿಸಿದರು. ಮುಂದುವರಿಯುತ್ತ ಅವರು 'ಸಂಸಾರಕ್ಕೆ ಕಾರಣವಾದ ಲಿಂಗದೇಹವನ್ನು ಹೋಗಲಾಡಿಸಿಕೊಳ್ಳುವ ಇಚ್ಛೆಯಿಂದ ಭಕ್ತರು ಏಕಾಗ್ರಚಿತ್ತದಿಂದ ಶ್ರೀಹರಿಯನ್ನು ಧ್ಯಾನಿಸುವರು. ಅಂತಹ ಮೋಕ್ಷದಾಯಕನಾದ ಶ್ರೀಹರಿಯ ಪಾದದಿಂದ (ಕೈಗೂ ಕಾಲಿಗೂ ಅಭೇಧವಿರುವುದರಿಂದ ಹೀಗೆ ಹೇಳಿದೆ) ಹೊಡೆಸಿಕೊಂಡ ಈ ವಿಜಯನು ದೈತ್ಯನೊಡನೆ ಇದ್ದರೂ ಶ್ರೀಹರಿಯ ಮುಖವನ್ನೇ ಭಕ್ತಿಯಿಂದ ನೋಡುತ್ತ ದೇಹತ್ಯಾಗ ಮಾಡಿರುವನಲ್ಲವೇ ! ಜಯ ವಿಜಯರಿಬ್ಬರೂ ಶ್ರೀಹರಿಯ ದ್ವಾರಪಾಲಕರು. ಬ್ರಾಹ್ಮಣ ಶಾಪದಿಂದ ದೈತ್ಯನ ದೇಹವನ್ನು ಸೇರಿರುವರು. ಮತ್ತೆ ಕೆಲವು ಜನ್ಮಗಳನ್ನೆತ್ತಿ ಸಾಧನೆಯನ್ನು ಮಾಡಿಕೊಂಡು ವೈಕುಂಠದಲ್ಲಿ ಮುಕ್ತಸ್ಥಾನವನ್ನು ಸೇರುವರು' ಎಂದು ಹರಿಸಿದರು. ಶ್ರೀಹರಿಯನ್ನು ಕುರಿತು "ಹೇ ಈಶ, ನಿನ್ನ ಈರೂಪವು ಸಕಲ ಯಜ್ಞಸಂಪ್ರದಾಯ- ಗಳಿಗೆ ಪ್ರವರ್ತಕವಾದುದು. ನೀನು ಲೋಕರಕ್ಷಣೆಗಾಗಿ ಅಪ್ರಾಕೃತಗಳಾದ ಈ ರೂಪಗಳನ್ನು ತೆಗೆದುಕೊಳ್ಳುತ್ತೀ. ಈ ದೈತ್ಯನು ಲೋಕಕ್ಕೇ ಕಂಟಕನಾಗಿದ್ದನು. ನಮ್ಮಲ್ಲಿ ಅನುಗ್ರಹಮಾಡಿ ಇವನನ್ನು ನೀನು ಸಂಹರಿಸಿದೆ. ನಿನ್ನಲ್ಲಿ ಮಾಡುವ ಭಕ್ತಿಯಿಂದಲೇ ನಾವು ಸುಖಿಗಳಾಗಿದ್ದೇವೆ" ಎಂದು ವಿಜ್ಞಾಪಿಸಿಕೊಂಡರು.

ಮೈತ್ರೇಯರು - ಹೀಗೆ ಶ್ರೀಹರಿಯು ಮತ್ತೊಬ್ಬರಿಗೆ ಬಗ್ಗದ ಪರಾಕ್ರಮವುಳ್ಳ ಹಿರಣ್ಯಾಕ್ಷನನ್ನು ಸಂಹರಿಸಿ ಬ್ರಹ್ಮಾದಿ ದೇವತೆಗಳಿಂದ ಸ್ತೋತ್ರ ಮಾಡಿಸಿಕೊಂಡು ಆದಿವರಾಹ ರೂಪದಿಂದ ತನ್ನ ವೈಕುಂಠಲೋಕದಲ್ಲಿ ವ್ಯಕ್ತನಾದನು. ಅವನ ಲೋಕದಲ್ಲಿ ಯಾವತ್ತೂ ಆನಂದವೇ ಹೊರತು ದುಃಖವೆಂಬುದಿಲ್ಲ. ವಿದುರ ! ಶ್ರೀಹರಿಯ ಈ ವರಾಹಾವತಾರದ ಚರಿತ್ರೆಯನ್ನು ಹೇಗೆ ಕೇಳಿದ್ದೆನೋ ಹಾಗೆಯೇ ಹೇಳಿರುತ್ತೇನೆ. ಅಂತಹ ಪರಾಕ್ರಮಿಯಾದ ಹಿರಣ್ಯಾಕ್ಷನನ್ನೂ ಶ್ರೀಹರಿಯ ಆಟದ ಗೊಂಬೆಯಂತೆ ಯುದ್ಧದಲ್ಲಿ ಸಂಹರಿಸಿದನು.

ಶುಕಾಚಾರ್ಯರು ಎಲೈ ಪರೀಕ್ಷಿದ್ರಾಜ ! ಈರೀತಿಯಲ್ಲಿ ಮೈತ್ರೇಯರು ಹೇಳಿದ ಶ್ರೀಹರಿಯ ಸರ್ವೋತ್ತಮತ್ವಪ್ರತಿಪಾದಕವಾದ ಕಥೆಯನ್ನು ಕೇಳಿದ ವಿದುರನು ಅತ್ಯಂತ ಸಂತೋಷಪಟ್ಟನು. ಅತ್ಯಂತ ಭಗವದ್ಭಕ್ತನಲ್ಲವೇ ಆತ ! ಭಗವದ್ಭಕ್ತರೂ ಕೀರ್ತಿವಂತರೂ ಆದ ಭಗವದ್ಭಕ್ತರ ಕಥೆಯನ್ನು ಕೇಳಿಯೇ ಸಂತೋಷವಾಗುವಾಗ ಶ್ರೀಹರಿಯ ಕಥೆಯನ್ನು ಕೇಳಿದರೆ ಸಂತೋಷವಾಗದಿರು- ವುದೇ ? ಶ್ರೀಹರಿಯ ಕಥಾಶ್ರವಣವು ಸಂಸಾರತಾರಕವು. ಗಜೇಂದ್ರನು ಮೊಸಳೆಗೆ ಸಿಕ್ಕಿ ದುಃಖಿತನಾದಾಗ ಅವನ ಹಿಂಡಿನ ಹೆಣ್ಣಾನೆಗಳು ಬಿಡಿಸಲಾರದೇ

ಅರಚುತ್ತಿದ್ದವು. ಆದರೇನು ? ಗಜೇಂದ್ರನು ಶ್ರೀಹರಿಯನ್ನು ಧ್ಯಾನಮಾಡಿದ್ದರಿಂದ ಶ್ರೀಹರಿಯು ಅವನನ್ನು ಸಮೀಪಿಸಿದ್ದ ಮೃತ್ಯುವಿನಿಂದ ಬಿಡಿಸಿದನು. ಅವನನ್ನೇ ಸರ್ವೋತ್ತಮನೆಂದು ಭಜಿಸುವ ಮುಕ್ತಿಯೋಗ್ಯ ಜೀವರಿಗೆ ಶ್ರೀಹರಿಯು ಸುಲಭನು. ಅಸಾಧುಗಳಿಗೆ ದುರ್ಲಭನು ಅಂತಹ ಶ್ರೀಹರಿಯನ್ನು ಕೃತಜ್ಞರಾದ ಯಾರೂ ಸ್ಮರಿಸದೆ ಇರುವುದಿಲ್ಲ. ಸೇವಿಸದೆ ಇರುವುದಿಲ್ಲ.

ನಿಮಿತ್ತದಿಂದ ವರಾಹರೂಪದಿಂದ ಕಾಣಿಸಿಕೊಂಡ ಶ್ರೀಹರಿಯ ಚರಿತ್ರೆ ಈ ಹಿರಣ್ಯಾಕ್ಷವಧೆಯೆಂಬ ಕ್ರೀಡೆಯು. ಇದು ಅತ್ಯದ್ಭುತವಾದುದು. ಈ ಕಥೆಯನ್ನು ಭಕ್ತಿಯಿಂದ ಕೇಳುವ ಹಾಡುವ ಮತ್ತು ಅನುಮೋದಿಸುವ ಸಂಸಾರಿ ಚೇತನನು ಬ್ರಹ್ಮವಧೆ (ಐಕ್ಯಜ್ಞಾನ ಜನ್ಯ) ಪಾಪದಿಂದ ಮುಕ್ತನಾಗುವನು. ಶ್ರವಣದಲ್ಲಿಯೇ ಆಸಕ್ತರಾದ ಜನರು ಈ ಪುಣ್ಯಕರವೂ ಪವಿತ್ರವೂ ಯಶಸ್ಕರವೂ ಆಯುಸ್ಸು ಅಭ್ಯುದಯಗಳಿಗೆ ಸ್ಥಾನವೂ ಪ್ರಾಣ ಮತ್ತು ಇಂದ್ರಿಯಗಳ ಶಕ್ತಿ ವರ್ಧಕವೂ ಯುದ್ಧದಲ್ಲಿ ಶೌರ್ಯವರ್ಧಕವೂ ಆದ ಈ ಕಥೆಯನ್ನು ಭಕ್ತಿಯಿಂದ ಕೇಳಿದರೆ ಮನನ ಮೊದಲಾದುವುಗಳು ಮಾಡಲು ಶಕ್ತಿಯುಂಟಾಗಿ ಶ್ರೀಹರಿಯ ಅನುಗ್ರಹದಿಂದ ಅಪರೋಕ್ಷವಾಗಿ ಲಿಂಗಶರೀರವನ್ನು ಕಳೆದುಕೊಂಡು ಶ್ರೀಹರಿಯನ್ನು ಸೇರಿ ಶಾಶ್ವತ ಸುಖವನ್ನು ಪಡೆಯುವರು.



## ಅಥ ಏಕವಿಂಶೋಽಧ್ಯಾಯಃ

ಸೃಷ್ಟಿಪ್ರಳಯಗಳಿಂದ ತಿಳಿಯುವ ದೇವತಾತಾರತಮ್ಯಜ್ಞಾನವು ಶ್ರೀಹರಿ ಪ್ರೀತಿಜನಕವಾದುದರಿಂದ ಪುರುಷಾರ್ಥ ಕಾರಣ. ಆದ್ದರಿಂದ ಈ ಅಧ್ಯಾಯದಲ್ಲಿ ಹಿಂದೆ ಹೇಳಿದ ಸೃಷ್ಟಿಯನ್ನು ವಿವರಿಸುವರು.

**ರಾಜೋವಾಚ**

**ಮಹೀಂ ಪ್ರತಿಷ್ಠಾಮಧ್ಯಾಸ್ಯ ಯೋಽಸೌ ಸ್ವಾಯಂಭುವೋ ಮನುಃ ।**
**ಕಾನ್ಯಧ್ಯತಿಷ್ಠದ್ ದ್ವಾರಾಣಿ ಮಾರ್ಗಾಯಾವರಜನ್ಮನಾಮ್ ॥೧॥**

ಸ್ವಾಯಂಭುವೋಮನುಃ=ಸ್ವಯಂ ಭವತೀತಿ ಸ್ವಯಂಭೂಃ ಎಂದರೆ ಶ್ರೀಹರಿಯು ಅವನಿಂದ ಜನಿಸಿದವನು ಸ್ವಾಯಂಭುವ, ಮತ್ತು ಮನುಃ=ಜ್ಞಾನಿಯೂ ಆದ ಬ್ರಹ್ಮದೇವನು, ಪ್ರತಿಷ್ಠಾಂ=ಎಲ್ಲ ಜನರಿಗೆ ಆಶ್ರಯವಾದ ಮಹೀಂ ಅಧ್ಯಾಸ್ಯ= ಭೂಮಿಯಲ್ಲಿ ನಿಂತು(ಇದ್ದುಕೊಂಡು)(ಅಧಿಶೀಙ್‌ಸ್ಥಾಸಾಂಕರ್ಮೇತಿ ದ್ವಿತೀಯಾ) ಅವರಜನ್ಮನಾಂ=ಅನಂತರ ಜನಿಸಿದ ಯಕ್ಷ ಮುಂತಾದ ಪ್ರಾಣಿಗಳಿಗೆ, ಮಾರ್ಗಾಯ =ಅವರವರ ಜಾತಿಗೆ ಉಚಿತವಾದ ಮಾರ್ಗವನ್ನು ತೋರಿಸಲು ಮತ್ತು ವರ್ಣ ಆಶ್ರಮಸ್ವರೂಪಗಳ ಭೇದ ತಿಳಿಯಲು, ಕಾನಿ ದ್ವಾರಾಣಿ ಅಧ್ಯತಿಷ್ಠತ್=ಯಾವ ಸಾಧನಗಳನ್ನು ಆಶ್ರಯಿಸಿದನು. ಅಂದರೆ ಎಲ್ಲಿ ನಿಂತು ಸೃಷ್ಟಿಸಿದನು, ಎಂದರ್ಥ. ಮತ್ತು ಸ್ವಯಂಭೂ ಎಂದರೆ ಬ್ರಹ್ಮದೇವರು ಅವರಿಂದ ಜನಿಸಿದ ಸ್ವಾಯಂಭುವ ಮನುವು ಕಾನಿ ದ್ವಾರಾಣಿ=ಅಧ್ಯತಿಷ್ಠತ್ ಯಾವ ಸೃಷ್ಟಿಸಾಧನಗಳನ್ನಾಶ್ರಯಿಸಿದನು. ಯಾವ ಮಕ್ಕಳ ದ್ವಾರಾ ಸೃಷ್ಟಿಸಿದನೆಂದರ್ಥ॥೧॥

ಈ ಪ್ರಶ್ನೆಗೆ ಉತ್ತರವನ್ನು ವಿದುರಮೈತ್ರೇಯ ಸಂವಾದರೂಪದಿಂದ ಹೇಳಬೇಕೆಂಬ ಉದ್ದೇಶದಿಂದ ಕೇಳುವನು –

**ಕ್ಷತ್ತಾ ಮಹಾಭಾಗವತಃ ಕೃಷ್ಣಸ್ಯೈಕಾಂತಿಕಃ ಸುಹೃತ್ ।**
**ಯಸ್ತತ್ಯಾಜಾಗ್ರಜಂ ಕೃಷ್ಣೇ ಸಾಪತ್ಯಮಘವಾನಿತಿ ॥೨॥**

ಮಹಾಭಾಗವತಃ=ಶ್ರೇಷ್ಠ ಭಗವದ್ಭಕ್ತನಾದ, ಕೃಷ್ಣಸ್ಯ=ಶ್ರೀಕೃಷ್ಣನ, ಏಕಾಂತಿಕಃ ಸುಹೃತ್=ಶ್ರೀಹರಿಯೇಸರ್ವೋತ್ತಮನೆಂಬ ನಿರ್ಣಯಪೂರ್ವಕವಾಗಿ ನಿರ್ವ್ಯಾಜ

ಸ್ನೇಹವುಳ್ಳ, ಕ್ಷತ್ತಾ=ಸಂಸಾರವನ್ನು ಸಂಚೂರ್ಣಗೊಳಿಸುವುದರಿಂದ ಕ್ಷತ್ತಾ ಎನಿಸುವವ (ಕ್ಷದ ಸಂಚೂರ್ಣನೇ ಎಂದು ಧಾತು ಇದೆ.) ಯಃ=ವಿದುರನು ಕೃಷ್ಣೇ ಅಘವಾನ್ =ಶ್ರೀಕೃಷ್ಣನ ವಿಷಯದಲ್ಲಿ ಅಪರಾಧ ಮಾಡಿದವನೆಂದು (ಶ್ರೀಕೃಷ್ಣನ ಮಂತ್ರಾನದಾರ ಮಾಡಿದವನು.) ಸಾಪತ್ಯಂ=ಮಗನಿಂದ ಸಹಿತನಾದ ಅಗ್ರಜಂ ತತ್ಯಾಜ=ಧೃತರಾಷ್ಟ್ರನನ್ನು ಬಿಟ್ಟನು. ॥೨॥

**ದ್ವೈಪಾಯನಾದನವರೋ ಮಹಿತ್ವೇ ತಸ್ಯ ದೇಹಜಃ ।**
**ಸರ್ವಾತ್ಮನಾ ಶ್ರಿತಃ ಕೃಷ್ಣಂ ತತ್ಪರಾಂಶ್ಚಾಪ್ಯನುವ್ರತಃ ॥೩॥**

ಮಹಿತ್ವೇ=ಮಹಿಮೆಯಲ್ಲಿ ದ್ವೈಪಾಯನಾದನವರಃ=ವೇದವ್ಯಾಸದೇವರಿಗಿಂತ ಕಡಿಮೆಯಿಲ್ಲದ ಅಂದರೆ ತನ್ನ ಯೋಗ್ಯತಾನುಸಾರ ಸಮನಾದ ತಸ್ಯ ದೇಹಜಃ= ವೇದವ್ಯಾಸ ಪುತ್ರನಾದ ಕೃಷ್ಣಂ ಚ=ಶ್ರೀ ಕೃಷ್ಣನನ್ನು ಸರ್ವಾತ್ಮನಾ=ಎಲ್ಲ ರೀತಿಯಿಂದ ಶ್ರಿತಃ=ಆಶ್ರಯಿಸಿದವನು ತತ್ಪರಾನಪಿ=ಅವನ ಭಕ್ತರನ್ನೂ ಅನುವ್ರತಃ=ಅನುಸರಿಸು- ವನು ಆದ ವಿದುರನು ॥೩॥

**ಕಿಮನ್ವಪೃಚ್ಛನ್ಮೈತ್ರೇಯಂ ವಿರಜಾಸ್ತೀರ್ಥಸೇವಯಾ ।**
**ಉಪಗಮ್ಯ ಕುಶಾವರ್ತೇ ಆಸೀನಂ ತತ್ತ್ವವಿತ್ತಮಮ್ ॥**

ತೀರ್ಥಸೇವಯಾ=ಅನೇಕ ತೀರ್ಥ ಸ್ನಾನಾದಿಗಳನ್ನು ಮಾಡುವುದರಿಂದ, ವಿರಜಾಃ=ದೋಷರಹಿತನಾಗಿ, ಕುಶಾವರ್ತೇ=ಗಂಗಾದ್ವಾರದಲ್ಲಿ ಆಸೀನಂ= ಕುಳಿತಿರುವ, ತತ್ತ್ವವಿತ್ತಮಂ=ತತ್ವಜ್ಞಾನಿಶ್ರೇಷ್ಠರಾದ, ಮೈತ್ರೇಯಂ=ಮೈತ್ರೇಯ- ರನ್ನು ಉಪಗಮ್ಯ=ಸಮೀಪಿಸಿ, ಕಿಂ ಅನ್ವಪೃಚ್ಛತ್=ಏನನ್ನು ಪ್ರಶ್ನಿಸಿದನು ? ॥೪॥

ಮಧ್ಯದಲ್ಲಿ ಶೌನಕರು ಸೂತರನ್ನು ಪ್ರಶ್ನಿಸುವರು.

**ತಯೋಃ ಸಂವದತೋಃ ಸೂತ ಪ್ರವೃತ್ತಾ ಹ್ಯಮಲಾಃ ಕಥಾಃ ।**
**ಆಪೋ ಗಾಂಗ್ಯ ಇವಾಘಘ್ನ್ಯೋ ಹರೇಃ ಪಾದಾಂಬುಜಾಶ್ರಯಾಃ ॥೫॥**

ಹೇ ಸೂತ=ಸೂತರೇ ತಯೋಃ ಸಂವದತೋಃ=ವಿದುರಮೈತ್ರೇಯರು ಮಾತನಾಡುವಾಗ ಪ್ರವೃತ್ತಾಃ=ಹೊರಟ, ಅಮಲಾಃ=ನಿರ್ದುಷ್ಟಗಳಾದ, ಹರೇಃ ಪಾದಾಂಬುಜಾಶ್ರಯಾಃ=ಶ್ರೀಹರಿಯ ಮಹಿಮಾಪ್ರತಿಪಾದಕಗಳಾದ ಕಥಾಃ=ಕಥೆಗಳು ಗಾಂಗ್ಯಃ ಆಪಃ ಇವ=ಗಂಗಾನೀರಿನಂತೆ, ಅಘಘ್ನ್ಯಃ=ಪಾಪನಾಶಕಗಳು. ॥೫॥

**ತಾ ನಃ ಕೀರ್ತಯ ಭದ್ರಂ ತೇ ಕೀರ್ತನ್ಯೋದಾರಕರ್ಮಣಃ ।**
**ರಸಜ್ಞಃ ಕೋ ನು ತೃಪ್ಯೇತ ಹರಿಲೀಲಾಮೃತಂ ಪಿಬನ್ ॥೬॥**

ಸೂತರೇ ತೇ ಭದ್ರಂ=ನಿಮಗೆ ಕಲ್ಯಾಣವಾಗಲಿ. ಕೀರ್ತನ್ಯೋದಾರಕರ್ಮಣಃ= ಹೇಳಲು ಯೋಗ್ಯವಾದ ಉತ್ತಮ ಚರಿತ್ರವುಳ್ಳ ಶ್ರೀಹರಿಯ ತಾಃ=ಆ ಕಥೆಗಳನ್ನು, ನಃ=ನಮಗೆ, ಕೀರ್ತಯ=ಹೇಳಿರಿ. ಹರಿಲೀಲಾಮೃತಂ ಪಿಬನ್=ಶ್ರೀಹರಿಲೀಲಾ ಎಂಬ ಅಮೃತಪಾನ ಮಾಡುವ, ರಸಜ್ಞಃ=ಅದರ ಶ್ರೇಷ್ಠತೆಯನ್ನರಿತವನು, ಕಃ ನು ತೃಪ್ಯೇತ=ಯಾವನು ತಾನೆ ತೃಪ್ತಿ ಹೊಂದುವನು ? ತೃಪ್ತಿ ಹೊಂದಲಾರನೆಂದರ್ಥ. ॥೬॥

**ಸೂತ ಉವಾಚ**

**ಏವಂ ಪರೀಕ್ಷಿತಾ ಪೃಷ್ಟೋ ಭಗವಾನ್ ಬಾದರಾಯಣಿಃ ।**
**ಭಗವತ್ಯರ್ಪಿತಾಧ್ಯಾತ್ಮಸ್ತಮಾಹ ಶ್ರೂಯತಾಮಿತಿ ॥೭॥**

ಏವಂ=ವಿದುರನು ಮೈತ್ರೇಯರನ್ನು ಏನು ಪ್ರಶ್ನಿಸಿದನು ಎಂದು, ಪರೀಕ್ಷಿತಾ= ಪರೀಕ್ಷಿತರಾಜನಿಂದ,ಪೃಷ್ಟಃ=ಪ್ರಶ್ನಿಸಲ್ಪಟ್ಟ ಭಗವತಿ=ಶ್ರೀಹರಿಯಲ್ಲಿ, ಅರ್ಪಿತಾಧ್ಯಾತ್ಮಃ =ಸಮರ್ಪಿಸಿದ ಇಂದ್ರಿಯಗಳುಳ್ಳವನಾಗಿ ಭಗವಾನ್=ಪೂಜ್ಯರಾದ, ಬಾದರಾ- ಯಣಿಃ=ಶುಕಮಹರ್ಷಿಗಳು, ಶ್ರೂಯತಾಂ=ಕೇಳಿರಿ ಇತಿ=ಎಂದು ತಂ=ರಾಜನಿಗೆ, ಆಹ=ಹೇಳಿದರು. ॥೭॥

**ಶುಕ ಉವಾಚ**

**ಹರೇರ್ಧೃತಕ್ರೋಡತನೋಃ ಸ್ವಮಾಯಯಾ**
**ನಿಶಮ್ಯ ಗೋರುದ್ಧರಣಂ ರಸಾತಲಾತ್ ।**
**ಲೀಲಾಂ ಹಿರಣ್ಯಾಕ್ಷಮವಜ್ಞಯಾ ಹತಂ**
**ಸಂಜಾತಹರ್ಷೋ ಮುನಿಮಾಹ ಭಾರತಃ ॥೮॥**

ಸ್ವಮಾಯಯಾ=ತನ್ನ ಇಚ್ಛೆಯಿಂದ, ಧೃತಕ್ರೋಡತನೋಃ=ವರಾಹದೇಹವನ್ನು ಧರಿಸಿದ, ಹರೇಃ=ಶ್ರೀಹರಿಯ, ರಸಾತಲಾತ್=ರಸಾತಲದಿಂದ ಗೋಃ=ಭೂಮಿಯ, ಉದ್ಧರಣಂ=ಮೇಲೆತ್ತುವುದು ಎಂಬ, ಲೀಲಾಂ=ಲೀಲೆಯನ್ನು ಹಿರಣ್ಯಾಕ್ಷಂ ಅವಜ್ಞಯಾ ಹತಂ=ಹಿರಣ್ಯಾಕ್ಷನು ಅನಾಯಾಸವಾಗಿ ಸತ್ತದ್ದನ್ನೂ ನಿಶಮ್ಯ=ಕೇಳಿ ಸಂಜಾತಹರ್ಷಃ=ಸಂತುಷ್ಟನಾದ ಭಾರತಃ=ವಿದುರನು ಮುನಿಂ ಆಹ=ಮೈತ್ರೇಯ- ರಿಗೆ ಹೇಳಿದನು ಎಂದು ಶುಕಾಚಾರ್ಯರು ಪರೀಕ್ಷಿತನಿಗೆ ಹೇಳಿದರೆಂದು ಸೂತರು ಶೌನಕರಿಗೆ ಹೇಳಿದರು. ॥೮॥

**ವಿದುರ ಉವಾಚ**

**ಪ್ರಜಾಪತಿಪತಿಃ ಸೃಷ್ಟ್ವಾ ಪ್ರಜಾಸರ್ಗೇ ಪ್ರಜಾಪತೀನ್ ।**
**ಕಿಮಾರಭತ ಮೇ ಬ್ರಹ್ಮನ್ ಪ್ರಬ್ರೂಹ್ಯವ್ಯಕ್ತಮಾರ್ಗವಿತ್ ॥೯॥**

ಹೇ ಬ್ರಹ್ಮನ್=ಮೈತ್ರೇಯರೇ, ಅವ್ಯಕ್ತಮಾರ್ಗವಿತ್=ಅವ್ಯಕ್ತಗಳಾದ ಪರಾಪರ-ತತ್ತ್ವಗಳ ಸ್ವರೂಪವನ್ನರಿತ, ಪ್ರಜಾಪತಿಃ=ಬ್ರಹ್ಮದೇವನು ಪ್ರಜಾಸರ್ಗೇ=ಪ್ರಜೆಗಳ ಸೃಷ್ಟಿ ಮಾಡುವುದಕ್ಕಾಗಿ, ಪ್ರಜಾಪತೀನ್ ಸೃಷ್ಟ್ವಾ=ಮರೀಚ್ಯಾದಿಗಳನ್ನು ಸೃಷ್ಟಿಸಿ, ಕಿಂ ಆರಭತ=ಏನೇನು ಸೃಷ್ಟಿಸಿದನು? ಎಂದು, ಪ್ರಬ್ರೂಹಿ=ಹೇಳಿರಿ, (ಯತಃ ಅವ್ಯಕ್ತತತ್ತ್ವವಿತ್ ಎಂದು ಮೈತ್ರೇಯರಿಗೂ ವಿಶೇಷಣ ಮಾಡಬಹುದು. ನೀವು ಪರಾಪರಅವ್ಯಕ್ತ ತತ್ತ್ವವನ್ನರಿತವರಾದ್ದರಿಂದ ಎಂದರ್ಥ) ॥೯॥

**ಯೇ ಮರೀಚ್ಯಾದಯೋ ವಿಪ್ರಾಃ ಯಸ್ತುಸ್ವಾಯಂಭುವೋ ಮನುಃ ।**
**ತೇ ವೈ ಬ್ರಹ್ಮಣ ಆದೇಶಾತ್ ಕಥಮೇತದಭಾವಯನ್ ॥೧೦॥**

ಮರಿಚ್ಯಾದಯಃ ಯೇ ವಿಪ್ರಾಃ=ಬ್ರಾಹ್ಮಣರಾದ ಯಾವ ಮರೀಚಿ ಮುಂತಾದವರು, ಯಃ ಸ್ವಾಯಂಭುವಃ ತು ಮನುಃ=ಯಾವ ಕ್ಷತ್ರಿಯನಾದ ಸ್ವಾಯಂಭುವಮನುವು ಇರುವರೋ, ತೇ=ಅವರು, ಬ್ರಹ್ಮಣಃ ಆದೇಶಾತ್= ಬ್ರಹ್ಮದೇವರ ಅಪ್ಪಣೆಯ ಮೇರೆಗೆ, ಏತತ್=ಈ ಜಗತ್ತನ್ನು, ಕಥಂ ಅಭಾವಯನ್= ಹೇಗೆ ಸೃಷ್ಟಿಸಿದರು, ಬೆಳೆಸಿದರು. ॥೧೦॥

**ಸದ್ವಿತೀಯಾಃ ಕಿಮಸೃಜನ್ ಸ್ವತಂತ್ರಾ ಉತ ಕರ್ಮಭಿಃ ।**
**ಆಹೋಸ್ವಿತ್ ಸಂಹತಾಃ ಸರ್ವ ಇದಂ ಸ್ಮ ಸಮಕಲ್ಪಯನ್ ॥೧೧॥**

ಕಿಂ ಸದ್ವಿತೀಯಾಃ ಅಸೃಜನ್=ಪತ್ನೀಸಹಿತರಾಗಿ ಸೃಷ್ಟಿಸಿದರೋ, ಕಿಂ ಸ್ವತಂತ್ರಾಃ =ಬೇರೆ ಯಾರ ಅಪೇಕ್ಷೆ ಇಲ್ಲದೆಯೇ ಸೃಷ್ಟಿಸಿದರೋ ಉತ ಕರ್ಮಭಿಃ=ಅದೃಷ್ಟ (ಪುಣ್ಯ-ಪಾಪಗಳ)ಸಹಕಾರದಿಂದಲೋ ಆಹೋಸ್ವಿತ್ ಸರ್ವೇ ಸಂಹತಾಃ=ಅಥವಾ ಎಲ್ಲಾ ಸೇರಿ ಇದಂ ಸಮಕಲ್ಪಯನ್ ಸ್ಮ=ಈ ಪ್ರಪಂಚವನ್ನು ಸೃಷ್ಟಿಸಿದರೋ ? ಎಂದು ಹೇಳಿರಿ ॥೧೧॥

ಕಿಮಾರಭತ ಎಂಬ ಪ್ರಶ್ನೆಗೆ ಯಕ್ಷಾದೀನ್ ಎಂದು ಉತ್ತರಿಸಲು ಮರೆಯದಿರ-ಲೆಂದು ಹಿಂದೆ ಹೇಳಿದ ಸೃಷ್ಟಿಯನ್ನು ಪುನಃ ಹೇಳುವರು –

**ಮೈತ್ರೇಯ ಉವಾಚ**

> **ದೈವೇನ ದುರ್ವಿತರ್ಕ್ಯೇಣ ಪರೇಣಾನಿಮಿಷೇಣ ಚ ।**
> **ಜಾತಕ್ಷೋಭಾದ್ ಭಗವತೋ ಮಹಾನಾಸೀದ್ ಗುಣತ್ರಯಾತ್ ॥**

ದುರ್ವಿತರ್ಕ್ಯೇಣ=ಊಹಿಸಲಾಗದ, ದೈವೇನ=ಅದೃಷ್ಟಪ್ರೇರಕನಾದ, ಪರೇಣ=ಸರ್ವೋತ್ತಮನಾದ ಪುರುಷನಿಂದ, ಅನಿಮಿಷೇಣ=ಕಾಲದಿಂದಲೂ ಜಾತಕ್ಷೋಭಾತ್=ಕಾರ್ಯೋನ್ಮುಖವಾದ, ಗುಣತ್ರಯಾತ್=ಸತ್ವಾದಿಗುಣಗಳಿಂದ ಹಿಂದೆ ಹೇಳಿದ ರೀತಿಯಲ್ಲಿ ಭಗವತಃ=ವಾಸುದೇವನಿಂದ ಮಹಾನ್ ಆಸೀತ್=ಮಹತ್ತತ್ವವೂ ಅಭಿಮಾನಿಗಳಾದ ಬ್ರಹ್ಮವಾಯು ಮುಂತಾದವರು ಜನಿಸಿದರು. ವಾಸುದೇವನಿಂದ ಮಾಯಾನಾಮಕ ಲಕ್ಷ್ಮೀದೇವಿಯಲ್ಲಿ ರೇತೋರೂಪೇಣ ಪರಿಣತವಾದ ಪ್ರಕೃತಿತತ್ವದಿಂದ ಪುನ್ನಾಮಕ ಬ್ರಹ್ಮಶರೀರ ಜನಿಸಿತು. ತ್ರಿಗುಣಾತ್ಮಕ ಪ್ರಕೃತಿಯಿಂದ ಮಹತ್ತತ್ವ ಜನಿಸಿತು.

ಹಿಂದೆ ಹೇಳಿದ ಸೃಷ್ಟಿಯನ್ನೇ ಪುನಃ ಹೇಳುವುದು ವ್ಯರ್ಥವೆಂದರೆ ವ್ಯರ್ಥವಲ್ಲ ಎಂಬುದನ್ನು ಪ್ರಮಾಣದಿಂದ ತಿಳಿಸುವರು –

> **ಸೃಷ್ಟೌ ಲಯೇ ತಾರತಮ್ಯಂ ದೇವಾನಾಂ ಜ್ಞಾಯತೇ ಸ್ಫುಟಮ್ ।**
> **ತಾರತಮ್ಯಪರಿಜ್ಞಾನೇ ಮಹಾತಾತ್ಪರ್ಯಮಿಷ್ಯತೇ ।**
> **ಅತಸ್ತದ್ಬಹುಶಸೂಕ್ತಮನ್ಯಚ್ಚೈತತ್ಪ್ರಕಾಶಕಂ ॥ ಇತಿ ವಾಮನೇ ।**

ಸೃಷ್ಟಿಲಯಗಳನ್ನು ಹೇಳಿದಾಗ ಯಾರು ಯಾರಿಗಿಂತ ಮೊದಲು ಜನಿಸಿದರೋ ಅವರು ಅವರಿಗಿಂತ ಉತ್ತಮರು. ಯಾರು ಯಾರಿಗಿಂತ ಮೊದಲು ಲಯ ಹೊಂದುವರೋ ಅವರು ಅವರಿಗಿಂತ ನೀಚರು, ಹೀಗೆ ದೇವತೆಗಳ ತಾರತಮ್ಯ ತಿಳಿಯುವುದು. ತಾರತಮ್ಯವನ್ನು ತಿಳಿಯುವುದರಲ್ಲಿ ಮಹಾತಾತ್ಪರ್ಯವಿರುವುದರಿಂದ ಅದನ್ನು ಅನೇಕ ಸಲ ಹೇಳಿದೆ. ಕ್ರಮವಾಗಿ ಲಕ್ಷಣಗಳಿರುವುದನ್ನು ಹೇಳುವುದೂ ತಾರತಮ್ಯ ಜ್ಞಾಪಕವೇ ಆಗಿದೆ ಎಂದು ತಾತ್ಪರ್ಯ ತಿಳಿಸಲು ಅನೇಕಸಲ ಹೇಳುವರು.

ಮಹದಾದಿತತ್ವಗಳ ಸೃಷ್ಟಿ ಪ್ರಳಯ ಹೇಳಿದರೆ ದೇವತೆಗಳ ತಾರತಮ್ಯ ಹೇಗೆ ತಿಳಿಯುವುದು? ಎಂಬ ಶಂಕೆ ಬಂದರೆ ಉತ್ತರಿಸುವರು– ಸೃಷ್ಟ್ಯಾದಿ ಪ್ರಕರಣಗಳಲ್ಲಿ ಅಭಿಮನ್ಯಮಾನತತ್ವವಾಚಕಶಬ್ದಗಳಿಂದ ಅಭಿಮಾನಿದೇವತೆಗಳನ್ನೂ ಸ್ವೀಕರಿಸಬೇಕು ಎನ್ನುವ ಅಭಿಪ್ರಾಯದಿಂದ ಮಹದಾದಿಗಳ ಅಭಿಮಾನಿ ದೇವತೆಗಳನ್ನು ಪ್ರಮಾಣದಿಂದ ತಿಳಿಸುವರು –

**ಮಹತೋ ಬ್ರಹ್ಮವಾಯೂ ಚ ತದ್ಭಾರ್ಯೇ ಚಾಭಿಮಾನಿನಃ ।**
**ಅಹಮಃ ಶೇಷವೀಂದ್ರೌ ಚ ರುದ್ರೇಂದ್ರೌ ಕಾಮತತ್‌ಸ್ತ್ರಿಯಃ ॥**
**ಮನಸಸ್ತ್ವನಿರುದ್ಧಶ್ಚ ಚಂದ್ರಶ್ಚಾನ್ಯೇ ಯಥೋದಿತಂ ।**
**ಏವಂ ಕ್ರಮೋ ವ್ಯತ್ಯಯಸ್ತು ಸೂಕ್ಷ್ಮಸ್ಥೂಲಾದಿಭೇದತಃ ॥**
**ಸೃಷ್ಟೌ ಗುಣೇ ಚ ಜ್ಞಾನಾದೌ ಮುಕ್ತಿಸ್ಥೇ ವಾಪ್ಯಯಂ ಕ್ರಮಃ ।**
**ನಿಯಮೇನಾನ್ಯಥೋಕ್ತಿಸ್ತು ಮೋಹಾಯಾಸುರಜನ್ಮನಾಂ ॥ ಇತಿ ವಾರಾಹೇ**

ಮಹತ್ತತ್ವಕ್ಕೆ ಬ್ರಹ್ಮವಾಯುಗಳು ಅವರ ಪತ್ನಿಯರಾದ ಸರಸ್ವತಿಭಾರತಿಯರು ಅಭಿಮಾನಿಗಳು. ಅಹಂಕಾರತತ್ವಕ್ಕೆ ಶೇಷ, ಗರುಡ, ರುದ್ರ, ಇಂದ್ರ, ಕಾಮ, ಅವರ ಪತ್ನಿಯರಾದ ವಾರುಣಿ, ಸೌಪರ್ಣಿ, ಪಾರ್ವತಿ, ಶಚಿ, ರತಿಯರು ಅಭಿಮಾನಿಗಳು.

ಮನಸ್ತತ್ವಕ್ಕೆ ಅನಿರುದ್ಧ ಚಂದ್ರರು ಅಭಿಮಾನಿಗಳು. ಇನ್ನುಳಿದ ಇಂದ್ರಿಯಾದಿ ತತ್ವಾಭಿಮಾನಿಗಳನ್ನು ಯಥೋದಿತಂ ಶಾಸ್ತ್ರದಲ್ಲಿ ಹೇಳಿದಂತೆ ತಿಳಿಯಬೇಕು. ಇದು ಕ್ರಮವು. ವ್ಯತ್ಯಾಸ ಕಂಡು ಬರುವುದು ಸೂಕ್ಷ್ಮಸೃಷ್ಟಿ ಸ್ಥೂಲಸೃಷ್ಟಿ ಮುಂತಾದ ಭೇದದಿಂದ ಬರುವುದು. ಸೂಕ್ಷ್ಮ ಸೃಷ್ಟಿಯಲ್ಲಿ ಮುಕ್ತಿಯಲ್ಲಾಗಲಿ ಜ್ಞಾನಗುಣ-ಗಳಲ್ಲಿಯೂ ಇದೇ ಕ್ರಮವೇ ನಿಯಮೇನ ಇರುವುದೆಂದು ತಿಳಿಯಬೇಕು. ಬೇರೆ ರೀತಿ ಹೇಳುವುದು ಅಸುರಜನ ಮೋಹಕ್ಕಾಗಿ ಎಂದು ವರಾಹಪುರಾಣದಲ್ಲಿದೆ. ಸೂಕ್ಷ್ಮಸೃಷ್ಟಿಯೇ ನಿಜವಾದ ತಾರತಮ್ಯ ತಿಳಿಸುವುದು ಮುಕ್ತಿಯಲ್ಲಿ ಅದೇ ಇರುವುದು. ಮಧ್ಯದವು ತಾರತಮ್ಯ ಜ್ಞಾಪಕವಲ್ಲವೆಂದು ಭಾವ. ॥೧೨॥

**ರಜಃ ಪ್ರಧಾನಾನ್ಮಹತಸ್ತ್ರಿಲಿಂಗೋ ದೈವಚೋದಿತಾತ್ ।**
**ಜಾತಃ ಸಸರ್ಜ ಭೂತಾದಿರ್ವಿಯದಾದೀನಿ ಪಂಚ ಚ ॥೧೩॥**

ರಜಃಪ್ರಧಾನಾತ್=ಅಂದರೆ ಸಾಮ್ಯಾವಸ್ಥೆಯಲ್ಲಿ ಮೂಲರಜೋಗುಣದಲ್ಲಿ ಸೇರಿದ ರಜಸ್ಸು, ಮೂಲತಮೋಗುಣದಲ್ಲಿ ಸೇರಿದರಜಸ್ಸು, ಮೂಲಸತ್ವಗುಣದಲ್ಲಿ ಸೇರಿದ್ದ ರಜಸ್ಸು ಈ ರೀತಿಯಾಗಿ ಮೂರುವಿಧವಾದ ಎಲ್ಲ ರಜೋಗುಣವುಳ್ಳ-ದ್ದಾದ್ದರಿಂದ ರಜಃಪ್ರಧಾನಕವಾದ ಮಹತಃ=ಮಹತ್ತತ್ವಾಂತರ್ಗತ ತಮೋಭಾಗದಿಂದ (ಆ ರಜೋಭಾಗಗಳಲ್ಲಿ ಬಹುತರ ಸತ್ವವಿದೆ ಎಂದು ತಿಳಿಯೇಕು) ದೈವಚೋದಿತಾತ್ =ಅಭಿಮಾನಿದೇವತೆಗಳಿಂದ, ನಿಯಾಮಕ ಶ್ರೀಹರಿಯಿಂದ ಪ್ರೇರಿತವಾಗಿ ವಿಕಾರಗೊಳ್ಳುವುದರಿಂದ, ತ್ರಿಲಿಂಗಃ=ವೈಕಾರಿಕ ತೈಜಸ, ತಾಮಸವೆಂಬ ಮೂರು ಸ್ವರೂಪವುಳ್ಳ ಅಹಂಕಾರತತ್ವವು, ಜಾತಃ=ಹುಟ್ಟಿತು. ಭೂತಾದಿಃ=ತಾಮಸ ಅಹಂಕಾರವು ವಿಯದಾದೀನಿ ಪಂಚ=ಆಕಾಶ, ವಾಯು, ಅಗ್ನಿ, ಆಪ,

ಪೃಥಿವಿಗಳೆಂಬ ಭೂತಗಳನ್ನು ಸಸರ್ಜ=ಹುಟ್ಟಿಸಿತು. ಚಶಬ್ದದಿಂದ ತೈಜಸ ಅಹಂಕಾರವು ಹತ್ತು ಇಂದ್ರಿಯಗಳನ್ನು, ವೈಕಾರಿಕ ಅಹಂಕಾರವು ದೇವತೆಗಳ ದೇಹವನ್ನು ಮನಸ್ಸನ್ನು ಸೃಷ್ಟಿಸಿತು. ಮೂಲ ಅಹಂಕಾರದಿಂದ ಅನಂತ ಎಂದು ತಿಳಿಯಬೇಕು. ಗರುಡರುದ್ರ ಮುಂತಾದವರು ತಮ್ಮ ಪತ್ನೀಸಹಿತರಾಗಿ ಹುಟ್ಟಿದರು. ಮನೋಭಿಮಾನಿ ಅನಿರುದ್ಧಚಂದ್ರರು ವೈಕಾರಿಕಾಭಿಮಾನಿ ದೇವ ವಿಶೇಷದಿಂದ ಹುಟ್ಟಿದರು. ||೧೩||

**ತಾನಿ ಚೈಕೈಕಶಃ ಸ್ರಷ್ಟುಮಸಮರ್ಥಾನಿ ಭೌತಿಕಂ ।**
**ಸಹಂತ್ಯ ದೈವಯೋಗೇನ ಹೈಮಮಂಡಮವಾಸೃಜನ್ ||೧೪||**

ತಾನಿ=ಆ ಇಪ್ಪತ್ತಾಲ್ಕು ತತ್ವಗಳು, ಏಕೈಕಶಃ=ಒಂದೊಂದೇ (ಒಬ್ಬೊಬ್ಬರೇ) ಭೌತಿಕಂ=ಪಂಚಭೂತಾತ್ಮಕವಾದ, ಹೈಮಂ=ಬಂಗಾರಮಯವಾದ ಅಂಡಂ= ಬ್ರಹ್ಮಾಂಡವನ್ನು, ಸ್ರಷ್ಟುಂ=ಸೃಷ್ಟಿಸಲು, ಅಸಮರ್ಥಾನಿ=ಸಾಮರ್ಥ್ಯವಿಲ್ಲದವುಗಳಾಗಿ ದೈವಯೋಗೇನ=ತಮ್ಮ ಪ್ರೇರಕನಾದ ಶ್ರೀಹರಿಯ ಸಂಬಂಧದಿಂದ, ಸಂಹತ್ಯ= ಅಂಶಗಳಿಂದ ಮಿಲಿತವಾಗಿ ಅವಾಸೃಜನ್=ಸೃಷ್ಟಿಸಿದವು. ||೧೪||

ಸೃಷ್ಟಿಸಬೇಕಾದ ವಸ್ತುಗಳನ್ನು ವಿಚಾರ ಮಾಡಿ ಸೃಷ್ಟಿಸಬೇಕು ಸಹಸಾ ಅಲ್ಲ, ಎಂಬ ಅಭಿಪ್ರಾಯದಿಂದ ಶ್ರೀಹರಿಯು ಬ್ರಹ್ಮಾಂಡ ಹುಟ್ಟಿದ ಮೇಲೆ ಅದರ ಒಳಗಿನ ಸೃಷ್ಟಿಯಾಗಲಿ ಎಂದು ನೀರಿನಲ್ಲಿ ಮುಳುಗಿಸುವುದರಿಂದ ಗಟ್ಟಿಯಾಗುವುದು ಆದ್ದರಿಂದ ಬ್ರಹ್ಮಾಂಡವು ನೀರಲ್ಲಿತ್ತೆಂದು ಹೇಳುವರು–

**ಸೋಽಶಯಿಷ್ಟಾಬ್ಧಿಸಲಿಲ ಆಂಡಕೋಶೋ ನಿರಾತ್ಮಕಃ ।**
**ಸಾಗ್ರಂ ವೈ ವರ್ಷಸಾಹಸ್ರಮನ್ವವಾತ್ಸೀತ್ತಮೀಶ್ವರಃ ||೧೫||**

ಯಃ=ಯಾವ ಬ್ರಹ್ಮಾಂಡವು ನಿರಾತ್ಮಕಃ=ಮೊದಲಿಗೆ ವ್ಯಕ್ತವಾಗದಿರುವ ಪರಮಾತ್ಮಸ್ವರೂಪವುಳ್ಳ ಆಂಡಕೋಶಃ=ಬ್ರಹ್ಮಾಂಡವೋ ತಂ=ಅಲ್ಲಿ ವಿರಾಟ ಸೃಷ್ಟಿಯ ನಂತರ ಪ್ರಳಯವಾದಾಗ ಸಲಿಲೇ=ಪ್ರಳಯೋದಕದಲ್ಲಿ ವರ್ಷಸಾಹಸ್ರಂ ಅನ್ವವಾತ್ಸೀತ್=ನಿರ್ವ್ಯಾಪರನಾಗಿದ್ದನೋ ಸಃ ಈಶ್ವರಃ=ಬ್ರಹ್ಮಾಂಡಸ್ರಷ್ಟುವಾದ ಶ್ರೀಹರಿಯು ಸಾಗ್ರಂ ವರ್ಷಸಾಹಸ್ರಂ=ಒಂದು ಸಾವಿರ ವರ್ಷ ಬ್ರಹ್ಮದೇವರ ಜೊತೆಗೆ ಅಧ್ಯಶಯಿಷ್ಟ= ಮಲಗಿದನು.

ಮೊದಲು ಬ್ರಹ್ಮಾಂಡದಲ್ಲಿ ಗರ್ಭೋದಕದಲ್ಲಿ ನಿರ್ವ್ಯಾಪಾರನಾಗಿದ್ದನು ನಂತರ ಬ್ರಹ್ಮದೇವರ ಜೊತೆಗೆ ಪ್ರಳಯೋದಕದಲ್ಲಿ ಮಲಗಿದನು ಎಂದು ಅಭಿಪ್ರಾಯ.

**ನಿರಾತ್ಮಕಃ ನವ್ಯಕ್ತಸ್ತತ್ರ ಆತ್ಮಾ ।**

ಪರಮಾತ್ಮನು ವ್ಯಕ್ತನಾಗದಿದ್ದರಿಂದ ನಿರಾತ್ಮಕವೆಂದರ್ಥ. ॥೧೫॥

**ತಸ್ಯ ನಾಭೇರಭೂತ್ ಪದ್ಮಂ ಸಹಸ್ರಾರ್ಕೋರುದೀಧಿತಿ ।**
**ಸರ್ವಜೀವನಿಕಾಯೌಕೋ ಯತ್‌ತತ್ ಸ್ವಯಮಭೂತ್ ಸ್ವರಾಟ್॥**

ತಸ್ಯ=ಬ್ರಹ್ಮಾಂಡ ಗರ್ಭೋದಕದಲ್ಲಿ ಲಕ್ಷ್ಮ್ಯಾತ್ಮಕ ಪರ್ಯಂಕದಲ್ಲಿ ಕಾಲನಾಮಕ ಬ್ರಹ್ಮನ ಜೊತೆ ಮಲಗಿದ ಶ್ರೀಹರಿಯ ನಾಭೇಃ=ಹೊಕ್ಕಳಿನಿಂದ, ಸಹಸ್ರಾರ್ಕೋರು-ದೀಧಿತಿ=ಸಾವಿರ ಸೂರ್ಯರಿಗೂ ಮಿಗಿಲಾದ ಕಾಂತಿಯುಳ್ಳ, ಸರ್ವಜೀವನಿಕಾ-ಯೌಕಃ=ಎಲ್ಲ ಪ್ರಾಣಿಗಳಿಗೆ ಆಶ್ರಯಗಳಾದ ಲೋಕಗಳಿಗೆ ಉತ್ಪಾದಕವಾದ್ದರಿಂದ ಗೃಹಸ್ಥಾನೀಯವಾದ, ತತ್ ಪದ್ಮಂ=ಆ ಪದ್ಮವು ಅಭೂತ್=ಜನಿಸಿತು, ಯತ್= ಯಾವುದರಿಂದ, ಸ್ವಯಂ=ಸರ್ವ ಜೀವಪ್ರಧಾನನಾದ, ಸ್ವರಾಟ್=ಬ್ರಹ್ಮನು, ಅಭೂತ್=ಜನಿಸಿದನು. ॥೧೬॥

**ಸೋಽನುವಿಷ್ಟೋ ಭಗವತಾ ಯಃ ಶೇತೇ ಸಲಿಲಾಶಯೇ**
**ಲೋಕಸಂಸ್ಥಾಂ ಯಥಾಪೂರ್ವಂ ನಿರ್ಮಮೇ ಸಂಸ್ಥಯಾ ಸ್ವಯಾ ॥**

ಸಃ=ಪದ್ಮದಲ್ಲಿ ಜನಿಸಿದ ಬ್ರಹ್ಮದೇವರು, ಯಃ=ಯಾರು ಸಲಿಲಾಶಯೇ= ಗರ್ಭೋದಕದಲ್ಲಿ ಪ್ರಳಯೋದಕದಲ್ಲಿ, ಶೇತೇ=ಶ್ರೀಸನ್ನಿಹಿತಶೇಷಪರ್ಯಂಕದಲ್ಲಿ ಮಲಗಿರುವನೋ ಆ, ಭಗವತಾ=ಶ್ರೀಹರಿಯಿಂದ, ಅನುವಿಷ್ಟಃಸನ್=ಪ್ರವೇಶಿ ಸಲ್ಪಟ್ಟು, ಯಥಾಪೂರ್ವಂ=ಮೊದಲಿನಂತೆ, ಲೋಕಸಂಸ್ಥಾಂ=ಲೋಕಗಳ ಸ್ಥಿತಿಯನ್ನು ಸ್ವಯಾ ಸಂಸ್ಥಯಾ=ತನ್ನಲ್ಲಿರುವ ಭಗವಂತನ ಸ್ಥಿತಿಯಿಂದ ಅಂದರೆ ತನ್ನಲ್ಲಿರುವ ಭಗವಂತನ ಸ್ಥಿತಿಯ ಸಾಮರ್ಥ್ಯದಿಂದ ನಿರ್ಮಮೇ=ಹದಿನಾಲ್ಕು ಲೋಕವ್ಯವಸ್ಥೆ-ಯನ್ನು ಮಾಡಿದನು ನಿರ್ಮಿಸಿದನು.

**ಸಂಸ್ಥಯಾ ಸ್ವಯಾ ಭಗವತಃ ಸ್ಥಿತಿಸಾಮರ್ಥ್ಯೇನ ।**

ತನ್ನಲ್ಲಿರುವ ಭಗವಂತನ ಸ್ಥಿತಿಸಮಾರ್ಥ್ಯದಿಂದ ಎಂದರ್ಥ. ॥೧೭॥

**ಸಸರ್ಜ ಚ್ಛಾಯಯಾಽವಿದ್ಯಾಂ ಪಂಚಪರ್ವಾಣಮಗ್ರತಃ ।**
**ತಾಮಿಸ್ರಮಂಧತಾಮಿಸ್ರಂ ತಮೋ ಮೋಹೋ ಮಹಾತಮಃ ॥೧೮॥**

ಅಗ್ರತಃ=ಮೊದಲು, ಛಾಯಯಾ=ರಾತ್ರಿ ಎಂಬ ಛಾಯಾ ರೂಪದೇಹವನ್ನಾ-ಶ್ರಯಿಸಿ ತಾಮಿಸ್ರಃ, ಅಂಧತಾಮಿಸ್ರಃ, ತಮ, ಮಹಾಮೋಹಃ, ಮಹಾತಮಃ=ಎಂಬ ಪಂಚಪರ್ವಾಣಂ=ಐದು ಭಾಗವುಳ್ಳ, ಅವಿದ್ಯಾಂ=ಅವಿದ್ಯೆಯನ್ನು ಸಸರ್ಜ= ಸೃಷ್ಟಿಸಿದನು. ॥೧೮॥

**ವಿಸಸರ್ಜಾತ್ಮನಃ ಕಾಯಂ ನಾಭ್ಯನಂದತ್ ತಮೋಮಯಂ ।।**
**ಜಗೃಹುರ್ಯಕ್ಷರಕ್ಷಾಂಸಿ ರಾತ್ರಿಂ ಕ್ಷುತ್ತೃಟ್ಸಮುದ್ಭವಾಂ ।।೧೯।।**

ತಮೋಮಯಂ=ತಮೋಗುಣ ಪ್ರಚುರವಾದ ಆ ದೇಹವನ್ನು ನೋಡಿ ನ ಅಭ್ಯನಂದತ್=ಸಂತೋಷಗೊಳ್ಳಲಿಲ್ಲ, ಕಾರಣ, ಆತ್ಮನಃ=ತನ್ನ ಕಾಯಂ=ಛಾಯಾ-ರೂಪವಾದ ಆ ದೇಹವನ್ನು ವಿಸಸರ್ಜ=ತ್ಯಜಿಸಿದನು, ಅದು ರಾತ್ರಿಯಾಯಿತು. ಕ್ಷುತ್ತೃಟ್ಸಮುದ್ಭವಾಂ=ಹಸಿವೆನಿರಡಿಕೆಗೆ ಜನಕವಾದ ರಾತ್ರಿಂ=ರಾತ್ರಿಯನ್ನು ಯಕ್ಷರಕ್ಷಾಂಸಿ ಜಗೃಹುಃ=ಯಕ್ಷರು ರಾಕ್ಷಸರು ಸ್ವೀಕರಿಸಿದರು. ।।೧೯।।

**ಕ್ಷುತ್ತೃಡ್ಭ್ಯಾಮುಪಸೃಷ್ಟಾಸ್ತೇ ತಂ ಜಗ್ಧುಮಭಿದುದ್ರುವುಃ ।**
**ಮಾ ರಕ್ಷತೈನಂ ಜಕ್ಷಧ್ವಮಿತ್ಯುಚ್ಚೈಃ ಕ್ಷುತ್ತೃಡರ್ದಿತಾಃ ।।೨೦।।**

ಕ್ಷುತ್ತೃಡ್ಭ್ಯಾಂ=ಹಸಿವೆ ನೀರಡಿಕೆಗಳಿಂದ ಉಪಸೃಷ್ಟಾಃ=ಉಪದ್ರವಕ್ಕಿಡಾದ ತೇ= ಯಕ್ಷರಾಕ್ಷಸರು, ಯತಃ=ಯಾವ ಕಾರಣ, ವಯಂ=ನಾವು ಕ್ಷುತ್ತೃಡರ್ದಿತಾಃ ಅತಃ=ಹಸವಿನೀರಡಕೆಗಳಿಂದ ಬಳಲುತ್ತಿರುವಾದ ಕಾರಣ, ಏನಂ ಮಾ ರಕ್ಷತ=ತಂದೆ ಎಂದು ದಯೆಯಿಂದ ರಕ್ಷಿಸಬೇಡಿರಿ ಎಂದು ಕೆಲವರು ಜಕ್ಷಧ್ವಂ=ತಿನ್ನಿರಿ ಎಂದು ಹಲವರು, ಉಚ್ಚೈಃ=ಗಟ್ಟಿಯಾಗಿ ವದಂತಃ=ಹೇಳುತ್ತ ತಂ=ಬ್ರಹ್ಮದೇವರನ್ನು ಜಗ್ಧುಂ= ತಿನ್ನಲು ಅಭಿದುದ್ರುವುಃ=ಓಡಿದರು. ।।೨೦।।

**ದೇವಸ್ತಾನಾಹ ಸಂವಿಗ್ನೋ ಮಾ ಮಾ ಜಕ್ಷತ ರಕ್ಷತ ।**
**ಅಹೋ ಮೇ ಯಕ್ಷರಕ್ಷಾಂಸಿ ಪ್ರಜಾ ಯೂಯಂ ಭವಿಷ್ಯಥ ।।೨೧।।**

ದೇವಃ=ಬ್ರಹ್ಮದೇವನು, ತಾನ್=ಯಕ್ಷರಾಕ್ಷಸರನ್ನು ಕುರಿತು ಸಂವಿಗ್ನಃ=ಭೀತನಾಗಿ ಮಾ=ನನ್ನನ್ನು, ಮಾ ಜಕ್ಷತ=ತಿನ್ನ ಬೇಡಿರಿ, ರಕ್ಷತ=ರಕ್ಷಿಸಿರಿ. ಅಹೋ=ಆಶ್ಚರ್ಯ ! ಯೂಯಂ ಮೇ ಪ್ರಜಾಃ=ನೀವು ನನ್ನ ಮಕ್ಕಳು ಕಾರಣ ತಿನ್ನುವುದು ಅಯುಕ್ತ. ನಿಮ್ಮಲ್ಲಿ ಯಾರು ಜಕ್ಷತ ಎಂದಿರೋ ಅವರು ಯಕ್ಷರು ಯಾರು ರಕ್ಷತ ಎಂದಿರೋ ಅವರು ರಾಕ್ಷಸರು ಹೀಗೆ ಯಕ್ಷರಕ್ಷಾಂಸಿ ಭವಿಷ್ಯಥ=ಯಕ್ಷರು ರಾಕ್ಷಸರು ಆಗಿರಿ ಎಂದು ಆಹ=ಹೇಳಿದನು. ।।೨೧।।

**ದೇವತಾಃ ಪ್ರಭಯಾ ಯಾ ಯಾ ದಿವ್ಯಾಃ ಪ್ರಮುಖತೋಽಸೃಜತ್ ।**
**ತೇಽಹಾರ್ಷುರ್ದೇವಯಂತೋಽಪಿ ವಿಸೃಷ್ಟಾಂ ತಾಂ ಪ್ರಭಾಮಹಃ ।।**

ಪ್ರಭಯಾ ಕಾಂತಿರೂಪವಾದ (ವಿದ್ಯಾರೂಪವಾದ ದೇಹದಿಂದ) ಪ್ರಮುಖತಃ= ಮುಂಭಾಗದಿಂದ, ಯಾಃ ಯಾಃ ದಿವ್ಯಾಃ=ಯಾರ್ಯಾರು ಸ್ವರ್ಗದಲ್ಲಿರುವರೋ, ತಾಃ

ತಾಃ=ಆ ಆ ದೇವತಾಃ=ದೇವತೆಗಳನ್ನು ಅಸೃಜತ್=ಸೃಷ್ಟಿಸಿದನು. ಅದು ಆ ದೇಹವು ಅಹಃ ಅಭವತ್= ಹಗಲಾಯಿತು, ವಿಸೃಷ್ಟಾಂ ತಾಂ=ಬಿಡಲ್ಪಟ್ಟ ಆ ಹಗಲಾದ, ಪ್ರಭಾಂ=ಪ್ರಭಾನಾಮಕದೇಹವನ್ನು ದೇವಯಂತೋಽಪಿ=ಕಾಂತಿಯುಳ್ಳವರಾಗಿದ್ದರೂ, ತೇ=ದೇವತೆಗಳು ಆಹಾರ್ಷುಃ=ಸ್ವೀಕರಿಸಿದರು. ॥೨೨॥

**ದೇವೋಽದೇವಾನ್ ಜಘನತಃ ಸೃಜತಿ ಸ್ಮಾತಿಲೋಲುಪಾನ್ ।**
**ತ ಏನಂ ಲೋಲುಪತಯಾ ಮೈಥುನಾಯಾಭಿಪೇದಿರೇ ॥೨೩॥**

ದೇವಃ=ಬ್ರಹ್ಮದೇವನು, ಜಘನತಃ=ಪ್ರಭಾ ಎಂಬ ಶರೀರದ ಕೊನೆಯ ಭಾಗದಿಂದ ಅಂದರೆ ಛಾಯಾಪ್ರಭಾಗಳ ಸಂಧಿದೇಶದಿಂದ, ಅತಿಲೋಲುಪಾನ್=ವಿಷಯಲಂಪಟರಾದ, ಅದೇವಾನ್=ಅಸುರರನ್ನು ಸೃಜತಿ ಸ್ಮ=ಸೃಷ್ಟಿಸಿದನು. ತೇ=ಅವರು, ಲೋಲುಪತಯಾ=ವಿಷಯಲಂಪಟತೆಯಿಂದ, ಏನಂ=ಬ್ರಹ್ಮದೇವನನ್ನು ಮೈಥುನಾಯ ಅಭಿಪೇದಿರೇ=ಜೊತೆಗೆ ಮೈಥುನ ಮಾಡಲು ಬಂದರು. ॥೨೩॥

**ತತೋ ಹಸನ್ ಸ ಭಗವಾನಸುರೈರ್ನಿರಪತ್ರಪೈಃ ।**
**ಅನ್ವೀಯಮಾನಸ್ತರಸಾ ಕ್ರುದ್ಧೋ ಭೀತಃ ಪರಾಪತತ್ ॥೨೪॥**

ತತಃ=ನಂತರ, ಹಸನ್=ನಗುತ್ತ, ಸಃ ಭಗವಾನ್=ಬ್ರಹ್ಮದೇವರು, ನಿರಪತ್ರಪೈಃ=ನಿರ್ಲಜ್ಜರಾದ, ಅಸುರೈಃ=ಅಸುರರಿಂದ, ತರಸಾ ಅನ್ವೀಯಮಾನಃ=ವೇಗದಿಂದ ಹಿಂಬಾಲಿಸಲ್ಪಟ್ಟವನಾಗಿ, ಕ್ರುದ್ಧಃ=ಕುಪಿತನಾಗಿ, ಭೀತಃ=ಹೆದರಿದವನಾಗಿ, ತತಃ=ಅಲ್ಲಿಂದ, ಪರಾಪತತ್=ಓಡಿದನು. ॥೨೪॥

**ಸ ಉಪವ್ರಜ್ಯ ವರದಂ ಪ್ರಪನ್ನಾರ್ತಿಹರಂ ಹರಿಂ ।**
**ಅನುಗ್ರಹಾಯ ಭಕ್ತಾನಾಮನುರೂಪಾತ್ಮದರ್ಶನಂ ॥೨೫॥**

ಸಃ=ಬ್ರಹ್ಮದೇವರು, ಭಕ್ತಾನಾಂ=ಭಕ್ತರಿಗೆ, ಅನುಗ್ರಹಾಯ=ಅನುಗ್ರಹ, ಮಾಡಲು, ಅನುರೂಪಾತ್ಮದರ್ಶನಂ=ಭಕ್ತರ ಯೋಗ್ಯತೆಗನುಸರಸಿ ತನ್ನ ದರ್ಶನವೀವ ಪ್ರಪನ್ನಾರ್ತಿಹರಂ=ಶರಣಾಗತರ ದುಃಖಪರಿಹಾರಕನಾದ, ವರದಂ=ವರವನ್ನು ನೀಡುವ, ಹರಿಂ ಉಪವ್ರಜ್ಯ=ಹೊಂದಿ ಅಸ್ತೌಷೀತ್=ಶ್ರೀಹರಿಯನ್ನು ಸ್ತುತಿಸಿದರು. ॥೨೫॥

**ಪಾಹಿ ಮಾಂ ಪರಮಾತ್ಮಂಸ್ತೇ ಪ್ರೇಕ್ಷಣೇನಾಸೃಜಂ ಪ್ರಜಾಃ ।**
**ತಾ ಇಮಾ ಯಭಿತುಂ ಪಾಪಾ ಉಪಕ್ರಾಮಂತಿ ಮಾಂ ಪ್ರಭೋ ॥**

ಹೇ ಪರಮಾತ್ಮನ್=ಶ್ರೀಹರಿಯೇ, ತೇ ಪ್ರೇಕ್ಷಣೇನ=ನಿನ್ನ ಇಚ್ಛೆಯಿಂದ, (ಇಚ್ಛಾನುಸಾರ) ಪ್ರಜಾಃ ಅಸೃಜಂ=ಪ್ರಜೆಗಳನ್ನು ಸೃಷ್ಟಿಸಿದೆನು, ಪಾಪಾಃ ತಾಃ ಇಮಾಃ

=ಪಾಪಿಗಳಾದ ಈ ಪ್ರಜೆಗಳು, ಮಾಂ ಯಭಿತುಂ ಉಪಕ್ರಾಮಂತಿ=ಮೈಥುನ ಮಾಡಲು ಪ್ರಾರಂಭಿಸುವರು, ಪ್ರಭೊ ಮಾಂ ಪಾಹಿ=ಸ್ವಾಮಿಯೇ ನನ್ನನ್ನು ರಕ್ಷಿಸು.

**ತ್ವಮೇಕಃ ಕಿಲ ಲೋಕಾನಾಂ ಕ್ಲಿಷ್ಟಾನಾಂ ಕ್ಲೇಶನಾಶನಃ ।**
**ತ್ವಮೇಕಃ ಕ್ಲೇಶದಸ್ತೇಷಾಮನಾಸನ್ನಪದಾಂ ತವ ॥೨೭॥**

ಕ್ಲಿಷ್ಟಾನಾಂ=ಕಷ್ಟಕ್ಕೀಡಾದ, ಲೋಕಾನಾಂ=ಜನರ, ಕ್ಲೇಶನಾಶನಃ=ದುಃಖಕಳೆಯುವವನು, ತ್ವಂ ಏಕಃ ಕಿಲ=ನೀನೊಬ್ಬನೇ ತಾನೇ. ತವ=ನಿನ್ನ ಅನಾಸನ್ನಪದಾಂ=ಪಾದಗಳನ್ನು ಪಡೆಯದಿರುವ, ತೇಷಾಂ=ಜನರಿಗೆ ಕ್ಲೇಶದಃ=ಕಷ್ಟಕೊಡುವವನೂ, ತ್ವಂ ಏಕಃ ನೀನೊಬ್ಬನೇ ಎಂದು ಸ್ತುತಿಸಿದನು. ॥೨೭॥

**ಸೋಽವಧಾರ್ಯಾಸ್ಯ ಕಾರ್ಪಣ್ಯಂ ವಿವಿಕ್ತಾಧ್ಯಾತ್ಮದರ್ಶನಃ ।**
**ವಿಮುಂಚಾತ್ಮತನುಂ ಘೋರಾಮಿತ್ಯುಕ್ತೋ ವಿಮುಮೋಚ ಹ ॥೨೮॥**

ವಿವಿಕ್ತಾಧ್ಯಾತ್ಮದರ್ಶನಃ=ಇತರೆಲ್ಲ ಅಧಿಕಾರಿಗಳಿಗಿಂತ ಉತ್ತಮವಾದ ಬ್ರಹ್ಮದೇವರ ದೇಹದಲ್ಲಿರುವ ಅಂತಃಕರಣವನ್ನರಿತ (ಬ್ರಹ್ಮದೇವರ ಮನೋಗತವನ್ನಿರಿತ ಎಂದರ್ಥ) ತಾನು ಸ್ವಯಂ=ಸಮರ್ಥನಾಗಿದ್ದರೂ ನನ್ನ ಪ್ರೀತಿಗಾಗಿ ಹೀಗೆ ಮಾಡುವನೆಂದು ತಿಳಿದು, ಸಃ=ಶ್ರೀಹರಿಯು, ಅಸ್ಯ=ಬ್ರಹ್ಮದೇವನ, ಕಾರ್ಪಣ್ಯಂ=ಕಷ್ಟವನ್ನು, ಅವಧಾರ್ಯ=ಕೇಳಿ, ಘೋರಾಂ=ಭಯಜನಕವಾದ, ತನುಂ=ದೇಹವನ್ನು, ವಿಮುಂಚ=ಬಿಡು, ಇತ್ಯುಕ್ತಃ=ಈ ರೀತಿ ಹೇಳಲ್ಪಟ್ಟು, ಆತ್ಮತನುಂ=ತನ್ನ ದೇಹವನ್ನು ವಿಮುಮೋಚ= ತ್ಯಜಿಸಿದನು ಸಃ=ಆ ಶರೀರವು ಸಾಯಂತನೀ ಸಂಧ್ಯಾ ಅಭವತ್=ಸಾಯಂಕಾಲದ ಸಂಧಿಕಾಲವಾಯಿತು. ಬ್ರಹ್ಮದೇವರಿಗೆ ಪೀಡೆ ಆಗದಿರಲೆಂದು ಶ್ರೀಹರಿಯು ಅಸುರ ಮೋಹನೆಗಾಗಿ ಆ ಸಂಧ್ಯಾವನ್ನು ಒಳ್ಳೆಯ ಸ್ತ್ರೀಯಾಗಿ ತೋರಿಸಿದನು.

ಇಲ್ಲಿ ಶ್ರೀಹರಿ ಹೇಳಿದಂತೆ ದೇಹವನ್ನು ತ್ಯಜಿಸಿದನು ಎಂದು ಹೇಳಿದ್ದರಿಂದ ಮೊದಲು ಬ್ರಹ್ಮನಿಗೆ ಅಜ್ಞಾನ ಮತ್ತು ಅಶಕ್ತಿಯಿಂದ ಓಡುವುದು ಕಂಡು ಬರುವುದು. ಅದು ನಿಜವಲ್ಲ.ಕೇವಲ ಅಸುರ ಮೋಹನೆಗಾಗಿ. ಕೆಲವುಸಲ ಈ ರೀತಿ ನಟಿಸಬೇಕು ಎಂಬ ಶ್ರೀಹರಿಯ ಅಭೀಷ್ಟವನ್ನರಿತೆ ಬ್ರಹ್ಮದೇವರು ತೋರಿಸಿದ್ದೆಂಬ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು –

**ಜಾನನ್ನಪಿ ಸಮರ್ಥೋಽಪಿ ಕ್ವಚಿದ್ ಬ್ರಹ್ಮಾ ಹರೇಃ ಪ್ರಿಯಂ ।**
**ಜ್ಞಾತ್ವಾ ಕರೋತಿ ಕರ್ಮಾಣಿ ಹ್ಯಜ್ಞವಚ್ಚಾಪ್ಯಶಕ್ತವತ್ ॥ ಇತಿ ಚ ।**

**ವ್ಯಸೃಜನ್ಮಲವದ್ದೇಹಂ ಬಾಹ್ಯಂ ನ ತು ನಿಜಂ ಪುರಾ ।**
**ಬ್ರಹ್ಮಾ ತಚ್ಚಾಹರಾದಿತ್ವಂ ಪ್ರಾಪ ದೇವಾದಿದೈವತಂ ॥ ಇತಿ ಕೌರ್ಮೇ ॥**

ಎಲ್ಲವನ್ನು ತಿಳಿದಿದ್ದರೂ ಕಷ್ಟಪರಿಹರಿಸಿಕೊಳ್ಳಲು ಸಮರ್ಥನಾಗಿದ್ದರೂ ಬ್ರಹ್ಮ ದೇವನು ಶ್ರೀಹರಿಯ ಪ್ರೀತಿಯಾಗುವುದೆಂದು ತಿಳಿದು ಅಜ್ಞಾನಿಯಂತೆ ಅಶಕ್ತನಂತೆ ಕಾರ್ಯಗಳನ್ನು ಮಾಡುವನು. ಇಲ್ಲಿ ಬ್ರಹ್ಮದೇಹತ್ಯಾಗ, ಅದನ್ನು ದೇವತೆಗಳು ಸ್ವೀಕರಿಸಿದರೆಂದು ಹೇಳಿದರಷ್ಟೇ ಅದು ಹೇಗೆ ಸಾಧ್ಯ? ಬ್ರಹ್ಮದೇವನಿಗೆ ಅನೇಕ ದೇಹತ್ಯಾಗನಿಮಿತ್ತ ದುಃಖವಾಗಬೇಕಾಗುವುದು. ದೇವತೆಗಳಿಗೆ ತಮ್ಮ ತಮ್ಮ ಶರೀರವಿರುವಾಗ ಹಗಲನ್ನು ಶರೀರವಾಗಿ ಸ್ವೀಕರಿಸುವುದು ಅಸಂಭಾವಿತವು ಎಂಬ ಶಂಕೆಯನ್ನು ವ್ಯಸೃಜತ್ ಎಂಬ ಪ್ರಮಾಣದಿಂದ ಹೇಳುವರು. ಕಷ್ಟವಿಲ್ಲದೆ ಬ್ರಹ್ಮದೇವನು, ಪುರಾ=ಸೃಷ್ಟಿಕಾಲದಲ್ಲಿ ಬಾಹ್ಯಂ ದೇಹಂ ಮಲವತ್‌ವ್ಯಸೃಜತ್ ಅಧಿಷ್ಠಾನವಾಗಿ ತತ್ಕಾಲದಲ್ಲಿ ಸ್ವೀಕರಿಸಿದ ದೇಹವನ್ನು ಮಲದಂತೆ ತ್ಯಜಿಸಿದನು, ತಚ್ಚ =ಅದೇ ದೇಹಸಮೂಹವು ದೇವಾದಿದೈವತಂ ಅಹರಾದಿತ್ವಂ ಪ್ರಾಪ=ದೇವತೆಗಳೇ ಅಭಿಮಾನಿಗಳಾಗಿವುಳ್ಳ ಹಗಲು ಮುಂತಾಗಿ ಆಯಿತು ಎಂದು ಭಾವ. ॥೨೮॥

**ತಾಂ ಕ್ವಣಚ್ಚರಣಾಂಭೋಜಾಂ ಮದವಿಹ್ವಲಲೋಚನಾಂ ।**
**ಕಾಂಚೀಕಲಾಪವಿಲಸದ್ದುಕೂಲಚ್ಛನ್ನರೋದಸಂ ॥೨೯॥**

ಕ್ವಣಚ್ಚರಣಾಂಭೋಜಾಂ=ನೂಪರ (ಗೆಜ್ಜೆ) ಗಳಿಂದ ಶಬ್ದ ಮಾಡುವ ಕಮಲ-ದಂತಿರುವ ಕಾಲುಗಳುಳ್ಳ, ಮದವಿಹ್ವಲಲೋಚನಾಂ=ಮದದಿಂದ ಚಂಚಲವಾದ ಕಣ್ಣುಗಳುಳ್ಳ, ಕಾಂಚೀಕಲಾಪೇನ=ವಡ್ಯಾಣ (ಡಾಬು) ವೆಂಬ ಆಭರಣದಿಂದ, ವಿಲಸತ್=ಶೋಭಿಸುವ, ದುಕೂಲ=ವಸ್ತ್ರದಿಂದ ಛನ್ನ=ಆಚ್ಛಾದಿತವಾದ ರೋಧಸಂ= ಕಟಿತಟಿ (ಸೊಂಟ)ವುಳ್ಳ ॥೨೯॥

**ಅನ್ಯೋನ್ಯಾಶ್ಲೇಷಯೋತ್ತುಂಗನಿರಂತರಪಯೋಧರಾಂ ।**
**ಸುನಾಸಾಂ ಸುದ್ವಿಜಾಂ ಸ್ನಿಗ್ಧಹಾಸಲೀಲಾವಲೋಕನಾಂ ॥೩೦॥**

ಅನ್ಯೋನ್ಯಾಶ್ಲೇಷಯಾ=ಪರಸ್ಪರ ಸಂಬಂಧದಿಂದ, ಉತ್ತುಂಗ=ಉನ್ನತಗಳಾದ, ನಿರಂತರ=ಅವಕಾಶರಹಿತವಾದ ಪಯೋಧರಾಂ=ಸ್ತನಗಳುಳ್ಳ,ಸುನಾಸಾಂ=ಸಂಪಿಗೆ-ಯಂತೆ ಉದ್ದಾದ ಮೂಗುಳ್ಳ, ಸುದ್ವಿಜಾಂ=ದಾಳಿಂಬೆಯಂತೆ ಸುಂದರ ಹಲ್ಲುಗಳುಳ್ಳ, ಸ್ನಿಗ್ಧ=ಸ್ನೇಹಪೂರಿತವಾದ ಹಾಸಾವಲೋಕನಾಂ=ಮಂದಹಾಸ-ಯುತವಾದ ನೋಟವುಳ್ಳ ॥೩೦॥

**ಗೂಹಂತೀಂ ವ್ರೀಡಯಾಽಽತ್ಮಾನಂ ನೀಲಾಲಕವರೂಥಿನೀಂ ।**
**ಉಪಲಭ್ಯಾಸುರಾಃ ಸಂಧ್ಯಾಂ ಸರ್ವೇ ತಾಂ ಮುಮುಹುಃ ಸ್ತ್ರಿಯಂ ॥**

ವ್ರೀಡಯಾ=ಲಜ್ಜೆಯಿಂದ, ಆತ್ಮಾನಂ=ತನ್ನನ್ನು ಗೂಹಂತೀಂ=ಅಡಗಿಸಿಕೊಳ್ಳುವ, ನೀಲಾಲಕವರೂಥಿನೀಂ=ಕಪ್ಪಾದಕೂದಲುಗಳ ಸಮೂಹವುಳ್ಳ, ಸಂಧ್ಯಾಂ ಸ್ತ್ರೀಯಂ =ಸ್ತ್ರೀಯಾಗಿರುವ ಬ್ರಹ್ಮನು ತ್ಯಜಿಸಿದ ಸಂಧ್ಯಾನಾಮಕದೇಹವನ್ನು, ಉಪಲಭ್ಯ= ಹೊಂದಿ, ಅಸುರಾಃ=ದೈತ್ಯರು ತಾಂ=ಆ ಹೆಣ್ಣನ್ನು, ಮುಮುಹುಃ=ಮೋಹಿಸಿದರು ॥೩೧॥

**ಅಹೋ ರೂಪಮಹೋ ಧೈರ್ಯಮಹೋ ಅಸ್ಯಾ ನವಂ ವಯಃ ।**
**ಮಧ್ಯೇ ಕಾಮಯಮಾನಾನಾಮಕಾಮೇವ ವಿಸರ್ಪತಿ ॥೩೨॥**

ಅಹೋ ರೂಪಂ=ಏನಿವಳ ರೂಪ ಅಹೋ ಧೈರ್ಯಂ=ಏನಿದು ಧೈರ್ಯ ಅಸ್ಯಾಃ=ಇವಳ ನವಂ ವಯಃ=ಏನು ಯೌವನ, ಕಾಮಯಮಾನಾನಾಂ ಮಧ್ಯೇ ಅಪೇಕ್ಷಿಸುವ ನಮ್ಮ ಮಧ್ಯದಲ್ಲಿ, ಅಕಮಾ ಇವ=ಕಾಮನೆ ಇಲ್ಲದವಳಂತೆ, ವಿಸರ್ಪತಿ =ಸಂಚರಿಸುವಳು, ಅಹೋ= ಆಶ್ಚರ್ಯ ! ॥೩೨॥

**ವಿತರ್ಕಯಂತೋ ಬಹುಧಾ ತಾಂ ಸಂಧ್ಯಾಂ ಪ್ರಮದಾಯತೀಂ ।**
**ಅಭಿಸಂಭಾವ್ಯ ವಿಸ್ರಂಭಾತ್ ಪರ್ಯಪೃಚ್ಛನ್ ಕುಮೇಧಸಃ ॥೩೩॥**

ಬಹುಧಾ=ಅನೇಕ ರೀತಿಯಾಗಿ ವಿತರ್ಕಯಂತಃ=ವಿಚಾರ ಮಾಡಿ,ಪ್ರಮಾದಾ-ಯತೀಂ ತಾಂ ಸಂಧ್ಯಾಂ=ಸ್ತ್ರೀಯಂತಾಚರಿಸುವ ಸಂಧ್ಯಾ ಎಂಬುವಳನ್ನು, ಅಭಿಸಂಭಾವ್ಯ=ಸಮೀಪಿಸಿ, ವಿಸ್ರಂಭಾತ್=ಪ್ರೇಮದಿಂದ, ಕುಮೇಧಸಃ= ದುಷ್ಟಬುದ್ಧಿಗಳುಳ್ಳ, ಅಸುರರು, ಪರ್ಯಪೃಚ್ಛನ್=ಪ್ರಶ್ನಿಸಿದರು. ॥೩೩॥

**ಕಾಽಸಿ ಕಸ್ಯಾಸಿ ರಂಭೋರು ಕೋ ವಾರ್ಥಸ್ತೇಽತ್ರ ಭಾಮಿನಿ ।**
**ರೂಪದ್ರವಿಣಪಣ್ಯೇನ ದುರ್ಭಗಾನ್ ನೋ ವಿಬಾಧಸೇ ॥೩೪॥**

ಹೇ ರಂಭೋರು=ಏ ಬಾಳೆಯ ದಿಂಡಿನಂತಿರುವ ತೊಡೆಯುಳ್ಳವಳೆ, ತ್ವಂ ಕಾ ಅಸಿ=ನೀನಾರು ? ಕಸ್ಯಾಸಿ=ಯಾರ ಮಗಳು ? ಹೇ ಭಾಮಿನಿ=ಕಾಂತಿ ಸಂಪನ್ನಳೇ, ಅತ್ರ=ಇಲ್ಲಿ ತಿರುಗಲು, ತೇ=ನಿನಗೆ ಕಃ ಅರ್ಥಃ=ಏನು ಪ್ರಯೋಜನ ?, ರೂಪದ್ರವಿಣಪಣ್ಯೇನ=ರೂಪವೆಂಬ ಬೆಲೆಯಿಲ್ಲದ ಮಾರಾಟದ ವಸ್ತುವಿನಿಂದ ದುರ್ಭಗಾನ್=ಅದನ್ನು ಸ್ವೀಕರಿಸುವ ಭಾಗ್ಯವಿಲ್ಲದ (ನಿನ್ನಸಂಗ ಮಾಡುವ ಭಾಗ್ಯವಿಲ್ಲದ)ನಃ=ನಮ್ಮನ್ನು ವಿಬಾಧಸೇ=ಪಿಡಿಸುವಿ (ಕಾಮಬಾಣಕ್ಕೆ ಗುರಿ ಮಾಡುವಿ) ॥೩೪॥

**ಯಾ ವಾ ಕಾऽಸಿ ತ್ವಮಬಲೇ ದಿಷ್ಟ್ಯಾ ಸಂದರ್ಶನಂ ತವ ।**
**ಉದ್ಧುನೋಷೀಕ್ಷಮಾಣಾನಾಂ ಕಂದುಕಕ್ರೀಡಯಾ ಮನಃ ॥೩೫॥**

ಹೇ ಅಬಲೇ=ಎಲೆ ಬಾಲಕಿಯೇ ಯಾ ವಾ ಕಾऽಸಿ=ಯಾರವಳು ಎಲ್ಲಿಯವಳೋ ಆಗಿರುವಿ ಆದರೂ ದಿಷ್ಟ್ಯಾ=ದೈವದಿಂದ ತವ=ನಿನ್ನ ಸಂದರ್ಶನಂ=ದರ್ಶನವಾಗಿದೆ, ಕಂದುಕಕ್ರೀಡಯಾ=ಚಂಡಿನಾಟದಿಂದೇ ಈಕ್ಷಮಾಣಾನಾಂ=ನೋಡುವರ, ಮನಃ= ಮನಸ್ಸನ್ನು ಉದ್ಧುನೋಷಿ=ಮಥನಮಾಡುವಿ (ಕ್ಷೋಭೆಗೊಳಿಸುವಿ ಎಂದರ್ಥ)

ಚಂಡಿನಾಟದಿಂದ ಮನಸ್ಸಿನಕ್ಷೋಭೆ ಯಾಕೆ ? ಎಂದರೆ ವರ್ಣಿಸುವರು -

**ನೈಕತ್ರ ತೇ ಜಯತಿ ಶಾಲಿನಿ ಪಾದಪದ್ಮಂ**
**ಘ್ನಂತ್ಯಾ ಮುಹುಃ ಕರತಲೇನ ಪತತ್ಪತಂಗಮ್ ।**
**ಮಧ್ಯಂ ವಿಷೀದತಿ ಬೃಹತ್ಸ್ತನಭಾರಭೀತಂ**
**ಶಾಂತಾ ಚ ದೃಷ್ಟಿರಮಲಃ ಸುಜಟಾವರೂಥಃ ॥೩೬॥**

ಹೇ ಶಾಲಿನಿ=ಹೆಂಡತಿಯೇ ತೇ=ನಿನ್ನ ಪಾದಪದ್ಮಂ=ಕಮಲದಂತಿರುವ ಕಾಲುಗಳು ಏಕತ್ರ ನ ಜಯತಿ=ಒಂದೆಡೆ ಸ್ಥಿರವಾಗಿ ನಿಲ್ಲಲಾರವು. ಅಥವಾ ನೈಕತ್ರ= ಅನೇಕ ಗತಿವಿಲಾಸಗಳಲ್ಲಿ ಜಯತಿ=ಉತ್ಕೃಷ್ಟವಾಗಿದೆ. ವಿಜಯಧ್ವಜರ ಪ್ರಕಾರ, ಪತತ್ಪತಂಗಂ=ಮೇಲೆ ಕೆಳಗೆ ಹಾರಾಡುವ ಚಂಡು ತೇಪಾದಪದ್ಮಂ ಜಯತಿ=ನಿನ್ನ ಕಾಲಿಗೆ ಬಂದೆರಗುವುದು ಪತತ್ಪತಂಗಂ ಕರತಲೇನ ಘ್ನಂತ್ಯಾಃ=ಹಾರಾಡುವ ಚಂಡನ್ನು ಕೈಯಿಂದ ಮುಹುಃ=ಪುನಃ ಪುನಃ ಘ್ನತ್ಯಾಃ=ಹೊಡೆಯುತ್ತಿರುವ. ಬೃಹತ್ಸ್ತನಭಾರಭೀತಂ=ದೊಡ್ಡವಾದ ಕುಚಗಳ ಭಾರದಿಂದ ಹೆದರಿದ, ಮಧ್ಯಂ= ಟೊಂಕವು ವಿಷೀದತಿ=ಕೃಶವಾದುದರಿಂದ ದುಃಖ ಪಡುವಂತೆ ಕಾಣುವುದು, ದೃಷ್ಟಿಃ =ನೋಟವು, ಶಾಂತಾ=ಶ್ಲಾಘಿತವಾಗಿದೆ ಸುಜಟಾವರೂಥಃ ಜಡೆಯು, ಅಮಲಃ= ಮುಕ್ತವಾಗಿದೆ. "ಮಲಬಂಧನೆ" ಎಂದು ಧಾತುವಿದೆ ಹೆರಳಿನಗಂಟು ಬಿಚ್ಚಿದೆ ಎಂದರ್ಥ ಕಾರಣ ಮನಸ್ಸನ್ನು ಮಥನ ಮಾಡುವಿ ಎಂದು ಭಾವ ॥೩೬॥

**ಇತಿ ಸಾಯಂತನೀಂ ಸಂಧ್ಯಾಮಸುರಾಃ ಪ್ರಮದಾಯತೀಂ ।**
**ಪ್ರಲೋಭಯಂತೀಂ ಜಗೃಹುರ್ಮತ್ವಾ ಮೂಢಧಿಯಃ ಸ್ತ್ರಿಯಂ ॥೩೭॥**

ಮೂಢಧಿಯಃ=ಮೂರ್ಖಬುದ್ಧಿಗಳಾದ, ಅಸುರಾಃ=ದೈತ್ಯರು, ಇತಿ=ಈ ರೀತಿಯಾಗಿ, ಪ್ರಮದಾಯತೀಂ=ಸ್ತ್ರೀಯಂತೆ ಆಚರಿಸುವ, ಪ್ರಲೋಭಯಂತೀಂ= ಆಶೆಯನ್ನು ಹುಟ್ಟಿಸುವ, ಸಾಯಂತನೀ ಸಂಧ್ಯಾಂ=ಸಂಜೆಯ ಸಂಧಿಕಾಲವನ್ನು ಸ್ತ್ರೀಯಂ ಮತ್ವಾ=ಹೆಣ್ಣೆಂದು ತಿಳಿದು, ಜಗೃಹುಃ=ಸ್ವೀಕರಿಸಿದರು. ॥೩೭॥

**ಗೂಹಂತೀಂ ವ್ರೀಡಯಾऽऽತ್ಮಾನಂ ನೀಲಾಲಕವರೂಥಿನೀಂ ।**
**ಉಪಲಭ್ಯಾಸುರಾಃ ಸಂಧ್ಯಾಂ ಸರ್ವೇ ತಾಂ ಮುಮುಹುಃ ಸ್ತ್ರಿಯಂ ॥**

ವ್ರೀಡಯಾ=ಲಜ್ಜೆಯಿಂದ, ಆತ್ಮಾನಂ=ತನ್ನನ್ನು ಗೂಹಂತೀಂ=ಅಡಗಿಸಿಕೊಳ್ಳುವ, ನೀಲಾಲಕವರೂಥಿನೀಂ=ಕಪ್ಪಾದಕೂದಲುಗಳ ಸಮೂಹವುಳ್ಳ, ಸಂಧ್ಯಾಂ ಸ್ತ್ರೀಯಂ =ಸ್ತ್ರೀಯಾಗಿರುವ ಬ್ರಹ್ಮನು ತ್ಯಜಿಸಿದ ಸಂಧ್ಯಾನಾಮಕದೇಹವನ್ನು, ಉಪಲಭ್ಯ= ಹೊಂದಿ, ಅಸುರಾಃ=ದೈತ್ಯರು ತಾಂ=ಆ ಹೆಣ್ಣನ್ನು, ಮುಮುಹುಃ=ಮೋಹಿಸಿದರು ॥೩೧॥

**ಅಹೋ ರೂಪಮಹೋ ಧೈರ್ಯಮಹೋ ಅಸ್ಯಾ ನವಂ ವಯಃ ।**
**ಮಧ್ಯೇ ಕಾಮಯಮಾನಾನಾಮಕಾಮೇವ ವಿಸರ್ಪತಿ ॥೩೨॥**

ಅಹೋ ರೂಪಂ=ಏನಿವಳ ರೂಪ ಅಹೋ ಧೈರ್ಯಂ=ಏನಿದು ಧೈರ್ಯ ಅಸ್ಯಾಃ=ಇವಳ ನವಂ ವಯಃ=ಏನು ಯೌವನ, ಕಾಮಯಮಾನಾನಾಂ ಮಧ್ಯೇ ಅಪೇಕ್ಷಿಸುವ ನಮ್ಮ ಮಧ್ಯದಲ್ಲಿ, ಅಕಮಾ ಇವ=ಕಾಮನೆ ಇಲ್ಲದವಳಂತೆ, ವಿಸರ್ಪತಿ =ಸಂಚರಿಸುವಳು, ಅಹೋ= ಆಶ್ಚರ್ಯ ! ॥೩೨॥

**ವಿತರ್ಕಯಂತೋ ಬಹುಧಾ ತಾಂ ಸಂಧ್ಯಾಂ ಪ್ರಮದಾಯತೀಂ ।**
**ಅಭಿಸಂಭಾವ್ಯ ವಿಸ್ರಂಭಾತ್ ಪರ್ಯಪೃಚ್ಛನ್ ಕುಮೇಧಸಃ ॥೩೩॥**

ಬಹುಧಾ=ಅನೇಕ ರೀತಿಯಾಗಿ ವಿತರ್ಕಯಂತಃ=ವಿಚಾರ ಮಾಡಿ,ಪ್ರಮಾದಾ- ಯತೀಂ ತಾಂ ಸಂಧ್ಯಾಂ=ಸ್ತ್ರೀಯಂತಾಚರಿಸುವ ಸಂಧ್ಯಾ ಎಂಬುವಳನ್ನು, ಅಭಿಸಂಭಾವ್ಯ=ಸಮೀಪಿಸಿ, ವಿಸ್ರಂಭಾತ್=ಪ್ರೇಮದಿಂದ, ಕುಮೇಧಸಃ= ದುಷ್ಟಬುದ್ಧಿಗಳುಳ್ಳ, ಅಸುರರು, ಪರ್ಯಪೃಚ್ಛನ್=ಪ್ರಶ್ನಿಸಿದರು. ॥೩೩॥

**ಕಾऽಸಿ ಕಸ್ಯಾಸಿ ರಂಭೋರು ಕೋ ವಾರ್ಥಸ್ತೇऽತ್ರ ಭಾಮಿನಿ ।**
**ರೂಪದ್ರವಿಣಪಣ್ಯೇನ ದುರ್ಭಗಾನ್ ನೋ ವಿಬಾಧಸೇ ॥೩೪॥**

ಹೇ ರಂಭೋರು=ಏ ಬಾಳೆಯ ದಿಂಡಿನಂತಿರುವ ತೊಡೆಯುಳ್ಳವಳೆ, ತ್ವಂ ಕಾ ಅಸಿ=ನೀನಾರು ? ಕಸ್ಯಾಸಿ=ಯಾರ ಮಗಳು ? ಹೇ ಭಾಮಿನಿ=ಕಾಂತಿ ಸಂಪನ್ನಳೇ, ಅತ್ರ=ಇಲ್ಲಿ ತಿರುಗಲು, ತೇ=ನಿನಗೆ ಕಃ ಅರ್ಥಃ=ಏನು ಪ್ರಯೋಜನ ?, ರೂಪದ್ರವಿಣಪಣ್ಯೇನ=ರೂಪವೆಂಬ ಬೆಲೆಯಿಲ್ಲದ ಮಾರಾಟದ ವಸ್ತುವಿನಿಂದ ದುರ್ಭಗಾನ್=ಅದನ್ನು ಸ್ವೀಕರಿಸುವ ಭಾಗ್ಯವಿಲ್ಲದ (ನಿನ್ನಸಂಗ ಮಾಡುವ ಭಾಗ್ಯವಿಲ್ಲದ)ನಃ=ನಮ್ಮನ್ನು ವಿಬಾಧಸೇ=ಪಿಡಿಸುವಿ (ಕಾಮಬಾಣಕ್ಕೆ ಗುರಿ ಮಾಡುವಿ) ॥೩೪॥

**ಯಾ ವಾ ಕಾऽಸಿ ತ್ವಮಬಲೇ ದಿಷ್ಟ್ಯಾ ಸಂದರ್ಶನಂ ತವ ।**
**ಉದ್ಧುನೋಷೀಕ್ಷಮಾಣಾನಾಂ ಕಂದುಕಕ್ರೀಡಯಾ ಮನಃ ॥೩೫॥**

ಹೇ ಅಬಲೇ=ಎಲೆ ಬಾಲಕಿಯೇ ಯಾ ವಾ ಕಾऽಸಿ=ಯಾರವಳು ಎಲ್ಲಿಯವಳೋ ಆಗಿರುವಿ ಆದರೂ ದಿಷ್ಟ್ಯಾ=ದೈವದಿಂದ ತವ=ನಿನ್ನ ಸಂದರ್ಶನಂ=ದರ್ಶನವಾಗಿದೆ, ಕಂದುಕಕ್ರೀಡಯಾ=ಚಂಡಿನಾಟದಿಂದೇ ಈಕ್ಷಮಾಣಾನಾಂ=ನೋಡುವರ, ಮನಃ= ಮನಸ್ಸನ್ನು ಉದ್ಧುನೋಷಿ=ಮಥನಮಾಡುವಿ (ಕ್ಷೋಭೆಗೊಳಿಸುವಿ ಎಂದರ್ಥ)

ಚಂಡಿನಾಟದಿಂದ ಮನಸ್ಸಿನಕ್ಷೋಭೆ ಯಾಕೆ ? ಎಂದರೆ ವರ್ಣಿಸುವರು -

**ನೈಕತ್ರ ತೇ ಜಯತಿ ಶಾಲಿನಿ ಪಾದಪದ್ಮಂ**
**ಘ್ನಂತ್ಯಾ ಮುಹುಃ ಕರತಲೇನ ಪತತ್ಪತಂಗಮ್ ।**
**ಮಧ್ಯಂ ವಿಷೀದತಿ ಬೃಹತ್ಸ್ತನಭಾರಭೀತಂ**
**ಶಾಂತಾ ಚ ದೃಷ್ಟಿರಮಲಃ ಸುಜಟಾವರೂಥಃ ॥೩೬॥**

ಹೇ ಶಾಲಿನಿ=ಹೆಂಡತಿಯೇ ತೇ=ನಿನ್ನ ಪಾದಪದ್ಮಂ=ಕಮಲದಂತಿರುವ ಕಾಲುಗಳು ಏಕತ್ರ ನ ಜಯತಿ=ಒಂದೆಡೆ ಸ್ಥಿರವಾಗಿ ನಿಲ್ಲಲಾರವು. ಅಥವಾ ನೈಕತ್ರ= ಅನೇಕ ಗತಿವಿಲಾಸಗಳಲ್ಲಿ ಜಯತಿ=ಉತ್ಕೃಷ್ಟವಾಗಿದೆ. ವಿಜಯಧ್ವಜರ ಪ್ರಕಾರ, ಪತತ್ಪತಂಗಂ=ಮೇಲೆ ಕೆಳಗೆ ಹಾರಾಡುವ ಚಂಡು ತೇಪಾದಪದ್ಮಂ ಜಯತಿ=ನಿನ್ನ ಕಾಲಿಗೆ ಬಂದೆರಗುವುದು ಪತತ್ಪತಂಗಂ ಕರತಲೇನ ಘ್ನಂತ್ಯಾಃ=ಹಾರಾಡುವ ಚಂಡನ್ನು ಕೈಯಿಂದ ಮುಹುಃ=ಪುನಃ ಪುನಃ ಘ್ನತ್ಯಾಃ=ಹೊಡೆಯುತ್ತಿರುವ. ಬೃಹತ್ಸ್ತನಭಾರಭೀತಂ=ದೊಡ್ಡವಾದ ಕುಚಗಳ ಭಾರದಿಂದ ಹೆದರಿದ, ಮಧ್ಯಂ= ಟೊಂಕವು ವಿಷೀದತಿ=ಕೃಶವಾದುದರಿಂದ ದುಃಖ ಪಡುವಂತೆ ಕಾಣುವುದು, ದೃಷ್ಟಿಃ =ನೋಟವು, ಶಾಂತಾ=ಶ್ಲಾಘಿತವಾಗಿದೆ ಸುಜಟಾವರೂಥಃ ಜಡೆಯು, ಅಮಲಃ= ಮುಕ್ತವಾಗಿದೆ. ''ಮಲಬಂಧನೆ'' ಎಂದು ಧಾತುವಿದೆ ಹೆರಳಿನಗಂಟು ಬಿಚ್ಚಿದೆ ಎಂದರ್ಥ ಕಾರಣ ಮನಸ್ಸನ್ನು ಮಥನ ಮಾಡುವಿ ಎಂದು ಭಾವ ॥೩೬॥

**ಇತಿ ಸಾಯಂತನೀಂ ಸಂಧ್ಯಾಮಸುರಾಃ ಪ್ರಮದಾಯತೀಂ ।**
**ಪ್ರಲೋಭಯಂತೀಂ ಜಗೃಹುರ್ಮತ್ವಾ ಮೂಢಧಿಯಃ ಸ್ತ್ರಿಯಂ ॥೩೭॥**

ಮೂಢಧಿಯಃ=ಮೂರ್ಖಬುದ್ಧಿಗಳಾದ, ಅಸುರಾಃ=ದೈತ್ಯರು, ಇತಿ=ಈ ರೀತಿಯಾಗಿ, ಪ್ರಮದಾಯತೀಂ=ಸ್ತ್ರೀಯಂತೆ ಆಚರಿಸುವ, ಪ್ರಲೋಭಯಂತೀಂ= ಆಶೆಯನ್ನು ಹುಟ್ಟಿಸುವ, ಸಾಯಂತನೀ ಸಂಧ್ಯಾಂ=ಸಂಜೆಯ ಸಂಧಿಕಾಲವನ್ನು ಸ್ತ್ರೀಯಂ ಮತ್ವಾ=ಹೆಣ್ಣೆಂದು ತಿಳಿದು, ಜಗೃಹುಃ=ಸ್ವೀಕರಿಸಿದರು. ॥೩೭॥

**ಪ್ರಹಸ್ಯ ಭಾವಗಂಭೀರಂ ಜಿಘ್ರಂತ್ಯಾತ್ಮನಮಾತ್ಮನಾ ।**
**ಕಾಂತ್ಯಾ ಸಸರ್ಜ ಭಗವಾನ್ ಗಂಧರ್ವಾಪ್ಸರಸಾಂ ಗಣಾನ್ ॥೩೮॥**

ಭಾವಗಂಭೀರಂ=ಶೃಂಗಾರ ಚೇಷ್ಟೆಯಿಂದ ಗಂಭೀರವಾಗಿ, ಪ್ರಹಸ್ಯ=ನಕ್ಕು ಆತ್ಮನಾ=ತನ್ನಿಂದ,ಆತ್ಮಾನಂ=ತನ್ನನ್ನು ಜಿಂಘ್ರಂತ್ಯಾ=ಆಘ್ರಾಣಿಸುವ(ಮೂಸಿನೋಡುವ) ಕಾಂತ್ಯಾ=ಸೌಂದರ್ಯವೆಂಬ ಶರೀರದಿಂದ ಗಂಧರ್ವಾಪ್ಸರಸಾಂ ಗಣಾನ್= ಗಂದರ್ವರು ಮತ್ತು ಅಪ್ಸರೆಯರಸಮೂಹವನ್ನು ಭಗವಾನ್=ಬ್ರಹ್ಮನು, ಸಸರ್ಜ= ಸೃಷ್ಟಿಸಿದನು.

(ಪ್ರಹಸನ ಮತ್ತು ಆತ್ಮಾವಘ್ರಾಣಗಳು ಸೌಂದರ್ಯಾನುಭವ ಚಾತುರ್ಯದ ವಿಕಾರಗಳು) ಆ ಕಾಂತಿಯು ಬೆಳದಿಂಗಳಾಯಿತು ॥೩೮॥

**ವಿಸಸರ್ಜ ತನುಂ ತಾಂ ವೈ ಜ್ಯೋತ್ಸ್ನಾಂ ಕಾಂತಿಮತೀಂ ಪ್ರಿಯಾಂ ।**
**ತಾಮೇವ ಚಾದದುಃ ಪ್ರೀತ್ಯಾ ವಿಶ್ವಾವಸುಪುರೋಗಮಾಃ ॥೩೯॥**

ಕಾಂತಿಮತೀಂ=ಕಾಂತಿಯೇ ಜನಕವಾಗಿವುಳ್ಳ ಅಂದರೆ ಕಾಂತಿಯಿಂದ ಜನಿಸಿದ, ಪ್ರಿಯಾಂ=ಕಣ್ಮನಗಳಿಗೆ ಆನಂದವನ್ನೀವ, ತಾಂ ಜ್ಯೋತ್ಸ್ನಾಂ=ಆ ಬೆಳದಿಂಗಳಾದ, ತನುಂ=ಶರೀರವನ್ನು ವಿಸಸರ್ಜ=ತ್ಯಜಿಸಿದನು, ವಿಶ್ವಾವಸುಪುರೋಗಮಾಃ= ವಿಶ್ವಾವಸು ಮೊದಲಾದವರು, ಪ್ರಿತ್ಯಾ=ಪ್ರೀತಿಯಿಂದ, ತಾಮೇವ=ಆ ಶರೀರವನ್ನೇ, ಆದದುಃ=ಸ್ವೀಕರಿಸಿದರು. ॥೩೯॥

**ಸೃಷ್ಟ್ವಾ ಭೂತಪಿಶಾಚಾಂಶ್ಚ ಭಗವಾನಾತ್ಮತಂದ್ರಿಣಾ ।**
**ದಿಗ್ವಾಸಸೋ ಮುಕ್ತಕೇಶಾನ್ ವೀಕ್ಷ್ಯ ಚಾಮೀಲಯದ್ ದೃಶೌ ॥೪೦॥**

ಭಗವಾನ್=ಬ್ರಹ್ಮದೇವನು, ಆತ್ಮತಂದ್ರಿಣಾ=ಜೀವರಿಗೆ ಆಕಳಿಕೆ ಮುಂತಾದವು-ಗಳನ್ನು ಹುಟ್ಟಿಸುವ ಆಲಸ್ಯವೆಂಬ ಶರೀರದಿಂದ, ಭೂತಪಿಶಾಚಾನ್=ಭೂತಗಳನ್ನು ಪಿಶಾಚಗಳನ್ನು, ಸೃಷ್ಟ್ವಾ=ಹುಟ್ಟಿಸಿ, ದಿಗ್ವಾಸಸಃ=ದಿಕ್ಕುಗಳೇ ಬಟ್ಟೆಯಾಗಿರುವ (ನಗ್ನರಾದೆಂದರ್ಥ) ಮುಕ್ತಕೇಶಾನ್=ತಲಗೂದಲನ್ನು ಹರವಿ ಕೊಂಡವರನ್ನು, ವೀಕ್ಷ್ಯ=ನೋಡಿ, ದೃಶೌ ಅಮೀಲಯತ್=ಕಣ್ಣುಗಳನ್ನು ಮುಚ್ಚಿಕೊಂಡನು. ಆ ಶರೀರವು ಆಕಳಿಕೆಯಾಯಿತು. ॥೪೦॥

ಜಗೃಹುಸ್ತದ್ವಿಸೃಷ್ಟಾಂ ತಾಂ ಜೃಂಭಣಾಖ್ಯಾಂ ತನುಂ ಪ್ರಭೋಃ ।
ನಿದ್ರಾಮಿಂದ್ರಿಯವಿಕ್ಲೇದೋ ಯಯಾ ಭೂತೇಷು ದೃಶ್ಯತೇ ॥
ತಯೋಚ್ಛಿಷ್ಟಾನ್ ಧರ್ಷಯಂತಿ ತಮುನ್ಮಾದಂ ಪ್ರಚಕ್ಷತೇ ॥೪೧॥

ಯಯಾ=ಯಾವುದರಿಂದ, ಭೂತೇಷು=ಜನರಲ್ಲಿ, ನಿದ್ರಾದಿ=ನಿದ್ದೆ ಮುಂತಾದ, ಇಂದ್ರಿಯವಿಕ್ಲೇದಃ=ಇಂದ್ರಿಯಗಳ ಉಪರಮವು, ದೃಶ್ಯತೇ=ಕಂಡುಬರುವುದೋ, ತಾಂ=ಆ,ಜೃಂಭಣಾಖ್ಯಾಂ=ಆಕಳಿಕೆ, ಎಂಬ ಪ್ರಭೋಃ=ಬ್ರಹ್ಮದೇವರ, ತನುಂ= ಶರೀರವನ್ನು ತದ್ವಿಸೃಷ್ಟಾಂ=ಅವರಿಂದ ಬಿಟ್ಟದ್ದನ್ನು (ಭೂತಪಿಶಾಚಗಳು) ಜಗೃಹುಃ= ಸ್ವೀಕರಿಸಿದವು, ತಯಾ ಉಚ್ಛಿಷ್ಟಾನ್=ಜೃಂಭಣವೆಂಬ ಶರೀರದಿಂದ ಗ್ರಸ್ತರಾದವರನ್ನು ಆಕಳಿಸುವರನ್ನು ಧರ್ಷಯಂತಿ=ಚೇಷ್ಟೆಗಳನ್ನು ಮಾಡಿಸುವುವು ತಂ ಉನ್ಮಾದಂ ಪ್ರಚಕ್ಷತೇ=ಅದನ್ನು ಉನ್ಮಾದವೆನ್ನುವರು. ॥೪೧॥

**ಊರ್ಜಸ್ವಂತಂ ಮನ್ಯಮಾನ ಆತ್ಮಾನಂ ಭಗವಾನಜಃ ।**
**ಸಾಧ್ಯಾನ್ ಗಣಾನ್ ಪಿತೃಗಣಾನ್ ಪರೋಕ್ಷೇಣಾಸೃಜತ್ ಪ್ರಭುಃ ॥**

ಭಗವಾನ್=ಪೂಜ್ಯನಾದ, ಪ್ರಭುಃ ಅಜಃ=ಸಮರ್ಥನಾದ ಬ್ರಹ್ಮದೇವನು, ಪರೋಕ್ಷೇಣ=ಇಂದ್ರಿಯಗಳಿಗೆ ಗೋಚರವಾಗದಿರುವುದೆಂಬ ದೇಹದಿಂದ ಊರ್ಜಸ್ವಂತಂ ಆತ್ಮಾನಂ ಮನ್ಯಮಾನಃ=ತನ್ನನ್ನು ಶ್ರೇಷ್ಠ ಅನ್ನ ಉಳ್ಳವನೆಂದು ತಿಳಿದವನಾಗಿ, ಸಾಧ್ಯಾನ್ ಗಣಾನ್ ಪಿತೃಗಣಾನ್=ಸಾಧ್ಯರ ಮತ್ತು ಪಿತೃಗಳ ಗಣವನ್ನು, ಅಸೃಜತ್=ಸೃಷ್ಟಿಸಿದನು.

ಊರ್ಜಶಬ್ದಾರ್ಥ ತಿಳಿಸುವರು –

**ಊರ್ಜಂ ಸಾರಾನ್ನಮುದ್ದಿಷ್ಟಂ ತದೇವ ಪಿತೃಭಕ್ಷಣಂ ।**

ಶ್ರೇಷ್ಠ ಅನ್ನವೇ ಊರ್ಜವೆನಿಸುವುದು. ಅದೇ ಪಿತೃಗಳಿಗೆ ಯೋಗ್ಯವಾಗಿದೆ. ಕದನ್ನ ಅವರಿಗೆ ನಿಷಿದ್ಧವಾಗಿದೆ.

ಅದೃಶ್ಯವಾದ ದೇಹದಿಂದ ಜನಿಸಿದವರಾದ್ದರಿಂದ ನಮ್ಮ ಮಾಂಸದೃಷ್ಟಿಗೆ ಕಾಣದಿರುವ ಪಿತೃಗಳಿಗೆ ಅವರ ಪ್ರೀತಿಗಾಗಿ ಪಿಂಡಾದಿಗಳನ್ನು ಕೊಡುವರು. ॥೪೨॥

ತನ್ನನ್ನು ಊರ್ಜಸ್ವಂತನೆಂದುತಿಳಿದೇಕೆ ಸೃಜಿಸಿದನು ಎಂದು ಹೇಳುವರು–

**ತ ಆತ್ಮಸರ್ಗಂ ತಂ ಕಾಯಂ ಪಿತರಃ ಪ್ರತಿಪೇದಿರೇ ।**
**ಸಾಧ್ಯೇಭ್ಯಶ್ಚ ಪಿತೃಭ್ಯಶ್ಚ ಕವಯೋ ಯದ್ ವಿತನ್ವತೇ ॥೪೩॥**

ತೇ=ಸಾಧ್ಯರು, ಪಿತರಃ=ಪಿತೃಗಳು, ಆತ್ಮಸರ್ಗಂ=ತಮಗೆ ಜನಕವಾದ, ತಂ ಕಾಯಂ=ಬ್ರಹ್ಮನಿಂದ ಬಿಟ್ಟ ಶರೀರವನ್ನು, ಪ್ರತಿಪೇದಿರೇ=ಪಡೆದರು. ಯತ್= ಯಾವ ಕಾರಣ, ಕವಯಃ=ಜ್ಞಾನಿಗಳು, ಸಾಧ್ಯೇಭ್ಯಃ=ಸಾಧ್ಯರಿಗೆ, ಪಿತೃಭ್ಯಃ ಚ= ಪಿತೃಗಳಿಗೂ, ವಿತನ್ವತೇ=ಶ್ರಾದ್ಧಾದಿಗಳಿಂದ ಶ್ರೇಷ್ಠ ಅನ್ನವನ್ನೇ ನೀಡುವರು. ಆದ್ದರಿಂದ

ಅದುಳ್ಳವನೆಂದು ತಿಳಿದು ಸೃಜಿಸಿದನು. ಇದರಿಂದ ಹುಟ್ಟಿಸುವವನ ಸ್ವಭಾವ ಹುಟ್ಟುವರಿಗೆ ಪ್ರಾಯಃ ಬರುವುದು ಎಂದು ತಿಳಿಯುವುದು. ಆಕಾರಣ ಈ ಪ್ರಕರಣದಲ್ಲಿ ಸೃಷ್ಟುವಾದ ಬ್ರಹ್ಮನಿಗೆ ಸೃಜ್ಯಸ್ವಭಾವಾನುಗುಣ ಕ್ರಿಯೆಗಳನ್ನೇ ಹೇಳಿದೆ. ॥೪೩॥

**ಸಿದ್ಧಾನ್ ವಿದ್ಯಾಧರಾಂಶ್ಚೈವ ತಿರೋಧಾನೇನ ಸೋಽಸೃಜತ್ ।**
**ತೇಭ್ಯೋ ದದೌ ತಮಾತ್ಮಾನಮಂತರ್ಧಾನಾಖ್ಯಮದ್ಭುತಮ್ ॥೪೪॥**

ಸಃ=ಬ್ರಹ್ಮದೇವರು, ತಿರೋಧಾನೇನ=ಕಾಣಲು ಯೋಗ್ಯವಾದರೂ ಸಾಮರ್ಥ್ಯ ದಿಂದ ಕಾಣದಿರುವುದೆಂಬ ಅಂತರ್ಧಾನವಾಗುವ ದೇಹದಿಂದ, ಸಿದ್ಧಾನ್=ಸಿದ್ಧರನ್ನು ಚ=ಮತ್ತು, ವಿದ್ಯಾಧರಾನ್=ವಿದ್ಯಾಧರರನ್ನೂ ಅಸೃಜತ್=ಸೃಷ್ಟಿಸಿದನು, ಅದ್ಭುತಂ= ಆಶ್ಚರ್ಯಕರವಾದ, ಅಂತರ್ಧಾನಾಖ್ಯಂ=ಅಂತರ್ಧಾನವೆಂಬ, ತಂ ಆತ್ಮಾನಂ= ತನ್ನಿಂದ ಬಿಡಲ್ಪಟ್ಟ ಆ ದೇಹವನ್ನು, ತೇಭ್ಯಃ=ಸಿದ್ಧರಿಗೂ ವಿದ್ಯಾಧರರಿಗೂ, ದದೌ= ಕೊಟ್ಟನು. ॥೪೪॥

ಬ್ರಹ್ಮದೇವನು ಯಾವ ಚೇಷ್ಟೆ ಮಾಡುತ್ತ ಯಾರನ್ನು ಸೃಷ್ಟಿಸುವನೋ ಆ ಚೇಷ್ಟೆಗಳು ಅವರಿಗೆ ಸ್ವಭಾವವಾಗಿ ಕೊನೆವರೆಗೆ ಉಳಿಯುವುವು ಎಂದು ಹೇಳುವರು –

**ಸ ಕಿನ್ನರಾನ್ ಕಿಂಪುರುಷಾನಾತ್ಮನಾ ಚಾಸೃಜತ್ ಪ್ರಭುಃ ।**
**ಮಾನಯನ್ನಾತ್ಮನಾತ್ಮಾನಮಾತ್ಮಾಭಾಸಂ ವಿಲೋಕಯನ್ ॥೪೫॥**

ಆತ್ಮನಾ=ತನ್ನಿಂದಲೇ, ತನ್ನ ಮನಸಿನಿಂದಲೇ, ಆತ್ಮಾನಂ=ತನ್ನನ್ನು (ತನ್ನ ಶರೀರವನ್ನು) ಮಾನಯನ್=ಶ್ಲಾಘನೆ ಮಾಡುತ್ತ ಗಂಧ ಪುಷ್ಪಾದಿಗಳಿಂದ ಪೂಜಿಸುತ್ತ, ಆತ್ಮಾಭಾಸಂ=ತನ್ನ ಪ್ರತಿಬಿಂಬವನ್ನು ವಿಲೋಕಯನ್=ಕನ್ನಡಿಯಲ್ಲಿ ನೋಡುತ್ತ, ಆತ್ಮನಾ=ತಮ್ಮ ವ್ಯಾಪಾರ ವಿಶೇಷವೆಂಬ (ಹಿಂದೆ ಹೇಳಿದ) ದೇಹದಿಂದ, ಸಃ ಪ್ರಭುಃ=ಆ ಬ್ರಹ್ಮದೇವನು, ಕಿನ್ನರಾನ್=ನರಾಭಾಸರನ್ನು ಕಿಂಪುರುಷಾನ್= ಪುರುಷಾಭಾಸರನ್ನು ಅಸೃಜತ್=ಸೃಷ್ಟಿಸಿದನು. ॥೪೫॥

**ತೇ ತು ತಜ್ಜಗೃಹೂ ರೂಪಂ ತ್ಯಕ್ತಂ ಯತ್ ಪರಮೇಷ್ಠಿನಾ ।**
**ಮಿಥುನೀಭೂಯ ಗಾಯಂತಸ್ತಮೇವೋಷಸಿ ಕರ್ಮಭಿಃ ॥೪೬॥**

ಯತ್=ಯಾವುದು, ಪರಮೇಷ್ಠಿನಾ=ಬ್ರಹ್ಮದೇವರಿಂದ, ತ್ಯಕ್ತಂ=ಬಿಡಲ್ಪಟ್ಟಿತೋ, ತತ್ ರೂಪಂ=ಆ ತನ್ನನ್ನು ತಾನು ಗೌರವಿಸುವುದು ತನ್ನ ಪ್ರತಿಬಿಂಬ ನೋಡಿಕೊಳ್ಳುವುದೆಂಬ ದೇಹವನ್ನು, ತೇ ತು=ಕಿಂನರಕಿಂಪುರುಷರು, ಜಗೃಹುಃ=

ಸ್ವೀಕರಿಸಿದರು. ತಂ ಏವ=ಬ್ರಹ್ಮದೇವರನ್ನೇ ಕರ್ಮಭಿಃ=ಚರಿತ್ರೆಗಳಿಂದ, ಉಷಸಿ= ಪ್ರಾತಃಕಾಲದಲ್ಲಿ ಮಿಥುನೀ ಭೂಯ=ಜೊತೆಯಾಗಿಯೇ, ಗಾಯಂತಃ ಆಸನ್= ಗಾನಮಾಡುವುರಾದರು. ಎರಡು ವ್ಯಾಪಾರಗಳಿಂದ ಜನಿಸಿದ್ದರಿಂದ ಇಬ್ಬರೂ ಸೇರಿಯೇ ಗಾನ ಮಾಡುವರು.

ಕುದುರೆಮುಖ ಮನುಷ್ಯದೇಹ ಮನುಷ್ಯಮುಖ ಕುದುರೆ ದೇಹವುಳ್ಳ ದೇವಯೋನಿಗೆ ಸೇರಿದವರು ಕಿಂನರಕಿಂಪುರುಷರು. ॥೪೬॥

**ದೇಹೇನ ವೈ ಭೋಗವತಾ ಶಯಾನೋ ಬಹುಚಿಂತಯಾ ।**
**ಸರ್ಗೇಽನುಪಚಿತೇ ಕ್ರೋಧಾತ್ಸಸರ್ಜ ಹಿ ತದ್ ವಪುಃ ॥೪೭॥**

ಭೋಗವತಾ=ಸರ್ಪಶರೀರಾಕಾರವುಳ್ಳ, ದೇಹೇನ=ದೇಹದಿಂದ, ಶಯಾನಃ= ಮಲಗಿದ ಬ್ರಹ್ಮದೇವರು, ಸರ್ಗೇ=ಸೃಷ್ಟಿಯು, ಅನುಪಚಿತೇ=ಕೊನೆ ಇಲ್ಲದಿರುವಾಗ (ಅಲಂಭಾವರಹಿತವಾದಾಗ)ಬಹುಚಿಂತಯಾ=(ಜಾತಾತ್) ಬಹಳ ಚಿಂತೆಯಿಂದ ಉಂಟಾದ, ಕ್ರೋದಾತ್=ಸಿಟ್ಟಿನಿಂದ ತದ್‌ವಪುಃ=ಸರ್ಪಾಕಾರವಾದ ಶರೀರವನ್ನು ಉತ್ಸಸರ್ಜ=ತ್ಯಜಿಸಿದನು. ॥೪೭॥

**ಯೇಽಹೀಯಂತಾಮುತಃ ಕೇಶಾಃ ಅಹಯಸ್ತೇಽಂಗ ಜಜ್ಞಿರೇ ।**
**ಸರ್ಪಾ ವಿಸರ್ಪತಃ ಕ್ರೂರಾ ನಾಗಾ ಭೋಗೋರುಕಂಧರಾಃ ॥೪೮॥**

ಅಮುತಃ=ಈ ಶರೀರದಿಂದ, ಯೇ ಕೇಶಾಃ ಅಹೀಯಂತ=ಯಾವ ಕೂದಲುಗಳು ಬಿಡಲ್ಪಟ್ಟವೋ, ತೇ=ಅವು ಅಹಯಃ=ಅಹಿ ಎನಿಸಿಕೊಂಡವು, ವಿಸರ್ಪತಃ= ವಿವಿಧವಾಗಿ ಹರಿದಾಡುವುದರಿಂದ, ಸರ್ಪಾಃ=ಸರ್ಪ ಎನಿಸಿಕೊಂಡವು. ಅವುಗಳ ಸ್ವಭಾವ ಹೇಳುವರು –

ಕ್ರೂರಾಃ=ಬೇಗನೆ ಸಿಟ್ಟಿಗೆ ಏಳುವುವು, ನಾಗಾಃ=ಬೇಗನೆ ಹೋಗುವವುಗಳು, ಭೋಗೋರುಕಂಧರಾಃ=ದೇಹದಂತೆ ದೊಡ್ಡದಾದ ಕುತ್ತಿಗೆಯುಳ್ಳ ಅಥವಾ ಉರುಭೋಗಾಃ ಉರುಕಂಧರಾಃ=ದೊಡ್ಡದೇಹವುಳ್ಳವು ಹೆಡೆಗಳಿಂದ ದೊಡ್ಡದಾದ ಕುತ್ತಿಗೆವುಳ್ಳವು ಆದವು. ॥೪೮॥

**ಸ ಆತ್ಮಾನಂ ಮನ್ಯಮಾನಃ ಕೃತಕೃತ್ಯಮಿವಾತ್ಮಭೂಃ ।**
**ತದಾ ಮನೂನ್ ಸಸರ್ಜಾಂತೇ ಮನಸಾ ಲೋಕಭಾವನಾನ್ ॥**

ಯದಾ=ಯಾವಾಗ, ಆತ್ಮಭೂಃ=ಬ್ರಹ್ಮದೇವನು, ಆತ್ಮಾನಂ=ತನ್ನನ್ನು ಕೃತಕೃತ್ಯಂ ಇವ ಮನ್ಯಮಾನಃ ಅಭೂತ=ಪುರುಷದೇಹವನ್ನು ಸ್ವೀಕರಿಸಿ ಕೃತಕೃತ್ಯನೆಂದು

ಮಾಡಬೇಕಾದುದನ್ನು ಮಾಡಿದವನೆಂದು ತಿಳಿದನೋ ತದಾ=ಆಗ ಅಂತೇ=ಇತರ ಸೃಷ್ಟಿಯಕೊನೆಯಲ್ಲಿ ಮನಸಾ=ಮನಸ್ಸಿನಿಂದ, ಲೋಕಭಾವನಾನ್=ಜಗತ್ತನ್ನು ವೃದ್ಧಿಗೊಳಿಸುವ, ಮನೂನ್=ಮನುಗಳನ್ನು ಸಸರ್ಜ=ಹುಟ್ಟಿಸಿದನು. ॥೪೯॥

**ತೇಭ್ಯಃ ಸ ವ್ಯಸೃಜದ್ ದೇಹಂ ಪರಃ ಪುರುಷ ಆತ್ಮನಃ ।**
**ತಾನ್ ದೃಷ್ಟ್ವಾ ಯೇ ಪುರಾ ಸೃಷ್ಟಾಃ ಪ್ರಶಶಂಸುಃ ಪ್ರಜಾಪತಿಮ್॥**

ಪರಃ ಪುರುಷಃ=ಬ್ರಹ್ಮದೇವರು, ಆತ್ಮನಃ=ತನ್ನ, ದೇಹಂ=ಭಾಹ್ಯ ಶರೀರವನ್ನು, ತೇಭ್ಯಃ=ಮನುಗಳಿಗಾಗಿ, ವ್ಯಸೃಜತ್ ಬಿಟ್ಟನು, ಬಾಹ್ಯದೇಹವನ್ನು ಬಿಟ್ಟುಕೊಟ್ಟನು ಎಂದು ಭಾವ. ಯೇ ಪುರಾಸೃಷ್ಟಾಃ=ಹಿಂದೆ ಜನಿಸಿದ, ದೇವತೆಗಳು, ತಾನ್ ದೃಷ್ಟ್ವಾ =ಮನುಗಳನ್ನು ನೋಡಿ, ಪ್ರಜಾಪತಿಂ ಬ್ರಹ್ಮದೇವರನ್ನು, ಪ್ರಶಶಂಶುಃ=ಪ್ರಶಂಶೆ ಮಾಡಿದರು.

ಇಲ್ಲಿ ಯೇ ಪುರಾಸೃಷ್ಟಾಃ ಎಂದರೆ ಅಸುರ ಮುಂತಾದವರು ಎಂದರ್ಥವಾಗ-ಬಾರದೆಂದು ಯತ್ತಚ್ಛಬ್ದ ಪರಾಮೃಶ್ಯರನ್ನು ತಿಳಿಸುವರು–

**ಯೇ ಪುರಾಸೃಷ್ಟಾಃ ದೇವಾಃ ।**

ಸಮಾಖ್ಯಾನ ಹೇಳುವರು –

**ದೃಷ್ಟ್ವಾ ತು ಪೌರುಷೀಂ ಸೃಷ್ಟಿಂ ದೇವಾಃ ಸುಕೃತಮೂಚಿರೇ । ಇತಿ ಚ ।**

ಆದಿಸೃಷ್ಟಿಯಲ್ಲಿ ಜನಿಸಿದ ದೇವತೆಗಳು ಮಾನುಷಸೃಷ್ಟಿಯನ್ನು ನೋಡಿ ಸುಕೃತಂ ಎಂದರು. ಅಂದರೆ ಸಮೀಚಿನವಾಗಿ ಮಾಡಲ್ಪಟ್ಟಿದೆ ಎಂದು ಹೇಳಿದರು ॥೫೦॥

**ಅಹೋ ಏತಜ್ಜಗತ್ಸ್ರಷ್ಟಃ ಸುಕೃತಂ ಬತ ತೇ ಕೃತಂ ।**
**ಪ್ರತಿಷ್ಠಿತಾಃ ಕ್ರಿಯಾಃ ಯಸ್ಮಿನ್ ಸಾಕಮನ್ನಮದಾಮಹೇ ॥೫೧॥**

ಹೇ ಜಗತಃ ಸ್ರಷ್ಟಃ=ಜಗತ್‌ಸೃಷ್ಟಿಕರ್ತವಾದ ಬ್ರಹ್ಮದೇವರೇ ನಿನ್ನ ಏತತ್ ಕೃತಂ=ಈ ಕಾರ್ಯವು, ಸುಕೃತಂ=ಚೆನ್ನಾಗಿದೆ ಪರ್ಯಾಪ್ತವಾಗಿದೆ ಇದಕ್ಕೂ ಹೆಚ್ಚಿನದಿಲ್ಲ, ಬತ= ಸಂತೋಷ, ಯಸ್ಮಿನ್=ಯಾವ ಮನುಸೃಷ್ಟಿಯಲ್ಲಿ ಕ್ರಿಯಾಃ= ಯಾಗಾದಿಗಳು,ಪ್ರತಿಷ್ಠಿತಾಃ=ವಿಪುಲವಾಗಿವೆ, ತಾಸು=ಯಾಗಾದಿಗಳಲ್ಲಿ, ಸಾಕಂ=ನಿನ್ನ ಜೊತೆಗೆ (ಅಥವಾ ನಾವೆಲ್ಲ ಮಿಲಿತರಾಗಿ) ಅನ್ನಂ ಅದಾಮಹೇ=ಹವಿಸ್ಸನ್ನು ಸ್ವೀಕರಿಸುವೆವು. ನಮ್ಮ ಅನುಗ್ರಹದಿಂದ ಅವರಿಗೂ ಮಹತ್ತರ ಪ್ರಜಾ ವೃದ್ಧಿಯಾಗುವುದು ಎಂಬುದನ್ನು ವಿಕರಣ ಪದವ್ಯತ್ಯಯದಿಂದ ಸೂಚಿಸುವರು. ॥೫೧॥

ಇತರ ವೈಲಕ್ಷಣ್ಯ ತಿಳಿಸಲು ಮೊದಲಾದ ಋಷಿಸೃಷ್ಟಿಯನ್ನು ನಂತರ ಹೇಳುವರು

**ತಪಸಾ ವಿದ್ಯಯಾ ಯುಕ್ತೋ ಯೋಗೇನ ಸುಸಮಾಧಿನಾ ।**
**ಆದಾವೃಷೀನ್ ಹೃಷಿಕೇಶಃ ಸಸರ್ಜಾಭಿಮತಾಃ ಪ್ರಜಾಃ ॥೫೨॥**

ಹೃಷಿಕೇಶಃ=ಬ್ರಹ್ಮಾಂತರ್ಯಾಮಿಯಾದ ಶ್ರೀಹರಿಯು ತಪಸಾ=ತಪಸ್ಸಿನಿಂದ, ವಿದ್ಯಯಾ=ಜ್ಞಾನದಿಂದ ಯೋಗೇನ ಯುಕ್ತಃ=ಭಕ್ತಿಯೋಗದಿಂದ ಕೂಡಿದವನಾಗಿ, ಸುಸಮಾಧಿನಾ=ಚಿತ್ತೈಕಾಗ್ರತೆಯಿಂದ,(ಕೂಡಿದವನಾಗಿ)ಆದೌ=ಎಲ್ಲಕ್ಕೂ ಮೊದಲು ಅಭಿಮತಾಃ ಪ್ರಜಾಃ= ತನಗೆ ಸಮ್ಮತರಾದ ಪ್ರಜೆಗಳಾದ, ಋಷೀನ್=ಋಷಿಗಳನ್ನು ಸಸರ್ಜ ಸೃಷ್ಟಿಸಿದನು ॥೫೨॥

**ತೇಭ್ಯಶ್ಚೈಕೈಕಶಸ್ತಸ್ಯ ದೇಹಸ್ಯಾಂಶಮದಾದಜಃ ।**
**ಯತ್ ತತ್ ಸಮಾಧಿಯೋಗರ್ಧಿತಪೋವಿದ್ಯಾವಿರಕ್ತಿಮತ್ ॥೫೩॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಏಕವಿಂಶೋಽಧ್ಯಾಯಃ ॥***

ಅಜಃ=ಬ್ರಹ್ಮದೇವರು, ತೇಭ್ಯಃ=ಋಷಿಗಳಿಗೆ, ತಸ್ಯ ದೇಹಸ್ಯ=ತಪಸ್ಸು ವಿದ್ಯಾ ವಿರಕ್ತಿ ಸಮಾಧಿಗಳಿಂದ ಕೂಡಿದ ದೇಹದ, ಅಂಶಂ=ಏಕದೇಶವನ್ನು, ಏಕೈಕಶಃ=ಒಬ್ಬೊಬ್ಬರಿಗೆ ಒಂದೊಂದು ಮುಖ್ಯವಾಗಿರುವ ಸ್ವಭಾವವನ್ನು, ಅದಾತ್=ಕೊಟ್ಟನು. ಯತ್= ಯಾವ ತನ್ನ ಶರೀರವು, ಸಮಾಧಿಯೋಗರ್ಧಿತಪೋವಿದ್ಯಾವಿರುಕ್ತಿಮತ್=ಸಮಾಧಿ ಯೋಗ ಸಮೃದ್ಧಿ ತಪಸ್ಸು ವಿದ್ಯಾಗಳಿಂದ ಯುಕ್ತವಾಗಿತ್ತೋ, ತತ್‌ತಸ್ಯ ಆ ದೇಹದ ಅಂಶವನ್ನು ಎಂದನ್ವಯ.

ಬ್ರಹ್ಮದೇವರು ಮಾಡುವಸೃಷ್ಟಿ ಹೇಳುವಾಗ ಹೃಷೀಕೇಶಃ ಎಂದು ಶ್ರೀಹರಿಗೆ ಕರ್ತೃತ್ವ ಹೇಳಿದೆಯಲ್ಲ? ಎಂಬ ಶಂಕೆಗೆ ಪ್ರಮಾಣದಿಂದ ಉದಾಹರಣೆ ಸಹಿತವಾಗಿ ನಿರಾಕರಿಸುವರು–

**ಯತ್ರಾಪಿ ತು ಹರೇರ್ನಾಮ ತದನ್ಯತ್ರ ಪ್ರಯುಜ್ಯತೇ ।**
**ತದಾಂತರಹರೇಸ್ತತ್ರ ಗೃಹೀತಿರ್ನಾನ್ಯಥಾ ಭವೇತ್ ॥**
**ಸ್ವಾತಂತ್ರ್ಯಾದವರತ್ವಂ ಚ ಪರಸ್ಯಾಪಿ ಪ್ರಯುಜ್ಯತೇ ।**
**ಸ್ಥಿತಸ್ಯಾಪಿ ಯಥಾ ರಾಜ್ಞಃ ಸ್ವಾನಾಂ ಜಯಪರಾಜಯೌ ॥ ಇತಿ ಪಾದ್ಮೇ ।**

ಎಲ್ಲಿಯಾದರೂ ಶ್ರೀಹರಿಯ ನಾಮವನ್ನು ಬೇರೆಯವರಲ್ಲಿ ಪ್ರಯೋಗ ಮಾಡಿದರೆ ಅಲ್ಲಿ ಅದು ಅವರಲ್ಲಿ ಅಂತರ್ಗತವಾದ ಶ್ರೀಹರಿಯನ್ನೇ ತಿಳಿಸುವುದು, ಬೇರೆಯವರನ್ನಲ್ಲ. ಕಾರಣ ಹೃಷಿಕೇಶ ಎಂದರೆ ಹರಿಯೇ ಬ್ರಹ್ಮನಲ್ಲ. ಹಾಗಾದರೆ ಈ

ಪ್ರಕರಣದಲ್ಲಿ ಬ್ರಹ್ಮನಿಗೆ ಸೃಷ್ಟಿಕರ್ತೃತ್ವ ಹೇಳುವ ಶಬ್ದಗಳಿಗೆ ಏನು ಗತಿ ಎಂದರೆ ಅವುಗಳೂ ಸಹ ತದಧೀನತ್ವ ನ್ಯಾಯದಿಂದ ಹರಿಯನ್ನು ತಿಳಿಸುವುವು. ಅವರಲ್ಲಿರುವ ಪ್ರವೃತ್ತಿನಿಮಿತ್ತವುಳ್ಳ ಶಬ್ದಗಳು ಉತ್ತಮನಾದ ಹರಿಯಲ್ಲಿ ಸ್ವಾತಂತ್ರ್ಯ ನಿಮಿತ್ತದಿಂದ ಪ್ರಯೋಗಿಸಲ್ಪಡುವುವು. ಕೇವಲ ಪ್ರವೃತ್ತಿ ನಿಮಿತ್ತವುಳ್ಳವರನ್ನು ಮಾತ್ರ ತಿಳಿಸುವುದಿಲ್ಲ.

ಯುದ್ಧಕ್ಕೆ ಬಂದ ಭೃತ್ಯನು ಜಯಿಸಿದಾಗ ಪರಾಜಯಿಸಿದಾಗ ತನ್ನ ಭೃತ್ಯನಲ್ಲಿರುವ ಜಯಪರಾಜಯ ನಿಮಿತ್ತಕವಾದ ಜಯೀ ಪರಾಜಯೀ ಎಂಬ ಶಬ್ದಗಳು ಸ್ವಾಮಿಯಾದ ರಾಜನಲ್ಲಿ ಪ್ರಯೋಗಿಸಲ್ಪಡುವವೋ ಹಾಗೆ ಎಂದರ್ಥ.

ಅಂತು ಶ್ರೀಹರಿಯೇ ಸೃಷ್ಟಿಕರ್ತಾ ಎಂದು ಇಲ್ಲಿ ಹೇಳುವುದು. ಬ್ರಹ್ಮದೇವರು ದ್ವಾರಮಾತ್ರ, ಎಂದು ಈ ಪ್ರಕರಣದ ತಾತ್ಪರ್ಯ ತಿಳಿಸಲು ಮೂಲದಲ್ಲಿ ಹೃಷೀಕೇಶಪದವನ್ನು ಪ್ರಯೋಗಿಸಿರುವರು ಎಂದು ಭಾವ. ॥೫೩॥

**ಇಲ್ಲಿಗೆ ಇಪ್ಪತ್ತೊಂದನೇ ಅಧ್ಯಾಯ ಸಮಾಪ್ತಿಯಾಯಿತು**

# ಇಪ್ಪತ್ತೊಂದನೆಯ ಅಧ್ಯಾಯದ ತಾತ್ಪರ್ಯ

ಪರೀಕ್ಷಿದ್ರಾಜರು - ಶುಕಾಚಾರ್ಯ, ಈ ಹಿಂದೆಯೇ ತಾವು ಹೇಳಿದ ಸ್ವಾಯಂಭುವಮನುರಾಜರು ಶ್ರೀಹರಿಯಿಂದ ಸ್ಥಾಪಿತವಾದ ಈ ಭೂಮಿಯಲ್ಲಿ ಇದ್ದುಕೊಂಡು ಮುಂದೆ ಹುಟ್ಟುವ ಪ್ರಾಣಿಗಳ ವರ್ಣ, ಆಶ್ರಮ ಇವುಗಳ ಭೇದಗಳನ್ನು ನೆಲೆಗೊಳಿಸಲು ಯಾವ ಯಾವ ಸಾಧನಗಳನ್ನು ಆಶ್ರಯಿಸಿದರು ? ಮಹಾಭಗವದ್ಭಕ್ತರಾದ ವಿದುರರು ಶ್ರೀಕೃಷ್ಣನ ಏಕಾಂತ ಸ್ನೇಹಿತರೆನಿಸಿಕೊಂಡವರು. ಕೃಷ್ಣನಲ್ಲಿ ಅಪರಾಧವೆಸಗಿದ ಅಣ್ಣನಾದ ಧೃತರಾಷ್ಟ್ರನನ್ನೂ ಆತನ ಮಕ್ಕಳಾದ ದುರ್ಯೋಧನ ಮೊದಲಾದವರನ್ನೂ ಬಿಟ್ಟು ಬಿಟ್ಟರಲ್ಲವೇ ! ವೇದವ್ಯಾಸರ ಅನುಗ್ರದಿಂದ ಹುಟ್ಟಿದ ಅವರು ಲೋಕರಿಗೆ ವೇದವ್ಯಾಸರಷ್ಟೇ ಹಿರಿಯರಾಗಿ ಕಂಡರು. ಎಲ್ಲರೀತಿಯಿಂದಲೂ ಕೃಷ್ಣನನ್ನೇ ಆಶ್ರಯಿಸಿದ್ದ ವಿದುರರು ಕೃಷ್ಣಭಕ್ತರನ್ನು ಅನುಸರಿಸುವ ಸ್ವಭಾವದವರು. ತೀರ್ಥಯಾತ್ರೆಯಿಂದ ಪಾಪರಹಿತರಾಗಿದ್ದ ಇವರು ಗಂಗಾದ್ವಾರದಲ್ಲಿ ಮೈತ್ರೇಯರನ್ನು ಸಂಧಿಸಿದರಷ್ಟೆ. ಆಗ ಆ ತತ್ವವೇತ್ತರನ್ನು ಏನೇನು ಪ್ರಶ್ನೆ ಮಾಡಿದರು ? ಅವರಿಬ್ಬರ ಸಂಭಾಷಣೆಯೆಂದರೆ ನಿರ್ದೋಷನಾದ ಶ್ರೀಹರಿಯ ಕಥೆಗಳೇ ಹೊರತು ಬೇರೆಯಲ್ಲ. ಆ ಕಥೆಗಳು ಶ್ರೀಹರಿಗೆ ಸಂಬಂಧಪಟ್ಟವಾದ್ದರಿಂದ ಗಂಗೆಯ ನೀರಿನಂತೆ ಪಾಪಹಾರಿಗಳು. ಶ್ರೀಹರಿಯ ಕರ್ಮಗಳು ಉದಾತ್ತವಿದ್ದು ಕೀರ್ತನೆಗೆ ಅರ್ಹವಾದುವು. ಅವುಗಳನ್ನು ನಮಗಾಗಿ ಬಿತ್ತರಿಸಿರಿ. ಹರಿಕಥೆಯ ರಸವನ್ನು ಆಸ್ವಾದಿಸಬಲ್ಲ ಯಾವನೂ ಶ್ರೀಹರಿ ಕಥಾಮೃತಪಾನಮಾಡಿ ಸಾಕು ಎಂದು ಬಿಡುವುದಿಲ್ಲ.

ಸೂತರು - ಶೌನಕರೆ, ಪರೀಕ್ಷಿದ್ರಾಜರಿಂದ ಹೀಗೆ ಕೇಳಿಸಿಕೊಂಡ ಶ್ರೀಶುಕಾಚಾರ್ಯರು ತಮ್ಮ ಎಲ್ಲ ಇಂದ್ರಿಯಗಳನ್ನೂ ಶ್ರೀಹರಿಗೆ ಸಮರ್ಪಿಸಿ ಪರೀಕ್ಷಿದ್ರಾಜನನ್ನು ಕೇಳು ಎಂದು ಹೇಳಿ ಹೇಳಲಾರಂಭಿಸಿದರು.

ಶ್ರೀಶುಕಾಚಾರ್ಯರು - ರಾಜನ್, ಶ್ರೀಹರಿಯು ತನ್ನ ಇಚ್ಛೆಯಿಂದಲೇ ವರಾಹರೂಪವನ್ನು ಪಡೆದನು. ಭೂಮಿಯನ್ನು ರಸಾತಲದಿಂದ ಮೇಲಕ್ಕೆ ತಂದನು. ಯಾವ ಆಯಾಸವೂ ಇಲ್ಲದೆ ಹಿರಣ್ಯಾಕ್ಷನನ್ನು ಸಂಹರಿಸಿದನು. ಈ ಕಥೆಗಳನ್ನೆಲ್ಲ ಮೈತ್ರಯರಿಂದ ಕೇಳಿದ ವಿದುರರಿಗೆ ತುಂಬ ಸಂತೋಷವಾಯಿತು. ಮತ್ತೆ ಅವರು

ಮೈತ್ರೇಯರನ್ನು ಕುರಿತು "ಬ್ರಹ್ಮನ್ ಬ್ರಹ್ಮದೇವರು ಸೃಷ್ಟಿಗಾಗಿ ಪ್ರಜೇಶ್ವರರನ್ನು ಸೃಷ್ಟಿಸಿದರಲ್ಲವೇ ! ಹಾಗವರನ್ನು ಸೃಷ್ಟಿಸಿದ ಮೇಲೆ ಮತ್ತೇನನ್ನು ಪ್ರಾರಂಭಿಸಿದರು ? ತಾವು ಶ್ರೀಹರಿಯ ತತ್ವಗಳನ್ನು ಯಥಾವತ್ತಾಗಿ ತಿಳಿದಿರುವಿರಿ. ದಯವಿಟ್ಟು ನಮಗಾಗಿ ವಿಶದಪಡಿಸಿರಿ. ಮರೀಚಿ ಮೊದಲಾದ ಬ್ರಹ್ಮದೇವರ ಬ್ರಾಹ್ಮಣ ಸಂತತಿಯವರೂ, ಸ್ವಾಯಂಭೂ ಮೊದಲಾದ ಕ್ಷತ್ರಿಯ ಸಂತತಿಯವರೂ, ಅವರ ಅಪ್ಪಣೆಯನ್ನು ಪಡೆದು ಹೇಗೆ ಈ ಸೃಷ್ಟಿಯನ್ನು ಬೆಳೆಸಿದರು. ಕರ್ಮ ನಿಯಾಮಕನಾದ ಶ್ರೀಹರಿಯಿಂದ ಪ್ರೇರಿತರಾದ ಅವರೇನು ಹೆಂಡತಿಯರಿಂದ ಕೂಡಿ ಬೆಳೆಸಿದರೇ ? ತಾವೇ ಪರಾಪೇಕ್ಷೆಯಿಲ್ಲದೆ ಬೆಳೆಸಿದರೇ ? ಇಲ್ಲವೇ ಎಲ್ಲರೂ ಸೇರಿ ಸೃಷ್ಟಿಯನ್ನು ತುಂಬಿಸಿದರೇ ? ಬಹುಶಃ ಎಲ್ಲರೂ ಸೇರಿಯೇ ಮಾಡಿರಬೇಕು. !" ಎಂದು ಪ್ರಶ್ನಿಸಿದರು,

ಮೈತ್ರೇಯರು – ವಿದುರ, ಜೀವರು ಅನಂತ. ಅವರ ಅದೃಷ್ಟಗಳೂ ಅನಂತ. ಅವುಗಳನ್ನು ಊಹಿಸಲು ಸಾಧ್ಯವಿಲ್ಲ. ಆದರೆ ಅವುಗಳಿಗೆ ನಿಯಾಮಕನಾದ ಶ್ರೀಹರಿ ಅವುಗಳನ್ನು ಬಲ್ಲ. ಊಹೆಗೆ ನಿಲುಕದ ಶ್ರೀಹರಿಯು ಸೃಷ್ಟಿಕಾಲವನ್ನು ಅನುಸರಿಸಿ ಜೀವರನ್ನು ಸೃಷ್ಟಿಗೆ ತರಬಯಸಿ ತನ್ನ ಶಯ್ಯೆಯಾಗಿದ್ದ ಲಕ್ಷ್ಮಿಯನ್ನು ಜಡಪ್ರಕೃತಿಗೆ ಅಭಿಮಾನಿಯನ್ನು – ಸೃಷ್ಟಿಸುವ ಇಚ್ಛೆಯಲ್ಲಿ ತೊಡಗಿಸಿದ. ಗುಣತ್ರಯಗಳಲ್ಲಿ ಪ್ರವೇಶಿಸಿ ಪರಿಣಾಮ ಹೊಂದುವ ಸಾಮರ್ಥ್ಯವನ್ನು ವ್ಯಕ್ತಪಡಿಸಿದ. ಹೀಗೆ ವಿಕಾರ ಹೊಂದಿದ ಗುಣತ್ರಯಗಳಿಂದ ಮಹತ್ತತ್ತ್ವವೂ, ಅದಕ್ಕೆ ಅಭಿಮಾನಿಗಳಾದ ಬ್ರಹ್ಮ ವಾಯು, ಸರಸ್ವತೀ ಭಾರತಿಯರೂ ಉತ್ಪನ್ನರಾದರು. ಈ ಮಹತ್ತತ್ತ್ವದಲ್ಲಿ ಮೂರು ಗುಣಗಳಲ್ಲಿಯೂ ಇರುವ ರಜೋಗುಣಗಳು ತುಂಬಿರುವುವು. ಆದ್ದರಿಂದ ಇದು ರಜಃಪ್ರಧಾನವೆನಿಸುವುದು. ಶ್ರೀಹರಿಯ ಇಚ್ಛೆಯಿಂದ ಇದೂ ವಿಕಾರಹೊಂದಿತು. ಇದರಿಂದ ವೈಕಾರಿಕ, ತೈಜಸ ಮತ್ತು ತಾಮಸವೆಂಬ ಮೂರು ರೀತಿಯ ಅಹಂಕಾರತತ್ತ್ವವೂ, ಅದರ ಅಭಿಮಾನಿಗಳಾದ ಗರುಡ ಶೇಷ ರುದ್ರ ಮೊದಲಾದವರು ಇವರ ಹೆಂಡತಿಯರಾದ ಸೌಪರ್ಣಿ, ವಾರುಣೀ, ಪಾರ್ವತಿ ಮೊದಲಾದವರೂ ಹುಟ್ಟಿದರು. ವೈಕಾರಿಕಾಹಂಕಾರದಿಂದ ಮನಸ್ಸೂ ಅದರ ಅಭಿಮಾನಿಗಳಾದ ಅನಿರುದ್ಧ ಚಂದ್ರರು ಹುಟ್ಟಿದರು. ತೈಜಸಾಹಂಕಾರದಿಂದ ಶ್ರೋತ್ರ, ಚಕ್ಷುಸ್ಸು ಘ್ರಾಣ, ತ್ವಕ್, ರಸನ ವಾಕ್, ಪಾಣಿ, ಪಾದ, ಪಾಯು ಮತ್ತು ಉಪಸ್ಥವೆಂಬ ಹತ್ತು ಇಂದ್ರಿಯಗಳು ಹುಟ್ಟಿದುವು. ತಾಮಸಾಹಂಕಾರದಿಂದ ಆಕಾಶ ಮೊದಲಾದ ಪಂಚಭೂತಗಳು ಅವುಗಳ ಅಭಿಮಾನಿಗಳೂ ಉತ್ಪನ್ನರಾದರು. ಈ ತತ್ವಗಳು ಪ್ರತ್ಯೇಕವಾಗಿ ಒಂದೊಂದೇ ಭೌತಿಕವಾದ ಬ್ರಹ್ಮಾಂಡವನ್ನು ಸೃಷ್ಟಿಸಲಾರದೆ

ಹೋದುವು. ಆಗ ಶ್ರೀಹರಿಯು ಅನುಗ್ರಹಿಸಿದನು. ಅವನ ಚೇಷ್ಟಕರೂಪವಾದ ಅನುಗ್ರಹದಿಂದ ಅವೆಲ್ಲವೂ ಸೇರಿ ಬಂಗಾರಮಯವಾದ ಬ್ರಹ್ಮಾಂಡವನ್ನು ಸೃಷ್ಟಿಸಿದುವು. ಆ ಬ್ರಹ್ಮಾಂಡದಲ್ಲಿ ಶ್ರೀಹರಿಯು ಅವ್ಯಕ್ತವಾಗಿ ಇರುವನು. ಹೀಗೆ ಹರಿಯಿಂದ ವ್ಯಾಪ್ತವಾದ ಬ್ರಹ್ಮಾಂಡವು ಉದಕದಲ್ಲಿ ಒಂದು ಸಾವಿರ ವರ್ಷಕಾಲ ಇದ್ದಿತು. ಆ ಬ್ರಹ್ಮಾಂಡದ ಒಳಗಣ ಉದಕದಲ್ಲಿ ಶ್ರೀಹರಿಯೂ ಒಂದು ಸಾವಿರ ವರ್ಷಕಾಲ(ದೇವಮಾನ)ಅವ್ಯಕ್ತನಾಗಿ ನೆಲಸಿದನು. ಲಕ್ಷ್ಮಿಯೇ ಅವನ ಪರ್ಯಂಕ-ದಲ್ಲಿ ಸನ್ನಿಹಿತಳಾಗಿದ್ದಳು. ಕಾಲನಾಮಕರಾದ ಬ್ರಹ್ಮದೇವರು ಉದರಲ್ಲಿ ಇದ್ದರು. ಆ ಶ್ರೀಹರಿಯ ನಾಭಿಯಿಂದ ಸಾವಿರ ಸೂರ್ಯರಕಾಂತಿಗಿಂತಲೂ ಹೆಚ್ಚಿನ ಕಾಂತಿಯುಳ್ಳ ಕಮಲವೊಂದು ಹೊರಹೊಮ್ಮಿತು. ಆ ಕಮಲವೇ ಎಲ್ಲ ಜೀವಸಮೂಹಕ್ಕೂ ಆಶ್ರಯವು. ಆದ್ದರಿಂದಲೇ ಅದರಿಂದ ಸರ್ವಜೀವಪ್ರಧಾನರಾದ ಬ್ರಹ್ಮದೇವರು ಹೊರಬಂದರು. ಆ ಉದಕಶಾಯಿಯಾಗಿದ್ದ ನಾರಾಯಣನು ಒಂದು ಅಂಶದಿಂದ ಬ್ರಹ್ಮದೇವರಲ್ಲಿ ಪ್ರವೇಶಿಸಿದನು. ಹೀಗೆ ಬ್ರಹ್ಮದೇವರಲ್ಲಿ ಪರಮಾತ್ಮನ ಸಾಮರ್ಥ್ಯವು ತುಂಬಿತು. ಅದರ ಸಹಾಯದಿಂದ ಅವರು ಹಿಂದಿನ ಕಲ್ಪಗಳಲ್ಲಿ ಇದ್ದಂತೆ ಹದಿನಾಲ್ಕು ಲೋಕಗಳ ವ್ಯವಸ್ಥೆಯನ್ನು ಆ ಕಮಲದಿಂದ ನಿರ್ಮಿಸಿದರು.

ತಾವು ಸೃಷ್ಟಿಸುವ ಪದಾರ್ಥಗಳ ಸ್ವಭಾವಗಳನ್ನು ವ್ಯಕ್ತಪಡಿಸಲು ಅವುಗಳನ್ನು ಸೃಷ್ಟಿಸುವಾಗ ಅವುಗಳಿಗೆ ತಕ್ಕ ಬಾಹ್ಯ ದೇಹಗಳನ್ನು ಮೊದಲು ತಾವು ಪಡೆದು ಬ್ರಹ್ಮದೇವರು ಸೃಷ್ಟಿಸುತ್ತ ಬಂದರು. ಆ ದೇಹಗಳನ್ನು ಬಿಟ್ಟು ಅವರವರಿಗೆ ಅವುಗಳನ್ನು ಬಿಟ್ಟುಕೊಟ್ಟರು. ಅವರು ಮೊದಲು ಛಾಯೆಯೆಂಬ ದೇಹವನ್ನು ಪಡೆದರು. ಅದರಿಂದ ತಾಮಿಸ್ರ ಮೊದಲಾದ ಐದು ಭಾಗಗಳುಳ್ಳ ಅವಿದ್ಯೆಯನ್ನು ಸೃಷ್ಟಿಸಿದರು. ಆ ಛಾಯಾದೇಹವು ಕೇವಲ ಕತ್ತಲೆಯಾಗಿದ್ದಿತು. ಅದಕ್ಕೆ ರಾತ್ರಿಯೆಂದೂ ಹೆಸರು. ಈ ದೇಹದಿಂದ ಯಕ್ಷರಾಕ್ಷಸರನ್ನು ಸೃಷ್ಟಿಸಿದ ಬ್ರಹ್ಮದೇವರು ಆ ದೇಹವನ್ನು ಬಿಟ್ಟುಬಿಟ್ಟರು. ಅದು ಹಸಿವು ನೀರಡಿಕೆಗಳಿಗೆ ಕಾರಣವಾಗಿತ್ತು. ಸೃಷ್ಟರಾಗಿದ್ದ ಯಕ್ಷರಾಕ್ಷಸರು ರಾತ್ರಿಯನ್ನು ತಮಗಾಗಿ ತೆಗೆದುಕೊಂಡರು. ಅವರನ್ನು ಹಸಿವು ಬಾಯಾರಿಕೆಗಳು ಕಾಡಿದವು. ಹೀಗೆ ಹಸಿವು ಬಾಯಾರಿಕೆಗಳಿಂದ ನೊಂದ ಅವರು ಇವನನ್ನು ಉಳಿಸಬೇಡಿರಿ. ತಿಂದುಬಿಡಿರಿ ಎನ್ನುತ್ತ ಕೂಗಿಕೊಂಡು ಬ್ರಹ್ಮದೇವರನ್ನು ತಿನ್ನಲು ಓಡಿಬಂದರು. ಬ್ರಹ್ಮದೇವರಿಗೆ ಯಾವ ಬಗೆಯ ಖೇದವೂ ಇಲ್ಲ. ಆದರೂ ಮೋಹಗೊಳಿಸಲು ಖಿನ್ನರಂತೆ ಕಾಣಿಸಿಕೊಂಡರು. 'ನನ್ನನ್ನು ತಿನ್ನಬೇಡಿ. ಉಳಿಸಿರಿ ನೀವು ನನ್ನ ಪ್ರಜೆಗಳು. ನಿಮ್ಮಲ್ಲಿ ತಿನ್ನಿರಿ ಎಂದು ಕೂಗಿದವರು ರಾಕ್ಷಸರಾಗಿಯೂ, ರಕ್ಷಿಸಿರಿ ತಿನ್ನಬೇಡಿ ಎಂದವರು ಯಕ್ಷರಾಗಿಯೂ ನನ್ನ ಮಕ್ಕಳಾಗುವಿರಿ. ಮಕ್ಕಳು

ತಂದೆಯನ್ನೇ ಕೊಲ್ಲುವುದೇ ? ಎಂದು ಹೇಳಿ ಸಮಾಧಾನಪಡಿಸಿದರು. ಅನಂತರ ಬ್ರಹ್ಮದೇವರು ಪ್ರಭೆಯೆಂಬ ಪ್ರಕಾಶಮಾನವಾದ ದೇಹವನ್ನು ತೆಗೆದು ಕೊಂಡರು. ಆದೇಹದಿಂದ ದೇವತೆಗಳನ್ನು ಸೃಷ್ಟಿಸಿದರು. ಈ ದೇವತೆಗಳೆಲ್ಲರೂ ಕ್ರೀಡಾದಿ ಗುಣವಿಶಿಷ್ಟರು. ವಿದ್ಯೆಯೆಂಬ ಮತ್ತೊಂದು ಹೆಸರುಳ್ಳ ಈ ದೇಹವನ್ನು ಬ್ರಹ್ಮದೇವರು ಬಿಟ್ಟರು. ಆಗ ದೇವತೆಗಳು ಅದನ್ನು ತಮ್ಮದನ್ನಾಗಿ ಮಾಡಿಕೊಂಡರು. ಆದಕ್ಕೆ ಹಗಲು ಎಂದು ಹೆಸರಾಯಿತು. ಆದ್ದರಿಂದ ಹಗಲಿನಲ್ಲಿ ದೇವತಾ ಕಾರ್ಯಗಳೂ ರಾತ್ರಿಯಲ್ಲಿ ರಾಕ್ಷಸಕಾರ್ಯಗಳೂ ನಡೆಯುವಂತಾದುವು.

ಬ್ರಹ್ಮದೇವರು ಸಾಧನೆಗೆ ವಿರುದ್ಧವಾದ ಜಘನವೆಂಬ(ಸ್ತ್ರೀ)ದೇಹವನ್ನು ಪಡೆದರು. ಅದರಿಂದ ಅತ್ಯಂತ ವಿಷಯಾಸಕ್ತರಾದ ಅಸುರರನ್ನು ಸೃಷ್ಟಿಸಿದರು. ಅತ್ಯಂತ ವಿಷಯಾಕಾಂಕ್ಷಿಗಳಾದ ಈ ಅಸುರರು ಬ್ರಹ್ಮದೇವರನ್ನೇ ಮಿಥುನ ಕರ್ಮಕ್ಕಾಗಿ ಅಪೇಕ್ಷಿಸಿದರು. ಬ್ರಹ್ಮದೇವರು ನಕ್ಕರು. ಅಸುರರಿಗೆ ನಾಚಿಕೆ ಇಲ್ಲದಿರುವುದನ್ನು ತಿಳಿದರು. ಆದರೆ ತಮ್ಮನ್ನೇ ಅಟ್ಟಿಸಿಕೊಂಡು ಬರುತ್ತಿದ್ದ ಅವರ ಮೇಲೆ ಸಿಟ್ಟಾದರು. ಲೋಕವಿಡಂಬನೆಗಾಗಿ ಹೆದರಿದಂತೆ ಓಡುತ್ತ ವರಪ್ರದನಾದ ವಿಷ್ಣುವನ್ನು ಮರೆಹೊಕ್ಕರು. ಶ್ರೀಹರಿ ಮರೆಹೊಕ್ಕವರ ದುಃಖವನ್ನು ಹೋಗಲಾಡಿ- ಸಿಯೇ ತೀರುವನು. ಅವನನ್ನು ಯಾರು ಯಾರು ಹೇಗೆ ಹೇಗೆ ಉಪಾಸಿಸುವರೋ ಹಾಗೆ ಹಾಗೆ ಅವರ ಯೋಗ್ಯತೆಗೆ ತಕ್ಕಂತೆ ಅಪರೋಕ್ಷನಾಗುವನು. ಇದೇ ಅವನು ಭಕ್ತರಲ್ಲಿ ಮಾಡುವ ಅನುಗ್ರಹ. ಬ್ರಹ್ಮದೇವರು ಶ್ರೀಹರಿಯನ್ನು 'ಪರಮಾತ್ಮನೇ, ನನ್ನನ್ನು ಕಾಪಾಡು. ನಿನ್ನ ಆಜ್ಞೆಯಂತೆ ಪ್ರಜೆಗಳನ್ನು ಸೃಷ್ಟಿಸಿದೆ. ಹಾಗೆ ಸೃಷ್ಟಿಸಿದ ಪ್ರಜೆಗಳಾದ ಈ ಅಸುರರು ನನ್ನನ್ನೇ ವಿಷಯಸುಖಕ್ಕಾಗಿ ಹಿಂಬಾಲಿಸುತ್ತಿರುವರು. ನೀನೇ ಭಕ್ತರ ಕಷ್ಟವನ್ನು ಹೋಗಲಾಡಿಸುವವನು. ನಿನ್ನನ್ನು ಹೊಂದದ ಅಭಕ್ತರಿಗೆ ಕ್ಲೇಶ ಕೊಡುವವನೂ ನೀನೇ.' ಎಂದು ದೈನ್ಯದಿಂದ ಬೇಡಿದರು. ಸರ್ವಜ್ಞನಾದ ಶ್ರೀಹರಿಯು ಬ್ರಹ್ಮದೇವರ ಸಾಮರ್ಥ್ಯವನ್ನು ಬಲ್ಲ. ಸಮರ್ಥರಾದರೂ ತಮ್ಮ ಕಷ್ಟವನ್ನು ತಾವೇ ಪರಿಹರಿಸಿಕೊಳ್ಳದೆ ತನ್ನ ಬಳಿಗೆ ಬಂದು ತನ್ನನ್ನು ಆಶ್ರಯಿಸಿದು- ದಕ್ಕಾಗಿ ಅವರಲ್ಲಿ ಮತ್ತಷ್ಟು ಪ್ರೀತಿ ಮಾಡಿದನು. ದೈನ್ಯಕ್ಕೆ ಕಾರಣವಿಲ್ಲದಿದ್ದರೂ ಲೋಕವಿಡಂಬನೆಗೆ ತೋರಿದ ಅದನ್ನು ತಿಳಿದ ಶ್ರೀಹರಿ 'ಬ್ರಹ್ಮನ್ ಸಾಧನೆಗೆ ಅನುಕೂಲವಲ್ಲದ, ಆದ್ದರಿಂದಲೇ ಘೋರವಾದ ಈ ದೇಹವನ್ನು ಬಿಟ್ಟುಬಿಡು. ಇದರಿಂದೇನು ಪ್ರಯೋಜನ ? ಅನುಕೂಲವಾದ ನೀನ್ನ ದೇಹ ನಿನಗೆ ಇದ್ದೇ ಇದೆ' ಎಂದನು. ಶ್ರೀಹರಿಯ ಜ್ಞಾನವು ಮತ್ತೊಬ್ಬರ ಅಧೀನದ್ದಲ್ಲ. ಅವನ ಹಿರಿಮೆಯ ಅರಿವು ಅವನಿಗೆ ಯಾವಾಗಲೂ ಇದ್ದೇ ಇದೆ. ಅವನ ಮಾತನ್ನು ಕೇಳಿ ಬ್ರಹ್ಮದೇವರು

ತಮ್ಮ ಮಧ್ಯದೇಹದಿಂದ ಬಂದಿದ್ದ ಆ ಸಂಧ್ಯೆಯೆನಿಸುವ ಜಘನ ದೇಹವನ್ನು ಬಿಟ್ಟರು. ಅಸುರರು ಆ ಸ್ತ್ರೀರೂಪದದೇಹವನ್ನು ನೋಡಿ ಮುಗ್ಧರಾದರು. ಅವಳ ಕಮಲದಂತಿದ್ದ ಕಾಲುಗಳು ನೂಪುರಗಳಿಂದ ದನಿಗೈಯ್ಯುತ್ತಿದ್ದುವು. ಏರುಂ ಜವ್ವನದ ಅವಳ ಕಣ್ಣುಗಳು ಅತಿಚಂಚಲವಾಗಿದ್ದವು. ಅವಳ ನಡುವನ್ನು ಆವರಿಸಿದ್ದ ರೇಷ್ಮೆ ಸೀರೆಯ ಮೇಲೆ ಒಡ್ಯಾಣದ ಪಟ್ಟಿತುಯು ಶೋಭಿಸುತ್ತಿತ್ತು. ಅವಳ ಎರಡು ಪಯೋಧರಗಳೂ ಪರಸ್ಪರ ಒತ್ತಡದಿಂದ ಮಧ್ಯಾವಕಾಶವಿಲ್ಲದೆ ಎತ್ತರವಾಗಿ ಎದ್ದು ಕಾಣುತ್ತಿದ್ದವು. ಸುಂದರವಾದ ಮೂಗು ಸಾಲಾಗಿರುವ ಸಣ್ಣ ಹಲ್ಲುಗಳು ಇವುಗಳಿಂದ ಕೂಡಿದ ಆಹೆಣ್ಣು ಮೋಹಕವಾದ ನಗೆಯನ್ನು ಬೀರಿ ನೋಟವನ್ನಿತ್ತ ಪಸರಿಸಿದ್ದಳು. ಅವಳ ಕಪ್ಪು ಮುಂಗೂದಲುಗಳು ಹಣೆಯನ್ನು ಮುಚ್ಚಿದ್ದವು. ಆದರವಳು ತನ್ನನ್ನು ತೋರಬಾರದೆಂದು ಅವಿತಿಟ್ಟುಕೊಳ್ಳುತ್ತಿದ್ದಳು. ಅಸುರರೆಲ್ಲರೂ ಅವಳನ್ನು ಮುತ್ತಿದರು. ಆ ಸ್ತ್ರೀರೂಪವನ್ನು ನೋಡಿದ ಅವರು 'ಅದೆಂತಹ ಸುಂದರ ರೂಪ ! ಅದೆಷ್ಟುಧೈರ್ಯ !! ಆಹಾ ! ಇವಳ ನೂತನ (ತಾರುಣ್ಯ) ವಯಸ್ಸು ! ನಾವಿಷ್ಟು ಜನರೂ ಅವಳನ್ನು ಅಪೇಕ್ಷಿಸುತ್ತಿದ್ದೇವೆ. ಆದರೂ ನಮ್ಮೆದುರಿನಲ್ಲಿಯೇ ಅವಳು ನಮ್ಮನ್ನು ಕಾಮಿಸದವಳಂತೆ ನಡೆಯುತ್ತಿದ್ದಾಳೆ' ಎಂದು ಮೊದಲಾಗಿ ವಿತರ್ಕ ಮಾಡಹತ್ತಿದರು. ಅನೇಕ ರೀತಿಯಲ್ಲಿ ತಮಗೆ ತೋರಿದಂತೆಲ್ಲ ಆ ಹೆಂಗಸಿನ ನಟನೆಯುಳ್ಳ ಸಂಧ್ಯೆಯನ್ನು ಅಸುರರು ಊಹಿಸುತ್ತಿದ್ದರು. ಆ ಕುಹಕ ಬುದ್ಧಿಗಳು ಆಕೆಯನ್ನು ಸಮೀಪಿಸಿ ಆತ್ಮೀಯತೆಯನ್ನು ತೋರಿ ವಿಶ್ವಾಸ ಪೂರ್ವಕವಾಗಿ 'ಎಲೇ ಕಾಂತಿಮತಿ, ಸುಂದರಿ, ನೀನು ಯಾರು ? ಯಾರವಳು ? ಇಲ್ಲಿಗೇತಕ್ಕೆ ಬಂದೆ ? ಅಯ್ಯೋ ನಿನ್ನನ್ನು ಸೇರಿ ಸುಖಿಸುವ ಭಾಗ್ಯವಿಲ್ಲದ ನಾವೇ ಹತಭಾಗ್ಯರು. ನಿನ್ನ ರೂಪವನ್ನೇ ನೀನು ಕ್ರಯಕ್ಕಿಟ್ಟು ನಮ್ಮನ್ನು ಪೀಡಿಸುತ್ತಿರುವೆ. ನೀನು ಯಾರು ಬೇಕಾದರೂ ಆಗಿರು. ನಿನ್ನ ಸಂದರ್ಶನವೇ ನಮ್ಮ ಅದೃಷ್ಟದ ಫಲ. ನೀನು ಆಡುತ್ತಿರುವ ಚಂಡಾಟದಿಂದ ನಿನ್ನನ್ನೇ ಬೆರಗು ಬಡಿದು ನೋಡುತ್ತಿರುವ ನಮ್ಮ ಮನಸ್ಸನ್ನೇ ಕಲಕಿಬಿಟ್ಟಿರುವೆ. ನಿನ್ನ ಮಿದುವಾದ ಅಂಗೈಯಿಂದ ಮತ್ತೆ ಮತ್ತೆ ಹೊಡೆಸಿಕೊಂಡು ಮೇಲಕ್ಕೂ ಕೆಳಕ್ಕೂ ಹರಿದಾಡುತ್ತಿರುವ ಈ ಚೆಂಡು ಅನೇಕ ವೇಳೆ ನಿನ್ನ ಪಾದಕಮಲಗಳನ್ನೇ ಶರಣುಹೊಗುತ್ತಿದೆ. ಆ ನಿನ್ನ ಹಿರಿದಾದ ಸ್ತನಗಳ ಭಾರಕ್ಕೆ ಹೆದರಿ ನಡುವು ಸೋತುಹೋಗುತ್ತಿದೆ ನಿನ್ನ ನೋಟವು ದಣಿದಿದೆ. ಹೆರಳುಗಳು ಬಿಚ್ಚಿಹೋಗಿವೆ' ಎಂದು ಬಣ್ಣಿಸುತ್ತ ಬಂದರು. ಹೆಂಗಸಿನ ಹಾವಭಾವಗಳನ್ನು ತೋರುತ್ತಿದ್ದ ಆ ಸಾಯಂಸಂಧ್ಯೆಯನ್ನು ಅಸುರರು ಸ್ತ್ರೀಯೆಂದೇ ಬಗೆದರು. ಆ ರೂಪವು ಅವರನ್ನು ತನ್ನ ಕಡೆಗೆ ಎಳೆದುಕೊಂಡಿತ್ತು. ತಮ್ಮ ಮೇಲ್ಮೆಯನ್ನರಿಯದ ಆ ಮೂಢರು ಅವಳನ್ನು ತಮ್ಮವಳನ್ನಾಗಿ ಮಾಡಿಕೊಂಡರು.

ಬ್ರಹ್ಮದೇವರು ಶೃಂಗಾರ ಚೇಷ್ಟೆಗಳಿಂದ ತುಂಬಿದ ನಗುವನ್ನು ನಕ್ಕು ಕಾಂತಿಯೆಂಬ ಮತ್ತೊಂದು ದೇಹವನ್ನು ಪಡೆದರು. ತನ್ನನ್ನು ತಾನೇ ನೋಡಿ ಮೂಸಿನೋಡುತ್ತಿದ್ದ ಆ ದೇಹದಿಂದ ಗಂಧರ್ವರನ್ನೂ ಅಪ್ಸರೆಯರನ್ನೂ ಸೃಷ್ಟಿಸಿದರು. ಮನಸ್ಸಿಗೂ ನೋಟಕ್ಕೂ ಹಿತಕರವಾದ ಕಾಂತಿಯುಕ್ತವಾದ ಆ ದೇಹವನ್ನು ಜ್ಯೋತ್ಸ್ನೆಯೆಂದೂ ಕರೆದರು. ಆ ಬೆಳದಿಂಗಳಿನಂತಿದ್ದ ದೇಹವನ್ನು ಬಿಟ್ಟಕೂಡಲೆ ವಿಶ್ವಾವಸು ಮೊದಲಾದ ಗಂಧರ್ವರು ಪ್ರೀತಿಯಿಂದ ಆ ದೇಹವನ್ನು ತಮ್ಮದನ್ನಾಗಿ ಮಾಡಿಕೊಂಡರು. ಬ್ರಹ್ಮದೇವರು ದೇಹಗಳ ಆಲಸಿಕೆಯನ್ನು ವ್ಯಕ್ತಪಡಿಸುವ ಜೃಂಭಣವೆಂಬ ದೇಹವನ್ನು ಹೊಂದಿ ಭೂತ ಪಿಶಾಚಗಳನ್ನು ಸೃಷ್ಟಿಸಿದರು. ದಿಗಂಬರರೂ ಬಿರಿಹಾಕಿದ ಕೂದಲುಗಳುಳ್ಳವರೂ ಆದ ಆ ಗಣಗಳನ್ನು ನೋಡಿ ಕಣ್ಣುಮುಚ್ಚಿದರು.

ಜನರಲ್ಲಿ ಅತಿನಿದ್ರೆ ಇಂದ್ರಿಯಗಳ ಆಯಾಸ ಮುಂತಾದುವನ್ನು ಈ ದೇಹವು ಉಂಟುಮಾಡುವುದು ಈ ದೇಹದಿಂದ ಹಿಡಿಯಲ್ಪಟ್ಟವರಿಂದ ಪಿಶಾಚಾದಿಗಳು ತಮ್ಮ ಚೇಷ್ಟೆಯನ್ನು ಮಾಡಿಸುವುವು. ಇದನ್ನೇ ಬಲ್ಲವರು ಹುಚ್ಚು ಎನ್ನುವರು. ಇಂತಹ ಜೃಂಭಣವೆಂಬ ದೇಹವನ್ನು ಬ್ರಹ್ಮದೇವರು ಬಿಟ್ಟುಬಿಟ್ಟರು. ಅದನ್ನು ಭೂತ–ಪಿಶಾಚಗಳು ತಮ್ಮದನ್ನಾಗಿ ಮಾಡಿಕೊಂಡವು.

ಬ್ರಹ್ಮದೇವರು ಸಾರಭೂತವಾದ ಅನ್ನವುಳ್ಳದ್ದೆಂದು ತಿಳಿಯುತ್ತ ಪರೋಕ್ಷವೆಂಬ ದೇಹದಿಂದ ಸಾಧ್ಯ ಮತ್ತು ಪಿತೃಗಣಗಳನ್ನು ಸೃಷ್ಟಿಸಿದರು. ಆ ಕಾರಣದಿಂದಲೇ ಪಿತೃಗಳಿಗೆ ಅನ್ನದ ಪಿಂಡಗಳು ತೃಪ್ತಿಗೆ ಕಾರಣವಾದುವು. ಬ್ರಹ್ಮದೇವರು ಬಿಟ್ಟ ಆ ಪರೋಕ್ಷದೇಹವನ್ನು ಸಾಧ್ಯರೂ ಪಿತೃಗಳೂ ತಮ್ಮದನ್ನಾಗಿ ಮಾಡಿ ಕೊಂಡರು. ಇಂದಿಗೂ ಬಲಿಹರಣದಲ್ಲಿ ಜ್ಞಾನಿಗಳು ಇವರಿಗೆ ಅನ್ನವನ್ನು ಬಲಿಯಾಗಿ ಕೊಡುತ್ತಿರುವರು. ತಿರೋಧಾನವೆಂಬ ಮತ್ತೊಂದು ದೇಹವನ್ನು ಬ್ರಹ್ಮದೇವರು ಧರಿಸಿದರು. ಅದಕ್ಕೆ ಅಂತರ್ಧಾನವೆಂಬ ಮತ್ತೊಂದು ಹೆಸರು. ಈ ದೇಹವಿದ್ದರೂ ಕಣ್ಣಿಗೆ ಕಾಣದಿರುವುದರಿಂದ ಇತರ ದೇಹಗಳಿಗಿಂತ ಇದು ಆಶ್ಚರ್ಯಕರವಾದುದು. ಇದರಿಂದ ಸಿದ್ಧರನ್ನೂ ವಿದ್ಯಾಧರರನ್ನೂ ಸೃಷ್ಟಿಸಿದ ಬ್ರಹ್ಮದೇವರು ಅವರಿಗೆ ಆ ದೇಹವನ್ನು ಬಿಟ್ಟು ಕೊಟ್ಟರು. ತಮ್ಮ ದೇಹವನ್ನೇ ಮನಸ್ಸಿನಿಂದ ಪೂಜಿಸುತ್ತ ತಮ್ಮ ನೆರಳನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತ ಬ್ರಹ್ಮದೇವರು ರೂಪವೆಂಬ ತಮ್ಮ ದೇಹದಿಂದ ಕಿನ್ನರ ಮತ್ತು ಕಿಂಪುರುಷರನ್ನು ಸೃಷ್ಟಿಸಿದರು. ಅನಂತರ ಬ್ರಹ್ಮದೇವರು ಬಿಟ್ಟ ರೂಪವೆಂಬ ಆ ದೇಹವನ್ನು ಕಿನ್ನರ ಕಿಂಪುರುಷರು ತಮ್ಮದನ್ನಾಗಿ ಮಾಡಿಕೊಂಡರು. ಪ್ರಾತಃಕಾಲದಲ್ಲಿ ಬ್ರಹ್ಮದೇವರ ಚರಿತ್ರೆಯನ್ನು ಗಾನ ಮಾಡುತ್ತಾ ಗಂಡು ಹೆಣ್ಣುಗಳು ಮಿಥುನಗಳಾಗಿ ಸಂಚರಿಸುತ್ತ ಬಂದರು. ಇಷ್ಟಾದರೂ ತಮ್ಮ

ಸೃಷ್ಟಿಯು ವಿಶ್ವತೋಮುಖವಾಗಿ ಬೆಳೆಯದಿದ್ದುದನ್ನು ಕಂಡು ಬ್ರಹ್ಮದೇವರು ಕೋಪಗೊಂಡು ಹಾವಿನ ಆಕಾರದ ದೇಹದಿಂದ ಮಲಗಿದ್ದು ಆಲೋಚಿಸುತ್ತಾ ಆ ದೇಹವನ್ನು ಬಿಟ್ಟುಬಿಟ್ಟರು. ಆ ದೇಹದಿಂದ ಕಳಚಿಬಿದ್ದ ಕೇಶಗಳು ವಿಷವಿಲ್ಲದ ಹಾವುಗಳಾಗಿ ಸೃಷ್ಟವಾದುವು. ಹರಿದಾಡುವಿಕೆಯಿಂದ ಕೋಪಗೊಳ್ಳುವ ವೇಗವಾಗಿ ಹರಿದಾಡುವ ಉದ್ದವಾದ ದೇಹ ಮತ್ತು ದೊಡ್ಡ ಹೆಡೆಯ (ಕುತ್ತಿಗೆಯ) ಸರ್ಪಗಳು ಸೃಷ್ಟವಾದುವು. ಕೊನೆಗೆ ಬ್ರಹ್ಮದೇವರು ತಮ್ಮ ಬಾಹ್ಯದೇಹವು ಮಾಡಬೇಕಾದು-ದೆಲ್ಲವನ್ನೂ ಮಾಡಿತೆಂಬ ಅರಿಕೆಯಿಂದ ಲೋಕವನ್ನು ವಿಪುಲವಾಗಿ ಬೆಳೆಸುವ ಮನುಗಳನ್ನು ಸೃಷ್ಟಿಸಿದರು. ಅವರಿಗೆ ತಮ್ಮ ಬಾಹ್ಯದೇಹವನ್ನೇ ಬಿಟ್ಟುಕೊಟ್ಟರು. ಆಗ ಮೊದಲು ಸೃಷ್ಟರಾಗಿದ್ದ ದೇವತೆಗಳು ಸಂತೋಷಪಟ್ಟು ಬ್ರಹ್ಮದೇವರನ್ನು 'ಹೇ ಸೃಷ್ಟಿಕರ್ತರೆ, ನೀವು ಈ ಮನುಗಳನ್ನು ಸೃಷ್ಟಿಸಿದುದು ಬಹಳ ಒಳ್ಳೆಯದಾಯಿತು. ಇವರಿಂದಲೇ ಮುಂದೆ ಯಾಗಾದಿಕ್ರಿಯೆಗಳು ಬಳಕೆಗೆ ಬರುವುವು. ಇವರು ನಮಗೂ ನಿಮಗೂ ದ್ರವ್ಯತ್ಯಾಗ ಮಾಡಿ ಹೋಮಿಸುವರು. ನಿಮ್ಮೊಂದಿಗೆ ನಾವೂ ಆ ಹವಿಸ್ಸನ್ನು ತಿನ್ನುವೆವು. ನಮಗೆ ಈ ರೀತಿ ಇವರಿಂದ ಉಪಕಾರವಾದರೆ ಇವರಿಗೆ ನಾವೂ ಸಹಾಯಕರಾಗುವೆವು !' ಎಂದು ಪ್ರಶಂಸಿಸಿದರು. ತಪಸ್ಸು ಮತ್ತು ಜ್ಞಾನಗಳಿಂದ ಕೂಡಿದ ಬ್ರಹ್ಮದೇವರು ಈ ಹಿಂದೆಯೇ ಸಮಾಧಿಯಿಂದ ಕೂಡಿದ ಯೋಗವೆಂಬ ದೇಹದಿಂದ ಋಷಿಗಳನ್ನು ಸೃಷ್ಟಿಸಿದರು. ಈ ಋಷಿಗಳು ದೇವತೆಗಳಿಗೂ ಅಸುರರಿಗೂ ಸಮ್ಮತರಾಗಿ ಉಳಿದರು. ತಮ್ಮ ಈ ದೇಹದ ಅಂಶಗಳಾದ ತಪಸ್ಸು, ವಿದ್ಯೆ, ವೈರಾಗ್ಯ ಏಕಾಗ್ರತೆ ಮುಂತಾದವುವನ್ನು ಈ ಋಷಿಗಳಲ್ಲಿ ಒಬ್ಬೊಬ್ಬರಿಗೂ ಒಂದೊಂದನ್ನು ಕೊಟ್ಟು ಅವರು ಅನುಗ್ರಹಿಸಿದರು.

ಬ್ರಹ್ಮದೇವರು ಯಾವ ಯಾವ ಕಾರ್ಯ ಮಾಡುತ್ತ ಯಾರು ಯಾರನ್ನು ಸೃಷ್ಟಿಸಿದರೋ ಅವರ ಸ್ವಭಾವವು ಅದೇ ಆಗಿ ಉಳಿಯಿತು. ಈ ಎಲ್ಲ ಸೃಷ್ಟಿಗೂ ಬ್ರಹ್ಮದೇವರ ಅಂತರ್ಯಾಮಿಯಾದ ಶ್ರೀಹರಿಯೇ ಮುಖ್ಯಕರ್ತನೆಂದು ತಿಳಿಯಬೇಕು.



# ಅಥ ದ್ವಾವಿಂಶೋಽಧ್ಯಾಯಃ

'ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮೋ ಹರಿಂ ಭಜೇತ್' ಎಂದು ಹಿಂದೆ ಹೇಳಿದ್ದನ್ನು ಕರ್ದಮರ ಚರಿತ್ರೆ ಹೇಳುವ ಮೂಲಕ ಮೂರು ಅಧ್ಯಾಯಗಳಿಂದ ಹೇಳುವರು. ಮೊದಲಿಗೆ ಪ್ರಕೃತರಾದ ಮನು ಮತ್ತು ಋಷಿಗಳು ಮಾಡಿದ ಸೃಷ್ಟಿಯನ್ನು ಕೇಳಲಿಚ್ಛಿಸಿ ಮೊದಲಿಗೆ ಸ್ವಾಯಂಭುವಮನು ಮಾಡಿದ ಸೃಷ್ಟಿಯನ್ನು ಹೇಳಿರಿ ಎಂದು ಪ್ರಾರ್ಥಿಸುವನು.

**ವಿದುರ ಉವಾಚ**

**ಸ್ವಾಯಂಭುವಸ್ಯ ಚ ಮನೋರ್ವಂಶಃ ಪರಮಸಂಮತಃ ।**
**ಕಥ್ಯತಾಂ ಭಗವನ್ ಯತ್ರ ಮೈಥುನೇನೈಧಿರೇ ಪ್ರಜಾಃ ॥೧॥**

ಹೇ ಭಗವನ್=ಪೂಜ್ಯರಾದ ಮೈತ್ರೇಯರೇ, ಚ=ಯಾವ ಕಾರಣ, ಪರಮಸಂಮ್ಮತಃ=ಉತ್ತಮನೆಂದು ಎಲ್ಲರಿಗೂ ಸಮ್ಮತನಾಗಿರುವನೋ, ತಸ್ಮಾತ್= ಆದ ಕಾರಣ, ಮತ್ತು ಯತ್ರ=ಯಾವ ವಂಶದಲ್ಲಿ, ಮೈಥುನೇನ=ಸ್ತ್ರೀಪುರುಷರ ಸಂಬಂಧದಿಂದ, ಪ್ರಜಾಃ=ಪ್ರಜೆಗಳು,ಏಧಿರೇ=ಬಹಳವಾಗಿ, ಬೆಳೆದರೋ, (ಅಂಥ) ಸ್ವಾಯಂಭುವಸ್ಯ ಮನೋಃ=ಸ್ವಾಯಂಭುವ ಮನುವಿನ,ವಂಶಃ=ವಂಶವು ಕಥ್ಯತಾಂ =ಹೇಳಲ್ಪಡಲಿ. ॥೧॥

**ಪ್ರಿಯವ್ರತೋತ್ತಾನಪಾದೌ ಸುತೌ ಸ್ವಾಯಂಭುವಸ್ಯ ವೈ ।**
**ಯಥಾಧರ್ಮಂ ಜುಗುಪತುಃ ಸಪ್ತದ್ವೀಪವತೀಂ ಮಹೀಮ್ ॥೨॥**

ಸ್ವಾಯಂಭುವಸ್ಯ=ಸ್ವಾಯಂಭುವಮನುವಿಗೆ, ಪ್ರಿಯವ್ರತೋತ್ತಾನಪಾದೌ ಸುತೌ ವೈ=ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಮಕ್ಕಳಷ್ಟೇ ! ಅವರು ಸಪ್ತದ್ವೀಪವತೀಂ ಮಹೀಂ=ಏಳು ದ್ವೀಪಗಳಿಂದ ಕೂಡಿದ ಪೃಥಿವಿಯನ್ನು ಧರ್ಮಂ =ಧರ್ಮವನ್ನು, ಯಥಾ ಜುಗುಪತುಃ=ಹೇಗೆ ರಕ್ಷಿಸಿದರು (ತನ್ಮೇವದ=ಅದನ್ನು ನನಗೆ ಹೇಳಿರಿಯಂದು ನಾಲ್ಕನೆ ಶ್ಲೋಕದಿಂದ ಅನ್ವಯ) ದೇವಹೂತಿಯ ಕಥೆಯು ಅವಶ್ಯ ಕೇಳಬೇಕಾದುದಾಗಿದ್ದರೂ ಮೊದಲೇ ಅದನ್ನು ಹೇಳಿದರೆ

ಮನುವಿಗೆ ಕೇವಲ ಹೆಣ್ಣುಗಳೇ ಗಂಡು ಮಕ್ಕಳಿಲ್ಲ. ಕಾರಣ ಅಣ್ಣ ತಮ್ಮಂದಿರಿಲ್ಲದ ಕನ್ಯೆ ವಿವಾಹವಾಗಲು ಪ್ರಶಸ್ತವಲ್ಲ, ಎಂದು ವಿವಾಹವಾಗುವವನಿಗೆ ಸಂದೇಹ ಬಂದೀತು. ಹಾಗಾಗಬಾರದೆಂದು ಪುತ್ರರನ್ನು ಮೊದಲು ಹೇಳಿದ್ದು.

**ತಸ್ಯ ವೈ ದುಹಿತಾ ಬ್ರಹ್ಮನ್ ದೇವಹೂತೀತಿ ವಿಶ್ರುತಾ ।**
**ಪತ್ನೀ ಪ್ರಜಾಪತೇರುಕ್ತಾ ಕರ್ದಮಸ್ಯ ತ್ವಯಾಽನಘ ॥೩॥**

**ತಸ್ಯಾಂ ಸ ವೈ ಮಹಾಯೋಗೀ ಯುಕ್ತಾಯಾಂ ಯೋಗಲಕ್ಷಣೈಃ ।**
**ಸಸರ್ಜ ಕತಿಧಾ ವೀರ್ಯಂ ತನ್ಮೇ ಶುಶ್ರೂಷವೇ ವದ ॥೪॥**

ತಸ್ಯ=ಸ್ವಾಯಂಭುವನಿಗೆ, ದೇವಹೂತೀ ಇತಿ=ದೇವಹೂತಿ ಎಂಬ, ದುಹಿತಾ=ಮಗಳು, ವಿಶ್ರುತಾ=ಕೇಳಲ್ಪಟ್ಟಿರುವಳು, (ಪ್ರಸಿದ್ಧಳು) ಹೇ ಬ್ರಹ್ಮನ್=ಮೈತ್ರೇಯರೇ, ಅನಘ=ಪಾಪರಹಿತರೇ, ತ್ವಯಾ ಪ್ರಜಾಪತೇಃ ಕರ್ದಮಸ್ಯ ಪತ್ನೀ ಉಕ್ತಾ=ನಿಮ್ಮಿಂದ ಕರ್ದಮಪ್ರಜೇಶ್ವರರ ಹೆಂಡತಿಯೆಂದು ಹೇಳಲ್ಪಟ್ಟಿರುವಳು. ಸಃ ಮಹಾಯೋಗಿ=ಆ ಮಹಾತಪಸ್ವಿಯಾದ ಕರ್ದಮರು, ಯೋಗಲಕ್ಷಣೈಃ ಯುಕ್ತಾಯಾಂ=ಯಮನಿಯಮಾದಿಗಳಿಂದ ಕೂಡಿದ, ತಸ್ಯಾಂ=ದೇವಹೂತಿಯಲ್ಲಿ ಕತಿಧಾ ವೀರ್ಯಂ ಸಸರ್ಜ=ಎಷ್ಟು ಮಕ್ಕಳನ್ನು ಪಡೆದನು ತತ್=ಅದನ್ನು, ಶುಶ್ರೂಷವೇ ಮೇ=ಕೇಳಲಿಚ್ಛಿಸುವ ನನಗೆ, ವದ=ಹೇಳಿರಿ. ॥೩-೪॥

**ರುಚಿರ್ಯೋ ಭಗವಾನ್ ಬ್ರಹ್ಮನ್ ದಕ್ಷೋ ವಾ ಬ್ರಹ್ಮಣಃ ಸುತಃ ।**
**ಯಥಾ ಸಸರ್ಜ ಭೂತಾನಿ ಲಬ್ಧ್ವಾ ಭಾರ್ಯಾಂ ಚ ಮಾನವೀಂ॥೫॥**

ಹೇ ಬ್ರಹ್ಮನ್=ಮೈತ್ರೇಯರೇ, ಯಃ ಭಗವಾನ್ ರುಚಿಃ=ಪೂಜ್ಯನಾದ ರುಚಿ ಪ್ರಜೇಶ್ವರನು, ಬ್ರಹ್ಮಣಃ ಸುತಃ=ಬ್ರಹ್ಮನ ಮಗನಾದ ದಕ್ಷಃ=ದಕ್ಷಪ್ರಜೇಶ್ವರನಾಗಲಿ, ಮಾನವೀಂ=ಮನುವಿನ ಮಕ್ಕಳಾದ ಆಕೂತಿ ಮತ್ತು ಪ್ರಸೂತಿಯರನ್ನು, ಭಾರ್ಯಾಂ=ಹೆಂಡತಿಯನ್ನಾಗಿ, ಲಬ್ಧ್ವಾ=ಪಡೆದು ಭೂತಾನಿ ಯಥಾ ಸಸರ್ಜ=ಹೇಗೆ ಪ್ರಾಣಿಗಳನ್ನು ಸೃಷ್ಟಿಸಿದರು ಅದನ್ನು ಹೇಳಿರಿ. ॥೫॥

**ಮೈತ್ರೇಯ ಉವಾಚ**

**ಪ್ರಜಾಸೃಜೇತಿ ಭಗವಾನ್ ಕರ್ದಮೋ ಬ್ರಹ್ಮಣೋದಿತಃ ।**
**ಸರಸ್ವತ್ಯಾಂ ತಪಸ್ತೇಪೇ ಸಹಸ್ರಾಣಾಂ ಸಮಾ ದಶ ॥೬॥**

ಭಗವಾನ್ ಕರ್ದಮಃ=ಪೂಜ್ಯರಾದ ಕರ್ದಮರು, ಬ್ರಹ್ಮಣಾ=ಬ್ರಹ್ಮದೇವರಿಂದ, ಪ್ರಜಾಂ ಸೃಜ ಇತಿ=ಮಕ್ಕಳನ್ನು ಪಡೆಯಂದು, ಉದಿತಃ=ಹೇಳಲ್ಪಟ್ಟವನಾಗಿ,

ಸಹಸ್ರಾಣಾಂ ದಶಸಮಾಃ=ಹತ್ತು ಸಾವಿರ ವರ್ಷ ಪರ್ಯಂತ ಸರಸ್ವತ್ಯಾಂ= ಸರಸ್ವತೀತೀರದಲ್ಲಿ, ತಪಃ ತೇಪೇ=ತಪಸ್ಸು ಮಾಡಿದರು. ॥೬॥

**ತತಃ ಸಮಾಧಿಯುಕ್ತೇನ ಕ್ರಿಯಾಯೋಗೇನ ಕರ್ದಮಃ ।**
**ಸಂಪ್ರಪೇದೇ ಹರಿಂ ಭಕ್ತ್ಯಾ ಪ್ರಪನ್ನವರದಾಶುಷಂ ॥೭॥**

ತತಃ=ನಂತರ, ಸಮಾಧಿಯುಕ್ತೇನ=ಚಿತ್ತೈಕಾಗ್ರತೆಯಿಂದ ಕೂಡಿದ, ಕ್ರಿಯಾ-ಯೋಗೇನ=ವೇದೋಕ್ತವಾದ ತಂತ್ರೋಕ್ತವಾದ ಭಗವತ್ಪೂಜಾರೂಪ ಉಪಾಯ-ದಿಂದ, ಕರ್ದಮಃ=ಕರ್ದಮಪ್ರಜಾಪತಿಯು, ಪ್ರಪನ್ನವರದಾಶುಷಂ=ಶರಣಾಗತ-ರಾದ ಭಕ್ತರಿಗೆ ವರಪ್ರದನಾದ, ಹರಿಂ=ಶ್ರೀಹರಿಯನ್ನು, ಸಂಪ್ರಪೇದೆ=ಶರಣು ಹೊಂದಿದನು. ॥೭॥

**ತಾವತ್ ಪ್ರಸನ್ನೋ ಭಗವಾನ್ ಪುಷ್ಕರಾಕ್ಷಃ ಕೃತೇ ಯುಗೇ ।**
**ದರ್ಶಯಾಮಾಸ ತಂ ಕ್ಷತ್ತಃ ಶಾಬ್ದಂ ಬ್ರಹ್ಮ ದಧದ್ವಪುಃ ॥೮॥**

ಹೇ ಕ್ಷತ್ತಃ=ವಿದುರನೇ,ಕೃತೇ ಯುಗೇ=ಕೃತಯುಗದಲ್ಲಿ, ಪುಷ್ಕರಾಕ್ಷಃ ಕಮಲ-ನಯನನಾದ, ಭಗವಾನ್=ಶ್ರೀಹರಿಯು, ತಾವತ್ ಪ್ರಸನ್ನಃ=ಆಗ ಅಷ್ಟು ಪ್ರಸನ್ನನಾದನು, ಶಾಬ್ದಃ=ವೇದಪ್ರತಿಪಾದ್ಯವಾದ, ಬ್ರಹ್ಮ=ಗುಣಪೂರ್ಣವಾದ ವಪುಃ =ಶುಭಾಕಾರ ಶರೀರವನ್ನು, ದಧತ್=ಧರಿಸಿ, ತಂ ದರ್ಶಯಾಮಾಸ=ತನ್ನ ಸುಂದರ ಶರೀರವನ್ನು ತೋರಿಸಿದನು. ಪ್ರತ್ಯಕ್ಷನಾದನೆಂದರ್ಥ. ॥೮॥

ಶುಭಾಕಾರವನ್ನೇ ವಿಸ್ತರಿಸುವರು–

**ಸ ತಂ ವಿರಜಮರ್ಕಾಭಂ ಸಿತಪದ್ಮೋಜ್ಜ್ವಲ(ತ್)ಸ್ರಜಂ ।**
**ಸ್ನಿಗ್ಧನೀಲಾಲಕವ್ರಾತವಕ್ತ್ರಾಬ್ಜವಿರಜಾಂಬರಮ್ ॥೯॥**

ಸಃ=ಕರ್ದಮರು ವಿರಜಂ=ದೋಷರಹಿತನಾದ (ಸ್ವಚ್ಛನಾದ) ಅರ್ಕಾಭಂ= ಸೂರ್ಯನಂತೆ ಕಾಂತಿಯುಳ್ಳ, ಸಿತಪದ್ಮೋತ್ಪ(ಜ್ವ)ಲ(ತ್)ಸ್ರಜಂ=ಶುಭವಾದ ಪದ್ಮ ಕನ್ನೈದೆಲೆಗಳ ಮಾಲೆಯನ್ನು ಧರಿಸಿದ (ಉಜ್ಜ್ವಲವೆಂಬ ಪಾಠದಲ್ಲಿ ಪ್ರಕಾಶಮಾನ-ವಾದ ಮಾಲೆ ಎಂದರ್ಥ), ಸ್ನಿಗ್ಧ=ಮೃದುವಾದ ನೀಲ=ಕಪ್ಪಾದ, ಅಲಕ=ಗುಂಗುರು ಕೂದಲುಗಳ, ವ್ರಾತ=ಸಮೂಹದಿಂದ ಕೂಡಿದ, ವಕ್ತ್ರಾಬ್ಜಂ=ಮುಖಕಮಲವುಳ್ಳ, ವಿರಜಾಂಬರಂ=ಶುಭ್ರವಾದ ವಸ್ತ್ರವುಳ್ಳ ॥೯॥

**ಕಿರೀಟಿನಂ ಕುಂಡಲಿನಂ ಶಂಖಚಕ್ರಗದಾಧರಮ್ ।**
**ಶ್ವೇತೋತ್ಪಲಕ್ರೀಡನಕಂ ಮನಃಸ್ಪರ್ಶಸ್ಮಿತೇಕ್ಷಣಮ್ ॥೧೦॥**

ಕಿರೀಟಿನಂ=ಶಿರಸ್ಸಿನಲ್ಲಿ ಕಿರೀಟಧರಿಸಿದ,ಕುಂಡಲಿನಂ=ಕಿವಿಯಲ್ಲಿ ಕುಂಡಲವನ್ನಿಟ್ಟ ಶಂಖಚಕ್ರಗಧಾದರಂ=ಕೈಗಳಲ್ಲಿ ಶಂಖಚಕ್ರಗದಾಗಳನ್ನು ಹಿಡಿದ, ಶ್ವೇತೋತ್ಪಲ-ಕ್ರೀಡನಕಂ=ಬಿಳಿಕಮಲವೇ ಕ್ರಿಡಾಸಾಧನವಾಗಿವುಳ್ಳ, ಮನಃಸ್ಪರ್ಶಸ್ಮಿತೇಕ್ಷಣಮ್=ಮನೋಹರವಾದ ಮಂದಹಾಸ ನೋಟಗಳುಳ್ಳ ॥೧೦॥

**ವಿನ್ಯಸ್ತಚರಣಾಂಭೋಜಮಂಸದೇಶೇ ಗರುತ್ಮತಃ ।**
**ದೃಷ್ಟ್ವಾ ಖೇಽವಸ್ಥಿತಂ ವಕ್ಷಃ ಶ್ರಿಯಂ ಕೌಸ್ತುಭಕಂಧರಂ ॥೧೧॥**

ಗರುತ್ಮತಃ=ಗರುಡನ, ಅಂಸದೇಶೇ=ಹೆಗಲ ಮೇಲೆ ವಿನ್ಯಸ್ತಚರಣಾಂಭೋಜಂ=ಪಾದಕಮಲಗಳನ್ನಿರಿಸಿದ, ಖೇ=ಆಕಾಶದಲ್ಲಿ, ಅವಸ್ಥಿತಂ=ನಿಂತಿರುವ, ವಕ್ಷಃಶ್ರಿಯಂ=ಹೃದಯದಲ್ಲಿ ಲಕ್ಷ್ಮೀದೇವಿಯುಳ್ಳ ಕೌಸ್ತುಭಕಂಧರಂ=ಕುತ್ತಿಗೆಯಲ್ಲಿ ಕೌಸ್ತುಭಮಣಿ-ಯನ್ನು ಧರಿಸಿದ, ತಂ=ಶ್ರೀಹರಿಯನ್ನು ದೃಷ್ಟ್ವಾ=ನೋಡಿ ॥೧೧॥

**ಜಾತಹರ್ಷೋಽಪತನ್ಮೂರ್ಧ್ನಾ ಕ್ಷಿತೌ ಲಬ್ಧಮನೋರಥಃ ।**
**ಗೀರ್ಭಿಸ್ತ್ವಭ್ಯಗೃಣಾತ್ ಪ್ರೀತಃ ಸ್ವಭಾವಾತ್ಮಾ ಕೃತಾಂಜಲಿಃ ॥೧೨॥**

ಲಬ್ಧಮನೋರಥಃ=ಮನದಾಶೆಯನ್ನುಹೊಂದಿದವನಾಗಿ,ಜಾತಹರ್ಷಃ=ಆನಂದವಾಗಿ, ಕ್ಷಿತೌ=ಭೂಮಿಯಲ್ಲಿ, ಮೂರ್ಧ್ನಾ=ತಲೆಯಿಂದ, ಅಪತತ್=ಬಿದ್ದನು ತಲೆಬಾಗಿ ನಮಸ್ಕರಿಸಿದನು, ಪ್ರೀತಃ=ಸಂತುಷ್ಟನಾಗಿ, ಕೃತಾಂಜಲಿಃ=ಕೈ ಜೋಡಿಸಿ, ಸ್ವಭಾವಾತ್ಮಾ=ಸ್ವತಂತ್ರನಾದ ಹರಿಯಲ್ಲಿ ಮನಸಿಟ್ಟು ಗೀರ್ಭಿಃ=ವಿಶೇಷ ಮಾತುಗಳಿಂದ, ಅಭ್ಯಗೃಣಾತ್=ಸ್ತುತಿಸಿದನು. ॥೧೨॥

**ಕರ್ದಮ ಉವಾಚ**

**ಜುಷ್ಟಂ ಬತಾದ್ಯಾದ್ಯಖಿಲಸತ್ವರಾಶೇಃ**
**ಸಂಸಿದ್ಧಮಕ್ಷ್ಣೋಸ್ತವ ದರ್ಶನಾನ್ನಃ ।**
**ಯದ್ದರ್ಶನಂ ಜನ್ಮಭಿರೀಡ್ಯ ಸದ್ಭಿ-**
**ರಾಶಾಸತೇ ಯೋಗಿನೋ ರೂಢಯೋಗಾಃ ॥೧೩॥**

ರೂಢಯೋಗಾಃ=ನಿರಂತರಧ್ಯಾನಾದಿಗಳನ್ನು ಮಾಡುವ,ಯೋಗಿನಃ=ಭಕ್ತಿ-ಪೂರ್ವಕ ಯಮನಿಯಮಾದಿ ಸಾಧನಗಳುಳ್ಳ ಜನರು, ಸದ್ಭಿಃ=ವೇದಾದಿಗಳ ಅಧಿಕಾರವುಳ್ಳ ಅನೇಕಜನ್ಮಭಿಃ=ಜನ್ಮಗಳಿಂದ, ಯತ್‌ದರ್ಶನಂ=ಯಾವ ನಿನ್ನ ದರ್ಶನವನ್ನು, ಆಶಾಸತೇ=ಅಪೇಕ್ಷಿಸುವರೋ, ಹೇ ಈಡ್ಯ=ಎಲ್ಲ ವೇದಗಳಿಂದ ತಾತ್ಪರ್ಯಪೂರ್ವಕಸ್ತುತ್ಯನೇ, ಅಖಿಲಸತ್ವರಾಶೇಃ=ಬಲಜ್ಞಾನ ಸಮುದ್ರನಾದ, ತವ

ನಿನ್ನ ದರ್ಶನಾತ್=ಅಪರೋಕ್ಷಜ್ಞಾನದಿಂದ, ನಃ=ನಮ್ಮ ಅಕ್ಷ್ಣಃ=ಕಣ್ಣಗಳಿಂದ ಮಾಡಿದ, ಜುಷ್ಟಂ=ನಿನ್ನ ತೀರ್ಥಕ್ಷೇತ್ರ ಪ್ರತಿಮಾಗಳ ದರ್ಶನವು (ಉಪಲಕ್ಷಣಯಾ ಶ್ರೋತ್ರಾದಿಗಳಿಂದ ಮಾಡಿದ ಕಥಾ ಶ್ರವಣಾದಿ ಸೇವೆಯು) ಸಂಸಿದ್ಧಂ ಅದ್ಯ= ಇಂದು ಫಲಿಸಿತು.

ಬಹಳ ಕಾಲ ಪ್ರಯತ್ನಿಸಿದಾಗ ಯೋಗಿಗಳಿಗೆ ಲಭಿಸುವ ನಿನ್ನ ದರ್ಶನವು ಅಲ್ಪಕಾಲದಲ್ಲಿ ನನಗೆ ಆದುದು ಬತ=ಆಶ್ಚರ್ಯವು. ಅಥವಾ ಅವರು ಬರಿ ಬಹು ಕಾಲದಿಂದ ಇಚ್ಛಿಸುವರು. ನನಗೆ ಅಲ್ಪಕಾಲದಲ್ಲಿ ದರ್ಶನ ಲಭಿಸಿತು ಎಂಬುದು ಆಶ್ಚರ್ಯ, ಹೀಗೂ ಅರ್ಥ. ॥೧೩॥

**ಯೇ ಮಾಯಯಾ ತೇ ಹತಚೇತಸಸ್ತ್ವತ್-**
**ಪಾದಾರವಿಂದಂ ಭವಸಿಂಧುಪೋತಂ ।**
**ಉಪಾಸತೇ ಕಾಮಲವಾಯ ತೇಷಾಂ**
**ರಾಸೀಶ ಕಾಮಾನ್ ನಿರಯೇಽಪಿ ಯೇ ಸ್ಯುಃ ॥೧೪॥**

ಯೇ=ಯಾವ ವಿಷಯಗಳು, ನಿರಯೇಽಪಿ=ನರಕದಲ್ಲಿಯೂ ನಾಯಿ ಮುಂತಾದ ಜನ್ಮಗಳಲ್ಲಿಯೂ, ಸ್ಯುಃ=ಸುಲಭವಾಗಿ ದೊರೆಯುವುವೋ ಅಂಥ, ಕಾಮಲವಾಯ=ಕ್ಷುದ್ರಕಾಮನೆಗಳಿಗಾಗಿ, ಯೇ=ಯಾರು, ಭವಸಿಂಧುಪೋತಂ= ಸಂಸಾರಸಮುದ್ರ ದಾಟಲು ನೌಕೆಯಂತಿರುವ, ತ್ವತ್‌ಪಾದಾರವಿಂದಂ=ನಿನ್ನ ಪಾದಕಮಲಗಳನ್ನು ಉಪಾಸತೇ=ಉಪಾಸಿಸುವರೋ, ತೇ=ಅವರು, ತೇ=ನಿನ್ನ ಮಾಯಯಾ=ಬಂಧಕಶಕ್ತಿಯಿಂದ, ಹತಚೇತಸಃ=ನಷ್ಟಬುದ್ಧಿಗಳು. ಹೇ ಈಶ= ಸ್ವಾಮಿಯೇ ತ್ವಂ=ನೀನು ತೇಷಾಂ ಕಾಮಾನ್=ಅವರಪೇಕ್ಷಿಸಿದ್ದನ್ನು ರಾಸಿ= ಕೊಡುವಿ.

ಮೋಕ್ಷಪ್ರದನಾದ ನಿನ್ನನ್ನು ಸ್ತ್ರೀಕಾಮನೆಯಿಂದ ಆರಾಧಿಸಿದ್ದು ಹೇಗೆ ? ಯುಕ್ತ ನಿಜ. ನೀನು ಮುಮುಕ್ಷುಗಳಿಗೆ ಮೋಕ್ಷವನ್ನು ಕೊಡುವಿ. ಇತರ ಪುರುಷಾರ್ಥ ಅಪೇಕ್ಷಿಗಳಿಗೆ ಕಾಮಧೇನುಗಳನ್ನು ಕೊಡುವಿ. ಆದರೆ ಇಚ್ಛಿಸುವವರು ನಿಂದ್ಯರು ಎಂದು ಭಾವ. ಮತ್ತು ಎಂತಹ ಚಿಕ್ಕ ಕಾಮನೆಯನ್ನು ಸಹ ಕೊಡುವವನು ಶ್ರೀಹರಿಯೇ ಅಂದ ಮೇಲೆ ಸ್ವರಾಜ್ಯಪ್ರದ ಹರಿಯೇ ಎಂಬುದು ಸಿದ್ಧ. ॥೧೪॥

ನಾನೊಬ್ಬ ಅಂಥವನೇ ಎಂದು ಹೇಳುವರು –

**ತಥಾ ಸ ಚಾಹಂ ಪರಿವೋಢುಕಾಮಃ**
**ಸಮಾನಶೀಲಾಂ ಗೃಹಮೇಧಧೇನುಂ ।**

**ಉಪೇಯಿವಾನ್ ಮೂಲಮಶೇಷಮೂಲಂ**
**ದುರಾಶಯಃ ಕಾಮದುಘಾಂಘ್ರಿಪಸ್ಯ ॥೧೫॥**

ತಥಾ=ಚಿಕ್ಕದಾದ ವಿಷಯಕ್ಕಾಗಿ ನಿನ್ನ ಪಾದಾರವಿಂದವನ್ನು ಭಜಿಸುವವರಂತೆ, ಸಚ=ನಿಷ್ಕಾಮನೆಯಿಂದ ಭಜಿಸುವ, ಅಹಂ=ನಾನು, ಸಮಾನಶೀಲಾಂ= ನನಗನುಗುಣಸ್ವಭಾವವುಳ್ಳ, ಗೃಹಮೇಧಧೇನುಂ=ಗೃಹಸ್ಥಾಶ್ರಮದಲ್ಲಿ ಮಾಡುವ ಯಜ್ಞಗಳಿಗೆ ಧೇನುವಿನಂತೆ ಅಂಗಳಾದ, ತ್ರಿವರ್ಗವನ್ನು ಕರೆಯುವ (ಸಾಧನಳಾದ) ಕನ್ಯೆಯನ್ನು, ಪರಿವೋಢುಕಾಮಃ=ಮದುವೆಯಾಗಲು ಇಚ್ಛಿಸಿ, ದುರಾಶಯಃ= ಅಶೋಭನವಾದ ವಿಷಯದಲ್ಲಿ ಆಶೆಯುಳ್ಳವನಾಗಿ, ಕಾಮದುಘಾಂಘ್ರಿಪಸ್ಯ= ಕಲ್ಪತರುವಿನಂತೆ ಸರ್ವಾಭೀಷ್ಟಪ್ರದನಾದ ನಿನ್ನ ಅಶೇಷಮೂಲಂ=ಸಮಸ್ತ ಪುರುಷಾರ್ಥ ಕಾರಣವಾದ, ಮೂಲಂ=ಪಾದಮೂಲವನ್ನು, ಉಪೇಯಿವಾನ್= ಅನುಸರಿಸಿರುವೆನು.

ನಿಷ್ಕಾಮವಾಗಿ ಸೇವಿಸುವ ನಿನಗೆ ಈ ರೀತಿ ಕಾಮನೆಯಿಂದ ಭಜಿಸುವ ಬುದ್ಧಿ ಏಕೆ ? ಎಂದರೆ ಹೇಳುವನು –

**ಪ್ರಜಾಪತೇಸ್ತೇ ವಚಸಾಽಧೀಶ ತಂತ್ಯಾ**
**ಲೋಕಃ ಕಿಲಾಯಂ ಕಾಮಹೇತೋರ್ನಿಬದ್ಧಃ ।**
**ಅಹಂ ಚ ಲೋಕಾನುಗತೋ ವಹಾಮಿ**
**ಬಲಿಂ ಚ ಶುಕ್ಲಾನಿಮಿಷಾಯ ತುಭ್ಯಮ್ ॥೧೬॥**

ಹೇ ಅಧೀಶ=ಬ್ರಹ್ಮಾದಿಗಳಿಗೂ ಒಡೆಯನೇ ಪ್ರಜಾಪತೇಃ=ಜಗತ್ತಿನ ಸೃಷ್ಟ್ಯಾದಿಗಳ ಪ್ರವರ್ತಕನಾಗಿ ಬ್ರಹ್ಮಾಂತರ್ಯಾಮಿಯಾದ ತೇ=ನಿನ್ನ ವಚಸಾ=ಗೃಹಸ್ಥಾಶ್ರಮವನ್ನು ಪಡೆದು ಪ್ರಜೆಗಳನ್ನು ಸೃಜಿಸಿರಿ ಅಲ್ಲಿ ನನ್ನನ್ನು ಪೂಜಿಸಿರಿ ಎಂಬ ವಚನರೂಪವಾದ, ತಂತ್ಯಾ=ದಾರದಿಂದ ಅಯಂ ಲೋಕಃ=ಈ ಮರೀಚಿ ಮುಂತಾದ ಋಷಿ ಜನರು, ಕಾಮಹೇತೋಃ=ನೀನು ಹೇಳಿದ ವಿಷಯ ಸಂಪಾದನೆಗಾಗಿ, ನಿಬದ್ಧಃ ಕಿಲ=ಅತ್ಯಂತ ಬದ್ಧರಾಗಿರುವರಷ್ಟೇ !(ನಿನ್ನ ಆಜ್ಞೆ ಅನುಲ್ಲಂಘನೀಯವೆಂದರ್ಥ)ಅಹಂ ಚ=ನಾನೂ ಸಹ, ಲೋಕಾನುಗತಃ=ಅವರಂತೆ ನಿನ್ನ ಆಜ್ಞೆಗೆ ಬದ್ಧನು. ಹೇ ಶುಕ್ಲ=ಪರಮಶುದ್ಧನೇ ಅನಿಮಿಷಾಯ=ಸರ್ವಸಾಕ್ಷಿಯಾದ ಕಾಲನಾಮಕನಾದ, ತುಭ್ಯಂ=ನಿನಗೆ, ಬಲಿಂ ವಹಾಮಿ=ಪೂಜೆಯನ್ನು ಮಾಡುವೆನು. 'ಕಿಲ' ಎಂಬುದರಿಂದ ಅಧಿಕಾರಿಗಳಿಗೆ ಈ ವಿಧ ಕಾಮನೆ ನಿಷಿದ್ಧವಲ್ಲ ಎಂದು ಸೂಚಿತ. ಅನಿಮಿಷ ಎಂಬುದುರಿಂದ ವಿಧಿಮೀರಿ ಕರ್ಮ ಮಾಡಿದರೆ ಭಗವಂತನು ಅದನ್ನು ನೋಡಿ ಭಯಕೊಡುವನು ಎಂದು ಸೂಚಿತವಾಗುವುದು. ॥೧೬॥

ಕಾಲನಾಮಕನಾದ ಈ ಭಗವಂತನು ಯಾರಿಗೆ ಭಯಪ್ರದನಲ್ಲವೆಂದು ಹೇಳುವರು -

**ಲೋಕಾಂಶ್ಚ ಲೋಕಾನುಗತಾನಸೂಂಶ್ಚ**
**ಹಿತ್ವಾ ಶ್ರಿತಾಸ್ತೇ ಚರಣಾತಪತ್ರಮ್ ।**
**ಪರಸ್ಪರಂ ತ್ವದ್ಗುಣವಾದಸೀಧು-(ಸಿಂಧು)**
**(ಸಾಧು)ಪೀಯೂಷನಿರ್ಯಾಪಿತದೇಹಧರ್ಮಾಃ ॥೧೭॥**

ಲೋಕಾನ್=ಜಡ ಶರೀರಗಳನ್ನು ಲೋಕಾನುಗತಾನ್ ಅಸೂನ್=ದೇಹ-ಸಂಬಂಧಿಗಳಾದ ಮಕ್ಕಳು ಮುಂತಾದವರನ್ನು ಜಡ ಇಂದ್ರಿಯಗಳನ್ನು, ಹಿತ್ವಾ= ತ್ಯಜಿಸಿ, ತೇ=ನಿನ್ನ, ಚರಣಾತಪತ್ರಂ=ಪಾದವೆಂಬ ಛತ್ರಿಯನ್ನು, ಶ್ರಿತಾಃ ಯೇ= ಆಶ್ರಯಿಸಿದವರಾರೋ ನಿನ್ನ ಸಾಮೀಪ್ಯ ಮುಂತಾದ ಮುಕ್ತಿಯನ್ನು ಪಡೆದವರು ಯಾರೋ, ತೇ=ಅವರು, ಪರಸ್ಪರಂ=ಒಬ್ಬರಿಗೊಬ್ಬರು, ತ್ವದ್ಗುಣವಾದ ಸಿಂಧುಪಿಯೂಷನಿರ್ಯಾಪಿತದೇಹಧರ್ಮಾಃ=ನಿನ್ನ ಗುಣಗಳನ್ನು ಹೇಳುವುದೆಂಬ ಅಮೃತ ಸಮುದ್ರದಲ್ಲಿ ಸ್ನಾನ ಮಾಡುವುದರಿಂದ ನಾಶಿತವಾದ ಜರಾಮರಣ ಮುಂತಾದ ದೇಹಧರ್ಮವುಳ್ಳವರು (ಯಾದುಪತ್ಯ) ಸಿಧುಪೀಯೂಷ=ಸುಖ ಜನಕವಾದ ಹೊಸದಾಗಿ ಪ್ರಸವಿಸಿದ ಆಕಳ ಹಾಲು ಅದರಿಂದ ನಿರ್ಯಾಪಿತ= ಪ್ರವರ್ತಿತವಾದ ಸಚ್ಚಿದಾನಂದಾತ್ಮಕ ದೇಹ ಧರ್ಮವುಳ್ಳವರು ಎಂದು ವಿಜಯಧ್ವಜರು. ಕೋಶದಲ್ಲಿ ಸೀಧು ಎಂದರೆ ಮದ್ಯವೆಂದು ವ್ಯಾಖ್ಯಾನಿಸಿರುವರು ॥೧೭॥

**ನ ತೇಽಜರಾಕ್ಷಭ್ರಮಿರಾಯುರೇಷಾಂ**
**ತ್ರಯೋದಶಾರಂ ತ್ರಿಶತಂ ಷಷ್ಟಿಪರ್ವ ।**
**ಷಣ್ಣೇಮ್ಯನಂತಚ್ಛಿದಿ ಯತ್ ತ್ರಿನಾಭಿ**
**ಕರಾಲಸ್ರೋತೋ ಜಗದಾಚ್ಛಿದ್ಯ ಧಾವತ್ ॥೧೮॥**

ಅಜರಾಕ್ಷಭ್ರಮಿಃ=ಯಾವಾಗಲು ಮುಪ್ಪಿಲ್ಲದ ಪರಬ್ರಹ್ಮನೆಂಬ ಚಕ್ರದ ತೂಬಿನಲ್ಲಿ ತಿರುಗುವ ತ್ರಯೋದಶಾರಂ=ಅಧಿಕಮಾಸಸೇರಿ ಹದಿಮೂರು ಹಲ್ಲುಗಳುಳ್ಳ, ತ್ರಿಶತಂ ಷಷ್ಟಿಪರ್ವ=ಮುನ್ನಾರಾ ಅರವತ್ತು ಹಗಲು ರಾತ್ರಿಗಳೆಂಬ ಪರ್ವಗಳುಳ್ಳ, ಷಣ್ಣೇಮಿ= ಆರು ಋತುಗಳೆಂಬ ಚಕ್ರದ ಕೊನೆ ಭಾಗಗಳುಳ್ಳ, (ಬುಟೆಯನ್ನುವರು ರೈತರು), ಅನಂತಚ್ಛಿದಿ=ಅತಿಶಯ ಅನಂತವಾದ ಚಕ್ರಧಾರಾಸ್ಥಾನೀಯವಾದ ಪರಮಾಣು ಮುಂತಾದ ಅವಯವಗಳುಳ್ಳ, ತ್ರಿನಾಭಿ=ಚಾತುರ್ಮಾಸ್ಯಗಳೆಂಬ

ಮೂರು ನಾಭಿಯುಳ್ಳ, ಕರಾಲಸ್ರೋತಃ=ಕ್ರೂರವೇಗವುಳ್ಳ ಕಾಲಚಕ್ರವು, ಜಗದಾಚ್ಛಿದ್ಯ ಗಚ್ಛತ್=ಜಗತ್ತಿನ ಆಯುಷ್ಯವನ್ನು ಅಪಹರಿಸಿ ಓಡುವುದಾದರೂ, ಏಷಾಂ=ಯಾವ, ತೇ=ನಿನ್ನ ಭಕ್ತರ ಆಯುಷ್ಯ ಹರಣಮಾಡಿ ನ ಧಾವತ್=ಧಾವಿಸುವುದಿಲ್ಲ. ॥೧೮॥

ಜನ್ಮಾದಿಕರ್ತೃತ್ವ ಮೊದಲಾದ ಸಕಲಗುಣಪೂರ್ಣವಾದ ಅಪ್ರಾಕೃತ ವಿಗ್ರಹವುಳ್ಳ ಭಗವಂತನನ್ನು ನೋಡಿ ಶ್ರುತಿಯಲ್ಲಿ ಭಗವಂತನ ಪ್ರತೀಕವೆಂದು ಹೇಳಲ್ಪಟ್ಟ ಬ್ರಹ್ಮಾಂಡಾದಿಗಳು ಭಗವಂತನ ವಾಸ್ತವ ಶರೀರವಲ್ಲ ಎಂದು ಈ ಎರಡು ಶ್ಲೋಕದಿಂದ ಹೇಳುವರು -

**ಏಕಃ ಸ್ವಯಂ ಸನ್ ಜಗತಃ ಸಿಸೃಕ್ಷಯಾ**
**ದ್ವಿತೀಯ ಆತ್ಮನ್ನಧಿಯೋಗಮಾಯಯಾ ।**
**ಸೃಜಸ್ಯದಃ ಪಾಸಿ ಪುನರ್ಗ್ರಹೀಷ್ಯಸೇ**
**ಯಥೋರ್ಣನಾಭಿರ್ಭಗವನ್ ಸ್ವಶಕ್ತಿಭಿಃ ॥೧೯॥**

ಸ್ವಯಂ ಏಕಃ ಏವ ಸನ್ ಅಪಿ=ನೀನು ಒಬ್ಬನೇ ಆಗಿದ್ದರೂ, ಜಗತಃ= ಸಿಸೃಕ್ಷಯಾ ಜಗತ್ತಿನ ಸೃಷ್ಟಿ ಮಾಡುವ ಇಚ್ಛೆಯಿಂದ, ದ್ವಿತೀಯಃ ಸನ್=ವಾಸುದೇವ-ನಾಮಕನಾಗಿ, ಆತ್ಮನ್=ಪರಮಾತ್ಮನಲ್ಲಿ, ಅಧಿ=ಅಧಿಕವಾದ ಯೋಗಭಕ್ತ್ಯಾದಿಗಳುಳ್ಳ ಮಾಯಯಾ=ಮಾಯಾರೂಪಳಾದ ನಿತ್ಯಾವಿಯೋಗಿನಿಯಾದ ಲಕ್ಷ್ಮೀದೇವಿ-ಯಿಂದ, ಅದಃ=ಈ ವಿಶ್ವವನ್ನು, ಸ್ವಶಕ್ತಿಭಿಃ=ನಿನ್ನಶಕ್ತಿಗೆ ವಿಷಯಗಳಾದ ಸತ್ವಾದಿ-ಗುಣಗಳಿಂದ ಊರ್ಣನಾಭಿಃ ಯಥಾ=ಜೇಡರ ಹುಳುವಿನಂತೆ, ಸೃಜಸಿ=ಸೃಷ್ಟಿಸುವಿ, ಪಾಸಿ=ರಕ್ಷಿಸುವಿ, ಪುನಃ=ಮತ್ತೆ, ಗ್ರಹೀಷ್ಯಸೇ=ಸ್ವೀಕರಿಸುವಿ (ಸಂಹರಿಸುವಿ).

ದ್ವಿತೀಯಯಾತ್ಮನ್ನಧಿಯೋಗಮಾಯಯಾ ಎಂಬ ಪಾಠದಲ್ಲಿ ಆತ್ಮನಿ ತನ್ನ ಉದರದಲ್ಲಿರುವ ಜಗತಃ ಸಿಸೃಕ್ಷಯಾ=ಜಗತ್ಸೃಷ್ಟೀಚ್ಛೆಯಿಂದ ಅಧಿಯೋಗ-ಮಾಯಾಯಾ=ಸ್ವಾಧೀನವಾದ ಚಿದಚಿತ್‌ಪ್ರಕೃತಿಯಿಂದ ಎಂದರ್ಥ. ಲೋಕ-ವಿಡಂಬನಕ್ಕಾಗಿ ದ್ವಿತೀಯಯಾ ಎಂದಿದ್ದಾರೆ ಹೆಂಡತಿಯಿಂದ ಎಂದರ್ಥ. ॥೧೯॥

**ನೈತದ್ ಬತಾಧೀಶ ಪದಂ ತವೇಪ್ಸಿತಮ್**
**ಯನ್ಮಾಯಯಾ ಜಗೃಹೇ ಭೂತಸೂಕ್ಷ್ಮಂ ।**
**ಅನುಗ್ರಹಾಯ ತ್ವಯಿ ಯರ್ಹಿ ಮಾಲಯಾ**
**ಲಸತ್ತುಲಸ್ಯಾ ಭಗವಾನ್ ವಿಲಕ್ಷಿತಃ ॥೨೦॥**

ಈ ರೀತಿ ಜಗಜ್ಜನ್ಮಾದಿಕರ್ತೃತ್ವ ವಿಶಿಷ್ಟವಾದ ಈ ನಿನ್ನ ರೂಪವು ಯರ್ಹಿ=ಯಾವ ಕಾರಣ, ಲಸತ್‌ತುಲಸ್ಯಾ ಮಾಲಯಾ=ಪ್ರಕಾಶಿಸುವ ತುಳಸಿಯ ಮಾಲೆಯಿಂದ, ಭಗವಾನ್=ಇವನೇ ಭಗವಂತನೆಂದು, ಮಯಾ ನನ್ನಿಂದ ವಿಲಕ್ಷಿತಃ=ಇತರ ವಿಲಕ್ಷಣನೆಂದು ತಿಳಿಯಲ್ಪಟ್ಟನು.(ಆದ್ದರಿಂದ)ಹೇ ಅಧೀಶ=ಬ್ರಹ್ಮಾದಿಗಳಿಗೆ ಈಶನೇ, ಅನುಗ್ರಹಾಯ=ಭಕ್ತರಿಗೆ ಉಪಾಸನೆ ಮಾಡುವುದಕ್ಕಾಗಿ, ಮಾಯಯಾ=ನಿನ್ನ ಇಚ್ಛೆಯಿಂದಲೇ, ಯದ್ಭೂತಸೂಕ್ಷ್ಮಂ=ಭೂತಸೂಕ್ಷ್ಮಗಳು ಮತ್ತು ಮಹದಾದ್ಯಾತ್ಮಕ ಬ್ರಹ್ಮಾಂಡವೆಂಬ, ಪದಂ=ಸ್ಥಾನವನ್ನು, ಭಗವಾನ್=ನೀನು (ಶ್ರೀಹರಿಯು) ಸ್ವೀಕರಿಸಿರುವಿ, ಏತತ್=ಇದು, ತವ ಈಪ್ಸಿತಂ=ಇಷ್ಟವಾದುದು ಸ್ವರೂಪಭೂತ-ವಾದುದ್ದು ಕಿಂತು=ಭಿನ್ನವಾದುದುದ್ದು ಪ್ರತಿಮಾಸ್ಥಾನೀಯವು. ವಿಜಯಧ್ವಜೀ ಪ್ರಕಾರ ಈ ಪ್ರಪಂಚವು ಭೂತಸೂಕ್ಷ್ಮ ನಿರ್ಮಿತವಾದರೂ ಭೂತಸೂಕ್ಷ್ಮವೆಂದೆ ಕರೆಸಿಕೊಳ್ಳುವುದು. ಮಣ್ಣಿನ ಮಡಿಕೆಗೆ ಮಣ್ಣು ಎಂದಂತೆ. ಇದು ಈಪ್ಸಿತಂ ನ ಉಪನಿಷದಭಿಪ್ರೇತರೂಪವಲ್ಲ, ಮಂದರಿಗೆ ಭಕ್ತಿಯನ್ನು ಹುಟ್ಟಿಸುವುದೆಂಬ ಅನುಗ್ರಹಕ್ಕಾಗಿ ಸ್ವೀಕರಿಸಿರುವೆ. ನಿನಗೆ ಹೇಗೆ ಇದು ತಿಳಿಯಿತು ? ಎಂದರೆ ಯಾವಾಗ ತುಲಸಿಮಾಲೆ ಮಕರಕುಂಡಲಾದ್ಯಲಂಕಾರ ವಿಶಿಷ್ಟವಾದ ರೂಪವನ್ನು ಧ್ಯಾನ ಮಾಡಿ ಆ ರೂಪವನ್ನೇ ಕಂಡೆನು, ಆದ್ದರಿಂದ ಇದೇ ಸ್ವರೂಪಭೂತ ದೇಹವು ಬ್ರಹ್ಮಾಂಡ ಅಲ್ಲ ಎಂದು ಭಾವ.

'ನೃ ನಯೇ' ಎಂದು ಧಾತು ಇರುವುದರಿಂದ ನಃ ಉಪಾಯವುಳ್ಳ ಭಗವಂತನು ಭೂತಸೂಕ್ಷ್ಮ ಭೂತಗಳಿಗೆ, ಸೂಕ್ಷ್ಮ ಎಂದರೆ ಅದೃಶ್ಯವಾದ ರೂಪಂಜಗೃಹೇ= ಸ್ವೀಕರಿಸಿರುವನು, ಅದು ಸ್ವರೂಪ. ನೀನು ಹೇಗೆ ನೋಡಿದಿ ? ಎಂದರೆ ಅನುಗ್ರಹಾಯ=ಅನುಗ್ರಹ ಮಾಡಲು ವ್ಯಕ್ತನಾದಿ. ಜಗತ್ತು ಅಭಿನ್ನವಲ್ಲ ತತ್‌ಸ್ವಾಮಿಕವೆಂದು ತಿಳಿಯುವುದೇ ಶ್ರೇಯಃಸಾಧನವೆಂದು ಭಾವ. ॥೨೦॥

ಈ ವಿಧವಾದ ರೂಪವನ್ನು ತೋರಿಸಿದ ಭಗವಂತನಿಗೆ ಪ್ರತಿಯಾಗಿ ಮಾಡುವುದು ನಮಸ್ಕಾರ ಒಂದೇ ಎಂದು ಹೇಳುವರು –

**ತಂ ತ್ವಾನುಭೂತ್ಯೋಪರತಕ್ರಿಯಾರ್ಥಂ**
**ಸ್ವಮಾಯಯಾ ವರ್ತಿತಲೋಕತಂತ್ರಂ ।**
**ನಮಾಮ್ಯಭೀಕ್ಷ್ಣಂ ನಮನೀಯಪಾದ-**
**ಸರೋಜಮಲ್ಪೀಯಸಿಕಾಮವರ್ಷಂ ॥೨೧॥**

ಅನುಭೂತ್ಯಾ=ಸ್ವರೂಪಜ್ಞಾನದಿಂದ, ಉಪರತ=ನಿತ್ಯನಿವೃತ್ತವಾದ,ಕ್ರಿಯಾರ್ಥಂ =ದೇಹಸಂಪಾದಕಕರ್ಮಗಳುಳ್ಳ, ಸ್ವಮಾಯಯಾ=ಸ್ವೇಚ್ಛೆಯಿಂದ, ವರ್ತಿತ= ಪ್ರವರ್ತಿಸಲ್ಪಟ್ಟ ಲೋಕತಂತ್ರಂ=ಜನರ ಪ್ರವೃತ್ತಿಸಾಧನವುಳ್ಳ, ನಮನೀಯಪಾದ- ಸರೋಜಂ=ನಮಸ್ಕಾರ ಮಾಡಲು ಯೋಗ್ಯವಾದ ಪಾದಕಮಲವುಳ್ಳ,ಅಲ್ಪೀಯಸಿ- ಕಾಮವರ್ಷಂ=ಚಿಕ್ಕ ಭಕ್ತನಿಗೂ ಅಭೀಷ್ಟಪ್ರದನಾದ ತಂ ತ್ವಾ=ಸೃಷ್ಟವಾದ ನಿನ್ನನ್ನು ಅಭೀಕ್ಷ್ಣಂ ನಮಾಮಿ=ಪುನಃ ಪುನಃ ನಮಸ್ಕರಿಸುವೆನು. ॥೨೧॥

**ಶುಕ ಉವಾಚ**

**ಇತ್ಯವ್ಯಲೀಕಂ ಪ್ರಣತೋಽಬ್ಜನಾಭ-**
**ಸ್ತಮಾಬಭಾಷೇ ವಚಸಾಽಮೃತೇನ ।**
**ಸುಪರ್ಣಪಕ್ಷೋಪರಿ ರೋಚಮಾನಃ**
**ಪ್ರೇಮಸ್ಮಿತೋದ್ವೀಕ್ಷಣವಿಭ್ರಮದ್‌ಭ್ರೂಃ ॥೨೨॥**

ಇತಿ=ಈ ರೀತಿಯಾಗಿ,ಅವ್ಯಲೀಕಂ=ಅಪ್ರಿಯವಾಗದಂತೆ,ಪ್ರಣತಃ=ನಮಸ್ಕೃತನಾದ ಸುಪರ್ಣಪಕ್ಷೋಪರಿರೋಚಮಾನಃ=ಗರುಡನ ಮೇಲೆ ಶೋಭಿಸುವ (ಗರುಡಾ- ರೂಢನಾದ), ಪ್ರೇಮಸ್ಮಿತೋದ್ವೀಕ್ಷಣವಿಭ್ರಮದ್‌ಭ್ರೂಃ=ಪ್ರೀತಿ ಮತ್ತು ಮಂದಹಾಸ ಗಳಿಂದ ಉತ್ಕೃಷ್ಟವಾಗಿ ನೋಡುವುದರಿಂದ ಸ್ಫುರಣಗೊಳ್ಳುವ ಹುಬ್ಬುಗಳುಳ್ಳ, ಅಬ್ಜನಾಭಃ=ಪದ್ಮನಾಭನು, ಅಮೃತೇನ ವಚಸಾ=ಸುಖಕರ ಮಾತುಗಳಿಂದ, ತಂ= ಕರ್ದಮನನ್ನು ಕುರಿತು, ಆಬಭಾಷೇ=ಮಾತನಾಡಿದನು. ॥೨೨॥

**ಭಗವಾನುವಾಚ**

**ವಿದಿತ್ವಾ ತವ ಚೈತ್ಯಂ ಮೇ ಪುರೈವ ಸಮಯೋಜಿತಮ್ ।**
**ಯದರ್ಥಮಾತ್ಮನಿಯಮೈಸ್ತ್ವಯೈವಾಹಂ ಸಮರ್ಚಿತಃ ॥೨೩॥**

ತ್ವಯಾ=ನಿನ್ನಿಂದ ಯದರ್ಥಂ=ಏವ ಯಾವುದ್ಕಾಗಿಯೇ, ಆತ್ಮನಿಯಮೈಃ= ಮನೋನಿಗ್ರಹಾದಿಗಳಿಂದ, ಅಹಂ=ನಾನು, ಸಮರ್ಚಿತಃ=ಪೂಜಿತನಾಗಿರುವೆನೋ ಆ ತವ=ನಿನ್ನ, ಚೈತ್ಯಂ=ಮನೋಗತವನ್ನು ವಿದಿತ್ವಾ ಏವ=ತಿಳಿದುಕೊಂಡೇ, ಪುರಾ= ಹಿಂದೆ, ಮೇ=ನನ್ನಿಂದ, ಸಮಯೋಜಿತಂ=ಸಂಘಟನೆ ಮಾಡಿಯಾಗಿದೆ. ॥೨೩॥

**ನ ವೈ ಜಾತು ಮೃಷೇದಂ ಸ್ಯಾತ್ ಪ್ರಜಾಧ್ಯಕ್ಷ ಮದರ್ಹಣಮ್ ।**
**ಭವದ್ವಿಧೇಷ್ವತಿತರಾಂ ಮಯಿ ಸಂಗೃಹಿತಾತ್ಮನಾಮ್ ॥೨೪॥**

ಹೇ ಪ್ರಜಾಧ್ಯಕ್ಷ=ಕರ್ದಮಪ್ರಜೇಶ್ವರನೇ, ಇದಂ ಮದರ್ಹಣಂ=ಈ ನನ್ನ ಪೂಜೆಯು, ಅತಿತರಾಂ=ಅತಿಶಯವಾಗಿ, ಮಯಿ ಸಂಗೃಹಿತಾತ್ಮನಾಂ=ನನ್ನಲ್ಲಿ ಏಕಾಗ್ರವಾದ ಮನಸುಳ್ಳ (ಷಷ್ಠೀ ಸಪ್ತಮ್ಯರ್ಥೇ) ಭವದ್ವಿಧೇಷು=ನಿಮ್ಮಂಥವರ ವಿಷಯದಲ್ಲಿ, ಜಾತು=ಎಂದೂ, ಮೃಷಾ ನ ವೈ=ವ್ಯರ್ಥವಾಗಲಾರದು.

ಸಂಗೃಹಿತಾತ್ಮನಾಂ ಮದರ್ಹಣಂ ಎಂದೂ ಅನ್ವಯ ಮಾಡಬಹುದು. ಇಂದ್ರಿಯ ನಿಗ್ರಹವುಳ್ಳ ನೀವು ಮಾಡಿದ ಪೂಜೆಯಿಂದ ಎಂದರ್ಥ. ಸ್ವಸ್ವಾಮಿಭಾವ ಸಂಬಂಧವನ್ನು ತಿಳಿಸಲು ಪ್ರಯೋಗಿಸಿರುವರು. ಇಲ್ಲವಾದರೆ ಸಂಗ್ರಹಿತಾತ್ಮನು ಎನ್ನಬಹುದು. ॥೨೪॥

ಹಿಂದೆ ನಾನು ಸಂಘಟನೆ ಮಾಡಿರುವನೆಂಬುದನ್ನೇ ತಿಳಿಸುವನು –

**ಪ್ರಜಾಪತಿಪತಿಃ ಸಮ್ರಾಟ್ ಮನುರ್ವಿಖ್ಯಾತಮಂಗಲಃ ।**
**ಬ್ರಹ್ಮಾವರ್ತಂ ಯೋಽಧಿವಸಂಚ್ಛಾಸ್ತಿ ಸಪ್ತಾರ್ಣವಾಂ ಮಹೀಂ ॥೨೫॥**

ಪ್ರಜಾಪತಿಪತಿಃ=ಮರೀಚಿ ಮುಂತಾದವರಿಗೆ ಒಡೆಯನಾದ, ವಿಖ್ಯಾತಮಂಗಲಃ =ಪ್ರಸಿದ್ಧವಾದ ಸದಾಚಾರಾದಿಗಳುಳ್ಳ, ಯಃ=ಯಾವನು ಬ್ರಹ್ಮಾವರ್ತಂ= ಬ್ರಹ್ಮಾವರ್ತದಲ್ಲಿ, ಅಧಿವಸನ್=ಇದ್ದುಕೊಂಡು ಸಪ್ತಾರ್ಣವಾಂ=ಏಳು ಸಮುದ್ರ-ಗಳುಳ್ಳ, ಮಹೀಂ=ಭೂಮಿಯನ್ನು, ಸಾಮ್ರಾಟ್=ಚಕ್ರವರ್ತಿಯಾದ ಮನುಃ= ಸ್ವಾಯಂಭುವಮನುವು, ಶಾಸ್ತಿ=ಆಳುವನು. ॥೨೫॥

**ಸ ಚೇಹ ವಿಪ್ರ ರಾಜರ್ಷಿರ್ಮಹಿಷ್ಯಾ ಶತರೂಪಯಾ ।**
**ಆಯಾಸ್ಯತಿ ದಿದೃಕ್ಷುಸ್ತ್ವಾಂ ಪರಶ್ವೋ ಧರ್ಮಕೋವಿದಮ್ ॥೨೬॥**

ಹೇ ವಿಪ್ರ=ಎಲೋ ಕರ್ದಮನೇ ಸಃ ರಾಜರ್ಷಿಃ=ಆ ಸ್ವಾಯಂಭುವ ಮನುವು, ಮಹಿಷ್ಯಾ, ಶತರೂಪಯಾ ಸಹ=ಹೆಂಡತಿಯಾದ ಶತರೂಪಾಳಿಂದ ಕೂಡಿಕೊಂಡು, ಧರ್ಮಕೋವಿದಂ=ಧರ್ಮಜ್ಞನಾದ ತ್ವಾಂ=ನಿನ್ನನ್ನು, ದಿದೃಕ್ಷುಃ=ನೋಡಲು, ಪರಶ್ವಃ=ನಾಡದ್ದು ಇಹ ಆಯಾಸ್ಯತಿ=ಇಲ್ಲಿಗೆ ಬರುವನು. ॥೨೬॥

**ಆತ್ಮಜಾಂ ಅಸಿತಾಪಾಂಗೀಂ ವಯಃಶೀಲಗುಣಾನ್ವಿತಾಮ್ ।**
**ಮೃಗಯಂತೀಂ ಪತಿಂ ದಾಸ್ಯತ್ಯನುರೂಪಾಯ ತೇ ಪ್ರಭುಃ ॥೨೭॥**

ಪ್ರಭುಃ=ಸ್ವಾಯಂಭುವಮನುವು (ಕನ್ಯೆಯನ್ನು ಕೊಡುವ ಅಧಿಕಾರ-ವುಳ್ಳವನು) ಅಸಿತಾಪಾಂಗೀಂ=ಕಾಡಿಗೆ ಹಚ್ಚದೆ ಇದ್ದರೂ ಕಪ್ಪಾದ ಕಣ್ಣುಗಳುಳ್ಳ, ವಯಃಶೀಲಗುಣಾನ್ವಿತಾಂ=ಯೋಗ್ಯವಾದ ವಯಸ್ಸು ಸ್ವಭಾವ ಗುಣಗಳಿಂದ

ಯುತಳಾದ, ಪತಿಂ=ಗಂಡನನ್ನು, ಮೃಗಯಂತೀಂ=ಹುಡುಕುವ ಅರ್ಥಾತ್ ಇಚ್ಛಿಸುವ ಪ್ರಾಪ್ತವಸ್ಕಳಾದ ಎಂದರ್ಥ, ಆತ್ಮಜಾಂ=ತನ್ನ ಮಗಳನ್ನು ಅನುರೂಪಾಯ ಅವಳಿಗನುಗುಣನಾದ, ತೇ=ನಿನಗೆ, ದಾಸ್ಯತಿ=ಕೊಡುವನು. ॥೨೭॥

ರಾಜಪುತ್ರಿಗೆ ತಾಪಸನಾದ ನಾನೆ ಹೇಗೆ ಅನುರೂಪನಾಗುವೆನು ಎಂದರೆ ಹೇಳುವನು -

**ಸಮಾಹಿತಂ ತೇ ಹೃದಯಂ ಯತ್ರೇಮಾನ್ ಪರಿವತ್ಸರಾನ್ ।**
**ಸಾ ತ್ವಾಂ ಬ್ರಹ್ಮನ್ ನೃಪವಧೂಃ ಕಾಮಮಾಶು ಭಜಿಷ್ಯತಿ ॥೨೮॥**

ಹೇ ಬ್ರಹ್ಮನ್=ಕರ್ದಮನೆ, ಇಮಾನ್=ಕಳೆದ ಪರಿವತ್ಸರಾನ್=ಸಹಸ್ರಾರು ವರ್ಷಗಳನ್ನು(ಲ್ಲಿ) ಯತ್ರ=ಯಾವ ವಧುವಿನಲ್ಲಿ, ತೇ=ನಿನ್ನ ಹೃದಯಂ ಸಮಾಹಿತಂ=ಮನಸ್ಸು ಅನೂಕೂಲ ಹೆಂಡತಿಸಿಗಬೇಕೆಂದು ಸಂಕಲ್ಪಿಸಿತ್ತೋ, ಸಾ=ಆ ಅನುಕೂಲಳಾದ, ನೃಪವಧೂಃ=ರಾಜಕನ್ಯೆಯು ಆಶು=ಬೇಗನೆ ಕಾಮಂ= ಯಥೇಷ್ಟವಾಗಿ, ಭಜಿಷ್ಯತಿ=ಸೇವಿಸುವಳು. ॥೨೮॥

**ಯಾ ತ ಆತ್ಮಧೃತಂ ವೀರ್ಯಂ ನವಧಾ ಪ್ರಸವಿಷ್ಯತಿ ।**
**ವೀರ್ಯೇ ತ್ವದೀಯೇ ಋಷಯ ಆಧಾಸ್ಯಂಸ್ತೇಜ ಆತ್ಮನಃ ॥೨೯॥**

ಯಾ=ಯಾವಳು, ಆತ್ಮಧೃತಂ=ತನ್ನಲ್ಲಿ ಧಾರಣ ಮಾಡಿದ, ವೀರ್ಯಂ=ನಿನ್ನ ರೇತಸ್ಸನ್ನು, ನವಧಾ ಪ್ರಸವಿಷ್ಯತಿ=ಒಂಭತ್ತು ಕನ್ಯೆಗಳನ್ನಾಗಿ ಪ್ರಸವಿಸುವಳು (ಒಂಭತ್ತು ಬಾರಿ), ತ್ವದೀಯೇ ವೀರ್ಯೇ=ನಿನ್ನ ವೀರ್ಯದಿಂದ ಜನಿಸಿದ ಕನ್ಯೆಯರಲ್ಲಿ, ಋಷಯಃ=ಮರೀಚಿ ಮುಂತಾದವರು, ಆತ್ಮನಃ=ತಮ್ಮ, ತೇಜಃ ಆಧಾಸ್ಯನ್= ಗರ್ಭವನ್ನು ಆಧಾನ ಮಾಡುವರು. ॥೨೯॥

**ತ್ವಂ ಚ ಸಮ್ಯಗನುಷ್ಠಾಯ ನಿರ್ದೇಶಂ ಮ ಉಶತ್ತರ ।**
**ಮಯಿ ತೀರ್ಥೀಕೃತಾಶೇಷಕ್ರಿಯಾರ್ಥೋ ಮಾಂ ಪ್ರಪತ್ಸ್ಯಸೇ ॥೩೦॥**

ಉಶತ್ತರ=ಕರ್ದಮನೇ, ತ್ವಂ ಚ=ನೀನೂ ಸಹ, ಮೇ ನಿದೇಶಂ=ನನ್ನ ಆಜ್ಞೆಯನ್ನು ಸಮ್ಯಕ್ ಅನುಷ್ಠಾಯ=ಚೆನ್ನಾಗಿ ಪರಿಪಾಲಿಸಿ, ಮಯಿ=ನನ್ನಲ್ಲಿ ಸಮರ್ಪಿಸುವುದರಿಂದ, ತೀರ್ಥೀಕೃತ=ಪವಿತ್ರೀಕರಿಸಿದ, ಅಶೇಷ=ಎಲ್ಲ ಕ್ರಿಯಾರ್ಥಃ =ಕರ್ಮಗಳ ಫಲವುಳ್ಳವನಾಗಿ, ಮಾಂ=ನನ್ನನ್ನು, ಪ್ರಪತ್ಸ್ಯಸೇ=ಹೊಂದುವಿ. ॥೩೦॥

ಗೃಹಸ್ಥಾಶ್ರಮಾನಂತರ ಸನ್ಯಾಸವನ್ನು ನೀನು ಅವಶ್ಯ ಸ್ವಿಕರಿಸಬೇಕು ಎಂದು ಹೇಳುವರು-

**ಕೃತ್ವಾ ದಯಾಂ ಚ ಜೀವೇಷು ದತ್ವಾ ಚಾಭಯಮಾತ್ಮವಾನ್ ।**
**ಮಯ್ಯಾತ್ಮಾನಂ ಸಹ ಜಗದ್ ದ್ರಕ್ಷ್ಯಸ್ಯಾತ್ಮನಿ ಚಾಪಿ ಮಾಮ್ ॥೩೦॥**

ಜೀವೇಷು=ಜೀವರಲ್ಲಿ ದಯಾಂ ಕೃತ್ವಾ=ದಯೆಯನ್ನು ಮಾಡಿ, ಅಭಯಂ ದತ್ವಾ=ಪ್ರಾಣಿಗಳಿಗೆ ಅಭಯವನ್ನು ನೀಡಿ, ಆತ್ಮವಾನ್=ನಾನೊಬ್ಬನೇಶರಣುವೆಂದು ತಿಳಿದು, (ಅಥವಾ ಜಿತಮನಸ್ಕನಾಗಿದ್ದರೂ), ಆತ್ಮಾನಂ=ನಿನ್ನನ್ನು, ಜಗಚ್ಚ ಸಹ ಜಗತ್ತನ್ನೂ ಏಕಕಾಲದಲ್ಲಿ ಮಯಿ=ನನ್ನಲ್ಲಿ ದ್ರಕ್ಷ್ಯಸಿ ನೋಡುವಿ, ಆತ್ಮನಿ=ನಿನ್ನಲ್ಲಿರುವ ಮಾಂ=ನನ್ನನ್ನೂ ಪಶ್ಯಸಿ=ನೋಡುವಿ. ಅಂತು ಆಧಾರಾಧೇಯಭಾವದಿಂದ ಉಪಾಸನೆ ಮಾಡುವುದರಿಂದ ಭಗವತ್‌ಪ್ರಾಪ್ತಿಯಾಗುವುದು ಎಂದು ಹೇಳಿದ್ದರಿಂದ ಭೇದ ಜ್ಞಾನವೇ ಪರಮಪುರುಷಾರ್ಥ ಸಾಧನ ಎಂದು ಹೇಳಿದಂತಾಯಿತು. ॥೩೦॥

ಕೇವಲ ಹೆಣ್ಣು ಮಕ್ಕಳನ್ನು ಪಡೆದರೆ ಪಿಂಡವಿಚ್ಛೇದದಿಂದ ಪಿತೃಶಾಪವಾದೀತು ಎಂಬ ಶಂಕೆಯು ಬೇಡವೆಂದು ಹೇಳುವನು –

**ಸಂಭೂಯ ಸ್ವಾಂಶಕಲಯಾ ತ್ವದ್ವೀರ್ಯೇಣ ಮಹಾಮತೇ ।**
**ತವ ಕ್ಷೇತ್ರೇ ದೇವಹೂತ್ಯಾಂ ಪ್ರಣೇಷ್ಯೇ ತತ್ತ್ವಸಂಹಿತಾಮ್ ॥೩೨॥**

ಹೇ ಮಹಾಮತೇ=ಜ್ಞಾನಿಯೇ, ತವ ಕ್ಷೇತ್ರೇ ದೇವಹೂತ್ಯಾಂ=ನಿನ್ನ ಹೆಂಡತಿಯಾದ ದೇವಹೂತಿದೇವಿಯಲ್ಲಿ, ಸ್ವಾಂಶಕಲಯಾ=ಸ್ವರೂಪಭೂತ ಅಂಶ ವಿಭಾಗದಿಂದ, ತ್ವದ್ವೀರ್ಯೇಣ ಸಂಭೂಯ=ನಿನ್ನ ವೀರ್ಯದಿಂದ ಜನಿಸಿದಂತೆ ತೋರಿಸಿ, ತತ್ತ್ವಸಂಹಿತಾಂ ಪ್ರಣೇಷ್ಯೇ=ಪರಾಪರತತ್ವಪ್ರಕಾಶಕವಾದ ಸಾಂಖ್ಯಶಾಸ್ತ್ರ-ವನ್ನು ಮಾಡುವೆನು. ॥೩೨॥

**ಏವಂ ತಮನುಭಾಷ್ಯಾಥ ಭಗವಾನ್ ಪ್ರತ್ಯಗಕ್ಷಗಃ ।**
**ಜಗಾಮ ಬಿಂದುಸರಸಃ ಸರಸ್ವತ್ಯಾಃ ಪರಿಶ್ರಿತಾತ್ ॥೩೩॥**

ಪ್ರತ್ಯಗಕ್ಷಗಃ=ಅಪರೋಕ್ಷ ಜ್ಞಾನ ವಿಷಯನಾದ, ಭಗವಾನ್=ಶ್ರೀಹರಿಯು, ಏವಂ=ಈ ರೀತಿ, ತಂ=ಕರ್ದಮನೊಡನೆ, ಅನುಭಾಷ್ಯ=ಮಾತನಾಡಿ ಸರಸ್ವತ್ಯಾಃ =ಸರಸ್ವತಿನದಿಯಿಂದ ಪರಿಶ್ರಿತಾತ್=ಸುತ್ತುವರೆದ, ಬಿಂದುಸರಸಃ=ಬಿಂದು ಸರೋವರದಿಂದ, ಜಗಾಮ=ಹೊರಟು ಹೋದನು. ॥೩೩॥

**ನಿರೀಕ್ಷತಸ್ತಸ್ಯ ಯಯಾವಶೇಷ-**
**ಸಿದ್ಧೇಶ್ವರಾಭಿಷ್ಟುತಸಿದ್ಧಮಾರ್ಗಃ ।**

**ಆಕರ್ಣಯನ್ ಪತ್ರರಥೇಂದ್ರಪತ್ರೈ-**
**ರುಚ್ಚಾರಿತಂ ಸ್ತೋಮಮುದೀರ್ಣಸಾಮ ॥೩೪॥**

ತಸ್ಯ ನಿರೀಕ್ಷತಃ=ಕರ್ದಮರು ನೋಡುವಾಗಲೇ, ಅಶೇಷಸಿದ್ಧೇಶ್ವರಾಭಿಷ್ಟುತಃ= ಸಮಸ್ತ ಬ್ರಹ್ಮಾದಿಗಳಿಂದ ಸ್ತುತಿಸಲ್ಪಟ್ಟ ಸಿದ್ಧಮಾರ್ಗಃ=ಸನಾಕಾದಿಗಳಿಂದ ಹುಡುಕಲ್ಪಡುವ ಶ್ರೀಹರಿಯು, ಪತ್ರರಥ=ಪಕ್ಷಿಗಳಿಗೆ, ಇಂದ್ರ=ಒಡೆಯನಾದ ಗರುಡನ, ಪತ್ರೈಃ=ರೆಕ್ಕೆಗಳಿಂದ, ಉಚ್ಚಾರಿತಂ=ಅಭಿವ್ಯಕ್ತವಾದ, ಸ್ತೋಮಂ=ಸ್ತುತಿ- ವಿಶೇಷವನ್ನು, ತದಾರೂಢವಾದ ಉದೀರ್ಣಸಾಮ=ಉತ್ಕೃಷ್ಟವಾದ ಸಾಮಗಾನ- ವನ್ನು, ಆಕರ್ಣಯನ್=(ಕೇಳುತ್ತಾ) ಕೇಳಿಸುತ್ತ, ಯಯೌ=ಹೊರಟನು. ॥೩೪॥

**ಏವಂ ಸಂಪ್ರಸ್ಥಿತೇ ಶುಕ್ಲೇ ಕರ್ದಮೋ ಭಗವಾನ್ ಋಷಿಃ ।**
**ಆಸ್ತೇ ಸ್ಮ ಬಿಂದುಸರಸಿ ತಂ ಕಾಲಂ ಪ್ರತಿಪಾಲಯನ್ ॥೩೫॥**

ಶುಕ್ಲೇ=ಪರಮಶುದ್ಧನಾದ ಶ್ರೀಹರಿಯು 'ಏವಂ=ಈರೀತಿ ಹೇಳಿ ಸಂಪ್ರಸ್ಥಿತೇ ಸತಿ=ಹೋಗುತ್ತಿರಲು, ಭಗವಾನ್ ಕರ್ದಮಃ ಋಷಿಃ=ಪೂಜ್ಯರಾದ ಕರ್ದಮ ಋಷಿಗಳು, ತಂ ಕಾಲಂ ಪ್ರತಿಪಾಲಯನ್=ಶ್ರೀಹರಿಯು ನಾಡದ್ದು ಬರುವನು ಎಂದು ಹೇಳಿದ ಕಾಲವನ್ನು (ಸ್ವಾಯಂಭುವ ಮನುವು ಬರುವ ಕಾಲವನ್ನು) ನಿರೀಕ್ಷಿಸುತ್ತ, ಬಿಂದು ಸರಸಿ ಆಸ್ತೇ ಸ್ಮ=ಬಿಂದು ಸರೋವರದಡದಲ್ಲಿ ವಾಸಿಸುತ್ತಿದ್ದನು. ॥೩೫॥

**ಮನುಃ ಸ್ಯಂದನಮಾಸ್ಥಾಯ ಶಾತಕೌಂಭಪರಿಚ್ಛದಂ ।**
**ಆರೋಪ್ಯ ಸ್ವಾಂ ದುಹಿತರಂ ಸಭಾರ್ಯಃ ಪರ್ಯಟನ್ ಮಹೀಮ್ ॥**

ಮನುಃ=ಸ್ವಾಯಂಭುವನುವು, ಶಾತಕೌಂಭಪರಿಚ್ಛದಂ=ಚಿನ್ನದ ಪರಿಕರಗಳಿಂದ ಕೂಡಿದ, ಸ್ಯಂದನಂ=ರಥವನ್ನು, ಆಸ್ಥಾಯ=ತಾನು ಕುಳಿತು, ಸ್ವಾಂ=ತನ್ನ ದುಹಿತರಂ =ಮಗಳನ್ನು ಆರೋಪ್ಯ=ರಥದಲ್ಲಿ ಕೂಡಿಸಿಕೊಂಡು, ಸಭಾರ್ಯಃ= ಪತ್ನೀಸಹಿತನಾಗಿ, ಮಹೀಂ ಪರ್ಯಟನ್=ವರಾನ್ವೇಷಣೆಗಾಗಿ ಭೂಸಂಚಾರ ಮಾಡುತ್ತ ಆಶ್ರಮಕ್ಕೆ ಬಂದನೆಂದು ಅನ್ವಯ. ಕೇವಲ ವರಾನ್ವೇಷಣವಷ್ಟೇ ಅಲ್ಲ. ರಾಜ್ಯ ಪರಿಕ್ಷೆಯೂ ಮಾಡಿದಂತಾಯಿತು ಎಂಬ ಭಾವ ಸೂಚಿತವಾಗುವುದು. 'ಮಹೀಂ ಪರ್ಯಟನ್' ಎಂಬುದರಿಂದ ॥೩೬॥

**ತಸ್ಮಿನ್ ಸುಧನ್ವನ್ನಹನಿ ಭಗವಾನ್ ಯತ್ ಸಮಾದಿಶತ್ ।**
**ಉಪಾಯಾದಾಶ್ರಮಪದಂ ಮನುಃ ಶಾಂತವ್ರತಸ್ಯ ತತ್ ॥೩೭॥**

ಹೇ ಸುಧನ್ವನ್=ವಿದುರನೇ, ಭಗವಾನ್=ಶ್ರೀಹರಿಯು, ಯತ್ ಸಮಾದಿಶತ್ =ಯಾವುದನ್ನು ಹೇಳಿದ್ದನೋ ತಸ್ಮಿನ್ ಅಹನಿ=ಆ ದಿವಸ ಮನುಃ=ಮನುವು, ಶಾಂತವ್ರತಸ್ಯ=ತಪಸ್ಸನ್ನು ಪೂರ್ಣಗೊಳಿಸಿದ, ತತ್=ಕರ್ದಮರ ಆ, ಆಶ್ರಮಪದಂ= ಆಶ್ರಮ ವಿರುವ ಸ್ಥಳಕ್ಕೆ ಉಪಾಯಾತ್=ಬಂದನು. ॥೩೮॥

**ಯಸ್ಮಿನ್ ಭಗವತೋ ನೇತ್ರಾದಪತನ್ ಹರ್ಷಬಿಂದವಃ ।**
**ಕೃಪಯಾ ಸಂಪರೀತಸ್ಯ ಪ್ರಪನ್ನೇಽರ್ಪಿತಯಾ ಭೃಶಂ ॥೩೮॥**

**ತದ್ವೈ ಬಿಂದುಸರೋ ನಾಮ ಸರಸ್ವತ್ಯಾ ಪರಿಪ್ಲುತಂ ।**
**ಪುಣ್ಯಂ ಶಿವಾಮೃತಜಲಂ ಮಹರ್ಷಿಗಣಸೇವಿತಮ್ ॥೩೯॥**

ಯಸ್ಮಿನ್=ಯಾವ ಸರೋವರದಲ್ಲಿ ಪ್ರಪನ್ನೇ=ಶರಣಾಗತನಾದ ಕರ್ದಮನಲ್ಲಿ ಅರ್ಪಿತಯಾ=ಮಾಡಲ್ಪಟ್ಟ ಕೃಪಯಾ=ದಯೆಯಿಂದ, ಭೃಶಂ=ಬಹಳವಾಗಿ, ಸಂಪರೀತಸ್ಯ=ಯುಕ್ತನಾದ, ಭಗವತಃ=ಶ್ರೀಹರಿಯ, ನೇತ್ರಾತ್=ಕಣ್ಣಿನಿಂದ, ಹರ್ಷ ಬಿಂದವಃ=ಆನಂದಾಶ್ರು ಬಿಂದುಗಳು, ಅಪತನ್=ಬಿದ್ದವೋ ॥೩೮॥

ತತ್=ಅದೇ, ಬಿಂದುಸರೋ ನಾಮ ವೈ=ಆ ಕಾರಣದಿಂದ ಅದು ಬಿಂದು ಸರವೆಂದು ಪ್ರಸಿದ್ಧವಾಯಿತು. ಸರಸ್ವತ್ಯಾ=ಸರಸ್ವತೀ ನದಿಯಿಂದ, ಪರಿಪ್ಲುತಂ= ಸುತ್ತುವರಿಯಲ್ಪಟ್ಟಿದ್ದು, ಪುಣ್ಯಂ=ಪುಣ್ಯಜನಕವು ಶಿವಂ=ಆರೋಗ್ಯಕರವು ಅಮೃತಂ =ಸಿಹಿಯಾದ, ಜಲಂ=ನೀರುಳ್ಳದ್ದು (ವಿಜಯಧ್ವಜೀ -ಅಯಾಚಿತವಾದ ನೀರುಳ್ಳ) ಮಹರ್ಷಿಗಣ ಸೇವಿತಂ=ದೊಡ್ಡ ಋಷಿಗಳ ಸಮೂಹದಿಂದ ಸೇವಿತವಾದುದು. ॥೩೯॥

**ಪುಣ್ಯದ್ರುಮಲತಾಜಾಲೈಃ ಕೂಜತ್ಪುಣ್ಯಮೃಗದ್ವಿಜೈಃ ।**
**ಸರ್ವರ್ತುಫಲಪುಷ್ಪಾಢ್ಯಂ ವನರಾಜಿಶ್ರಿಯಾಽನ್ವಿತಂ ॥೪೦॥**

ಪುಣ್ಯದ್ರುಮಲತಾಜಾಲೈಃ=ಅಶ್ವತ್ಥ ಮುಂತಾದ ಗಿಡಗಳು ಮಾಧವಿ ಮುಂತಾದ ಬಳ್ಳಿಗಳು (ಕಾಡಿರುವಂತಿಗೆ) ಇವುಗಳ, ಜಾಲೈಃ=ಸಮೂಹದಿಂದ ಕೂಜತ್=ಧ್ವನಿ ಮಾಡುವ ಪುಣ್ಯಮೃಗ=ಕೃಷ್ಣಸಾರಂಗ ಮೊದಲಾದ ಮೃಗಗಳು, ದ್ವಿಜೈಃ=ಜರಿತಾರಿ ಮುಂತಾದ ಪಕ್ಷಿಗಳಿಂದಲೂ, ಯುಕ್ತಂ=ಕೂಡಿದ, ಸರ್ವರ್ತು- ಫಲಪುಷ್ಪಾಢ್ಯಂ=ಎಲ್ಲ ಋತುಗಳ ಹಣ್ಣು ಹೂಗಳಿಂದ ಸಮೃದ್ಧವಾದ, ವನರಾಜಿಶ್ರಿಯಾ ಅನ್ವಿತಂ=ವನಗಳ ಸಾಲಿನ ಕಾಂತಿಯಿಂದ ಕೂಡಿದ್ದು ॥೪೦॥

**ಮತ್ತದ್ವಿಜಗಣೋದ್‌ಘುಷ್ಟಂ ಮತ್ತಭ್ರಮರವಿಭ್ರಮಂ ।**
**ಮತ್ತಬರ್ಹಿನಟಾಟೋಪಮಾಹ್ವಯನ್ ಮತ್ತಕೋಕಿಲಮ್ ॥೪೧॥**

ಮತ್ತದ್ವಿಜಗಣೋದ್ಘುಷ್ಟಂ=ಸಂತುಷ್ಟ ಪಕ್ಷಿಗಳಿಂದ ಶಬ್ದ ಮಾಡಲ್ಪಟ್ಟ ಮತ್ತಭ್ರಮರವಿಭ್ರಮಂ=ಮದಿಸಿದ ಭ್ರಮರಗಳ ವಿವಿಧ ಹಾರಾಟ ಅಥವಾ ಶೃಂಗಾರವುಳ್ಳ, ಮತ್ತಬರ್ಹಿನಟಾಟೋಪಂ=ಹರ್ಷಗೊಂಡ ನವಿಲೆಂಬ ನಟನ ನೃತ್ಯಸಂಭ್ರಮವುಳ್ಳ, ಆಹ್ವಯನ್ಮತ್ತಕೋಕಿಲಂ=ಪರಸ್ಪರ ಆಹ್ವಾನಿಸುವ ಕೋಕಿಲೆಗಳುಳ್ಳ ॥೪೧॥

**ಕದಂಬಚಂಪಕಾಶೋಕಕರಂಜಬಕುಲಾಸನ್ನೈಃ ।**
**ಕುಂದಮಂದಾರಕುಟಜೈಃ ಶ್ಚೂತಪೋತೈರಲಂಕೃತಂ ॥೪೨॥**

ಕದಂಬ=ನೀಪವೃಕ್ಷ ಒಳ್ಳೆ ಜಾತಿಯ ಈಚಲುಮರ, ಚಂಪಕ=ಸಂಪಿಗೆ, ಅಶೋಕ=ಪವಳದ, ಕರಂಜ=ಹೊಂಗೆಮರ, ಬಕುಲ=ಪುಷ್ಪ ಆಸನ್ನೈಃ= ಹೊನ್ನೆಮರಗಳಿಂದ, ಕುಂದ=ಕೂಲು ಮಲ್ಲಿಗೆ, ಮಂದಾರ=ಪಾರಿಜಾತ, ಕುಟಜೈಃ= ಬೆಟ್ಟದ ಮಲ್ಲಿಗೆ, ಚೂತ ಪೋತ=ಚಿಕ್ಕ ಮಾವಿನ ಮರಗಳಿಂದ ಅಲಂಕೃತಂ= ಅಲಂಕರಿಸಲ್ಪಟ್ಟ ॥೪೨॥

**ಕಾರಂಡವೈರ್ಬಕೈರ್ಹಂಸೈಃ ಕುರರೈರ್ಜಲಕುಕ್ಕುಟೈಃ ।**
**ಸಾರಸೈಶ್ಚಕ್ರವಾಕೈಶ್ಚ ಚಕೋರೈರ್ವಲ್ಗುಕೂಜಿತಂ ॥೪೩॥**

ಕಾರಂಡವೈಃ=ಒಂದ ಜಾತಿಯ ಪಕ್ಷಿಯಿಂದ (ಬಕಪಕ್ಷಿ ಹಂಸಪಕ್ಷಿ) ಕುರರೈಃ= ಕಡಲಹದ್ದು, ಜಲಕುಕ್ಕುಟೈಃ=ನೀರು ಕೋಳಿಗಳಿಂದ, ಸಾರಸೈಃ=ತಾವರೆ ಹಕ್ಕಿಯಿಂದ, ಚಕ್ರವಾಕೈಃ=ಚಕ್ರವಾಕ ಪಕ್ಷಿಗಳಿಂದ, ಚಕೋರೈಃ=ಚಕೋರಪಕ್ಷಿಗಳಿಂದ ವಲ್ಗು= ಸುಂದವಾಗಿ, ಕೂಜಿತಂ=ಧ್ವನಿತವಾದುದು. ॥೪೩॥

**ಶಶಕೈರ್ಹರಿಣೈಃ ಕ್ರೋಡೈಃ ಶ್ವವಿಡ್‌ಗವಯಕುಂಜರೈಃ ।**
**ಗೋಪುಚ್ಛೈರ್ಹರಿಭಿರ್ಮರ್ಕೈರ್ನಕುಲೈರ್ನಾಭಿಭಿರ್ವೃತಂ ॥೪೪॥**

ಶಶಕೈಃ=ಮೊಲಗಳಿಂದ, ಹರಿಣೈಃ=ಜಿಂಕೆಗಳಿಂದ, ಕ್ರೋಡೈಃ=ಹಂದಿಗಳಿಂದ, ಶ್ವವಿಡ್= ತೋಳಗಳು, ಗವಯ=ಅಡವಿಯ ಆಕಳುಗಳು, ಕುಂಜರೈಃ=ಆನೆಗಳಿಂದ, ಗೋಪುಚ್ಛೈಃ=ಚಮರೀ ಮೃಗದಿಂದ, ಹರಿಭಿಃ= ಸಿಂಹಗಳಿಂದ, ಅಥವಾ ಕಪಿಗಳಿಂದ, ಮರ್ಕೈಃ=ಅಡವಿ ಬೆಕ್ಕುಗಳಿಂದ, ಮಂಗಗಳಿಂದ, ನಕುಲೈಃ=ಮುಂಗಲಿಗಳಿಂದ, ನಾಭಿಭಿಃ=ಕಸ್ತೂರಿ ಮೃಗಗಳಿಂದ, ವೃತಂ=ಕೂಡಿದ ॥೪೪॥

**ಪ್ರವಿಶ್ಯ ತತ್ ತೀರ್ಥವರಮಾದಿರಾಜಃ ಸಹಾನುಗಃ ।
ದದರ್ಶಮುನಿಮಾಸೀನಂ ತಸ್ಮಿನ್ ಹುತಹುತಾಶನಮ್ ॥೪೫॥**

**ವಿದ್ಯೋತಮಾನಂ ವಪುಷಾ ತಪಸ್ಯುಗ್ರಯುಜಾ ಚಿರಮ್ ।
ನಾತಿಕ್ಷಾಮಂ ಭಗವತಃ ಸ್ನಿಗ್ಧಾಪಾಂಗವಿಲೋಕನಾತ್ ॥೪೬॥**

ಸಹಾನುಗಃ=ಹೆಂಡತಿಮಗಳಿಂದ ಸಹಿತನಾದ, ಆದಿರಾಜಃ=ಸ್ವಾಯಂಭುವ ಮನುವು ತತ್ ತೀರ್ಥವರಂ ಪ್ರವಿಶ್ಯ=ಹಿಂದೆ ವರ್ಣಿಸಿದ ಶ್ರೇಷ್ಠ ಕ್ಷೇತ್ರವನ್ನು ಪ್ರವೇಶಿಸಿ, ತಸ್ಮಿನ್=ಆಕ್ಷೇತ್ರದಲ್ಲಿ ಆಸೀನಂ=ಕುಳಿತಿರುವ, ಹುತಹುತಾಶನಂ=ಹೋಮವನ್ನು ಮುಗಿಸಿದ ಚಿರಂ=ಬಹುಕಾಲ, ತಪಸಿ=ತಪಸ್ಸಿನಲ್ಲಿ, ಉಗ್ರಯುಜಾ =ಕ್ರೂರವಾಗಿ ಯೋಜಿಸಿದ ವಪುಷಾ=ದೇಹದಿಂದ ವಿದ್ಯೋತಮಾನಂ=ಪ್ರಕಾಶಿಸುವ ಭಗವತಃ=ಶ್ರೀಹರಿಯ ಸ್ನಿಗ್ಧಾಪಾಂಗವಿಲೋಕನಾತ್=ಸ್ನೇಹಪೂರಿತ ಕಟಾಕ್ಷವೀಕ್ಷಣ- ದಿಂದ, ನಾತಿಕ್ಷಾಮಂ=ಅತಿಯಾಗಿ ಕೃಶನಾಗದ, ಮುನಿಂ=ಕರ್ದಮರನ್ನು ದದರ್ಶ=ನೋಡಿದನು. ॥೪೫-೪೬॥

**ತದ್ವ್ಯಾಹೃತಾಮೃತಕಲಾಪೀಯೂಷಶ್ರವಣೇನ ಚ ।
ಪ್ರಾಂಶುಂ ಪದ್ಮಪಲಾಶಾಕ್ಷಂ ಜಟಿಲಂ ಚೀರವಾಸಸಂ ।
ಉಪಸಂಸೃತ್ಯ ಮಲಿನಂ ಯಥಾರ್ಹಣಮಸಂಸ್ಕೃತಂ ॥೪೭॥**

ತದ್ವ್ಯಾಹೃತ=ಭಗವಂತನ ಮಾತುಗಳೆಂಬ, ಅಮೃತಕಲಾಪೀಯೂಷ=ಚಂದ್ರ- ನಲ್ಲಿರುವ ಸಮೀಚೀನವಾದ ಅಮೃತದ, ಶ್ರವಣೇನ ಚ=ಕೇಳುವುದೆಂಬ ಪಾನದಿಂದಲೂ, ನಾತಿಕ್ಷಾಮಃ=ಎಂದು ಹಿಂದೆ ಅನ್ವಯ (ಭಗವಂತನು ಪ್ರಾಕಾಶರೂಪನೂ ಆಲ್ಹಾದಕನು ಆದ್ದರಿಂದ ಚಂದ್ರ ಇದ್ದಂತೆ, ಅವನ ಮಾತು ಚಂದ್ರನಲ್ಲಿರುವ ಅಮೃತವಿದ್ದಂತೆ ಅಮೃತಕಲಃ=ಎಂದರೆ ಚಂದ್ರ ಆಪೀಯುಷ= ಸಮೀಚೀನಅಮೃತ) ಪ್ರಾಂಶುಂ=ಎತ್ತರನಾದ ಪದ್ಮಪಲಾಶಾಕ್ಷಂ=ಕಮಲದಳ- ನಯನನಾದ ಜಟಿಲಂ=ಜಟಾಧಾರಿಯಾದ, ಚೀರವಾಸಸಂ=ಹರಕುಬಟ್ಟೆಯನ್ನುಟ್ಟ ಅಸಂಸ್ಕೃತಂ=ಅಲಂಕರಿಸಿಕೊಳ್ಳದ ಅಭ್ಯಂಜನಾದಿ ಸಂಸ್ಕಾರಗಳಿಲ್ಲದ ಆದ್ದರಿಂದಲೇ, ಮಲಿನಂ=ಕೊಳೆಯಾಗಿ ಕಾಣುವ ಮುನಿಯನ್ನು ಯಥಾರ್ಹಣಂ ಉಪಸಂಸೃತ್ಯ= ಗೌರವದಿಂದ ಸಮೀಪಿಸಿ ದದರ್ಶ= ನೋಡಿದನು ಎಂದು ಅನ್ವಯ ॥೪೭॥

**ಅಥೋಟಜಮುಪಾಯಾಂತಂ ನೃದೇವಂ ಪ್ರಣತಂ ಪುರಃ ।
ಸಪರ್ಯಯಾ ಪ್ರತ್ಯಗೃಹ್ಣಾತ್ ಪ್ರತಿನಂದ್ಯಾನುರೂಪಯಾ ॥೪೮॥**

ಅಥ=ನಂತರ, ಉಟಜಂ ಉಪಯಾಂತಂ=ಪರ್ಣಶಾಲೆಗೆ ಬಂದಿರುವ, ಪುರಃ ಪ್ರಣತಂ=ಎದುರಿಗೆ ನಮಸ್ಕರಿಸಿದ, ನೃದೇವಂ=ರಾಜನನ್ನು ಪ್ರತಿನಂದ್ಯ=ಆಶೀರ್ವದಿಸಿ, ಅನುರೂಪಯಾ ಸಪರ್ಯಯಾ=ರಾಜಯೋಗ್ಯವಾದ ಪೂಜೆಯಿಂದ, ಪ್ರತ್ಯಗೃಹ್ಣಾತ್= ಸತ್ಕರಿಸಿದನು. ॥೪೮॥

**ಗೃಹೀತಾರ್ಹಣಮಾಸೀನಂ ಸಂಯತಂ ಪ್ರೀಣಯನ್ ಮುನಿಃ ।**
**ಸ್ಮರನ್ ಭಗವದಾದೇಶಮಿತ್ಯಾಹ ಶ್ಲಕ್ಷ್ಣಯಾ ಗಿರಾ ॥೪೯॥**

ಗೃಹೀತಾರ್ಹಣಂ=ಪೂಜೆಯನ್ನು ಸ್ವೀಕರಿಸಿದ, ಸಂಯತಂ=ಅತ್ಯಂತ ನಮ್ರನಾದ ಆಸೀನಂ=ಕುಳಿತಿರುವ ರಾಜನನ್ನು, ಪ್ರೀಣಯನ್=ಸಂತೋಷಪಡಿಸುತ್ತ,ಭಗವದಾ-ದೇಶಂ=ಶ್ರೀಹರಿಯ ಆಜ್ಞೆಯನ್ನು, ಸ್ಮರನ್=ಜ್ಞಾಪಿಸಿಕೊಂಡು, ಶ್ಲಕ್ಷ್ಣಯಾ ಗಿರಾ= ಮಧುರವಾದ ಮಾತುಗಳಿಂದ ಇತ್ಯಾಹ=ಮುಂದೆ ಹೇಳುವಂತೆ ಹೇಳಿದನು. ॥೪೯॥

**ನೂನಂ ಚಂಕ್ರಮಣಂ ದೇವ ಸತಾಂ ಸಂರಕ್ಷಣಾಯ ತೇ ।**
**ವಧಾಯ ಚಾಸತಾಂ ಯಸ್ತ್ವಂ ಹರೇಃ ಶಕ್ತಿರ್ಹಿ ಪಾಲಿನೀ ॥೫೦॥**

ಹೇ ದೇವ=ರಾಜನೇ, ಯಃ ತ್ವಂ=(ಸಪ್ತಸು ಪ್ರಥಮಾ ಎಂದಿರುವುದರಿಂದ) ಯಾವ ನಿನ್ನಲ್ಲಿ, ಹರೇಃ=ಭಗವಂತನ ಪಾಲಿನೀ ಶಕ್ತಿಃ=ಜಗತ್ಪಾಲನ ಶಕ್ತಿ ಇರುವದೋ, ತಸ್ಮಾತ್= ಆದ್ದರಿಂದ, ತೇ=ನಿನ್ನ ಚಂಕ್ರಮಣಂ=ಸಂಚಾರವು, ಸತಾಂ=ಸಜ್ಜನರ, ಸಂರಕ್ಷಣಾಯ=ರಕ್ಷಣೆಗಾಗಿ, ಚ=ಮತ್ತು, ಅಸತಾಂ=ದುಷ್ಟರ, ವಧಾಯ=ಶಿಕ್ಷಣಕ್ಕಾಗಿ ಸಂಹಾರಕ್ಕಾಗಿ ಎಂಬುದು, ನೂನಂ=ನಿಶ್ಚಯವು. ॥೫೦॥

ಕರ್ದಮಋಷಿಯು ಮನುವಿನಲ್ಲಿ ಆವಿಷ್ಟವಾದ ರಾಜರಾಜೇಶ್ವರ ಎಂಬ ಶ್ರೀಹರಿಯ ರೂಪವನ್ನು ತನ್ನ ಉಪಾಸ್ಯನಾದ ಶುಕ್ಲಾಭಿನ್ನನೆಂದು ತಿಳಿದು ನಮಿಸುವನು –

**ಯೋಽರ್ಕೇಂದ್ವಗ್ನೀಂದ್ರವಾಯೂನಾಂ ಯಮಧರ್ಮಪ್ರಚೇತಸಾಂ ।**
**ರೂಪಾಣಿ ಸ್ಥಾನ ಆಧತ್ಸೇ ತಸ್ಮೈ ಶುಕ್ಲಾತ್ಮನೇ ನಮಃ ॥೫೦॥**

ಯಃ ತ್ವಂ=ಯಾವ ನೀನು, ಅರ್ಕ=ಸೂರ್ಯನ (ಪ್ರಕಾಶತ್ವ) ಇಂದು= ಚಂದ್ರನ (ಆಹ್ಲಾದಕತ್ವ) ಅಗ್ನಿಯ (ಅಧೃಷ್ಯತ್ವ) ಇಂದ್ರ=ಇಂದ್ರನ (ಐಶ್ವರ್ಯವತ್ವ) ವಾಯೂನಾಂ=ವಾಯುವಿನ (ವೇಗವನ್ನು) ಯಮ=ಯಮನ (ಧರ್ಮಾಧರ್ಮ ವಿವೇಕ ಪೂರ್ವಕ ಶಿಕ್ಷಕತ್ವ) ಪ್ರಚೇತಸಾಂ ವರುಣನ (ಗಾಂಭೀರ್ಯ) ಇವರುಗಳ ರೂಪಾಣಿ ಧರ್ಮಗಳನ್ನು, ಸ್ಥಾನೇ=ಆ ಸಂದರ್ಭದಲ್ಲಿ, ಆಧತ್ಸೇ=ಧರಿಸುವಿಯೋ,

ತಸ್ಮೈ=ಅಂಥ, ಶುಕ್ಲಾತ್ಮನೇ=ಶುಕ್ಲನಾಮಕ ಶ್ರೀಹರಿಯಿಂದ ಆವಿಷ್ಟವಾದ ದೇಹವುಳ್ಳ, ನಿನಗೆ ನಮಃ=ನಮಸ್ಕಾರವು.

ಇಲ್ಲಿ ಈ ರೀತಿ ಆವೇಶಪರವಾಗಿಯೇ ವ್ಯಾಖ್ಯಾನಿಸಬೇಕು. ಅಭೇದ ಪರವಲ್ಲ ಎಂಬ ಅಭಿಪ್ರಾಯದಿಂದ ಸ್ವಾಯಂಭುವಮನುವಿನಲ್ಲಿ ಶ್ರೀಹರಿಯ ವಿಶೇಷಾವೇಶವಿದೆ ಎಂಬುದಕ್ಕೆ ಮತ್ತು ಶ್ರೀಹರಿಯ ಅಭೇದವಿಲ್ಲ ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು –

**ಸ್ವಾಯಂಭುವೋ ಮನುಶ್ಚೈವ ಪೃಥುಶ್ಚೈವಾರ್ಜುನಾವಪಿ ।**
**ಬ್ರಹ್ಮಶೇಷವಿಪಾರುದ್ರ ಇಂದ್ರ ಋಷ್ಯಾದಯಸ್ತಥಾ ।**
**ವಿಷ್ಣ್ವಾವೇಶಯುತಾಃ ಸರ್ವೇ ನ ತು ವಿಷ್ಣು ಸ್ವರೂಪಕಾಃ ॥**

**ಇತಿ ತತ್ತ್ವನಿರ್ಣಯೇ ।**

ಸ್ವಾಯಂಭುವಮನುವು, ಪೃಥುರಾಜನು, ಕಾರ್ತವೀರ್ಯಾರ್ಜುನ, ಪಾಂಡವಾರ್ಜುನರು, ಬ್ರಹ್ಮದೇವರು, ಶೇಷದೇವರು, ಗರುಡದೇವರು, ರುದ್ರದೇವರು, ಇಂದ್ರನು. ಮತ್ತು ಋಷಿಗಳು ವಿಶೇಷವಾಗಿ ವಿಷ್ಣುವಿನ ಆವೇಶವುಳ್ಳವರೇ ಹೊರತು ವಿಷ್ಣು ಸ್ವರೂಪರಲ್ಲವೇ ಅಲ್ಲವೆಂದು ತತ್ತ್ವನಿರ್ಣಯದಲ್ಲಿ ಹೇಳಿದೆ. ॥೫೧॥

ಶ್ರೀಹರಿಯ ರಕ್ಷಕಶಕ್ತಿ ನಿನ್ನಲ್ಲಿದೆಯೆಂಬುದನ್ನು ವ್ಯತಿರೇಕಮುಖವಾಗಿ ಉಪಪಾದಿಸುವನು –

**ನ ಯದಾ ರಥಮಾಸ್ಥಾಯ ಜೈತ್ರಂ ಮಣಿಗಣಾರ್ಪಿತಂ ।**
**ವಿಸ್ಫುರಚ್ಚಂಡಕೋದಂಡೋ ರಥೇನ ತ್ರಾಸಯನ್ನಘಾತ್ ॥೫೨॥**

ಯದಾ=ಯಾವಾಗ, ಮಣಿಗಣಾರ್ಪಿತಂ=ಮಣಿಗಳಿಂದ ಖಚಿತವಾದ, ಜೈತ್ರಂ= ಜಯಶೀಲವಾದ ರಥಂ ಆಸ್ಥಾಯ=ರಥದಲ್ಲಿ ಕುಳಿತು, ವಿಸ್ಫುರಚ್ಚಂಡ-ಕೋದಂಡಃ=ನಾದವನ್ನು ಮಾಡುವ ಕ್ರೂರವಾದ (ದೃಢವಾದ) ಧನುಸ್ಸುಳ್ಳವನಾಗಿ, ಅಘಾನ್=ಪಾಪಿಗಳನ್ನು ತ್ರಾಸಯನ್=ಭಯಪಡಿಸುತ್ತ ॥೫೨॥

**ಸ್ವಸೈನ್ಯಚರಣಕ್ಷುಣ್ಣಂ ವೇಪಯನ್ ಮಂಡಲಂ ಭುವಃ ।**
**ವಿಕರ್ಷನ್ ಬೃಹತೀಂ ಸೇನಾಂ ಪರ್ಯಟಸ್ಯಂಶುಮಾನಿವ ॥೫೩॥**

ಸ್ವಸೈನ್ಯಚರಣಕ್ಷುಣ್ಣಂ=ನಿನ್ನ ಸೈನ್ಯದ ಕಾಲುಗಳಿಂದ ತುಳಿಯಲ್ಪಟ್ಟ ಭುವಃ ಮಂಡಲಂ=ಭೂಮಂಡಲವನ್ನು, ವೇಪಯನ್=ನಡುಗಿಸುತ್ತ, ಬೃಹತೀಂ ಸೇನಾಂ

ವಿಕರ್ಷನ್=ದೊಡ್ಡ ಸೇನೆಯನ್ನು ತೆಗೆದುಕೊಂಡು, ಅಂಶುಮಾನಿವ=ಸೂರ್ಯ-ನಂತೆ, ರಥೇನ=ರಥದಿಂದ ಪರ್ಯಟನ್=ಸಂಚರಿಸುತ್ತ ಇರುವಿಯೋ ॥೩೪॥

**ತದೈವ ಸೇತವಃ ಸರ್ವೇ ವರ್ಣಾಶ್ರಮನಿಬಂಧನಾಃ ।**
**ಭಗವದ್ರಚಿತಾ ರಾಜನ್ ಭಿದ್ಯೇರನ್ ಬತ ದಸ್ಯುಭಿಃ ॥೩೪॥**

ಹೇ ರಾಜನ್=ರಾಜನೇ, ತದಾ ಏವ=ಆಗಲೇ, (ಆದ್ದರಿಂದಲೇ) ಭಗವದ್ರಚಿತಾಃ =ಬ್ರಹ್ಮಸೃಷ್ಟವಾದ, ವರ್ಣಾಶ್ರಮನಿಬಂಧನಾಃ=ವರ್ಣಾಶ್ರಮ ನಿಮಿತ್ತಕವಾದ, ಸರ್ವೇ ಸೇತವಃ=ಧರ್ಮಮರ್ಯಾದೆಗಳು, ದಸ್ಯುಭಿಃ=ಕಳ್ಳರಿಂದ ನ ಭಿದ್ಯೇರನ್= ಭೇದಿಸಲಾರವು ನಾಶವಾಗಲಾರವು. ॥೩೪॥

**ಅಧರ್ಮಶ್ಚ ಸಮೇಧೇತ ಲೋಲುಪೈರ್ವ್ಯಂಕುಶೈರ್ನೃಭಿಃ ।**
**ಶಯಾನೇ ತ್ವಯಿ ಲೋಕೋಽಯಂ ದಸ್ಯುಗ್ರಸ್ತೋ ವಿನಂಕ್ಷ್ಯತಿ ॥೩೫॥**

ತ್ವಯಿ ಶಯಾನೇ=ನೀನು ಮಲಗಿದರೆ ಅಂದರೆ ನ್ಯಾಯಾನ್ಯಾಯ ವಿಚಾರ ಮಾಡದಿದ್ದರೆ, ವ್ಯಂಕುಶೈಃ=ನಿರಂಕುಶರಾದ, ಲೋಲುಪೈಃ=ವಿಷಯಾಸಕ್ತರಾದ, ನೃಭಿಃ=ಜನರಿಂದ ವರ್ಣಾಶ್ರಮಧರ್ಮಗಳು ನಾಶವಾಗುವವು. ಮತ್ತು ದಸ್ಯುಗ್ರಸ್ತಃ =ಕಳ್ಳರಿಂದ ಅಪಹೃತಾರ್ಥವುಳ್ಳದ್ದಾಗಿ ವಿನಂಕ್ಷ್ಯತಿ=ನಾಶವಾಗುವುದು, ಅಧರ್ಮಃ ಸಮೇದೇತ=ಪಾಪವು ಹೆಚ್ಚಾಗುವುದು. ॥೩೫॥

**ಅಥಾಪಿ ಪೃಚ್ಛೇ ತ್ವಾಂ ವೀರ ಯದರ್ಥಂ ತ್ವಮಿಹಾಗತಃ ।**
**ತದ್ ವಯಂ ನಿರ್ವ್ಯಲೀಕೇನ ಪ್ರತಿಪದ್ಯಾಮಹೇ ಹೃದಾ ॥೩೬॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ದ್ವಾವಿಂಶೋಽಧ್ಯಾಯಃ ॥***

ಅಥಾಪಿ=ಧರ್ಮ ಮಾರ್ಗರಕ್ಷಣೆಗೆ ನಿನ್ನ ಸಂಚಾರವಾಗಿದ್ದರೂ ಏನೋ ಕಾರ್ಯ ವಿಶೇಷದಿಂದ ಇಲ್ಲಿಗೆ ಬಂದಿರುವುದರಿಂದ, ಯದರ್ಥಂ=ಯಾವ ಕಾರ್ಯಕ್ಕಾಗಿ, ತ್ವಂ ಇಹ ಆಗತಃ=ನೀನು ಇಲ್ಲಿಗೆ ಬಂದಿರುವಿ ಎಂದು, ತ್ವಾಂ=ನಿನ್ನನ್ನು ಹೇ ವೀರ= ರಾಜನೇ, ಪೃಚ್ಛೇ=ಪ್ರಶ್ನಿಸುವೆನು, ಅದನ್ನು ಹೇಳು. ವಯಂ=ನಾವು, ತತ್=ನೀನು ಹೇಳಿದ ಕಾರ್ಯವನ್ನು, ನಿರ್ವ್ಯಲೀಕೇನ ಹೃದಾ=ಪ್ರೀತಿಯುತವಾದಮನಸಿನಿಂದ, ಪ್ರತಿಪದ್ಯಾಮಹೇ=ಸ್ವೀಕರಿಸುವೆವು. ನಡೆಸಿಕೊಡುವೆವು. ॥೩೬॥

*ಇಲ್ಲಿಗೆ ಇಪ್ಪತ್ತೆರಡನೆ ಅಧ್ಯಾಯವು ಮುಗಿಯಿತು.*

# ಇಪ್ಪತ್ತೆರಡನೆಯ ಅಧ್ಯಾಯದ ತಾತ್ಪರ್ಯ

ವಿದುರರು - ಮೈತ್ರೇಯರೆ, ತಾವು ಪೂಜ್ಯರು ಸ್ವಾಯಂಭುವ ಮನುವಂಶವು ಅತ್ಯಂತ ಉತ್ತಮವೆಂದು ಜ್ಞಾನಿಗಳಿಂದ ಅಂಗೀಕೃತವಾಗಿದೆ. ಇದರಲ್ಲಿಯೇ ಮಿಥುನ ಸೃಷ್ಟಿಯಿಂದ ಪ್ರಜಾಸರ್ಗವು ಬೆಳೆಯಿತು. ಅದರ ವಿವರವನ್ನು ದಯವಿಟ್ಟು ತಿಳಿಸಬೇಕು. ಆ ಮನುರಾಜರಿಗೆ ಪ್ರಿಯವ್ರತ, ಉತ್ತಾನಪಾದರೆಂಬ ಇಬ್ಬರು ಗಂಡು ಮಕ್ಕಳು. ಅವರು ಸಪ್ತದ್ವೀಪಗಳಿಂದ ಕೂಡಿದ ಈ ಭೂಮಿಯನ್ನು ಧರ್ಮದಿಂದ ಪಾಲನೆಮಾಡಿದರೆಂದು ಕೇಳಿದ್ದೇವೆ. ಅವರ ಕಥೆಯನ್ನೂ ತಿಳಿಸಿರಿ. ಆ ಮನುರಾಜರ ಮಗಳಾದ ದೇವಹೂತೀದೇವಿಯು ಕರ್ದಮಪ್ರಜೇಶ್ವರರ ಪತ್ನಿಯೆಂದು ಈ ಹಿಂದೆಯೇ ತಾವು ಹೇಳಿದ್ದೀರಿ. ಮಹಾಯೋಗ ಸಿದ್ಧರಾದ ಕರ್ದಮರು ಯೋಗಗಳಿಂದ ಕೂಡಿದ್ದ ಆಕೆಯಲ್ಲಿ ಎಷ್ಟು ಮಕ್ಕಳನ್ನು ಪಡೆದರು.? ಅದನ್ನು ಕೇಳಬಯಸುವ ನನಗೆ ದಯವಿಟ್ಟು ತಿಳಿಸಬೇಕು. ಮತ್ತು ಈ ಮನುರಾಜರ ಅಳಿಯಂದಿರಾದ ಶುಚಿಪ್ರಜೇಶ್ವರರೂ ದಕ್ಷಪ್ರಜೇಶ್ವರರೂ ತಾವು ಮದುವೆಯಾದ ಆ ಮನುಪುತ್ರಿಯರಲ್ಲಿ ಯಾವ ಜೀವರಾಶಿಗಳನ್ನು ಸೃಷ್ಟಿಸಿದರು ?

ಮೈತ್ರೇಯರು - ಕರ್ದಮರನ್ನು ಸೃಷ್ಟಿಸಿದ ಬ್ರಹ್ಮದೇವರು 'ಪ್ರಜೆಗಳನ್ನು ಸೃಷ್ಟಿಮಾಡು' ಎಂದವರಿಗೆ ಆಜ್ಞಾಪಿಸಿದರು. ಮುಂದಿನ ಸೃಷ್ಟಿಗೆ ಶ್ರೀಹರಿಯ ಅನುಗ್ರಹವನ್ನು ಪಡೆಯಲು ಕರ್ದಮರು ಹತ್ತು ಸಾವಿರ ವರ್ಷಗಳು ಸರಸ್ವತೀ ತೀರದಲ್ಲಿ ತಪಸ್ಸು ಮಾಡಿದರು. ಶ್ರೀಹರಿಯ ಶರಣುಹೊಂದಿದವರಿಗೆ ವರಪ್ರದಾನ ಮಾಡುವ ಸ್ವಭಾವದವನೆಂಬುದು ಅವರಿಗೆ ತಿಳಿಯದೆ ಇರಲಿಲ್ಲ. ಏಕಾಗ್ರಚಿತ್ತದಿಂದ ವೈದಿಕ ಮತ್ತು ತಾಂತ್ರಿಕ ಉಪಾಯಗಳಿಂದ ಭಕ್ತಿಪೂರ್ವಕವಾಗಿ ಶ್ರೀಹರಿಯನ್ನು ಶರಣುಹೊಂದಿದರು. ಕೃತಯುಗದಲ್ಲಿ ಇದು ನಡೆದುದು. ವಿದುರ, ವೇದಗಳಿಂದ ಮಾತ್ರವೇ ತಿಳಿಯಲಾಗುವ ಗುಣಪರಿಪೂರ್ಣನಾದ ಪುಂಡರೀಕಾಕ್ಷನಾದ ಶ್ರೀಹರಿಯು ಕರ್ದಮರ ತಪಸ್ಸಿಗೆ ಪ್ರಸನ್ನನಾಗಿ ತನ್ನ ಅಪ್ರಾಕೃತ ಆಕಾರವನ್ನು ಅವರಿಗೆ ತೋರಿಸಿದನು. ಶ್ರೀಹರಿಯು ದೋಷದೂರನು. ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಅರಳಿದ ಕಮಲಗಳ ಮಾಲೆಯನ್ನು ಧರಿಸಿದ್ದನು. ಸುಂದರವಾದ ಕಪ್ಪು ಮುಂಗೂದಲಿನ ಸಮೂಹದಿಂದ ಕೂಡಿದ ಮುಖಕಮಲ ಅವನದು

ಉತ್ತಮವಾದ ಪೀತಾಂಬರವನ್ನುಟ್ಟಿದ್ದನು. ಕಿರೀಟ, ಕುಂಡಲ, ಶಂಖ, ಚಕ್ರ ಮತ್ತು ಗದೆಗಳನ್ನು ಧರಿಸಿದ್ದನು. ಬಿಳೀ ನೈದಿಲೆ ಹೂವನ್ನು ಆಟದ ಸಾಮಗ್ರಿಯಾಗಿ ಹಿಡಿದಿದ್ದನು. ಅವನ ಮುಗುಳುನಗೆ ಮತ್ತು ನೋಟಗಳು ಭಕ್ತರ ಮನಸ್ಸನ್ನು ಮುಟ್ಟುತ್ತಿದ್ದುವು. ಗರುಡನ ಹೆಗಲ ಮೇಲೆ ಕಾಲುಗಳನ್ನು ಇಟ್ಟಿದ್ದನು. ಅವನ ವಕ್ಷಃಸ್ಥಳದಲ್ಲಿ ಲಕ್ಷ್ಮಿಯೂ, ಕಂಠದಲ್ಲಿ ಕೌಸ್ತುಭವೂ ವಿರಾಜಿಸುತ್ತಿದ್ದುವು. ಈ ರೀತಿಯಲ್ಲಿ ಶ್ರೀಹರಿಯು ಆಕಾಶದಲ್ಲಿ ಇದ್ದನು. ಇಂತಹ ಶ್ರೀಹರಿಯನ್ನು ನೋಡಿ ಕರ್ದಮರಿಗೆ ಸಂತೋಷವಾಯಿತು. ಇಷ್ಟವು ನೆರವೇರಿತೆಂದು ಅರಿತ ಅವರು ಭೂಮಿಯಲ್ಲಿ ಸಾಷ್ಟಾಂಗ ಪ್ರಣಾಮ ಮಾಡಿದರು. ಪ್ರೀತರಾದ ಅವರು ಶ್ರೀಹರಿಯನ್ನೇ ಸ್ಮರಿಸುತ್ತ ಅಂಜಲಿಬದ್ಧರಾಗಿ ಶ್ರೀಹರಿಯನ್ನು ಸ್ತೋತ್ರಮಾಡಿದರು. 'ಸಕಲ ವೇದಗಳಿಂದ ಸ್ತೋತ್ರಮಾಡಿಸಿಕೊಳ್ಳುವ ಶ್ರೀಹರಿಯೇ, ಪೂರ್ಣಜ್ಞಾನ-ಬಲಗಳುಳ್ಳ ನೀನು ನನಗೆ ಪ್ರತ್ಯಕ್ಷನಾಗಿರುವೆ. ಇದುವರೆಗೆ ನನ್ನ ಕಣ್ಣು ಮೊದಲಾದ ಇಂದ್ರಿಯಗಳು ನಿನ್ನನ್ನು ಸೇವಿಸಿದುದು ಸಾರ್ಥಕವಾಯಿತು. ಯೋಗಸಿದ್ಧರು ಯಾವಾಗಲೂ ನಿನ್ನನ್ನೇ ಧ್ಯಾನಿಸುತ್ತ ಅನೇಕಾನೇಕ ಜನ್ಮಗಳಿಂದ ನಿನ್ನ ಸಾಕ್ಷಾತ್ಕಾರವನ್ನು ಅಪೇಕ್ಷಿಸುತ್ತಾರೆ. ನನಗಾದರೋ ನಿನ್ನ ಸಾಕ್ಷಾತ್ಕಾರವೇ ದೊರೆಯಿತು. ಇದು ನಿನ್ನ ಅನುಗ್ರಹ. ನನ್ನ ಪ್ರಯತ್ನ ಇದಕ್ಕೆ ನಿಮಿತ್ತವಲ್ಲ. ನೀನು ಕರುಣಾಮಯನು. ನಿನ್ನ ಬಂಧಕ ಶಕ್ತಿಯಿಂದ ಜ್ಞಾನವನ್ನು ಕಳೆದುಕೊಂಡಿರುವ ಕೆಲವರು ಸಂಸಾರ ಸಮುದ್ರವನ್ನು ದಾಟಲು ನಾವೆಯಾದ ನಿನ್ನ ಪಾದಗಳನ್ನು ಅಲ್ಪವಾದ ವಿಷಯ ಸುಖಗಳಿಗಾಗಿ ಸೇವಿಸುವರು. ಈ ಬಗೆಯ ವಿಷಯಸುಖಗಳು ಬಹುನೀಚಗಳಾದ ಹಂದಿ ಮೊದಲಾದ ಯೋನಿಗಳಲ್ಲಿಯೂ ಸುಲಭವಾಗಿರುವುವು ಆ ಗ್ರಾಮ್ಯಸುಖ-ಗಳನ್ನೇ ಬಯಸುವ ಅವರಿಗೆ ನೀನು ಅವುಗಳನ್ನು ಅನುಗ್ರಹಿಸುವೆಯೆಂದ ಮೇಲೆ ರಾಜ್ಯಾದಿ ಸುಖಗಳು ನಿನ್ನ ಅನುಗ್ರಹವಿಲ್ಲದೆ ದೊರೆಯುವುವೇ ? ಅವರಂತೆ ನಾನೂ ಒಬ್ಬ ಗ್ರಾಮ್ಯ ಸುಖಾಪೇಕ್ಷಿಯು. ನನಗೆ ಸಮಾನವಾದ ಸ್ವಭಾವವುಳ್ಳ ಗೃಹಸ್ಥಧರ್ಮಗಳಿಗೆ ಅನುಕೂಲೆಯಾದ ಒಬ್ಬ ಪತ್ನಿಯನ್ನು ಮದುವೆಯಾಗ ಬಯಸುತ್ತೇನೆ. ನೀನು ಬೇಡಿದವರ ಕಲ್ಪವೃಕ್ಷ. ಆದರೂ ಎಲ್ಲ ಪುರುಷಾರ್ಥಗಳಿಗೂ ಕಾರಣವಾದ ನಿನ್ನ ಪಾದಮೂಲವನ್ನು ಈ ದುಷ್ಟ ಅಭಿಪ್ರಾಯದಿಂದ ಆಶ್ರಯಿಸಿರುತ್ತೇನೆ. ಹೇ ಸ್ವಾಮಿನ್, ನೀನು ದೋಷವಿಲ್ಲದವನು. ಬ್ರಹ್ಮಾದಿಗಳಿಗೂ ನಿಯಾಮಕನು. ಪ್ರಜಾಪಾಲಕನಾದ ನಿನ್ನ ಮಾತುಗಳೆನಿಸುವ ವೇದಗಳೆಂಬ ಹಗ್ಗಗಳಿಂದ ಈ ಜನರು ನಿಯಮಿತರಾಗಿ ಸ್ವರ್ಗಾದಿಗಳನ್ನಪೇಕ್ಷಿಸಿ ನಿನ್ನ ಪೂಜಾರೂಪವಾದ ಯಾಗಗಳನ್ನು ಮಾಡುವರು. ನಾನೂ ಇಂತಹ ಜನರಲ್ಲಿ ಒಬ್ಬ ಸಂಸಾರ ಶೋಕವನ್ನು ಪರಿಹರಿಸುವ ಕಾಲಾಂತರ್ಯಾಮಿಯಾದ ನಿನಗೆ ನಾನೂ

ಯಜ್ಞಯಾಗಾದಿಗಳಿಂದ ಪೂಜೆ ಸಲ್ಲಿಸುವೆನು. ಮದುವೆಯಾದ ಮೇಲೂ ಸಲ್ಲಿಸುವೆನು. ಈ ಜಡ ದೇಹಗಳನ್ನೂ ಅವುಗಳಲ್ಲಿರುವ ಇಂದ್ರಿಯಗಳನ್ನೂ ನಿನಗೊಪ್ಪಿಸಿ ನಿನ್ನ ಪಾದಾರವಿಂದಗಳ ನೆರಳಿನಲ್ಲಿ ದುಃಖವನ್ನು ಕಳೆದುಕೊಂಡು ಆಶ್ರಯಿಸಿರುವ ಜನರು ನಿನ್ನ ಗುಣಗಾನ ರೂಪವಾದ ಹೊಸಹಸುವಿನ ಹಾಲಿನಿಂದ ತಮ್ಮ ದೇಹಯಾತ್ರೆಯನ್ನು ನಡೆಸುವರು. ಇದರ ಫಲವಾಗಿ ಅವರಿಗೆ ಹುಟ್ಟು ಸಾವುಗಳೇ ಇಲ್ಲದಂತಾಗುವುವು. ಆಗ ಅವರು ನಿನ್ನ ಕಾಲಚಕ್ರದ ಪ್ರಭಾವಕ್ಕೆ ಸಿಕ್ಕದೆ ಕಾಲಾತೀತರೆನಿಸಿ ನಿತ್ಯ ಸುಖಿಗಳಾಗಿರುವರು. ನಿನ್ನ ಕಾಲಚಕ್ರದ ಅಚ್ಚು ಎಂದೂ ಸವೆಯುವುದಿಲ್ಲ. ಅದರ ಮೇಲೆ ಅದು ಸುತ್ತುತ್ತಿರುವುದು ಅದಕ್ಕೆ ಹದಿಮೂರು (ಅಧಿಕಮಾಸ ಸೇರಿ) ತಿಂಗಳುಗಳೇ ಅರಗಳು. ಮೂನ್ನೂರ ಅರವತ್ತು ದಿವಸಗಳೇ ಭಾಗಗಳು. ಆರು ಋತುಗಳೇ ಆ ಚಕ್ರದ ಪಟ್ಟಿಗಳು. ಮೂರು ಚಾತುರ್ಮಾಸಗಳೇ ಅದರ ಮೂರು ನಾಭಿ (ಕುಂಭ)ಗಳು ಪರಮಾಣು ಮೊದಲಾದ ಕಾಲಭಾಗಗಳೆಂಬ ಅನಂತ ರಂಧ್ರಗಳು. ಇಂತಹ ನಿನ್ನ ಕಾಲಚಕ್ರವು ಬಹು ವೇಗವಾಗಿ ಪ್ರವಹಿಸುತ್ತ ಜಗತ್ತನ್ನೇ ಕಬಳಿಸುವದು. ಮತ್ತೆ ಮತ್ತೆ ಬರುವುದರಿಂದ ಚಕ್ರವೆನಿಸುವುದು. ಆದರೆ ನಿನ್ನ ಭಕ್ತರಾದ ಮುಕ್ತರ ಆಯುಸ್ಸನ್ನು ಇದು ಅಳೆಯಲಾರದು. ಆದ್ದರಿಂದ ನಾನೂ ಸಂಸಾರದಿಂದ ಮುಕ್ತನಾಗಬಯಸಿ ನಿವೃತ್ತಿಮಾರ್ಗವನ್ನು ಹಿಡಿಯುವೆನು. ಹೇ ದೇವ, ಸಮಸ್ತ ಐಶ್ವರ್ಯಸಂಪನ್ನನು ನೀನೊಬ್ಬನೇ. ನಿನ್ನ ಉದರದಲ್ಲಿ ಸಮಸ್ತ ಜಗತ್ತನ್ನೂ ಧರಿಸಿರುವೆ. ಅದನ್ನು ಸೃಷ್ಟಿಸುವ ಇಚ್ಛೆಯಿಂದ ನಿನ್ನ ಅಧೀನಳಾದ ಚಿತ್ಪ್ರಕೃತಿಯನ್ನೂ ನಿನ್ನ ಅಧೀನವಾದ ಜಡಪ್ರಕೃತಿಯನ್ನೂ ಉಪಯೋಗಿಸಿಕೊಂಡು ಇದೆಲ್ಲವನ್ನೂ ಸೃಷ್ಟಿಸುತ್ತೀ. ನಿನ್ನ ಸ್ವರೂಪಶಕ್ತಿಗಳೆನಿಸುವ ಮತ್ಸ್ಯಾದಿರೂಪಗಳಿಂದ ಈ ಜಗತ್ತನ್ನು ರಕ್ಷಿಸುತ್ತೀ. ಮತ್ತೆ ಜೇಡರ ಹುಳದಂತೆ (ಊರ್ಣನಾಭಿ) ಎಲ್ಲವನ್ನೂ ನಿನ್ನ ಉದರದಲ್ಲಿಯೇ ಇಟ್ಟು ಮಲಗುವೆ. ಇದೆಲ್ಲವೂ ನಿನಗೆ ಲೀಲೆ ಮಾತ್ರ.

ನೀನೇ ಬ್ರಹ್ಮಾದಿಗಳಿಗೆ ನಿಯಾಮಕನು. ಬ್ರಹ್ಮಾಂಡವನ್ನೇ ನಿನ್ನ ಪ್ರತಿಮಾರೂಪವನ್ನಾಗಿ ಮಾಡಿಕೊಂಡಿರುವೆ. ನಿನ್ನ ಸ್ವರೂಪವು ಸಚ್ಚಿದಾನಂದಾತ್ಮಕವಾದುದು. ಧ್ಯಾನಮಾಡುವ ಭಕ್ತರಲ್ಲಿ ಅನುಗ್ರಹ ಮಾಡಿ ಈ ರೂಪವನ್ನು ತೋರಿಸುವೆ. ನಿನ್ನ ಅನುಗ್ರವಿಲ್ಲದೆ ಈ ರೂಪವನ್ನು ನೋಡಲಾಗುವುದಿಲ್ಲ. ನಿನಗೆ ದೇಹನಿಮಿತ್ತಕವಾದ ಕರ್ಮಫಲವಿಲ್ಲ. ವಿಷಯಗಳನ್ನು ಅನುಭವಿಸಿ ಬರುವ ಸುಖವೂ ಇಲ್ಲ. ನಿನ್ನ ಇಚ್ಛೆಯಿಂದಲೇ ಲೋಕವ್ಯವಹಾರಕ್ಕೆ ಬೇಕಾದ ಸಾಧನಗಳನ್ನು ಸೃಷ್ಟಿಸಿರುವೆ. ಲಕ್ಷ್ಮಿಯೇ ಮೊದಲಾಗಿ ಸಮಸ್ತರೂ ನಿನ್ನ ಪಾದಕ್ಕೇ ನಮಸ್ಕರಿಸುವರು. ಎಂತಹ ಅಲ್ಪ ಭಕ್ತನಾದರೂ ಅವನಲ್ಲಿ ನೀನು ದಯೆಮಾಡದೆ ಇರುವುದಿಲ್ಲ. ಅದಕ್ಕೆ ನಾನೇ ಸಾಕ್ಷಿ.

ಅಲ್ಪ ಸಾಧನ ಸಂಪತ್ತುಳ್ಳ ನನ್ನ ಇಷ್ಟವನ್ನು ನೆರವೇರಿಸಲು ನೀನಿಂದು ಕಣ್ಣಿಗೆ ಕಾಣಿಸಿರುವೆ' ಎಂದು ಸ್ತೋತ್ರಮಾಡಿದರು.

ಮೈತ್ರೇಯರು : ಹೀಗೆ ಕರ್ದಮರು ಯಾವ ಕಪಟವೂ ಇಲ್ಲದೆ ಶ್ರೀಹರಿಗೆ ಭಕ್ತಿಯಿಂದ ನಮಸ್ಕರಿಸಿದರು. ಗರುಡನ ಹೆಗಲಮೇಲೆ ವಿರಾಜಿಸುತ್ತಿದ್ದ ಶ್ರೀಹರಿಯು ನಸುನಗೆ ನಕ್ಕು ಪ್ರೀತಿಯಿಂದ ಕರ್ದಮರ ಕಡೆಗೆ ನೋಡಿದನು. ಅಮೃತಮಯವಾದ ಮಾತಿನಿಂದ ಉತ್ತರಕೊಟ್ಟನು.

ಶ್ರೀಹರಿಯು 'ಋಷಿವರ್ಯ, ನಿನ್ನ ಅಭಿಪ್ರಾಯವು ನನಗೆ ತಿಳಿಯದೆ ಇಲ್ಲ. ಇ ಹಿಂದೆಯೇ ನಿನ್ನ ಇಷ್ಟಸಿದ್ಧಿಗಾಗಿ ಸ್ವಾಯಂಭುವಮನುವನ್ನು ಪ್ರೇರಿಸಿದ್ದೇನೆ. ನನ್ನನ್ನೇ ನೀನು ಕಠಿಣವಾದ ನಿಯಮಗಳಿಂದ ಭಕ್ತಿಪೂರ್ವಕವಾಗಿ ಸೇವಿಸಿರುವೆ. ನೀನು ಎಲ್ಲ ಪ್ರಜೇಶ್ವರರಲ್ಲಿ ಉತ್ತಮನು. ನನ್ನ ಸೇವೆಯು ಎಂದೂ ವ್ಯರ್ಥವಾಗುವುದಿಲ್ಲ. ಅದರಲ್ಲಿಯೂ ನಿನ್ನಂತಹ ಭಕ್ತರು ಮನಮುಟ್ಟಿ ಮಾಡಿದ ಸೇವೆ ವ್ಯರ್ಥವಾಗುವು-ದುಂಟೆ ! ಮರೀಚಿಯೇ ಮೊದಲಾದ ಪ್ರಜೇಶ್ವರರನ್ನು ಕಾಪಾಡುವ ಸ್ವಾಯಂಭುವ ಮನುವು ಚಕ್ರವರ್ತಿಯಾಗಿ ಪ್ರಖ್ಯಾತನಾಗಿರುವನು. ಬ್ರಹ್ಮಾವರ್ತದಲ್ಲಿದ್ದು ಸಪ್ತದ್ವೀಪಗಳುಳ್ಳ ಭೂಮಿಯನ್ನು ಶಾಸನ ಮಾಡುತ್ತಿರುವನು. ಋಷಿಯಂತಿರುವ ಆರಾಜನು ಹೆಂಡತಿಯಾದ ಶತರೂಪಾದೇವಿಯೊಂದಿಗೆ ಧರ್ಮಜ್ಞನೂ ಬ್ರಾಹ್ಮಣನೂ ಆದ ನಿನ್ನನ್ನು ನೋಡಲು ನಾಡದ್ದು ಇಲ್ಲಿಗೆ ಬರುವನು. ಆ ರಾಜನು ತನ್ನ ಔರಸಪುತ್ರಿಯನ್ನು ನಿನಗೆ ಮದುವೆ ಮಾಡಿಕೊಡುವನು. ನೇತ್ರಾಂತಗಳು ಕಪ್ಪಗಿರುವ ಆಕೆ ಏರುಜವ್ವನೆ; ಶೀಲವತೀ ಮತ್ತು ಗುಣವಂತೆ. ತಕ್ಕ ಪತಿಯು ದೊರಕಲೆಂದು ಆಶಿಸುತ್ತಿರುವಳು. ಬ್ರಾಹ್ಮಣನಾದರೂ ನೀನು ರಾಜಪುತ್ರಿಯಾದ ಆಕೆಗೆ ಅನುರೂಪನಾಗಿರುವೆ. ನೀನು ಅನೇಕ ವರ್ಷಗಳಿಂದ 'ಯಾವಳಾದರೂ ಒಬ್ಬ ವಧು ನನಗೆ ಅನುಕೂಲಳಾದ ಪತ್ನಿಯಾಗಲಿ' ಎಂದು ಒಂದೇ ಮನಸ್ಸಿನಿಂದ ಬಯಸುತ್ತಿದ್ದಿ. ಆ ರಾಜಕುವರಿಯು ಬ್ರಾಹ್ಮಣನಾದ ನಿನ್ನನ್ನು ಯಾವ ವಿಳಂಬವೂ ಇಲ್ಲದೆ ಯಥೇಷ್ಟವಾಗಿ ಸೇವಿಸುವಳು. ನಿನ್ನಿಂದ ಗರ್ಭವತಿಯಾದ ಆಕೆ ಒಂಭತ್ತು ಹೆಣ್ಣು ಮಕ್ಕಳನ್ನು ಹಡೆಯುವಳು. ನಾನು ಹೇಳಿದಂತೆ ಕೇಳಿದ್ದೇ ಆದರೆ ಆ ಒಂಭತ್ತು ಕನ್ಯೆಯರನ್ನೂ ಮರೀಚಿಯೇ ಮೊದಲಾದ ಒಂಭತ್ತು ಜ್ಞಾನಿಗಳು ಮದುವೆಯಾಗಿ ಅವರಲ್ಲಿ ಮಕ್ಕಳನ್ನು ಪಡೆಯುವರು. ಇಷ್ಟೊಂದು ಸಂಸಾರದಲ್ಲಿ ಸಿಕ್ಕಿದರೂ ನನ್ನ ಗುಣೋಪಸಂಹಾರ ರೂಪವಾದ ಮನನವನ್ನು ಬಿಡದಿರುವ ನೀನು ನನ್ನ ಅಪ್ಪಣೆಯಾದ ಗೃಹಸ್ಥ ಧರ್ಮವನ್ನು ಭಕ್ತಿಪೂರ್ವಕ ಅನುಷ್ಠಾನಮಾಡಿ ನನ್ನಲ್ಲಿ ಒಪ್ಪಿಸು. ನಿನ್ನ ಎಲ್ಲ ಕರ್ಮಗಳೂ ಆಗ ಪವಿತ್ರಗಳಾಗಿ ಅನಂತ ಫಲವನ್ನು

ಕೊಡುವುವು. ಇದರಿಂದ ನೀನು ನನ್ನನ್ನು ಹೊಂದುವವನಾಗುವೆ. ಗೃಹಸ್ಥ ಧರ್ಮದಿಂದ ನಿವೃತ್ತನಾಗಿ ಎಲ್ಲ ಪ್ರಾಣಿಗಳಲ್ಲಿಯೂ ದಯೆ ತೋರುವುದರಿಂದ ಅಭಯಪ್ರದವಾದ ಯತ್ಯಾಶ್ರಮವನ್ನು ಸ್ವೀಕರಿಸು. ನಾನು ಸಮಸ್ತ ಜಗತ್ತನ್ನೂ ಧರಿಸಿರುವೆನೆಂತಲೂ ಎಲ್ಲ ಜಗತ್ತಿನಲ್ಲಿಯೂ ವ್ಯಾಪಿಸಿರುವೆನೆಂತಲೂ ಸಮಸ್ತ ಜಗತ್ತಿಗಿಂದ ನನ್ನನ್ನು ಭಿನ್ನನೆಂದೂ ತಿಳಿದು ಆತ್ಮಜ್ಞಾನಿಯಾಗಿ ಮದೇಕಶರಣನಾಗು. ಇದರಿಂದ ನನ್ನನ್ನು ನೀನು ಅಪರೋಕ್ಷದಿಂದ ಕಾಣುವೆ. ಅಷ್ಟೇ ಅಲ್ಲ ನಿನ್ನಲ್ಲಿ ಮತ್ತೊಂದು ಅನುಗ್ರಹವನ್ನೂ ಮಾಡುತ್ತೇನೆ. ಒಂದಂಶದಿಂದ ನಿನ್ನ ವೀರ್ಯದಲ್ಲಿ ಪ್ರವೇಶಿಸಿ ದೇವಹೂತಿಯ ಉದರದಲ್ಲಿ ಸೇರಿ ಅಭಿವ್ಯಕ್ತನಾಗಿ ತತ್ವಸಂಖ್ಯಾನವೆಂಬ ಸಾಂಖ್ಯಶಾಸ್ತ್ರವನ್ನು ರಚಿಸುತ್ತೇನೆ.' ಎಂದು ನುಡಿದನು.

ಶ್ರೀಹರಿಯು ಅವನನ್ನೇ ವಿಚಾರ ಮಾಡುವ ಇಂದ್ರಿಯಗಳಿಗೆ ಮಾತ್ರ ಗೋಚರನಾಗುವನು. ಕಣ್ಣಿಗೆ ಕಾಣದಿದ್ದ ಶ್ರೀಹರಿ ಕರ್ದಮರಿಗೆ ಪ್ರತ್ಯಕ್ಷನಾಗಿದ್ದನು. ಮೇಲೆ ಹೇಳಿದಂತೆ ಕರ್ದಮರನ್ನು ಸಮಾಧಾನಪಡಿಸಿ ಸರಸ್ವತೀ ನದಿಯಿಂದ ಸುತ್ತುವರೆದಿದ್ದ ಆ ಬಿಂದುಸರೋವರದಿಂದ ಹೊರಹೊರಟನು. ಬ್ರಹ್ಮಾದಿ ದೇವತೆಗಳು ಅವನನ್ನು ಭಕ್ತಿಯಿಂದ ಸ್ತೋತ್ರ ಮಾಡುತ್ತಿದ್ದರು. ಸಿದ್ಧರೆನಿಸಿದ ಸನಕಾದಿಗಳು ಅವನನ್ನು ಅರಸುತ್ತಿದ್ದರು. ಗರುಡದೇವನು ತನ್ನ ರೆಕ್ಕೆಗಳ ಬಡಿತದ ಶಬ್ದದಿಂದ ಉತ್ಕೃಷ್ಟವಾದ ಸಾಮವೇದದಲ್ಲಿನ ವಿಶೇಷ ಸ್ತೋತ್ರವನ್ನು ಉಚ್ಚರಿಸು-ತ್ತಿದ್ದನು. ಇದನ್ನು ಆಲಿಸುತ್ತ ಶ್ರೀಹರಿಯು ಕರ್ದಮರು ನೋಡುತ್ತಿದ್ದಂತೆಯೇ ಅದೃಶ್ಯನಾದನು.

ಹೀಗೆ ಶುಕ್ಲರೂಪಿಯು ಅಪ್ಪಣೆಮಾಡಿ ಹೋದಮೇಲೋ ಕರ್ದಮರು ತ್ರಿಕಾಲ ಜ್ಞಾನಿಗಳಾದ್ದರಿಂದ ಶ್ರೀಹರಿಯು ಹೇಳಿದ ಆಕಾಲವನ್ನು ನಿರೀಕ್ಷಿಸುತ್ತಾ ಆ ಬಿಂದು ಸರೋವರ ಕ್ಷೇತ್ರದಲ್ಲಿಯೇ ಉಳಿದರು. ವಿದುರ ! ಭಗವಂತನ ಮಾತು ಸುಳ್ಳಾಗುವುದುಂಟೆ ? ಅವನು ಹೇಳಿದ್ದ ಸಮಯಕ್ಕೆ ಸರಿಯಾಗಿ ಮನುರಾಜರು ಹೆಂಡತಿ ಮಗಳೊಂದಿಗೆ ಬಂಗಾರ ಆಭರಣಗಳಿಂದ ಅಲಂಕೃತವಾಗಿದ್ದ ತೇರಿನಲ್ಲಿ ಕುಳಿತು ಭೂಮಿಯನ್ನು ಸಂಚರಿಸುತ್ತ ವ್ರತಮಾಡಿ ಶ್ರೀಹರಿಯನ್ನು ಒಲಿಸಿಕೊಂಡಿದ್ದ ಕರ್ದಮರ ಆಶ್ರಮಕ್ಕೆ ಬಂದರು. ಶರಣಾಗತನಲ್ಲಿ ಅತ್ಯಂತ ಕನಿಕರಗೊಂಡಿದ್ದ ಶ್ರೀಹರಿಯ ಕಣ್ಣುಗಳಿಂದ ಹರ್ಷದ ನೀರು ಹನಿಗಳು ಉದುರಿ ಅಲ್ಲಿ ಹರಡಿದ್ದರಿಂದ ಬಿಂದು ಸರೋವರವೆಂಬ ಹೆಸರು ಅನ್ವರ್ಥವಾದುದು. ಸರಸ್ವತೀ ನದಿಯು ಆಕೊಳವನ್ನು ತುಂಬಿ ಹರಿಯುವಳು. ಪವಿತ್ರವೂ ಮಂಗಳಕರವೂ ತಾನಾಗಿಯೇ ಬಂದುದೂ ಆದ ನೀರಿನಿಂದ ತುಂಬಿದ ಆ ಸರಸ್ಸನ್ನು ಮಹರ್ಷಿಗಳೆಲ್ಲರೂ

ಸೇವಿಸುವರು ಆದ್ದರಿಂದ ಮೋಕ್ಷಕ್ಕೆ ಸಾಧನಮಾಡಿಕೊಳ್ಳುವರು. ಆ ಕ್ಷೇತ್ರದಲ್ಲಿ ಅಶ್ವತ್ಥ ಮೊದಲಾದ ವೃಕ್ಷಗಳೂ, ಮಾಧವೀ ಮೊದಲಾದ ಬಳ್ಳಿಗಳೂ, ಶಬ್ದ ಮಾಡುತ್ತಿರುವ ಜಿಂಕೆ ಮೊದಲಾದ ಮೃಗಗಳೂ ಜರಿತರಿ ಮೊದಲಾದ ಹಕ್ಕಿಗಳೂ, ಎಲ್ಲ ಋತುಗಳ ಹೂ ಹಣ್ಣುಗಳಿಂದ ತುಂಬಿ ಕಂಗೊಳಿಸುವ ವೃಕ್ಷ ಪಂಕ್ತಿಗಳೂ, ಹರ್ಷ ತುಂಬಿದ ಕಲಕಲನಾದದ ಹಕ್ಕಿಗಳೂ ಝೇಂಕರಿಸುವ ದುಂಬಿಗಳೂ, ಆನಂದದಿಂದ ನಟನಂತೆ ಭಂಗಿಯಿಂದ ಕುಣಿಯುವ ನವಿಲುಗಳೂ, ಮೋದ ಪೂರ್ಣವಾಗಿ ಪರಸ್ಪರ ಆಹ್ವಾನ ಮಾಡುತ್ತಿರುವ ಕೋಗಿಲೆಗಳೂ, ಕದಂಬ ಸಂಪಿಗೆ ಮುಂತಾದ ಹೂಗಿಡಗಳೂ, ಹಂಸ ಬಕ ಮೊದಲಾದ ಹಕ್ಕಿಗಳೂ, ಮೊಲ ಮೊದಲಾದ ಕಾಡು ಮೃಗಗಳೂ ತುಂಬಿ ಆಶ್ರಮವನ್ನು ಪವಿತ್ರಕರವೆಂದು ಸೂಚಿಸುತ್ತಿದ್ದುವು.

ಮನುರಾಜರು ಆ ಉತ್ತಮ ತೀರ್ಥಕ್ಕೆ ಪರಿವಾರದೊಂದಿದೆ ಬಂದರು. ಪ್ರವೇಶಿಸಿ ಸಮೀಪಿಸಿ ನೋಡಿದಾಗ ಕರ್ದಮರನ್ನು ಕಂಡರು. ಕರ್ದಮರು ಹೋಮಾದಿಗಳನ್ನು ಮುಗಿಸಿ ಶ್ರೀಹರಿಯನ್ನು ಮನನ ಮಾಡುತ್ತಾ ಕುಳಿತಿದ್ದರು. ಅವರ ದೇಹವು ಅತಿ ಕಠಿಣವಾದ ತಪಸ್ಸಿನ ಪ್ರಭಾವದಿಂದ ತೇಜಃಪುಂಜವಾಗಿತ್ತು. ಹೆಚ್ಚುಕಾಲ ತಪಸ್ಸು ಮಾಡಿದ್ದರೂ ಶ್ರೀಹರಿಯ ಸ್ನೇಹಪೂರ್ಣ ನೋಟದಿಂದಲೂ, ಅವನಾಡಿದ ಅಮೃತಮಯವಾದ ಮಾತುಗಳ ಶ್ರವಣದಿಂದಲೂ ಅಷ್ಟೇನೂ ಕೃಶವಾಗಿದ್ದಂತೆ ಕಾಣುತ್ತಿರಲಿಲ್ಲ. ಎತ್ತರವಾದ ಆ ಮೈಕಟ್ಟಿನಲ್ಲಿ ಮಹಾಪುರುಷ ಲಕ್ಷಣಗಳು ಕಾಣುತ್ತಿದ್ದುವು. ಅಗಲವಾದ ಕಣ್ಣುಗಳು ಮಾತ್ರ ಕಾಣುತ್ತಿದ್ದವೇ ಹೊರತು ಮಿಕ್ಕ ಲಕ್ಷಣಗಳು ತಾಪಸವೇಷದಿಂದ ಮುಚ್ಚಿ ಹೋಗಿದ್ದವು. ತಲೆಯ ಕೂದಲು ಜಟಿಗಟ್ಟಿದ್ದವು. ಚೀರ ವಸ್ತ್ರವನ್ನುಟ್ಟು ಮಲಿನರಂತಿದ್ದರೂ ಯಾವ ಬಗೆಯ ಅಲಂಕಾರವನ್ನು ಮಾಡಿಕೊಳ್ಳದಿದ್ದರೂ, ಪೂಜಾರ್ಹತೆಯು ಅವರಲ್ಲಿ ಹೊರಹೊಮ್ಮಿ ಕಾಣುತ್ತಿತ್ತು. ರಾಜರು ಗುಡಿಸಿಲೆಂದು ಬಗೆಯದೆ ಒಳಕ್ಕೆ ಪ್ರವೇಶಿಸಿ ಕರ್ದಮರೆದುರಿಗೆ ಭಕ್ತಿಯಿಂದ ನಮಸ್ಕಾರ ಮಾಡಿದರು. ಕರ್ದಮರೂ ರಾಜರನ್ನು ಬರಮಾಡಿಕೊಂಡು ಅವರಿಗೆ ತಕ್ಕ ಮರ್ಯಾದೆಗಳೊಂದಿಗೆ ಸತ್ಕಾರವನ್ನು ನೀಡಿದರು. ಸತ್ಕಾರವನ್ನು ಮಾಡಿಸಿಕೊಂಡ ರಾಜರು ವಿನಯದಿಂದ ಕುಳಿತಿದ್ದರು. ಕರ್ದಮರ ಮನಸ್ಸಿನಲ್ಲಿ ಶ್ರೀಹರಿಯ ಅಪ್ಪಣೆಯು ಮೊರೆಯುತ್ತಿತ್ತು. ಅವರು ರಾಜರನ್ನು ಮಧುರ ಮಾತುಗಳಿಂದ ಸಂತೋಷಪಡಿಸುತ್ತಾ ಹೀಗೆಂದರು.

ರಾಜನೇ ನೀನು ರಾಜ್ಯ ಸಂಚಾರ ಮಾಡುವುದು ಸಜ್ಜನರನ್ನು ಪಾಲಿಸುವುದಕ್ಕಾಗಿ ಮತ್ತು ದುರ್ಜನರನ್ನು ಸಂಹರಿಸುವುದಕ್ಕಾಗಿ. ನಿನ್ನಲ್ಲಿ ಶ್ರೀಹರಿಯ

ಪಾಲಕಶಕ್ತಿಯೆನಿಸಿದ ಸಾತ್ವಿಕಶಕ್ತಿಯು ಸನ್ನಿಹಿತವಾಗಿರುವುದರಿಂದ ನಿನ್ನ ಈ ಸಂಚಾರವು ಸಾರ್ಥಕವಾಗಿರುವುದು. ನಿನ್ನಲ್ಲಿ ಶ್ರೀಹರಿಯು ಆವಿಷ್ಟನಾಗಿರುವುದ-ರಿಂದ ನೀನು ಆಯಾಯಾ ಸಮಯಕ್ಕೆ ತಕ್ಕಂತೆ ಸೂರ್ಯನಂತೆ ಪ್ರಕಾಶಕನೂ, ಚಂದ್ರನಂತೆ ಆಹ್ಲಾದಕರನೂ, ಇಂದ್ರನಂತೆ ಐಶ್ವರ್ಯಪ್ರದನೂ, ವಾಯುವಿನಂತೆ ಶ್ರೇಷ್ಠನೂ, ಯಮನಂತೆ ದುಷ್ಟರಲ್ಲಿ ನಿಷ್ಕರುಣಿಯೂ, ಧರ್ಮನಂತೆ ಪುಣ್ಯಾಪುಣ್ಯ ವಿಮರ್ಶಕನೂ, ಅಗ್ನಿಯಂತೆ ಮತ್ತೊಬ್ಬರಿಂದ ಅದೃಶ್ಯನೂ ಆಗಿರುವೆ. ನೀನು ಹೀಗೆ ಸಂಚರಿಸಿ ಪಾಪಿಗಳ್‌ನು ಶಿಕ್ಷಿಸದಿದ್ದರೆ, ದೊಡ್ಡ ಸೈನ್ಯಸಮೇತನಾಗಿ ಭೂಮಂಡಲವನ್ನು ನಡುಗಿಸುತ್ತಾ ಸೂರ್ಯನಂತೆ ಪರ್ಯಟನ ಮಾಡದಿದ್ದರೆ ಕಳ್ಳರು ಹೆಚ್ಚಿ ಶ್ರೀಹರಿಯು ನಿರ್ಮಿಸಿದ ವರ್ಣಾಶ್ರಮ ಕಟ್ಟುಪಾಡುಗಳನ್ನು ಹಾಳುಮಾಡುವವರು. ವಿಷಯಲಂಪಟರಾದ ಈ ಧರ್ಮದ್ರೋಹಿಗಳು ನಿರಂಕುಶರಾಗಿ ಅಧರ್ಮವು ಹೆಚ್ಚಿ (ಧರ್ಮವು ಕಾಣದೆ) ಹೋಗುವುದು ರಾಜನು ನ್ಯಾಯಾನ್ಯಾಯ ವಿಚಾರಮಾಡದೆ ಹೋದಲ್ಲಿ ಮಲಗಿದ್ದಂತೆಯೇ ಸರಿ. ಆಗ ಲೋಕವು ಕಳ್ಳರಿಂದ ತುಂಬಿ ವ್ಯವಹರಿಸುವುದೇ ಕಷ್ಟವಾಗುವುದು. ಆದರೂ ನೀನು ಏತಕ್ಕೆ ಇಲ್ಲಿಗೆ ಬಂದಿರುವೆ ಎಂಬುದನ್ನು ತಿಳಿಯಬಯಸುತ್ತೇನೆ. ನೀನೇನು ಯೋಚಿಸಬೇಕಾದ್ದಿಲ್ಲ. ನಿನ್ನ ಇಷ್ಟಾರ್ಥವನ್ನು ಸ್ವಲ್ಪವೂ ಕಪಟವಿಲ್ಲದೆ ನಡೆಸಿಕೊಡುತ್ತೇನೆ.



## ಅಥ ತ್ರಯೋವಿಂಶೋಧ್ಯಾಯಃ

ಕರ್ದಮರಿಂದ ಪ್ರಶ್ನಿಸಿದ್ದನ್ನು ಕೇಳಿ ನಕ್ಕು ಸುಮ್ಮನಾದನೊ ? ಏನಾದರೂ ಮಾತಾಡಿದನೊ ? ಎಂದರೆ ಹೇಳುವರು

**ಮೈತ್ರೇಯ ಉವಾಚ**

**ಏವಮಾವಿಷ್ಕೃತಾಶೇಷಗುಣಕರ್ಮೋದಯಂ ಮುನಿಂ ।**
**ಸವ್ರೀಡ ಇವ ತಂ ಸಮ್ರಾಟ್ ಉಪಾರತಮುವಾಚ ಹ ॥೧॥**

ಏವಂ=ಈ ರೀತಿಯಾಗಿ, ಆವಿಷ್ಕೃತಾಶೇಷಗುಣಕರ್ಮೋದಯಂ=ರಾಜನ ಗುಣಕಾರ್ಯಗಳನ್ನು ಸಂಪೂರ್ಣವಾಗಿ ವ್ಯಕ್ತ ಮಾಡಿದ ಉಪಾರತಂ= ಹೇಳಬೇಕಾದನ್ನು ಹೇಳಿ ಸುಮ್ಮನಿರುವ ಅಥವಾ ತನ್ನ ಹೃದಯದಲ್ಲಿರುವ ಅಕಾರವಾಚ್ಯನಾದ ಭಗವಂತನಲ್ಲಿ ಆಸಕ್ತನಾದ, ಅಥವಾ ಸರ್ವಾಧಿಕನಾದ ಹರಿಯಲ್ಲಿ ಆಸಕ್ತನಾದ ಮಾತುಗಳು ಮುಗಿದಮೇಲೆ ಶ್ರೀಹರಿಯನ್ನು ಧ್ಯಾನ ಮಾಡುವತ್ತಿರುವ ಎಂದರ್ಥ. ತಂ ಮುನಿಂ=ಆ ಕರ್ದಮರನ್ನು ಕುರಿತು ಸವ್ರೀಡ ಇವ= ನಾಚಿದವನಂತೆ ಸಾಮ್ರಾಟ್=ಮನುವು, ಉವಾಚ=ಮಾತಾಡಿದನು, ಹ=ಎಂದು ಮನುವಿನ ವಿನಯವನ್ನು ಅಭಿನಂದಿಸುವರು. ॥೧॥

ಮನುವು ತನ್ನ ಅಭೀಷ್ಟವನ್ನು ವಿಜ್ಞಾಪನೆ ಮಾಡುವವನಾಗಿ "ನೀನು ಧರ್ಮಮರ್ಯಾದೆಯ ರಕ್ಷಕನು" ಎಂಬ ಮುನಿಯ ಮಾತಿಗೆ "ನಿಮ್ಮಿಂದ ರಕ್ಷಿತರಾದರೇನೆ ನಾವು ಧರ್ಮರಕ್ಷಕರು" ಹೀಗೆ ಪರಸ್ಪರ ಉಪಜೀವ್ಯಉಪಜೀವಕ- ಭಾವವನ್ನು ಶ್ರೀಹರಿಯೇ ಹಿಂದೆಯೇ ಮಾಡಿರುವನು. ಅವನೇ ನಿಮಗೂ ನಮಗೂ ಮುಖ್ಯರಕ್ಷಕನೆಂದು ಉತ್ತರವನ್ನು ಮೊದಲಿಗೆ ಹೇಳುವನು –

**ಮನುರುವಾಚ**

**ಬ್ರಹ್ಮಾಸೃಜತ್ ಸ್ವಮುಖತೋ ಯುಷ್ಮಾನಸ್ಮತ್ಪರೀಪ್ಸಯಾ ।**
**ಛಂದೋಮಯಾಂಸ್ತಪೋವಿದ್ಯಾಯೋಗಯುಕ್ತಾನಲಂಪಟಾನ್ ॥೨॥**

ಬ್ರಹ್ಮ=ಬ್ರಹ್ಮಾಂತರ್ಗತನಾದ ಶ್ರೀಹರಿಯು, ಅಸ್ಮತ್ಪರೀಪ್ಸಯಾ=ನಮ್ಮನ್ನು ರಕ್ಷಿಸುವ ಇಚ್ಛೆಯಿಂದ, ಛಂದೋಮಯಾನ್=ವೇದಪ್ರಧಾನರಾದ, ತಪೋವಿದ್ಯಾಯೋಗ-ಯುಕ್ತಾನ್=ತಪಸ್ಸು ಜ್ಞಾನ, ಭಕ್ತಿರೂಪಯೋಗದಿಂದ ಕೂಡಿದ, ಅಲಂಪಟಾನ್=ವಿಷಯಾಸಕ್ತಿ ರಹಿತರಾದ ಯುಷ್ಮಾನ್=ಬ್ರಾಹ್ಮಣರನ್ನು ಸ್ವಮುಖತಃ=ತನ್ನ ಮುಖದಿಂದ, ಅಸೃಜತ್=ಸೃಷ್ಟಿಸಿದನು. ॥೨॥

**ತತ್ತ್ರಾಣಾಯಾಸೃಜಚ್ಚಾಸ್ಮಾನ್ ದೋಃಸಹಸ್ರಾತ್ ಸಹಸ್ರಪಾತ್ ।**
**ಹೃದಯಂ ತಸ್ಯ ಹಿ ಬ್ರಹ್ಮ ಕ್ಷತ್ರಮಂಗಂ ಪ್ರಚಕ್ಷತೇ ॥೩॥**

ಸಹಸ್ರಪಾತ್=ಅನಂತ ಪಾದನಾದ ಶ್ರೀಹರಿಯು ದೋಃಸಹಸ್ರಾತ್=ಬಾಹುಗಳಿಂದ, ತತ್ತ್ರಾಣಾಯ=ಬ್ರಾಹ್ಮಣರ ರಕ್ಷಣೆಗಾಗಿ, ಅಸ್ಮಾನ್=ಕ್ಷತ್ರಿಯರನ್ನು ಅಸೃಜತ್=ಸೃಷ್ಟಿಸಿದನು. ತಸ್ಯ=ಶ್ರೀಹರಿಗೆ, ಬ್ರಹ್ಮ=ಬ್ರಾಹ್ಮಣಜಾತಿಯು, ಹೃದಯಂ=ಹೃದಯಸ್ಥಾನೀಯವು. ಕ್ಷತ್ರಂ=ಕ್ಷತ್ರಿಯಜಾತಿಯು, ಅಂಗಂ=ಬೇರೆ ಅವಯವವು, ಅಥವಾ ಹೃದಯಂ ಪ್ರಿಯವು ಪ್ರಧಾನವು, ಅಂಗಂ=ಅಪ್ರಧಾನವು, ಎಂದು ಪ್ರಚಕ್ಷತೇ=ಹೇಳಲ್ಪಡುವುದು. ॥೩॥

**ಅತೋ ಹ್ಯನ್ಯೋನ್ಯಮಾತ್ಮಾನಂ ಬ್ರಹ್ಮ ಕ್ಷತ್ರಂ ಚ ರಕ್ಷತಃ ।**
**ರಕ್ಷತ್ಯಸ್ಮಾನ್ ದ್ವಯಾನ್ ದೇವಃ ಸದಾ ಸದಸದಾತ್ಮಕಃ ॥೪॥**

ಅತಃ=ಅಂಗಾಂಗಿಭಾವವಿರುವುದರಿಂದ, ಬ್ರಹ್ಮ=ಬ್ರಾಹ್ಮಣರು, ಕ್ಷತ್ರಂ=ಕ್ಷತ್ರಿಯ-ರನ್ನು ಕ್ಷತ್ರಂ ಚ=ಕ್ಷತ್ರಿಯರೂ ಸಹ, ಬ್ರಹ್ಮ=ಬ್ರಾಹ್ಮಣರನ್ನು ಹೀಗೆ ಅನ್ಯೋನ್ಯಂ=ಪರಸ್ಪರವಾಗಿ, ರಕ್ಷತಃ=ರಕ್ಷಿಸುವರು. ಆತ್ಮಾನಂ ಚ=ತಮ್ಮನ್ನು ಉಪದೇಶಾದಿ-ಗಳಿಂದಲೂ ರಕ್ಷಿಸುವರು, ಸದಸದಾತ್ಮಕಃ=ಕಾರ್ಯಕಾರಣಗಳಲ್ಲಿ ವ್ಯಾಪ್ತನಾದ, ದೇವಃ=ಶ್ರೀಹರಿಯು, ಅಸ್ಮಾನ್ ದ್ವಯಾನ್ ಅಪಿ=ನಮ್ಮಿಬ್ಬರನ್ನೂ, ರಕ್ಷತಿ=ರಕ್ಷಿಸುವನು. ॥೪॥

ಈಗ ತಾನು ವಿಜ್ಞಾಪಿಸುವ ಕಾರ್ಯವನ್ನು ಸ್ವೀಕಾರ ಮಾಡಲು ಮುನಿದರ್ಶನವನ್ನು ಅಭಿನಂದಿಸುವನು ಮೂರು ಶ್ಲೋಕಗಳಿಂದ –

**ತವ ಸಂದರ್ಶನಾದೇವ ಛಿನ್ನಾ ಮೇ ಸಂಶಯಾ ಹೃದಃ ।**
**ಯತ್ ಸ್ವಯಂ ಭಗವಾನ್ ಪ್ರೀತ್ಯಾ ಧರ್ಮಮಾಹರಿರಕ್ಷಿಷೋಃ ॥೫॥**

ತವ=ನಿನ್ನ ಸಂದರ್ಶನಾದೇವ=ನೋಡುವದರಿಂದಲೇ ವಚನಗಳಿಂದಲೂ ಮೇ =ನನ್ನ ಹೃದಃ ಸಂಶಯಾಃ ಮಾನಸಿಕ ಸಂಶಯಗಳು, ಛಿನ್ನಾಃ=ನಾಶವಾದವು, ಯತ್

=ಯಾವ ಕಾರಣ ಭಗವಾನ್=ಶ್ರೀಹರಿಯು, ಪ್ರೀತ್ಯಾ=ಪ್ರೀತಿಯಿಂದ, ರಿರಕ್ಷಿಷೋಃ= ರಕ್ಷಣ ಮಾಡಲು ಇಚ್ಛಿಸುವರಿಗೆ, ಧರ್ಮಂ=ರಾಜ್ಯಪಾಲನ ಉಪದೇಶ ಮುಂತಾದ ಧರ್ಮಗಳನ್ನು ಸ್ವಯಂ ಆಹ=ತಾನೇ ಹೇಳಿರುವನು. ।।೫।।

**ದಿಷ್ಟ್ಯಾ ಮೇ ಭಗವಾನ್ ದೃಷ್ಟೋ ದುರ್ದರ್ಶೋ ಯೋಽಕೃತಾತ್ಮನಾಂ ।**
**ದಿಷ್ಟ್ಯಾ ಪಾದರಜಃ ಸ್ಪೃಷ್ಟಂ ಶೀರ್ಷ್ಣಾ ಯೇ ಭವತಃ ಶಿವಂ ।।೬।।**

ಯಃ=ಯಾರು, ಅಕೃತಾತ್ಮನಾಂ=ಮನೋಜಯವಿಲ್ಲದವರಿಗೆ ದುರ್ದರ್ಶಃ= ಕಾಣದಿರುವ, ಭಗವಾನ್=ಪೂಜ್ಯರಾದ ತಾವು ಮೇ=ನನ್ನಿಂದ, ದಿಷ್ಟ್ಯಾ=ದೈವಾನು-ಗ್ರಹದಿಂದ, ದೃಷ್ಟಃ=ನೋಡಲ್ಪಟ್ಟಿರಿ. ಭವತಃ=ತಮ್ಮ, ಶಿವಂ=ಮಂಗಲಕರವಾದ, ಯೇ=ಯಾವ, ಪಾದರಜಃ=ಪಾದಧೂಳಿಯು, ದಿಷ್ಟ್ಯಾ=ದೈವದಿಂದಾಗಿ, ಶೀರ್ಷ್ಣಾ= ಶಿರಸ್ಸಿನಿಂದ ಸ್ಪೃಷ್ಟಂ=ಧರಿಸಲ್ಪಟ್ಟಿತು. ।।೬।।

**ದಿಷ್ಟ್ಯಾ ತ್ವಯಾಽನುಶಿಷ್ಟೋಽಹಂ ಕೃತಶ್ಚಾನುಗ್ರಹೋ ಮಹಾನ್ ।**
**ಅಪಾವೃತ್ತೈಃ ಕರ್ಣರಂಧ್ರೈರ್ಜುಷ್ಟಾ ದಿಷ್ಟ್ಯೋಶತೀರ್ಗಿರಃ ।।೭।।**

ಅಹಂ=ನಾನು ತ್ವಯಾ=ನಿನ್ನಿಂದ ದಿಷ್ಟ್ಯಾ=ಅದೃಷ್ಟವಶಾತ್, ಅನುಶಿಷ್ಟಃ= ಶಿಕ್ಷಿಸಲ್ಪಟ್ಟೆನು. (ಉಪದೇಶಿಸಲ್ಪಟ್ಟೆನು), ಮಹಾನ್‌ಅನುಗ್ರಹಃ ಕೃತಃ=ದೊಡ್ಡ ಅನುಗ್ರಹ ಮಾಡಲ್ಪಟ್ಟಿತು. ಅಪಾವೃತ್ತೈಃ=ತೆರೆಯಲ್ಪಟ್ಟ ಕರ್ಣರಂಧ್ರೈಃ=ಕಿವಿಗಳಿಂದ, ದಿಷ್ಟ್ಯಾ= ದೈವಾತ್ತಾಗಿ, ಉಶತೀಃ=ನಿರ್ಮಲವಾದ ಗಿರಃ=ಮಾತುಗಳು, ಜುಷ್ಟಾಃ= ಆದರದಿಂದ ಕೇಳಲ್ಪಟ್ಟವು. ।।೭।।

ಈ ರೀತಿ ಅಭಿನಂದಿಸಿ ತನ್ನ ಅಭೀಷ್ಟವನ್ನು ಹೇಳುವನು ಏಳು ಶ್ಲೋಕಗಳಿಂದ-

**ಸ ಭವಾನ್ ದುಹಿತುಃ ಸ್ನೇಹಪರಿಕ್ಲಿಷ್ಟಾತ್ಮನೋ ಮಮ ।**
**ಶ್ರೋತುಮರ್ಹಸಿ ದೀನಸ್ಯ ಶ್ರಾವಿತಂ ಕೃಪಯಾ ಮುನೇ ।।೮।।**

ಹೇ ಮುನೇ=ಕರ್ದಮರೇ, ಸಃ ಭವಾನ್=ತಾವು, ದುಹಿತುಃ=ಮಗಳ ಮೇಲಿನ ಸ್ನೇಹಪರಿಕ್ಲಿಷ್ಟಾತ್ಮನಃ=ಅಭಿಮಾನದಿಂದ ದುಃಖಿತವಾದ ಮನಸ್ಸುಳ್ಳ, ಮಮ=ನನ್ನ, ದೀನಸ್ಯ=ದೀನನಾದ, ಶ್ರಾವಿತಂ=ವಿಜ್ಞಾಪನೆಯನ್ನು, ಕೃಪಯಾ=ದಯೆಯಿಂದ, ಶ್ರೋತುಂ ಅರ್ಹಸಿ=ಕೇಳಲು ಯೋಗ್ಯನಾಗಿರುವಿ. ।।೮।।

ಭ್ರಾತೃಮತಿಯಂದು ತಿಳಿಸಲು ಪ್ರಿಯವ್ರತ ಉತ್ತಾನಪಾದರ ತಂಗಿ ಎಂದು ಹೇಳುವರು –

**ಪ್ರಿಯವ್ರತೋತ್ತಾನಪದೋಃ ಸ್ವಸೇಯಂ ದುಹಿತಾ ಮಮ ।**
**ಅನ್ವಿಚ್ಛಂತೀ ಪತಿಂ ಯುಕ್ತಂ ವಯಃಶೀಲಗುಣಾದಿಭಿಃ ॥೯॥**

ಇಯಂ=ಇವಳು, ಪ್ರಿಯವ್ರತೋತ್ತಾನಪದೋಃ=ಪ್ರಿಯವ್ರತ ಮತ್ತು ಉತ್ತಾನ-ಪಾದರ, ಸ್ವಸಾ=ತಂಗಿಯು, ಮಮ ದುಹಿತಾ=ನನ್ನ ಮಗಳು, ವಯಃಶೀಲ-ಗುಣಾದಿಭಿಃ=ವಯಸ್ಸು ಸ್ವಭಾವ ಗುಣಗಳಿಂದ, ಯುಕ್ತಂ=ಯೋಗ್ಯನಾದ, ಪತಿಂ=ಗಂಡನನ್ನು, ಅನ್ವಿಚ್ಛಂತೀ=ಇಚ್ಛಿಸುವವಳಾಗಿ ॥೯॥

**ಯದಾ ತು ಭವತಃ ಶೀಲಶ್ರುತರೂಪವಯೋಗುಣಾನ್ ।**
**ಅಶ್ರುಣೋನ್ನಾರದಾತ್ ಸೈಷಾ ತ್ವಯ್ಯಾಸೀತ್ ಕೃತನಿಶ್ಚಯಾ ॥೧೦॥**

ಯದಾ=ಯಾವಾಗ, ನಾರದಾತ್=ನಾರದರಿಂದ, ಭವತಃ=ನಿಮ್ಮ, ಶೀಲ=ಸ್ವಭಾವ, ಶ್ರುತ=ಅಧ್ಯಯನ, ರೂಪವಯೋಗುಣಾನ್=ವಯಸ್ಸು ಗುಣಗಳನ್ನು, ತು=ವಿಶೇಷವಾಗಿ, ಅಶ್ರುಣೋತ್=ಕೇಳಿದಳೋ, ತದಾ=ಆಗಲೇ, ಸಾ ಏಷಾ=ಕೇಳಿದ ಈ ನನ್ನ ಮಗಳು, ತ್ವಯಿ ಕೃತನಿಶ್ಚಯಾ ಆಸೀತ್=ನಿನ್ನನ್ನು ವಿಷಯದಲ್ಲಿ (ವಿವಾಹವಾಗಬೇಕೆಂಬ) ನಿಶ್ಚಯ ಮಾಡಿದಳು. ॥೧೦॥

**ತತ್ ಪ್ರತೀಚ್ಛ ದ್ವಿಜಾಗ್ರ್ಯೇಮಾಂ ಶ್ರದ್ಧಯೋಪಹೃತಾಂ ಮಯಾ ।**
**ಸರ್ವಾತ್ಮನಾಽನುರೂಪಾಂ ತೇ ಗೃಹಮೇಧೇಷು ಕರ್ಮಸು ॥೧೧॥**

ಹೇ ದ್ವಿಜಾಗ್ರ್ಯ=ಬ್ರಾಹ್ಮಣಶ್ರೇಷ್ಠನೇ,ತತ್=ನಿನ್ನಲ್ಲಿ ಅನುರಕ್ತಳಾದ್ದರಿಂದ, ಮಯಾ =ನನ್ನಿಂದ, ಶ್ರದ್ಧಯಾ=ಶ್ರದ್ಧೆಯಿಂದ, ಉಪಹೃತಾಂ=ಕರೆತಂದ, ಗೃಹಮೇಧೇಷು ಕರ್ಮಸು=ಗೃಹಸ್ಥಾಶ್ರಮದಲ್ಲಿ ನಡೆಯುವ ಎಲ್ಲ ಕ್ರಿಯೆಗಳಿಗೂ, ತೇ=ನಿನಗೆ, ಸರ್ವಾತ್ಮನಾ=ಎಲ್ಲ ರೀತಿಯಿಂದ, ಅನುರೂಪಾಂ=ಅನುಕೂಲಸ್ವಭಾವದವಳಾದ, ಇಮಾಂ=ಇವಳನ್ನು ಪ್ರತೀಚ್ಛ=ಸ್ವೀಕರಿಸು. ॥೧೧॥

ಬೇಡ ಎಂಬುದು ನಿನಗೆ ಉಚಿತವಲ್ಲವೆಂದು ಹೇಳುವನು -

**ಉದ್ಯತಸ್ಯ ಹಿ ಕಾಮಸ್ಯ ಪ್ರತಿವಾದೋ ನ ಶಸ್ಯತೇ ।**
**ಅಪಿ ನಿರ್ಮುಕ್ತಸಂಗಸ್ಯ ಕಾಮರಕ್ತಸ್ಯ ಕಿಂಪುನಃ ॥೧೨॥**

ಉದ್ಯತಸ್ಯ=ತಾನಾಗಿಯೇ ದೊರೆತ, ಕಾಮಸ್ಯ=ವಿಷಯದ, ಪ್ರತಿವಾದಃ=ನಿರಾಕರಣವು, ನಿರ್ಮುಕ್ತಸಂಗಸ್ಯಾಪಿ=ವಿಷಯಾಪೇಕ್ಷೆ ಇಲ್ಲದ ಬ್ರಹ್ಮಚಾರಿ ಮುಂತಾದವರಿಗೂ ನ ಶಸ್ಯತೇ=ಪ್ರಶಸ್ತವಲ್ಲ, ಧರ್ಮಶಾಸ್ತ್ರಾನುಕೂಲವಾದುದಲ್ಲ,

ಕಿಂ ಪುನಃ ಕಾಮರಕ್ತಸ್ಯ=ವಿಷಯಾಸಕ್ತನಿಗೆ ಪ್ರಶಸ್ತವಲ್ಲವೆಂದು ಬೇರೆ ಹೇಳಬೇಕೆ? ಸ್ವತಃ ಸಿದ್ಧ. ॥೧೨॥

ಯಶೋಧರನಾದ ನಿನ್ನಂತವರಿಗೆ ನನ್ನಂಥವರು ಕನ್ಯೆ ಕೊಡಲು ಬಂದಾಗ ಬೇರೆಯವರು ಕೊಡುವರು ಎನ್ನುವುದು ಸರಿಯಲ್ಲ ಎಂದು ಹೇಳುವರು–

**ಯ ಉದ್ಯತಮನಾದೃತ್ಯ ಕೀನಾಶಮಭಿಯಾಚತೇ ।**
**ಕ್ಷೀಯತೇ ತದ್ ಯಶಃ ಸ್ಫೀತಂ ಮಾನಶ್ಚಾವಜ್ಞಯಾ ಹತಃ ॥೧೩॥**

ಯಃ=ಯಾವನು ಉದ್ಯತಂ=ಕನ್ಯೆಕೊಡಲುಬಂದ ನನ್ನಂತಹ ರಾಜನನ್ನು ಅನಾದೃತ್ಯ=ಆದರಿಸದೇ ಕೀನಾಶಂ=ಚಿಕ್ಕಮನುಷ್ಯನನ್ನು ಅಭಿಯಾಚತೇ= ಬೇಡುವನೋ ಅವನ ಸ್ಫೀತಂ=ಧವಲವಾದ, ತದ್ ಯಶಃ=ಕೀರ್ತಿಯು ಕ್ಷೀಯತೇ =ನಾಶವಾಗುವುದು. ಅವಜ್ಞಯಾ=ಅಪಮಾನದಿಂದ ಮಾನಃ ಹತಃ ಸ್ಯಾತ್= ಮರ್ಯಾದೆಯೂ ಹೋಗುವುದು. ॥೧೩॥

**ಅಹಂ ತ್ವಾಽಶೃಣವಂ ವಿದ್ವನ್ನುದ್ವಾಹಾರ್ಥಂ ಸಮುದ್ಯತಂ ।**
**ಅತಸ್ತ್ವಮುಪಕುರ್ವಾಣಃ ಪ್ರತ್ತಾಂ ಪ್ರತಿಗೃಹಾಣ ಮೇ ॥೧೪॥**

ಹೇ ವಿದ್ವನ್=ಜ್ಞಾನಿಯೇ, ತ್ವಾ=ನೀನು, ಉದ್ವಾಹಾರ್ಥಂ=ವಿವಾಹಕ್ಕಾಗಿ, ಸಮುದ್ಯತಂ=ಪ್ರಯತ್ನಿಸುತ್ತಿರುವುದಾಗಿ, ಅಹಂ=ನಾನು, ಅಶೃಣವಂ=ಕೇಳಿರುವೆನು. ಅತಃ=ಆದ್ದರಿಂದ, ತ್ವಂ ಉಪಕುರ್ವಾಣಃ=ಉಪಕುರ್ವಾಣ (ವಿವಾಹಕಾಮ) ನೆನಿಸುವಿ. ಮೇ=ನನ್ನಿಂದ, ಪ್ರತ್ತಾಂ=ಕೊಡಲ್ಪಟ್ಟವಳನ್ನು, ಪ್ರತಿಗೃಹಾಣ=ಸ್ವೀಕರಿಸು.

ವೇದಾನಧೀತ್ಯ ಯೋ ವರ್ಣೀ ವಿವಾಹಾರ್ಥಂ ಗುರೋಃ ಕುಲಾತ್ ।
ಕೃತಾನುಜ್ಞೋ ನಿವರ್ತೇತ ಉಪಕುರ್ವಾಣ ಉಚ್ಯತೇ ॥

ಎಂದು ವಚನವಿದೆ. ತ್ರಿವರ್ಣಗಳಲ್ಲಿ ಸೇರಿದ ಯಾವನು ವೇದಗಳನ್ನು ಅಧ್ಯಯನ ಮಾಡಿ ವಿವಾಹಕ್ಕಾಗಿ ಗುರುಗಳ ಅಪ್ಪಣೆ ಪಡೆದು ಗುರುಕುಲದಿಂದ ಹೊರಡುವನೊ ಅವನು ಉಪಕುರ್ವಾಣ ಎನಿಸುವನು, ವಿವಾಹಕಾಮನೆಂದರ್ಥ. ॥೧೪॥

**ಋಷಿರುವಾಚ**

**ಬಾಢಮುದ್ವೋಢುಕಾಮೋಽಹಮಪ್ರಮತ್ತಾ ತವಾತ್ಮಜಾ ।**
**ಆವಯೋರನುರೂಪೋಽಸಾವಾದ್ಯೋ ವೈವಾಹಿಕೋ ವಿಧಿಃ ॥೧೫॥**

ಬಾಢಂ=ನಿನ್ನಮಾತು ಅಭಿಮತವೇ. ಅಹಂ=ನಾನು, ಉದ್ವೋಢುಕಾಮಃ= ವಿವಾಹವಾಗಲು ಇಚ್ಛೆ ಉಳ್ಳವನು, ತವ=ನಿನ್ನ, ಆತ್ಮಜಾ=ಮಗಳು, ಅಪ್ರಮತ್ತಾ= ಗಂಡನ ಸೇವೆ ಮಾಡುವವಳು ವಿಷಯಾಸಕ್ತಿ ಇಲ್ಲದವಳು ಧರ್ಮಾರ್ಥಕಾಮಗಳಿಗೆ ಕಾರಣಳು. ''ಪತಿಶುಶ್ರೂಷಣೇಯತ್ತಾ ವಿಷಯಾಸಕ್ತಿವರ್ಜಿತಾ,ಧರ್ಮಾರ್ಥಕಾಮ- ಹೇತುರ್ಯಾ ತ್ವಪ್ರಮತ್ತೇತಿ ತಾಂ ವಿದುಃ'' ಎಂದು ಸ್ಮೃತಿ ಇದೆ) (ಅಪ್ರದತ್ತಾ ಎಂಬ ಪಾಠದಲ್ಲಿ ಬೇರೆಯವರಿಗೆ ವಾಗ್ದಾನವನ್ನೂ ಮಾಡದಿರುವವಳು ಎಂದರ್ಥ ಆದ್ದರಿಂದ ವಿವಾಹಯೋಗ್ಯಳು ಎಂದು ಭಾವ) ಆವಯೋಃ=ನಮಗೆ, ಅಸೌ=ಈ ಆದ್ಯಃ=ಮೊದಲನೆಯದಾದ ವೈವಾಹಿಕಃವಿಧಿಃ=ಬ್ರಾಹ್ಮವಿಧಿಯು, ಅನುರೂಪಃ= ಯೋಗ್ಯವಾದುದು. ಶಕ್ತ್ಯನುಸಾರ ಕನ್ಯೆಗೆ ಅಲಂಕರಿಸಿ ವರನನ್ನು ಕರೆದು ಬಂದ ವರನಿಗೆ ಅವಳನ್ನು ಕೊಡುವುದು ಬ್ರಾಹ್ಮವಿವಾಹವೆನಿಸುವುದು. ಮುಹೂರ್ತ- ಕಾಯಬೇಕಿಲ್ಲವೆಂದೂ ಹೇಳುವರು – ಆವಯೋಃ ನಮ್ಮಗಳಿಗೆ ವೈವಾಹಿಕೋವಿಧಿಃ ವಿವಾಹವಿಧಾನವು ಆದ್ಯಃ=ಇವತ್ತಿನ ದಿನವೇ, ಅನುರೂಪಃ=ಯೋಗ್ಯವು (ಈ ದಿನ ಮಾಡುವುದೇ ಯೋಗ್ಯವು) ॥೧೫॥

> ಕಾಮಃ ಸ ಭೂಯಾನ್ನರದೇವ ತೇಽಸ್ಯಾಃ
> ಪುತ್ರ್ಯಾಃ ಸಮಾಮ್ನಾಯವಿಧೌ ಪ್ರತೀತಃ ।
> ಕ ಏವ ತೇ ತನಯಾಂ ನಾದ್ರಿಯೇತ
> ಸ್ವಯೈವ ಕಾಂತ್ಯಾ ಕ್ಷಿಪತೀಮಿವ ಶ್ರೀಯಮ್ ॥೧೬॥

ಹೇ ನರದೇವ=ರಾಜನೇ, ತೇ=ನಿನ್ನ, ಅಸ್ಯಾಃ ಪುತ್ರ್ಯಾಃ=ಈ ಮಗಳಿಗೆ, ಯಃ= ಯಾವುದು, ಸಮಾಮ್ನಾಯವಿಧೌ=ವೇದವಿಧಾನದಲ್ಲಿ 'ದಶಾಸ್ಯಾಂ ಪುತ್ರಾನಾಧೇಹಿ ಪತಿಮೇಕಾದಶಂ ಕೃಧಿ' ಮುಂತಾಗಿ, ಪ್ರತೀತಂ=ಪ್ರಸಿದ್ಧವಾಗಿದೆಯೋ, ಸಃ ಕಾಮಃ= ಆ ಪುತ್ರವತಿಯಾಗಬೇಕೆಂಬ ಅಭೀಷ್ಟವು, ಭೂಯಾತ್=ಆಗುವುದು. ಸ್ವಯಾ= ಸ್ವಾಭಾವಿಕವಾದ, ತನ್ನ ಕಾಂತ್ಯಾ=ಕಾಂತಿಯಿಂದ, ಅನ್ಯಾಃ=ಬೇರೆ ಸ್ತ್ರೀಯರನ್ನು ಕ್ಷಿಪಂತೀಂ=ತಿರಸ್ಕರಿಸುವ, ಶ್ರೀಯಮಿವ ಸ್ಥಿತಾಂ=ಲಕ್ಷ್ಮೀಯಂತೆ ಇರುವ, ತೇ ತನಯಾಂ=ನಿನ್ನ ಮಗಳನ್ನು ಕ ಏವ ನಾದ್ರಿಯೇತ=ಯಾವನು ಆದರಿಸಲಾರ ?

ಇಲ್ಲಿ ತನ್ನ ದೇಹದ ಕಾಂತಿಯಿಂದ ಲಕ್ಷ್ಮೀದೇವಿಯನ್ನೂ ನಿರಾಕರಿಸು- ವಂತಿರುವಳು ಎಂದು ತೋರುವುದು. ಅದು ಬಾಧಿತ. ಕಾರಣ ಅಬಾಧಿತ ಯೋಜನೆ ತೋರಿಸುವರು –

> ಸ್ವಯಾ ಕಾಂತ್ಯಾಽನ್ಯಾಃ ಕ್ಷೀಪಂತೀ ಶ್ರೀರ್ಯಥಾ ತದ್ವತ್ ಸ್ಥಿತಾಮ್ ।

ಅನ್ಯಾಃ ಸ್ಥಿತಾಂ ಎಂಬ ಪದಗಳೆರಡನ್ನು ಅಧ್ಯಾಹಾರ ಮಾಡಿ ಯೋಜಿಸಬೇಕೆಂದು ಭಾವ. ಬೇರೆ ಸ್ತ್ರೀಯರನ್ನು ತನ್ನ ಕಾಂತಿಯಿಂದ ತಿರಸ್ಕರಿಸುವ ಲಕ್ಷ್ಮೀದೇವಿ-ಯಂತಿರುವ ಎಂದರ್ಥ. ಅನಾದರ ಮಾಡಲು ಕಾರಣವಾದ ಕುರೂಪಾದಿಗಳು ಇಲ್ಲದಿರುವುದರಿಂದ ಲಾಲನೆಮಾಡಬೇಕೆಂದು ಪ್ರಾರ್ಥಿಸುವ ಆವಶ್ಯಕತೆ ಇಲ್ಲ. ಇಂಥವಳನ್ನು ಯಾರು ಅನಾದರಿಸುವರು? ಅನಾದರಿಸಲು ಸಾಧ್ಯವೇ ಇಲ್ಲವೆಂದು ಭಾವ. ||೧೬||

ಹೇಗೆ ನಾರದರ ಮಾತಿನಿಂದ ನನ್ನ ಗುಣಗಳ ವಿಷಯದಲ್ಲಿ ನಿನ್ನ ಮಗಳಿಗೆ ಅಭಿರುಚಿ ಉಂಟಾಯಿತೋ ಹಾಗೆಯೇ ಒಬ್ಬ ದಾರಿಹೋಕನಿಂದ ಕೇಳಲ್ಪಟ್ಟ ಶೃಂಗಾರಾದಿ ಗುಣಗಳಸಮೂಹಗಳಲ್ಲಿ ನನಗೂ ಆಕಾಂಕ್ಷೆ ಉಂಟಾಗಿದೆ, ಎಂಬ ಅಭಿಪ್ರಾಯದಿಂದ ಅವಳ ಸೌಂದರ್ಯವನ್ನು ವರ್ಣಿಸುವನು.

**ಯಾಂ ಹರ್ಮ್ಯಪೃಷ್ಠೇ ಕ್ವಣದಂಘ್ರಿಶೋಭಾಂ**
**ವಿಕ್ರೀಡತೀಂ ಕಂದುಕವಿಹ್ವಲಾಕ್ಷೀಮ್ ।**
**ವಿಶ್ವಾವಸುರ್ನ್ಯಪತತ್ ಸ್ವಾದ್ ವಿಮಾನಾದ್**
**ವಿಲೋಕ್ಯ ಸಂಮೋಹವಿಮೂಢಚೇತಾಃ ||೧೭||**

ಹರ್ಮ್ಯಪೃಷ್ಠೇ=ಉಪ್ಪರಿಗೆಯ ಮೇಲೆ ವಿಕ್ರೀಡತೀಂ=ಆಟವಾಡುತ್ತಿರುವ, ಕಂದುಕವಿಹ್ವಲಾಕ್ಷೀಂ=ಚಂಡಿನಿಂದ ಚಂಚಲವಾದ ಕಣ್ಣುಗಳುಳ್ಳ, ಕ್ವಣದಂಘ್ರಿ-ಶೋಭಾಂ=ಗೆಜ್ಜೆಯ ಧ್ವನಿಯಿಂದ ಶೋಭಿಸುವ ಪಾದಗಳುಳ್ಳ, ಯಾಂ= ಯಾವಳನ್ನು, ವಿಲೋಕ್ಯ=ನೋಡಿ, ಸಂಮೋಹವಿಮೂಢಚೇತಾಃ=(ಸಮೀಚಿನೋ ಮೋಹೋ ಯಸ್ಮಾತ್ ಸಃ ಸಂಮೋಹಃ) ಎಂದರೆ ಸೌಂದರ್ಯದಿಂದ, ವಿಮೂಢ= ವಿವೇಕ ರಹಿತವಾದ ಮನಸ್ಸುಳ್ಳ, ಅಥವಾ ನೋಡುವುದರಿಂದ ಉಂಟಾದ ಪಾರವಶ್ಯತೆಯಿಂದ ವಿವೇಕವನ್ನು ಕಳೆದುಕೊಂಡು, ಅಥವಾ ವಸ್ತುವಿನಲ್ಲಿರುವ ಸ್ನೇಹ ವಿಶೇಷದಿಂದ, ಅಥವಾ ಕಾಲನಿಮಿತ್ತಕ ದೋಷದಿಂದ ವ್ಯಾಕುಲವಾದ ಮನಸ್ಸುಳ್ಳ, ವಿಶ್ವಾವಸುಃ=ಈ ಹೆಸರಿನ ಗಂಧರ್ವನು ಸ್ವಾತ್ ವಿಮಾನಾತ್=ತನ್ನ ವಿಮಾನದಿಂದ ನ್ಯಪತತ್=ಕೆಳಗೆ ಬಿದ್ದನು. ||೧೭||

**ತಾಂ ಪ್ರಾರ್ಥಯಂತೀಂ ಲಲನಾಲಲಾಮಾ-**
**ಮಸೇವಿತಶ್ರೀಚರಣೈರದೃಷ್ಟಾಮ್ ।**
**ಸುತಾಂ ಮನೋರುಚ್ಚಪದಃ ಸ್ವಸಾರಂ**
**ಕೋ ನಾನುಮನ್ಯೇತ ಬುಧೋऽಭಿಜಾತಃ ||೧೮||**

ಅಸೇವಿತಶ್ರೀಚರಣೈಃ=ಲಕ್ಷ್ಮೀದೇವಿಯ ಪಾದಸೇವೆ ಮಾಡದಿರುವವರಿಗೆ, ಅದೃಷ್ಟಾಂ=ಕಣ್ಣಿಗೂ ಕಾಣದ (ಸ್ವೀಕಾರವಂತೂ ದೂರ) ಲಕ್ಷ್ಮೀ ಅನುಗ್ರಹದಿಂದಲೇ ಲಭ್ಯಳಾದ ಎಂದರ್ಥ, ಉಚ್ಚಪದಸ್ವಸಾರಂ=ಉತ್ತಾನಪಾದನ ತಂಗಿಯಾದ, ಮನೋಃಸುತಾಂ=ಮನುವಿನ ಮಗಳಾದ, ಪ್ರಾರ್ಥಯಂತೀಂ=ವರನನ್ನು ಅಪೇಕ್ಷಿಸುವ, ಲಲನಾಲಲಾಮಾಂ=ವಿಲಾಸಿನಿ ಸ್ತ್ರೀಯರಿಗೆ ತಿಲಕಪ್ರಾಯಳಾದ ತಾಂ =ದೇವಹೂತಿಯನ್ನು, ಅಭಿಜಾತಃ=ಸತ್ಕುಲಪ್ರಸೂತನಾದ, ಕಃ ಬುಧಃ=ಯಾವ ಬುದ್ಧಿವಂತನು, ನ ಅನುಮನ್ಯೇತ=ಒಪ್ಪಲಾರನು ? ಮನುವಿನ ಮಗಳು ಎಂದದ್ದರಿಂದ ಕುಲ, ಉತ್ತಾನಪಾದನ ತಂಗಿ ಎಂದದ್ದರಿಂದ ಭ್ರಾತೃಮತೀತ್ವ ಎಂಬ ಕನ್ಯೆಗೆ ಬೇಕಾದ ಗುಣ, ಸೌಂದರ್ಯ, ರೂಪ ಮುಂತಾಗಿ ಸ್ವೀಕಾರಕ್ಕೆ ಕಾರಣಗಳು. ಅಭಿಜಾತಃ ಎಂದು ತನ್ನ ಕುಲೀನತೆ ಹೇಳಿದ್ದರಿಂದ ಅವಳನ್ನು ಸ್ವೀಕರಿಸುವ ಯೋಗ್ಯತೆಯನ್ನು ಸೂಚಿಸುವರು. ॥೧೮॥

**✓ ಅತೋ ಭಜಿಷ್ಯೇ ಸಮಯೇನ ಸಾಧ್ವೀಂ**
**ಯಾವತ್ ತೇಜೋ ಬಿಭೃಯಾದಾತ್ಮನೋ ಮೇ ।**
**ಅತೋ ಧರ್ಮಾನ್ ಪಾರಮಹಂಸ್ಯಮುಖ್ಯಾನ್**
**ಶುಕ್ಲೋಪದಿಷ್ಟಾನ್ ಬಹುಮನ್ಯೇಽವಿಹಿಂಸ್ರಾನ್ ॥೧೯॥**

ಅತಃ=ಈ ವಿಧಗುಣವತಿಯಾದುದರಿಂದ, ಇಯಂ=ಈ ನಿನ್ನ ಮಗಳು, ಯಾವತ್=ಯಾವಾಗ, ಮೇ ಆತ್ಮನಃ=ನನ್ನ ದೇಹದಿಂದ ಚ್ಯುತವಾದ ಉಂಡ ಅನ್ನದ ಪರಿಣಾಮವಾದ ರೇತೋರೂಪವಾದ, ತೇಜಃ=ಗರ್ಭವನ್ನು, ಬಿಭೃಯಾತ್= ಧಾರಣ ಮಾಡುವಳೋ ತಾವತ್=ಅಲ್ಲಿಯವರೆಗೆ ಅಂದರೆ ಮಕ್ಕಳನ್ನು ಪಡೆಯುವವರೆಗೆ ಎಂಬ ಸಮಯೇನ=ನಿಮಯಕ್ಕೆ ಒಳಪಟ್ಟು ಸಾಧ್ವೀಂ= ಪತ್ನಿಯನ್ನು, ಭಜಿಷ್ಯೇ=ಸೇವಿಸುವೆನು. ಅತಃ=ನಂತರ ಪಾರಮಹಂಸ್ಯಮುಖ್ಯಾನ್= ಪರಮಹಂಸ ಸಂಬಂಧಿಗಳಾದ ಆದ್ದರಿಂದಲೇ ಮುಖ್ಯವಾದ, ಶುಕ್ಲೋಪದಿಷ್ಟಾನ್= ಶುದ್ಧನಾದ ಭಗವಂತನಿಂದ ಉಪದೇಶಿಸಲ್ಪಟ್ಟ ವಿಹಿಂಸ್ರಾನ್=ಯಾಗೀಯ ಪಶುಹಿಂಸಾದಿಂದಲೂ ರಹಿತವಾದ, ಧರ್ಮಾನ್=ಧರ್ಮಗಳನ್ನು, ಬಹುಮನ್ಯೇ= ಅನುಸರಿಸುವೆನು. ॥೧೯॥

**ಯತೋಽಭವದ್ ವಿಶ್ವಮಿದಂ ವಿಚಿತ್ರಂ**
**ಸಂಸ್ಥಾಸ್ಯತೇ ಯತ್ರ ಚ ವಾಽವತಿಷ್ಠತೇ ।**
**ಪ್ರಜಾಪತೀನಾಂ ಪತಿರೇಷ ಮಹ್ಯಂ**
**ಪರಂ ಪ್ರಮಾಣಂ ಭಗವಾನನಂತಃ ॥೨೦॥**

ವಿಚಿತ್ರಂ ವಿಶ್ವಂ ಇದಂ ಯತಃ ಅಭವತ್=ಆಶ್ಚರ್ಯಕರವಾದ ವಿವಿಧ ಪ್ರಪಂಚವು ಯಾವನಿಂದ ಜನಿಸಿತೋ, ಯೇನ=ಯಾವನಿಂದ, ಸಂಸ್ಥಾಪ್ಯತೇ=ರಕ್ಷಿಸಲ್ಪಡುವದೋ,ಪ್ರಳಯದಲ್ಲಿ ಯತ್ರ ತಿಷ್ಠತೇ=ಯಾವನ ಉದರದಲ್ಲಿರುವುದೋ ಏಷಃ=ಅಂಥಹ, ಪ್ರಜಾಪತೀನಾಂ ಪತಿಃ=ಪ್ರಜೇಶ್ವರಿಗೆ ಪತಿಯಾದ ಬ್ರಹ್ಮಾಂತ-ರ್ಯಾಮಿಯಾದ,ಭಗವಾನ್ ಅನಂತಃ=ಪರಮೈಶ್ವರ್ಯಶಾಲಿಯಾದ ನಾಶರಹಿತ-ನಾದ ಶ್ರೀಹರಿಯು, ಮಹ್ಯಂ=ನನಗೆ, ಪರಂ ಪ್ರಮಾಣಂ=ಈ ವಿಷಯವನ್ನು ಮುಖ್ಯವಾಗಿ ಉಪದೇಶ ಮಾಡಿದವನು, ಅಥವಾ ನಾನು ಹೇಳಿದ ವಿಷಯಕ್ಕೆ ಭಗವಂತನೇ ಪರಂಪ್ರಮಾಣಂ=ಮುಖ್ಯ ಸಾಕ್ಷಿಯು. ॥೨೦॥

**ಮೈತ್ರೇಯ ಉವಾಚ**

**ಸ ಉಗ್ರಧನ್ವನ್ನಿಯದೇವಾಬಭಾಷ**
**ಆಸಿಚ್ಚ ತೂಷ್ಣೀಮರವಿಂದನಾಭಮ್ ।**
**ಧಿಯೋಪಗೃಹ್ಣನ್ ಸ್ಮಿತಶೋಭಿತೇನ**
**ಮುಖೇನ ಚೇತೋ ಲುಲುಭೇ ದೇವಹೂತ್ಯಾಃ ॥೨೧॥**

ಹೇ ಉಗ್ರಧನ್ವನ್=ವಿದುರನೇ, ಸಃ=ಕರ್ದಮಋಷಿಯು, ಇಯದೇವ ಆಬಭಾಷೆ=ಇಷ್ಟೇ ಮಾತನಾಡಿದನು, ಅರವಿಂದನಾಭಂ=ಪದ್ಮನಾಭನನ್ನು, ಧಿಯಾ ಉಪಗೃಹ್ಣನ್=ಮನಸ್ಸಿನಿಂದ ಧ್ಯಾನಮಾಡುತ್ತ, ತೂಷ್ಣಿಂ, ಆಸೀತ್=ಸುಮ್ಮನಾದನು. ಚ=ಮತ್ತು ಸ್ಮಿತಶೋಭಿತೇನ ಮುಖೇನ=ಮುಗುಳುನಗೆಯಿಂದ ಅಲಂಕೃತವಾದ ತನ್ನ ಮುಖದಿಂದ, ದೇವಹೂತ್ಯಾಃ=ದೇವಹೂತಿಯ ಚೇತಃ=ಮನಸ್ಸನ್ನು ಲುಲಭೇ=ಇವನೇ ನನ್ನ ಪತಿಯಾಗಲು ಯೋಗ್ಯವೆಂಬ ಭಾವವುಳ್ಳವನಾಗಿ ಮಾಡಿದನು. ತನ್ನೆಡೆ ಮನ ಸೆಳೆದನೆಂದು ಭಾವ. ಇಲ್ಲಿ ಯೋಗಿಗಳು ತಮ್ಮ ಕಾರ್ಯಸಿದ್ಧಿಗೆ ಎಷ್ಟು ಬೇಕೋ ಅಷ್ಟೇ ಮಾತನಾಡಬೇಕೆಂದು ಸೂಚಿತವಾಗುವುದು. ॥೨೧॥

**ಸೋಽನುಜ್ಞಾತ್ವಾ ವ್ಯವಸಿತಂ ಮಹಿಷ್ಯಾ ದುಹಿತುಃ ಸ್ಫುಟಮ್ ।**
**ತಸ್ಮೈ ಗುಣಗಣಾಢ್ಯಾಯ ದದೌ ತುಲ್ಯಾಂ ಪ್ರಹರ್ಷಿತಃ ॥೨೨॥**

ಸಃ=ಮನುವು, ಅನು=ಋಷಿಯ ವಚನಾನಂತರ, ಮಹಿಷ್ಯಾಃ=ಪತ್ನಿಯಾದ ಶತರೂಪಾಳ, ದುಹಿತುಃ=ಮಗಳಾದ ದೇವಹೂತಿಯ, ವ್ಯವಸಿತಂ=ನಿಶ್ಚಯವನ್ನು, ಸ್ಫುಟಂ ಜ್ಞಾತ್ವಾ=ಸ್ಪಷ್ಟವಾಗಿ ತಿಳಿದು,ಪ್ರಹರ್ಷಿತಃ=ಸಂತುಷ್ಟನಾಗಿ, ಗುಣಗಣಾಢ್ಯಾಯ =ಸದ್ಗುಣಗಳಿಂದ ಪೂರ್ಣನಾದ, ತಸ್ಮೈ=ಕರ್ದಮರಿಗೆ, ತುಲ್ಯಾಂ=ಸದೃಶಳಾದ ದೇವಹೂತಿಯನ್ನು, ದದೌ=ದಾನ ಮಾಡಿದನು. ॥೨೨॥

**ಶತರೂಪಾ ಮಹಾರಾಜ್ಞೀ ಪಾರಿಬರ್ಹಾನ್ ಮಹಾಧನಾನ್ ।**
**ದಂಪತ್ಯೋಃ ಪರ್ಯದಾತ್ ಪ್ರೀತ್ಯಾ ಗೃಹವಾಸಃಪರಿಚ್ಛದಾನ್ ॥೨೩॥**

ಮಹಾರಾಜ್ಞೀ=ಮಹಾರಾಣಿಯಾದ, ಶತರೂಪಾ=ಶತರೂಪಾದೇವಿಯು, ದಂಪತ್ಯೋಃ=ನೂತನ ವಿವಾಹಿತ ವಧುವರರಿಗೆ, ಪ್ರೀತ್ಯಾ=ಪ್ರೀತಿಯಿಂದ, ಮಹಾಧನಾನ್=ಬೆಲೆ ಬಾಳುವ, ಗೃಹವಾಸಃಪರಿಚ್ಛದಾನ್=ಗೃಹಸ್ಥಾಶ್ರಮಕ್ಕೆ ಉಪಯುಕ್ತವಾದ ಸಲಕರಣೆಗಳನ್ನು, ಪಾರಿಬರ್ಹಾನ್ ಪರ್ಯದಾತ್=ಕಾಣಿಕೆಯಾಗಿ ಇತ್ತಳು. ॥೨೩॥

**ಪ್ರತ್ತ್ವಾ ದುಹಿತರಂ ಸಮ್ರಾಟ್ ಸದೃಕ್ಷಾಯ ಗತವ್ಯಥಃ ।**
**ಉಪಗೃಹ್ಯ ಚ ಬಾಹುಭ್ಯಾಮೌತ್ಕಂಠ್ಯೋನ್ಮಥಿತಾಶಯಃ ॥೨೪॥**

ಸಮ್ರಾಟ್=ಸ್ವಾಯಂಭುವಮನುವು, ಸದೃಕ್ಷಾಯ=ಸದೃಶನಾದ (ಅನುರೂಪನಾದ) ವರನಿಗೆ, ದುಹಿತರಂ=ಮಗಳನ್ನು, ಪ್ರತ್ತ್ವಾ=ದಾನ ಮಾಡಿ, ಗತವ್ಯಥಃ=ಚಿಂತಾರಹಿತನಾಗಿ, ಬಾಹುಭ್ಯಾಂ=ಬಾಹುಗಳಿಂದ, ಉಪಗುಹ್ಯ=ತಬ್ಬಿಕೊಂಡು, ಔತ್ಕಂಠ್ಯೋನ್ಮಥಿತಾಶಯಃ=ಕಾತರದಿಂದ ಕಲಕಿದ ಮನಸುಳ್ಳವನಾಗಿ ॥೨೪॥

**ಅಶಕ್ನುವಂಸ್ತದ್ವಿರಹಂ ಮುಂಚನ್ ಬಾಷ್ಪಕಲಾಂ ಮುಹುಃ ।**
**ಆಸಿಂಚನ್ ಅಂಬ ವತ್ಸೇತಿ ನೇತ್ರೋದೈರ್ದುಹಿತುಃ ಶಿಖಾಃ ॥೨೫॥**

ತದ್ವಿರಹಂ=ಮಗಳ ವಿರಹವನ್ನು, ಅಶಕ್ನುವನ್=ತಡೆಯಲಾಗದೆ, ಮುಹುಃ=ಪುನಃ ಪುನಃ, ಅಂಬ ವತ್ಸ ಇತಿ="ಅಮ್ಮಾ, ಮಗುವೆ" ಎಂದು ಬಾಷ್ಪಕಲಾಂ ಮುಂಚನ್=ಕಣ್ಣೀರು ಸುರಿಸುತ್ತಾ ನೇತ್ರೋದೈಃ=ಕಣ್ಣೀರಿನಿಂದ, ದುಹಿತುಃ=ಮಗಳ, ಶಿಖಾಃ=ಕೂದಲನ್ನು, ಆಸಿಂಚನ್=ಸಿಂಪಡಿಸಿದನು. ॥೨೫॥

**ಆಮಂತ್ರ್ಯ ತಂ ಮುನಿವರಮನುಜ್ಞಾತಃ ಸಹಾನುಗಃ ।**
**ಪ್ರತಸ್ಥೇ ರಥಮಾಸ್ಥಾಯ ಸಭಾರ್ಯಃ ಸ್ವಪುರಂ ನೃಪಃ ॥೨೬॥**

ತಂ ಮುನಿವರಂ=ಅಳಿಯಂದಿರಾದ ಕರ್ದಮರನ್ನು ಕುರಿತು, ಆಮಂತ್ರ್ಯ=ಹೋಗಿ ಬರುವೆನೆಂದು ಹೇಳಿ, ಅನುಜ್ಞಾತಃ=ಅಪ್ಪಣೆ ಪಡೆದು, ಸಹಾನುಗಃ=ಪರಿವಾರ ಸಹಿತನಾಗಿ, ಸಭಾರ್ಯಃ=ಪತ್ನೀಸಹಿತನಾಗಿ, ನೃಪಃ=ರಾಜನು, ರಥಂ ಆಸ್ಥಾಯ=ರಥವನ್ನೇರಿ, ಸ್ವಪುರಂ ಪ್ರತಸ್ಥೇ=ತನ್ನ ಊರಿಗೆ ಹೊರಟನು. ॥೨೬॥

**ಉಭಯೋರ್ಋಷಿಕುಲ್ಯಾಯಾಃ ಸರಸ್ವತ್ಯಾಃ ಸುರೋಧಸೋಃ ।**
**ಋಷೀಣಾಮುಪಶಾಂತಾನಾಂ ಪಶ್ಯನ್ ಆಶ್ರಮಸಂಪದಃ ॥೨೭॥**

ಋಷಿಕುಲ್ಯಾಯಾಃ=ಮುನಿಕುಲಕ್ಕೆ ಪ್ರಿಯವಾದ, ಸರಸ್ವತ್ಯಾಃ=ಸರಸ್ವತೀನದಿಯ ಉಭಯೋಃ ಸುರೋಧಸೋಃ=ಎರಡೂ ದಂಡಿಯಲ್ಲಿರುವ ಉಪಶಾಂತಾನಾಂ= ಅತಿಶಯ ಭಗವನ್ನಿಷ್ಠರಾದ, ಋಷೀಣಾಂ=ಮುನಿಗಳ ಆಶ್ರಮಸಂಪದಂ ಆಶ್ರಮ ಸಂಪತ್ತನ್ನು, ಪಶ್ಯನ್=ನೋಡುತ್ತ ತೆರಳಿದನು. ॥೨೭॥

**ತಮಾಯಾಂತಮಭಿಪ್ರೇತ್ಯ ಬ್ರಹ್ಮಾವರ್ತಪ್ರಜಾಃ ಪತಿಂ ।**
**ಗೀತಸಂಸ್ತುತಿವಾದಿತ್ರೈಃ ಪ್ರತ್ಯುದೀಯುಃ ಪ್ರಹರ್ಷಿತಾಃ ॥೨೮॥**

ಆಯಾಂತಂ=ಬರುತ್ತಿರುವ ತಂ=ಮನುವನ್ನು ಅಭಿಪ್ರೇತ್ಯ=ಎದುರುಗೊಂಡು, ಬ್ರಹ್ಮಾವರ್ತಪ್ರಜಾಃ=ಈ ಹೆಸರಿನ ದೇಶದಲ್ಲಿರುವ ಪ್ರಜೆಗಳು, ಹರ್ಷಿತಾಃ=ಸಂತಸ-ಗೊಂಡು, ಪತಿಂ=ತಮ್ಮ ಸ್ವಾಮಿಯನ್ನು, ಗೀತಸಂಸ್ತುತಿವಾದಿತ್ರೈಃ=ಗಾನಸ್ತೋತ್ರ-ವಾದ್ಯಗಳಿಂದ, ಪ್ರತ್ಯುದೀಯುಃ=ಗೌರವಿಸಿದರು. ಇದರಿಂದ ಪ್ರಜಾರಂಜಕತ್ವ ಸೂಚಿತವಾಗುವುದು. ॥೨೮॥

ಬ್ರಹ್ಮಾವರ್ತ ಎಂಬ ದೇಶ ಯಾವುದೆಂದು ಹೇಳುವರು-

**ಬರ್ಹಿಷ್ಮತೀ ನಾಮ ಪುರೀ ಸರ್ವಸಂಪತ್ಸಮನ್ವಿತಾ ।**
**ನ್ಯಪತನ್ ಯತ್ರ ರೋಮಾಣಿ ಯಜ್ಞಸ್ಯಾಂಗಂ ವಿಧುನ್ವತಃ ॥೨೯॥**

ಯತ್ರ=ಯಾವನಗರದಲ್ಲಿ, ಅಂಗಂ=ನೀರಿನಿಂದ ದೇಹವನ್ನು ವಿಧುನ್ವತಃ= ಝಾಡಿಸುವ, ಯಜ್ಞಸ್ಯ=ಯಜ್ಞವರಾಹನ, ರೋಮಾಣಿ=ಜ್ಞಾನಾನಂದಾತ್ಮಕವಾದ ಕೂದಲುಗಳು, ನ್ಯಪತನ್=ಬಿದ್ದವೋ, ಅಂತಹ ಸರ್ವಸಂಪತ್‌ಸಮನ್ವಿತಾ=ಎಲ್ಲ ಸಂಪದ್ಭರಿತವಾದ, ಬರ್ಹಿಷ್ಮತೀ ನಾಮಪುರೀ ಯತ್ರ=ಬರ್ಹಿಷ್ಮತಿ ಯೆಂಬ ನಗರವು ಯಾವ ದೇಶದಲ್ಲಿದೆಯೋ ಅದು ಬ್ರಹ್ಮಾವರ್ತವೆಂದು ಭಾವ. ॥೨೬॥

**ಕುಶಕಾಶಾಸ್ತ ಏವಾಸಂಲ್ಲಸದ್ಧರಿತವರ್ಚಸಃ ।**
**ಋಷಯೋ ಯೈಃ ಪರಾಭಾವ್ಯ ಯಜ್ಞಘ್ನಾನ್ ಯಜ್ಞಮೀಜಿರೇ ॥೩೦॥**

ತೇ ಏವ=ಆ ರೋಮಗಳಿಂದಲೇ, ಲಸದ್ಧರಿತವರ್ಚಸಃ=ಪ್ರಕಾಶಮಾನವಾದ ಗರಿಕೆಯ ಹುಲ್ಲಿನಂತೆ ಹಸಿರಾದ ಕಾಂತಿಯುಳ್ಳ, ಕುಶಕಾಶಾಃ=ದರ್ಭಗಳು, ಜೊಂಡು ಹುಲ್ಲುಗಳು, ಆಸನ್=ಜನಿಸಿದವು. ಯೈಃ=ಯಾವ ದರ್ಭಗಳಿಂದ, ಋಷಯಃ=ಮುನಿಗಳು, ಯಜ್ಞಘ್ನಾನ್=ಯಜ್ಞವನ್ನು ನಾಶ ಮಾಡುವರನ್ನು, ಪರಾಭಾವ್ಯ=ಸೋಲಿಸಿ, ಯಜ್ಞಂ ಈಜಿರೇ=ಯಜ್ಞ ಮಾಡಿದರು.

ಈ ಶ್ಲೋಕದಲ್ಲಿ ಶ್ರೀಹರಿಯ ರೋಮಗಳಿಗೆ ಕುಶಕಾಶಗಳಿಂದ ಅಭೇದ ಹೇಳಿದಂತೆ ಕಾಣುವುದು. ಕಾರಣ ಅದು ಪ್ರಮಾಣವಿರುದ್ಧವಾದ್ದರಿಂದ ಪ್ರಮಾಣದಿಂದ ಇಲ್ಲಿ ವಿವಕ್ಷಿತ ತಾತ್ಪರ್ಯ ಹೇಳುವರು –

**ಜ್ಞಾನಾನಂದಸ್ವರೂಪೇಭ್ಯೋ ರೋಮಭ್ಯೋಽಸ್ಯ ಕುಶಾದಯಃ ।**
**ವಿಧುನ್ವತಃ ಪ್ರಯಾಗೇ ತು ವರಾಹವಪುಷೋಽಭವನ್ ॥**
**ರೋಮಾಣಿ ತಾನಿ ದೇವಸ್ಯ ರೂಪಾಣ್ಯಾಸನ್ ಸಹಸ್ರಶಃ । ಇತಿ ಸ್ಕಾಂದೇ ।**
**ತ ಏವಾಸನ್ ತೇಭ್ಯಃ ಏವ ಆಸನ್ । 'ಸಪ್ತಸು ಪ್ರಥಮೇತಿ'ಸೂತ್ರಾತ್ ॥**

ವರಾಹಾವತಾರ ಮಾಡಿದ ವಿಷ್ಣುವು ಪ್ರಯಾಗದಲ್ಲಿ ತನ್ನ ದೇಹವನ್ನು ಕಂಪಿಸಿದಾಗ ಉದುರಿದ ಜ್ಞಾನಾನಂದಾತ್ಮಕ ರೋಮಗಳಿಂದ ದರ್ಭೆ ಜೊಂಡು ಹುಲ್ಲು ಉತ್ಪನ್ನವಾದವು. ಆ ಕೂದಲುಗಳು ಶ್ರೀಹರಿಯ ಸಾವಿರಾರು ರೂಪಗಳಾದವು ಎಂದು ಸ್ಕಾಂದ ಪುರಾಣದಲ್ಲಿದೆ. ಆದ್ದರಿಂದ ತೇ ಏವಾಸನ್ ಎಂಬುದಕ್ಕೆ ಏಳು ವಿಭಕ್ತಿ ಅರ್ಥದಲ್ಲಿ ಪ್ರಥಮಾ ಇದೆ ಎಂದು ಸೂತ್ರದಲ್ಲಿ ಹೇಳಿದ್ದರಿಂದ ಪಂಚಮಿ ಅರ್ಥ ಇಟ್ಟುಕೊಂಡು ರೋಮಗಳಿಂದ ಕುಶಕಾಶಾದಿಗಳು ಜನಿಸಿದವು ಎಂದರ್ಥ ಮಾಡಬೇಕು. ರೋಮಗಳೇ ಕುಶಕಾಶಾದಿಗಳಾದವು ಎಂದಲ್ಲ. ॥೩೦॥

**ಕುಶಕಾಶಮಯಂ ಬರ್ಹಿರಾಸ್ತೀರ್ಯ ಭಗವಾನ್ ಮನುಃ ।**
**ಅಯಜದ್ ಯಜ್ಞಪುರುಷಂ ಲಬ್ಧಂ ಸ್ಥಾನಂ ಯತೋ ದೃಢಮ್॥೩೧॥**

ಭಗವಾನ್=ಪೂಜ್ಯನಾದ ಮನುಃ=ಸ್ವಾಯಂಭುವಮನುವು ಕುಶಕಾಶಮಯಂ =ದರ್ಭೆ ಹುಲ್ಲುಗಳಿಂದ ನಿರ್ಮಿತವಾದ ಬರ್ಹಿಃ ಆಸ್ತಿರ್ಯ=ಬರ್ಹಿಯನ್ನು ಹಾಸಿ ಯಜ್ಞಪುರುಷಂ=ಪರಮಾತ್ಮನನ್ನು ಉದ್ದೇಶಿಸಿ ಅಯಜತ್=ಯಜ್ಞ ಮಾಡಿದನು. ಯತಃ=ಯಾವ ಬರ್ಹಿಯ ಸಾಮರ್ಥ್ಯದಿಂದ (ಸ್ಥಾನದ ಸಾಮರ್ಥ್ಯದಿಂದ) ದೃಢಂ ಸ್ಥಾನಂ=ಅಕ್ಷಯವಾದ ಮೋಕ್ಷವೆಂಬ ಸ್ಥಾನವೇ ಲಬ್ಧಂ=ಹೊಂದಲ್ಪಟ್ಟಿತು. ಉಕ್ತಫಲ-ಸಾಧನವಾದ ಬರ್ಹಿಗಳಿರುವುದರಿಂದ ಬರ್ಹಿಷ್ಮತಿ ಎಂಬ ಹೆಸರು ಈ ಊರಿಗೆ ಎಂದಂತಾಯಿತು. ॥೩೧॥

**ಬರ್ಹಿಷ್ಮತೀಂ ನಾಮ ಪುರೀಂ ನಿರ್ವಿಶ್ಯ ಸುಖಮಾವಸತ್ ।**
**ತಸ್ಯಾಂ ಪ್ರವಿಷ್ಟೋ ಭವನಂ ತಾಪತ್ರಯವಿನಾಶನಮ್ ॥**
**ಸಭಾರ್ಯಃ ಸಪ್ರಜಃ ಕಾಮಾನ್ ಬುಭುಜೇಽನ್ಯಾವಿರೋಧತಃ ॥೩೨॥**

ಸಃ=ಮನುವು ಬರ್ಹಿಷ್ಮತೀಂ ನಾಮಪುರೀಂ ಈ ಹೆಸರಿನ ಪಟ್ಟಣವನ್ನು ನಿರ್ವಿಶ್ಯ= ಪ್ರವೇಶಿಸಿ, ಸುಖಂ ಆವಸತ್=ಸುಖವಾಗಿ ವಾಸಮಾಡಿದನು, ತಸ್ಯಾಂ= ಆ ಪಟ್ಟಣದಲ್ಲಿರುವ, ತಾಪತ್ರಯವಿನಾಶನಂ=ಆಧ್ಯಾತ್ಮಿಕ ಆಧಿ ಭೌತಿಕ ಆಧಿದೈವಿಕ ತಾಪಗಳನ್ನು ಕಳೆಯುವ,ಭವನಂ=ಮನೆಯನ್ನು, ಪ್ರವಿಷ್ಟಃ=ಪ್ರವೇಶಿಸಿ, ಸಭಾರ್ಯಃ =ಹೆಂಡತಿಯಿಂದ ಸಹಿತನಾಗಿ, ಸಪ್ರಜಃ=ಮಕ್ಕಳಿಂದ ಸಹಿತನಾಗಿ ಅನ್ಯಾವಿರೋಧತಃ =ಧರ್ಮಾರ್ಥಮೋಕ್ಷಗಳಿಗೆ ವಿರೋಧವಾಗದಂತೆ, ಕಾಮಾನ್ ಬುಭುಜೇ= ಪುರುಷಾರ್ಥಾನುಕೂಲವಿಷಯಗಳನ್ನು ಅನುಭವಿಸಿದನು. ॥೩೨॥

ಧರ್ಮಾದಿಗಳಿಗೆ ಅವಿರೋಧವಾಗಿ ವಿಷಯಭೋಗ ಹೇಗೆಂದು ಹೇಳುವರು -

**ಸಂಗೀಯಮಾನಸತ್ಕೀರ್ತಿಃ ಸಸ್ತ್ರೀಭಿಃ ಸುರಾಗಯಕೈಃ ।**
**ಪ್ರತ್ಯೂಪೇಷ್ವನುಬದ್ಧೇನ ಹೃದಾ ಶೃಣ್ವನ್ ಹರೇಃ ಕಥಾಃ ॥೩೩॥**

ಸಂಗೀಯಮಾನಸತ್‌ಕೀರ್ತಿಃ=ಸಮೀಚಿನವಾಗಿ ಹಾಡಲ್ಪಡುವ ನಿರ್ದುಷ್ಟವಾದ ಕೀರ್ತಿಯುಳ್ಳ ಮನುವು, ಪ್ರತ್ಯೂಷೇಷು=ಉಷಃಕಾಲಗಳಲ್ಲಿ, (ಪ್ರತಿದಿನ) ಅನುಬದ್ಧೇನ ಹೃದಾ=ಭಕ್ತಿಯುಕ್ತವಾದ ಮನಸ್ಸಿನಿಂದ, ಸಸ್ತ್ರೀಭಿಃ=ಪತ್ನಿಯರಿಂದ ಸಹಿತರಾದ, ಸುರಗಾಯಕೈಃ=ದೇವಗಂಧರ್ವರಿಂದ, ಹರೇಃ=ಶ್ರೀಹರಿಯ, ಕಥಾಃ= ಚರಿತ್ರೆಗಳನ್ನು, ಶೃಣ್ವನ್=ಕೇಳುತ್ತ ಅನುಭವಿಸಿದನು. ॥೩೩॥

**ನಿಷ್ಣಾತಂ ಯೋಗಮಾಯಾಸು ಮುನಿಂ ಸ್ವಾಯಂಭುವಂ ಮನುಮ್।**
**ಯದಾಸ್ರಂಸಯಿತುಂ ಭೋಗಾ ನ ಶೇಕುರ್ಭಗವತ್ಪರಮ್ ॥೩೪॥**

ಯದಾ=ಯಾವಾಗ, ಯೋಗಮಾಯಾಸು ನಿಷ್ಣಾತಂ=ಯೋಗಪ್ರಭಾವದಿಂದ ಲಭಿಸಿದ ಅಣಿಮಾದ್ಯಷ್ಟೈಶ್ವರ್ಯಗಳಲ್ಲಿ ನಿಷ್ಣಾತನಾದ, ಅತಿಶಯವಾಗಿರುವ ಅಷ್ಟೈಶ್ವರ್ಯವುಳ್ಳ ಎಂದರ್ಥ, ಮುನಿಂ=ತಿಳಿಯಬೇಕಾದುದನ್ನೆಲ್ಲ ತಿಳಿದ, ಭಗವತ್ಪರಂ=ಶ್ರೀಹರಿಯಲ್ಲಿ ಆಸಕ್ತನಾದ,ಸ್ವಾಯಂಭುವಂ ಮನುಂ=ಸ್ವಾಯಂಭುವ ಮನುವನ್ನು, ಭೋಗಾಃ=ವಿಷಯಭೋಗಗಳು ಸ್ರಂಸಯಿತುಂ=ಹರಿಕಥಾ ಶ್ರವಣದಿಂದ ದೂರ ಮಾಡಲು ನ ಶೇಕುಃ=ಸಮರ್ಥವಾಗಲಿಲ್ಲ. ॥೩೪॥

**ಅಯಾತಯಾಮಾಸ್ತಸ್ಯಾಸನ್ ಯಾಮಾಃ ಸ್ವಾಂತರಯಾಪನಾಃ ।**
**ಶೃಣ್ವತೋ ಧ್ಯಾಯತೋ ವಿಷ್ಣೋಃ ಕುರ್ವತೋ ಬ್ರುವತಃ ಕಥಾಃ ॥೩೫॥**

ವಿಷ್ಣೋಃ=ಶ್ರೀಹರಿಯ, ಕಥಾಃ=ಚರಿತ್ರೆಗಳನ್ನು, ಶೃಣ್ವತಃ=ಕೇಳುವ ಧ್ಯಾಯತಃ= ಧ್ಯಾನಮಾಡುವ, ಕುರ್ವತಃ=ನಟಿಸುವ,ಬ್ರುವತಃ=ಪರರಿಗೆ ಹೇಳುವ, ತಸ್ಯ=

ಮನುವಿನ, ಸ್ವಾಂತರಯಾಪನಾಃ=ತನ್ನ ಸ್ವಾಮಿಕವಾದ ಮನ್ವಂತರವನ್ನು ಸಮಾಪ್ತಿಗೊಳಿಸುವ, ಯಾಮಾಃ=ಕಾಲಗಳು, ಅಯಾತಯಾಮಾಃ ಆಸನ್=ನಿಸ್ಸಾರವಾಗಲಿಲ್ಲ ನಿಷ್ಫಲವಾಗಲಿಲ್ಲ ಸಾರ್ಥಕವಾಯಿತೆಂದರ್ಥ.

ಅಯಾತಯಾಮಶಬ್ದದಲ್ಲಿಯ ಯಾತಯಾಮಶಬ್ದಕ್ಕೆ ಪ್ರಕೃತ ಸಂಗತ ಅರ್ಥವನ್ನು ಪ್ರಮಾಣದಿಂದ ಹೇಳುವರು –

**ಗತಸಾರಂ ಯಾತಯಾಮಂ ಯಾಮಃ ಸಾರ ಇಹೋಚ್ಯತೇ ॥**

**ಇತಿ ನಾರದೀಯೇ ।**

ಯಾತಯಾಮಶಬ್ದದಲ್ಲಿ ಯಾಮಶಬ್ದಕ್ಕೆ ಸಾರವೆಂದು ಅರ್ಥವಿರುವುದರಿಂದ ಯಾತಯಾಮ ಎಂದರೆ ಗತಸಾರ ನಿಷ್ಫಲ ಎಂದರ್ಥ. ಅಯಾತಯಾಮ ಎಂದರೆ ಅನಿಷ್ಫಲ, ಸಫಲವೆಂದರ್ಥವಾಗುವುದು. ॥೩೫॥

**ಸ ಏವಂ ಸ್ವಾಂತರಂ ನಿನ್ಯೇ ಯುಗಾನಾಮೇಕಸಪ್ತತಿಮ್ ।**
**ವಾಸುದೇವಪ್ರಸಂಗೇನ ಪರಿಭೂತಗತಿತ್ರಯಃ ॥೩೬॥**

ಸಃ=ಸ್ವಾಯಂಭುವಮನುವು ಏವಂ=ಈ ರೀತಿಯಾಗಿ ವಾಸುದೇವಪ್ರಸಂಗೇನ '=ಶ್ರೀಹರಿಯ ಕಥಾಶ್ರವಣಾದಿಗಳಿಂದ, ಪರಿಭೂತಗತಿತ್ರಯಃ=ತಿರ್ಯಕ್, ಯಾತನಾ, ತಮ ಎಂಬ ಮೂರು ಗತಿಗಳನ್ನು ದೂರೀಕರಿಸಿ, ಯುಗಾನಾಂ ಏಕಸಪ್ತತಿಂ=ಎಪ್ಪತ್ತೊಂದು ಮಹಾಯುಗವೆಂಬ ಸ್ವಾಂತರಂ=ತನ್ನ ಮನ್ವಂತರ ಕಾಲವನ್ನು, ನಿನ್ಯೇ=ಕಳೆದನು ॥೩೬॥

ಮನುಷ್ಯನಾಗಿರುವ ಮನುವಿನ ಕಾಲ ಸಾರ್ಥಕವಾಗಲು ಹೇಗೆ ಸಾಧ್ಯ ? ಶರೀರಾದಿ ಕ್ಲೇಶಗಳು ಸಂಭವಿಸುವವೇ ? ಎಂದರೆ ಹೇಳುವರು –

**ಶಾರಿರಾ ಮಾನಸಾ ದಿವ್ಯಾಃ ಪರ್ಯಾಸೇ ಯೇ ಚ ಮಾನುಷಾಃ ।**
**ಭೌತಿಕಾಶ್ಚ ಕಥಂ ಕ್ಲೇಶಾ ಬಾಧಂತೇ ಹರಿಸಂಶ್ರಯಮ್ ॥೩೭॥**

ಯೇ=ಯಾವ, ಶಾರೀರಾಃ=ಶರೀರನಿಮಿತ್ತಿಕವಾದ, ಮಾನಸಾಃ=ಮನೋನಿಮಿತ್ತಿಕವಾದ, ದಿವ್ಯಾಃ=ಅಂತರಿಕ್ಷದಿಂದುಂಟಾಗುವ, ಮಾನುಷಾಃ=ಶತ್ರುಗಳಿಂದಾಗುವ, ಭೌತಿಕಾಃ=ಶೀತೋಷ್ಣಾದಿಗಳಿಂದಾಗುವ, ಅಥವಾ ಭೂತಪ್ರೇತಾದಿಗಳಿಂದಾಗುವ, ಕ್ಲೇಶಾಃ=ಕಷ್ಟಗಳು, ಹರಿಸಂಶ್ರಯಂ=ಶ್ರೀಹರಿಯನ್ನಾಶ್ರಯಿಸಿದವರಿಗೆ, ಪರ್ಯಾಸೇ ಚ=ಮನುಷ್ಯರಾಗಿದ್ದಾಗಲೂ ಕಥಂ ಬಾಧಂತೇ=ಹೇಗೆ ಬಾಧಿಸುವವು ? ಭಾಧಿಸಲಾರವು.

'ಪರ್ಯಾಸೇ ಮಾನುಷತ್ವೇನಲಿವಸ್ಥಾನೇಪಿ'

ದೇವತ್ವಕ್ಕಿಂತ ಪರ್ಯಾಸ ಎಂದರೆ ವೈಪರೀತ್ಯ. ಅರ್ಥಾತ್ ಮನುಷ್ಯ-ರಾಗಿರುವುದು ಎಂದು ಭಾವ. ॥೩೭॥

**ಯಃ ಪೃಷ್ಟೋಮುನಿಭಿಃ ಪ್ರಾಹ ಧರ್ಮಾನ್ ನಾನಾವಿಧಾನ್ ಶುಭಾನ್ ।**
**ನೃಣಾಂ ವರ್ಣಾಶ್ರಮಾಣಾಂ ಚ ಸರ್ವಭೂತಹಿತಃ ಸದಾ ॥೩೮॥**

ಯಃ=ಮನುವು, ಮುನಿಭಿಃ=ಋಷಿಗಳಿಂದ, ಪೃಷ್ಟಃ=ಪ್ರಶ್ನಿಸಲ್ಪಟ್ಟು ನಾನಾವಿಧಾನ್=ಅನೇಕಪ್ರಕಾರಗಳಾದ, ಶುಭಾನ್=ಪುಣ್ಯದಾಯಕಗಳಾದ, ನೃಣಾಂ =ಮನುಷ್ಯರ ವರ್ಣಾಶ್ರಮಾಣಾಂ ಚ=ಬ್ರಾಹ್ಮಣಾದಿವರ್ಣಗಳ ಬ್ರಹ್ಮಚರ್ಯಾದ್ಯಾ-ಶ್ರಮಗಳ, ಧರ್ಮಾನ್=ಧರ್ಮಗಳನ್ನು, ಸದಾ=ಯಾವಾಗಲೂ, ಸರ್ವಭೂತಹಿತಃ =ಎಲ್ಲ ಪ್ರಾಣಿಗಳ ಹಿತಾಸಕ್ತಿಯುಳ್ಳವನಾಗಿ, ಪ್ರಾಹ=ಹೇಳಿದನು. ಧರ್ಮಶಾಸ್ತ್ರ ರಚಿಸಿದವನು,ಲೋಕಹಿತಕಾರಿಯೂ ಆದ್ದರಿಂದ ಅವನಿಗೆ ಕ್ಲೇಶಗಳಿಲ್ಲವೆಂದು ಭಾವ. ॥೩೮॥

**ಏತತ್ತ ಆದಿರಾಜಸ್ಯ ಮನೋಶ್ಚರಿತಮದ್ಭುತಮ್ ।**
**ವರ್ಣಿತಂ ವರ್ಣನೀಯಸ್ಯ ತದಪತ್ಯೋದಯಂ ಶೃಣು ॥೩೯॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ತ್ರಯೋವಿಂಶತಿತಮೋऽಧ್ಯಾಯಃ ॥*

ತೇ=ನಿನಗೆ ಆದಿರಾಜಸ್ಯ ಮನೋಃ=ಪ್ರಪ್ರಥಮ ರಾಜನಾದ ಸ್ವಾಯಂಭುವ ಮನುವಿನ ವರ್ಣನೀಯಸ್ಯ=ವರ್ಣಿಸಲು ಯೋಗ್ಯನಾದವನ, ಏತತ್ ಅದ್ಭುತಂ ಚರಿತಂ=ಈ ಆಶ್ಚರ್ಯಕರ ಚರಿತ್ರೆಯು, ವರ್ಣಿತಂ=ವರ್ಣಿಸಲ್ಪಟ್ಟಿದೆ, ತದಪತ್ಯೋದಯಂ ಶ್ರುಣು=ಅವನ ಮಗಳಾದ ದೇವಹೂತಿಯ ಪ್ರಭಾವವನ್ನು ಕೇಳು. ॥೩೯॥

*ಇಲ್ಲಿಗೆ ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು.*

# ಇಪ್ಪತ್ತೂರನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ಕರ್ದಮರು ಎಲ್ಲ ಗುಣಗಳ ಮತ್ತು ಕರ್ಮಗಳ ಅಭ್ಯುದಯವನ್ನು ತೋರಿಸಿದ್ದರು. ಆಡಬೇಕಾದಷ್ಟು ಮಾತನ್ನಾಡಿ ಮೌನವನ್ನು ಧರಿಸಿ ಶ್ರೀಹರಿಯನ್ನೇ ಧ್ಯಾನಿಸುತ್ತಾ ಕುಳಿತಿದ್ದರು. ಆಗ ಮನುರಾಜರು ನಾಚಿಕೆಗೊಂಡವರಂತೆ ಅವರನ್ನು ಕುರಿತು 'ಬ್ರಾಹ್ಮಣರು ಶ್ರೀಹರಿಯ ಮುಖದಿಂದ ಸೃಷ್ಟರಾದವರು. ಇವರಿಗೆ ವೇದವು ಅತಿಮುಖ್ಯ. ದೇಹಕ್ಕೆ ಕ್ಲೇಶವನ್ನುಂಟುಮಾಡುವ ತಪಸ್ಸನ್ನೂ ಅದರಿಂದ ಶಾಸ್ತ್ರಜ್ಞಾನವನ್ನೂ, ಅದರಿಂದ ಭಗವದ್ಭಕ್ತಿಯನ್ನೂ ಹೊಂದಿರುವವರು. ಶಮ, ದಮ ಮೊದಲಾದ ಗುಣವಂತರಾದ ಇವರು ವಿಷಯ ಸುಖಗಳ ಕಡೆ ಹೆಚ್ಚು ಆಸಕ್ತರಲ್ಲ. ಇವರ ಸೃಷ್ಟಿಯಾದರೂ ಕ್ಷತ್ರಿಯರ ರಕ್ಷಣೆಗಾಗಿಯೇ. ಕ್ಷತ್ರಿಯರನ್ನು ಬ್ರಾಹ್ಮಣರ ರಕ್ಷಣೆಗಾಗಿ ಶ್ರೀಹರಿಯು ಸೃಷ್ಟಿಸಿರುವನು. ಇವರಿಬ್ಬರಲ್ಲಿ ಬ್ರಾಹ್ಮಣರು ಶ್ರೀಹರಿಗೆ ಅತ್ಯಂತ ಪ್ರಿಯರು ಕ್ಷತ್ರಿಯರು ಅವಯವದಂತೆ ಬ್ರಾಹ್ಮಣರಿಗಿಂತ ಅಮುಖ್ಯರು. ಇದೆಲ್ಲ ಜ್ಞಾನಿಗಳಿಗೆ ತಿಳಿದ ವಿಷಯ. ಹೀಗೆ ಬ್ರಾಹ್ಮಣರೂ ಕ್ಷತ್ರಿಯರೂ ಪರಸ್ಪರ ಕಾಪಾಡಿಕೊಳ್ಳುವರು. ಬ್ರಾಹ್ಮಣರು ತಮ್ಮನ್ನೂ ರಕ್ಷಿಸಿಕೊಳ್ಳುವರು. ಸರ್ವತ್ರ ವ್ಯಾಪ್ತನಾದ ಶ್ರೀಹರಿಯು ಯಾವಾಗಲೂ ಇವರಿಬ್ಬರನ್ನೂ ರಕ್ಷಿಸುತ್ತಿರುವನು.

ಪೂಜ್ಯರೇ ! ತಮ್ಮ ನೋಟ ಮತ್ತು ಮಾತುಗಳಿಂದ ನನ್ನ ಮನಸ್ಸಿನ ಎಲ್ಲ ಸಂಶಯಗಳೂ ಪರಿಹಾರವಾಗಿರುವುವು. ತಾವು ನನ್ನಲ್ಲಿ ಪ್ರೀತಿಯಿಟ್ಟು ರಾಜಧರ್ಮ-ಗಳೆಲ್ಲವನ್ನು ತಿಳಿಸಿರುವಿರಿ. ತಮ್ಮನ್ನು ಪಾಪಿಗಳು ಎಂದೂ ನೋಡಲಾರರು. ನನಗೆ ದರ್ಶನವಿತ್ತು ಅನುಗ್ರಹಿಸಿರುವಿರಿ. ತಮ್ಮ ಪಾದಧೂಳನ್ನು ಧರಿಸಿದ ನನ್ನ ತಲೆಯು ಪವಿತ್ರವಾಯಿತು. ಇದು ನನ್ನ ಭಾಗ್ಯ ! ತಾವು ನನಗೆ ಧರ್ಮವನ್ನು ಉಪದೇಶಿಸಿದಿರಿ; ಹೆಚ್ಚು ಅನುಗ್ರಹ ಮಾಡಿದಿರಿ. ದೋಷರಹಿತಗಳಾದ ತಮ್ಮ ಮಾತುಗಳನ್ನು ನಾನು ಸಾವಧಾನದಿಂದ ಕೇಳಿದ್ದೇನೆ. ಇವೆಲ್ಲ ಪುಣ್ಯವಿಲ್ಲದೆ ಲಭಿಸುವುವೇ ! ತಾವು ಶ್ರೀಹರಿಯನ್ನೇ ಮನನಮಾಡುವವರು. ಆದರೂ ನನ್ನ ಮಗಳಾದ ದೇವಹೂತಿಯಲ್ಲಿನ ವಾತ್ಸಲ್ಯದಿಂದ ನನ್ನ ಮನಸ್ಸು ಕ್ಲೇಶಕ್ಕೊಳಗಾಗಿದೆ. ನಾನು ಅತ್ಯಂತ ದೀನನಾಗಿದ್ದೇನೆ. ಎರಡು ಮಾತುಗಳನ್ನು ತಮ್ಮಲ್ಲಿ ವಿಜ್ಞಾಪಿಸಲು

ಬಂದಿದ್ದೇನೆ. ಅವುಗಳನ್ನು ಲಾಲಿಸುವ ಅನುಗ್ರಹಮಾಡಬೇಕು. ನನಗೆ ಪ್ರಿಯವ್ರತ, ಉತ್ತಾನಪಾದರೆಂಬ ಇಬ್ಬರು ಮಕ್ಕಳಿರುವರು. ಅವರ ತಂಗಿಯೇ ಈ ದೇವಹೂತಿ. ವಯಸ್ಸು, ಸ್ವಭಾವ ಮತ್ತು ಗುಣಗಳಿಂದ ಯುಕ್ತನಾದ ಗಂಡನನ್ನು ಸೇರಿ ಸುಖಿಸಬೇಕೆಂಬ ಬಯಸುವ ವಯಸ್ಸನ್ನು ಹೊಂದಿದ್ದಾಳೆ. ಒಮ್ಮೆ ನಾರದರು ನಮ್ಮ ಮನೆಗೆ ದಯಮಾಡಿಸಿದ್ದರು. ತಮ್ಮ ಸ್ವಭಾವ. ಪಾಂಡಿತ್ಯ, ಸೌಂದರ್ಯ, ಯವ್ವನ ಮತ್ತು ಸದ್ಗುಣಗಳನ್ನು ಕೊಂಡಾಡಿದರು. ಅದನ್ನು ಕೇಳಿದಂದಿನಿಂದ ಆಕೆಯು ತಮ್ಮನ್ನೇ ಪತಿಯನ್ನಾಗಿ ವರಿಸಲು ನಿಶ್ಚಯಮಾಡಿಕೊಂಡಿರುವಳು. ಬ್ರಾಹ್ಮಣೋತ್ತಮ ! ಆಕೆಯ ಇಷ್ಟದಂತೆ ಆಕೆಯನ್ನು ತಮಗೆ ಶ್ರದ್ಧೆಯಿಂದ ಮದುವೆ ಮಾಡಿಕೊಡಲು ಬಂದಿದ್ದೇನೆ. ಯಜ್ಞಯಾಗಾದಿ ತಮ್ಮ ಕರ್ಮಗಳಿಗೆಲ್ಲ ಆಕೆಯು ಅತ್ಯಂತ ಅನುಕೂಲೆಯಾಗಿರುವಳು. ದಯವಿಟ್ಟು ಸ್ವೀಕರಿಸುವ ಮನಸ್ಸು ಮಾಡಬೇಕು. ವಿಷಯ ಸುಖಾಪೇಕ್ಷೆಯಿಲ್ಲದವರೂ ಮದುವೆಯಾಗಬಂದವರನ್ನು ತಿರಸ್ಕರಿಸಬಾರ-ದೆಂಬ ನಿಯಮವಿದೆ. ಅಂದಮೇಲೆ ಮದುವೆಯಾಗಲು ಸಿದ್ಧ ನಾಗಿರುವನು ಮದುವೆಯಾಗ ಬಂದ ಕನ್ಯೆಯನ್ನು ತಿರಸ್ಕರಿಸಬಹುದೇ ? ಕನ್ಯೆಯ ತಂದೆಯು ಮದುವೆಯಾಗಲಿರುವವನಿಗೆ ಕನ್ಯೆಯನ್ನು ಕೊಡಬೇಕೆ ಹೊರತು ಕೆಲಸಕ್ಕೆ ಬಾರದವನಿಗಲ್ಲ. ಅಯೋಗ್ಯನಿಗೆ ಕನ್ಯೆಯನ್ನು ಕೊಡಹೋದರೆ ಅವನ ಕೀರ್ತಿ ಗೌರವಗಳು ನಾಶವಾಗುವುವು. ತಾವು ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಗುರುಗಳ ಅಪ್ಪಣೆಪಡೆದು ಯೋಗ್ಯ ಕನ್ಯೆಯನ್ನು ಮದುವೆಯಾಗಲಿರುವಿರೆಂದು ನಾನು ಕೇಳಿದ್ದೇನೆ. ಶ್ರದ್ಧೆಯಿಂದ ನನ್ನ ಮಗಳನ್ನು ತಮಗೆ ಕೊಡಲು ಬಂದಿದ್ದೇನೆ. ಸ್ವೀಕರಿಸಿ 'ಅನುಗ್ರಹಿಸಬೇಕು.' ಎಂದು ಪ್ರಾರ್ಥಿಸಿದರು.

ಆಗ ಕರ್ದಮರು 'ರಾಜನ್, ನೀನು ಹೇಳಿದ್ದು ಯುಕ್ತವಾದುದೇ. ನಾನು ಮದುವೆಯಾಗಬಯಸಿರುವುದೂ ಉಂಟು. ಈ ನಿನ್ನ ಮಗಳು ವಿಷಯಾಸಕ್ತಿ ಇಲ್ಲದೆ ಗಂಡನ ಶುಶ್ರೂಷೆಯಲ್ಲಿದ್ದುಕೊಂಡು ತ್ರಿವಿಧ ಪುರುಷಾರ್ಥಗಳಿಗೂ ಕಾರಣ-ಗಳಾಗಿರುವಳೆಂಬುದನ್ನು ಬಲ್ಲೆ. ಇಂದೇ ನಮ್ಮಿರ್ವರಿಗೂ ಬ್ರಾಹ್ಮವಿವಾಹ ವಿಧಿಯಂತೆ ವಿವಾಹವು ನಡೆಯಲಿ. ಕಾಂತಿಯಿಂದ ಮಿಕ್ಕೆಲ್ಲರನ್ನೂ ತಿರಸ್ಕರಿಸುವ ಲಕ್ಷ್ಮಿಯಂತಿರುವ ನಿನ್ನ ಮಗಳನ್ನು ಯಾರು ತಾನೇ ಬೇಡವೆನ್ನುವರು ? ವೇದಗಳಲ್ಲಿ ಹೇಳಿದಂತೆ ಈಕೆಗೆ ಹತ್ತು ಮಕ್ಕಳಾಗಿ ಗಂಡನೇ ಹನ್ನೊಂದನೆಯವನಾಗಲಿ. ಅರಮನೆಯ ಮೇಲಿನ ಅಂತಸ್ತಿನಲ್ಲಿ ಕಾಲಿನ ಆಭರಣಗಳನ್ನು ಶಬ್ದಮಾಡಿಕೊಂಡು ಈ ನಿನ್ನ ಮಗಳು ಚಂಡಾಟವಾಡುತ್ತಿದ್ದುದನ್ನು ಕಂಡು ವಿಶ್ವಾವಸುವು ಮುಗ್ಧನಾಗಿ ಈಕೆಯಲ್ಲಿ ಸ್ನೇಹಗೊಂಡ ಮನಸ್ಸಿನಿಂದ ಖೇದಗೊಂಡು ತನ್ನ ವಿಮಾನದಿಂದ ಬಿದ್ದನಂತೆ !

ಇಂತಹ ಅನುಮಪ ಸುಂದರಿಯನ್ನು ನೋಡಬೇಕಾದರೂ ಪುಣ್ಯವಂತನಾಗಿರಬೇಕು. ಅಂದಮೇಲೆ ಸುಂದರಿಯೂ, ಮನುಪುತ್ರಿಯೂ, ಉತ್ತಾನಪಾದನ ತಂಗಿಯೂ ಮೇಲಾಗಿ ಮದುವೆಯಾಗಲಿಚ್ಛಿಸುವವಳೂ ಆಗಿರುವ ಈ ಕನ್ಯಾಶ್ರೇಷ್ಠಳನ್ನು ಸತ್ಕುಲಪ್ರಸೂತನಾದ ಯಾವ ಪಂಡಿತನೂ ತಿರಸ್ಕರಿಸಲಾರ. ನಾನೂ ತಿರಸ್ಕರಿಸುವುದಿಲ್ಲ. ಆದರೆ ನನ್ನಿಂದ ಮಕ್ಕಳನ್ನು ಪಡೆಯುವವರೆಗೆ ಮಾತ್ರ ಈಕೆಯೊಡನೆ ನಾನಿರುತ್ತೇನೆ. ಅನಂತರ ಶುಕ್ಲನೆನಿಸಿದ ಶ್ರೀಹರಿಯು ಉಪದೇಶಿಸಿದ ಸದ್ಧರ್ಮವನ್ನು ಆಶ್ರಯಿಸಿ ಪಶುಹಿಂಸೆ ಮೊದಲಾದುವಿಲ್ಲದ ಆ ಧರ್ಮಗಳನ್ನು ಅನುಷ್ಠಾನಮಾಡಲು ಹೊರಟುಹೋಗುವೆನು. ಈ ಜಗತ್ತು ಪ್ರಮಾಣಸಿದ್ಧವೂ, ಸತ್ಯವೂ, ತಾರತಮ್ಯೋ-ಪೇತವಾದ್ದರಿಂದ ವಿಚಿತ್ರವೂ, ಆಗಿದೆ. ಇದಕ್ಕೆ ನಿಮಿತ್ತ ಕಾರಣನೇ ಶ್ರೀಹರಿ. ಇದನ್ನು ಧರ್ಮದಿಂದ ರಕ್ಷಿಸುವವನೂ ಅವನೇ. ಕೊನೆಯಲ್ಲಿ ಎಲ್ಲವನ್ನೂ ಉದರದಲ್ಲಿ ಅಡಗಿಸಿಕೊಳ್ಳುವವನೂ ಅವನೇ. ಅವನಿಗೆ ದೇಶದಿಂದಾಗಲಿ, ಕಾಲದಿಂದಾಗಲಿ ಕೊನೆಯಿಲ್ಲ. ಅವನೇ ಎಲ್ಲ ಪ್ರಜೇಶ್ವರರಿಗೂ ಪಾಲಕನು. ನನಗೆ ಅವನೇ ಸರ್ವೋತ್ತಮ ಸಾಕ್ಷಿ' ಎಂದು ಉತ್ತರ ಕೊಟ್ಟರು.

ವಿದುರ, ಇಷ್ಟುಹೇಳಿ ಕರ್ದಮರು ಸುಮ್ಮನಾದರು. ಅವರು ಮನಸ್ಸಿನಿಂದ ಶ್ರೀಹರಿಯ ಗುಣಗಳನ್ನು ಧ್ಯಾನಿಸುತ್ತಾ ಕುಳಿತರು. ಅವರ ಮುಖದಲ್ಲಿ ಮುಗುಳುನಗೆ ಮಿಂಚುತ್ತಿತ್ತು. ಅವರನ್ನು ಕಂಡ ದೇವಹೂತಿಯ ಮನಸ್ಸು 'ಇವರೇ ಪತಿಯಾಗಲಿ' ಎಂದು ಮಿಡಿಯುತ್ತಿತ್ತು. ಆಗ ಮನುರಾಜರು ಮತ್ತೆ ಹೆಂಡತಿಯ ಮತ್ತು ಮಗಳ ಅಭಿಪ್ರಾಯವನ್ನು ಕೇಳಿ ತಿಳಿದು ಬಹಳ ಸಂತಸಗೊಂಡು ಗುಣವಂತರಾದ ಕರ್ದಮರಿಗೆ ಅನುರೂಪಳಾಗಿದ್ದ ತಮ್ಮ ಮಗಳನ್ನು ದಾನಮಾಡಿದರು. ಮಹಾರಾಜ್ಞಿ ಶತರೂಪಾದೇವಿಯೂ ಬಹು ಬೆಲೆ ಬಾಳುವ ಎಲ್ಲ ಬಗೆಯ ಬಳುವಳಿಗಳನ್ನೂ ಆ ದಂಪತಿಗಳಿಗೆ ಕೊಟ್ಟು ಆನಂದಪಟ್ಟರು. ಯೋಗ್ಯನಾದ ವರನಿಗೆ ಮಗಳನ್ನು ಕೊಟ್ಟೆನೆಂದು ರಾಜರ ಮನಸ್ಸು ನೆಮ್ಮದಿಯನ್ನು ಹೊಂದಿತು. ಆದರೆ ಆ ಮಗಳ ವಿರಹವನ್ನು ಅವರಿಂದ ಸಹಿಸಲಾಗಲಿಲ್ಲ. ಉತ್ಕಂಠೆಯಿಂದ ಅವರ ಮನಸ್ಸು ಕಲಕಿ ಹೋಯಿತು. ತೋಳುಗಳಿಂದ ಮಗಳನ್ನು ತಬ್ಬಿಕೊಂಡು ಕಣ್ಣೀರಿಡುತ್ತಿದ್ದರು. ತಾಯಿ, ಮಗುವೇ ಎಂದು ಹಲಬುತ್ತಾ ಕಣ್ಣೀರಿನಿಂದ ಮಗಳ ತಲೆಗೂದಲನ್ನು ತೊಯಿಸಿಬಿಟ್ಟರು. ಅನಂತರ ಕರ್ದಮರಿಂದ, ಅಪ್ಪಣೆ ಪಡೆದು ಹೆಂಡತಿಯೊಡನೆ ರಥದಲ್ಲಿ ಕುಳಿತು ಪರಿವಾರದೊಂದಿಗೆ ತಮ್ಮ ನಗರಕ್ಕೆ ಹೊರಟರು. ಸರಸ್ವತೀ ನದಿಯ ಎರಡೂ ದಡಗಳಲ್ಲಿ ಉದ್ದಕ್ಕೂ ಋಷಿಗಳ ಆಶ್ರಮಗಳಿದ್ದುವು. ಶ್ರೀಹರಿಯಲ್ಲೇ ನೆಟ್ಟ ಮನಸ್ಸುಳ್ಳ ಆ ಋಷಿಗಳಲ್ಲಿ ಯಾವ ಸಂಪತ್ತಿಗೂ ಕಡಿಮೆಯಿರಲಿಲ್ಲ. ಆ ಸಾತ್ವಿಕಸಂಪತ್ತನ್ನು ನೋಡುತ್ತಾ ಮನುರಾಜರು ಮುಂದುವರೆದರು.

ಮನುರಾಜರು ನಗರಕ್ಕೆ ಹಿಂತಿರುಗುತ್ತಿದ್ದಾರೆಂದು ಬ್ರಹ್ಮಾವರ್ತದ ಪ್ರಜೆಗಳಿಗೆ ತಿಳಿಯಿತು. ಅವರ ಸಂತೋಷಕ್ಕೆ ಪಾರವಿರಲಿಲ್ಲ. ಸಂಗೀತ, ಸ್ತೋತ್ರ ಮತ್ತು ವಾದ್ಯಗಳೊಂದಿಗೆ ರಾಜರನ್ನು ಇದಿರುಗೊಂಡರು.

ಬರ್ಹಿಷ್ಮತೀ ಪಟ್ಟಣವು ಬ್ರಹ್ಮಾವರ್ತದ ರಾಜಧಾನಿ. ಅಲ್ಲಿ ಎಲ್ಲ ಸಂಪತ್ತುಗಳೂ ನೆಲೆಯಾಗಿದ್ದುವು. ಹಿಂದೆ ಯಜ್ಞ ವರಾಹರೂಪಿಯಾದ ಶ್ರೀಹರಿಯು ತನ್ನ ದೇಹವನ್ನು ಕೊಡವಿ ಅನೇಕ ಕೂದಲುಗಳನ್ನು (ಸಚ್ಚಿದಾನಂದಾತ್ಮಕಾವದ) ಉದುರಿಸಿದ್ದನು. ಅಂದರೆ ಅನೇಕ ಅವತಾರಗಳನ್ನು ಅಭಿವ್ಯಕ್ತಿ ಪಡಿಸಿದ್ದನು. ಆ ಸಚ್ಚಿದಾನಂದಮಯವಾದ ರೋಮಗಳಿಂದ ಹಸುರು ದರ್ಭೆಗಳು ಸೃಷ್ಟಿಸಲ್ಪಟ್ಟವು ಆದ್ದರಿಂದ ಆ ದರ್ಭೆಗಳು ದೈತ್ಯರನ್ನು ದೂರ ಓಡಿಸುವ ಸಾಮರ್ಥ್ಯವನ್ನು ಪಡೆದಿದ್ದುವು. ಅವುಗಳನ್ನು ಉಪಯೋಗಿಸಿಕೊಂಡು ಋಷಿಗಳು ತಮ್ಮ ಯಜ್ಞಗಳಿಗೆ ವಿಘ್ನಮಾಡುತ್ತಿದ್ದ ದೈತ್ಯರನ್ನು ಸೋಲಿಸಿ ಯಜ್ಞಗಳಿಂದ ಶ್ರೀಹರಿಯನ್ನು ಸೇವಿಸಿದರು. ಆ ನಗರದಲ್ಲಿದ್ದುಕೊಂಡು ಮನುರಾಜರು ಆ ದರ್ಭೆಗಳಿಂದ ಮಾಡಿದ ಬರ್ಹಿಯಿಂದ ಶ್ರೀಹರಿಯ ಸೇವಾರೂಪವಾದ ಯಜ್ಞಗಳನ್ನು ಮಾಡಿದ್ದರು. ಅದರ ಮಹಿಮೆಯಿಂದ ಅವರಿಗೆ ಶಾಶ್ವತವಾದ ಶ್ರೀಹರಿಯ ಸ್ಥಾನವು ದೊರೆಯಿತು. ಆದ್ದರಿಂದಲೇ ಆ ನಗರಕ್ಕೆ ಬರ್ಹಿಷ್ಮತೀ ಎಂಬ ಹೆಸರು ಸಾರ್ಥಕವಾಗಿತ್ತು.

ಮನುರಾಜರು ಆ ಪಟ್ಟಣವನ್ನು ಪ್ರವೇಶಿಸಿ ಅರಮನೆಯಲ್ಲಿ ಸುಖವಾಗಿದ್ದರು. ಅಲ್ಲಿ ಯಾವ ದುಃಖಕ್ಕೂ ಎಡೆಯಿರಲಿಲ್ಲ. ಹೆಂಡತಿಮಕ್ಕಳೊಂದಿಗೆ ಇದ್ದ ಅವರು ಧರ್ಮಕ್ಕೆ ವಿರೋಧವಿಲ್ಲದಂತೆ ವಿಷಯಸುಖಗಳನ್ನು ಅನುಭವಿಸಿದರು. ದೇವ-ಗಾಯಕರು ತಮ್ಮ ಸ್ತ್ರೀಯರೊಂದಿಗೆ ಮನುರಾಜರ ಕೀರ್ತಿಯನ್ನು ಗಾನಮಾಡುತ್ತಿ-ದ್ದರು. ಹೀಗೆ ಕೀರ್ತಿವಂತರಾಗಿದ್ದ ಮನುರಾಜರು ಪ್ರಾತಃಕಾಲಗಳಲ್ಲಿ ಭಕ್ತಿಯಿಂದ ಶ್ರೀಹರಿಯ ಕಥೆಗಳನ್ನು ಕೇಳಿ ಮನನ ಮಾಡುತ್ತಿದ್ದರು. ಯೋಗಸಿದ್ಧಿಗಳೆನಿಸಿದ ಅಣಿಮಾದಿ ಐಶ್ವರ್ಯಗಳಲ್ಲಿ ಮನುರಾಜರು ನಿಪುಣರಾಗಿದ್ದರು. ಆದರೂ ಯಾವಾಗಲೂ ಶ್ರೀಹರಿಯಲ್ಲಿಯೇ ಆಸಕ್ತರಾಗಿರುತ್ತಿದ್ದರು. ವಿಷಯ ಸುಖಗಳನ್ನು ಅನುಭವಿಸಿದರೂ ಭಗವತ್ಕಥಾಶ್ರವಣದಲ್ಲಿ ಅವರಿಗೆ ಆದರವು ಕಡಿಮೆಯಾಗಲಿಲ್ಲ. ಯಾವಾಗಲೂ ಹರಿಕಥೆಯನ್ನು ಕೇಳುತ್ತಾ, ಮನನಮಾಡುತ್ತಾ, ಹೇಳುತ್ತಾ ಮತ್ತು ಮತ್ತೊಬ್ಬರು ಹೇಳುವಂತೆ ಮಾಡುತ್ತಿದ್ದ ಅವರಿಗೆ ಅವರ ಅಂತರದ ಯಾವ ಕಾಲದ ಭಾಗವೂ ವ್ಯರ್ಥವಾಗಲಿಲ್ಲ. ಹೀಗೆ ಅವರು ಶ್ರೀಹರಿಯಲ್ಲಿಯೇ ಮನಸ್ಸಿಟ್ಟು ಮೂರು ಬಗೆಯ ಅಧೋಗತಿಗಳನ್ನೂ ಗೆದ್ದು ತಮ್ಮ ಮನ್ವಂತರ ಕಾಲವೆನಿಸಿದ ಎಪ್ಪತ್ತೊಂದು ಮಹಾಯುಗಗಳನ್ನು ಕಳೆದರು. ಶ್ರೀಹರಿಯನ್ನೇ ಶರಣು ಹೊಂದಿದ್ದ

ಮನುರಾಜರು ಮನುಷ್ಯ ದೇಹದಲ್ಲಿದ್ದರೂ ಅವರಿಗೆ ಶಾರೀರಕವಾಗಲಿ, ಮಾನಸಿಕವಾಗಲಿ, ದೇವತೆಗಳಿಂದ ಮನುಷ್ಯರಿಂದ ಭೂತಗಳಿಂದ ಬಂದದ್ದಾಗಲಿ ದುಃಖಗಳು ಎಂದೂ ತೊಂದರೆ ಪಡಿಸಲಿಲ್ಲ. ಈ ಮನುರಾಜರನ್ನೇ ಋಷಿಗಳು ಪ್ರಶ್ನಿಸಿದಾಗ ಮಾನವರ ವರ್ಣಗಳ, ಆಶ್ರಮಗಳ ಅನೇಕ ಬಗೆಯ ಧರ್ಮಗಳನ್ನು ಇವರು ಪ್ರಮಾಣ ಪೂರ್ವಕವಾಗಿ ತಿಳಿಸಿದರು. ಅವುಗಳ ಅನುಷ್ಠಾನದಿಂದ ಶ್ರೀಹರಿಯು ಸುಪ್ರೀತನಾಗಿ ಕಲ್ಯಾಣವನ್ನುಂಟುಮಾಡಿ ಸದ್ಗತಿಯನ್ನು ಕೊಡುವನು. ಇಂತಹ ಧರ್ಮಗಳನ್ನು ಜಗತ್ತಿಗೆ ತಿಳಿಸಿದ ಮನುರಾಜರು ಸರ್ವಭೂತಗಳಿಗೂ ಹಿತಕರರೆಂದು ಬೇರೆ ಹೇಳಬೇಕೆ ? ಇವರಿಗೆ ದುಃಖವಾದರೂ ಆಗುವುದೆಂತು ? ಇವರೇ ಮೊದಲನೆಯ ರಾಜರು ಇವರ ಚರಿತ್ರೆಯು ಅದ್ಭುತವಾದುದು. ಇದನ್ನು ವಿಸ್ತಾರವಾಗಿ ತಿಳಿಸಬೇಕಾದುದು ಅಗತ್ಯ. ಅದನ್ನು ಇದುವರೆಗೂ ನಿನಗೆ ಹೇಳಿರುವೆನು ವಿದುರ ! ಇನ್ನು ಮುಂದೆ ಮನುರಾಜರ ಮಗಳಾದ ದೇವಹೂತಿದೇವಿಯ ಸಮೃದ್ಧಿಯನ್ನು ಹೇಳುತ್ತೇನೆ. ಕೇಳು.



# ಅಥ ಚತುರ್ವಿಂಶೋಽಧ್ಯಾಯಃ

**ಶ್ರೀ ಶುಕ ಉವಾಚ**

**ಪಿತೃಭ್ಯಾಂ ಪ್ರಸ್ಥಿತೇ ಸಾಧ್ವೀ ಪತಿಮಿಂಗಿತಕೋವಿದಾ ।**
**ನಿತ್ಯಂ ಪರ್ಯಚರತ್ ಪ್ರೀತ್ಯಾ ಭವಾನೀವ ಭವಂ ಪ್ರಭುಮ್ ॥೧॥**

ಪಿತೃಭ್ಯಾಂ=ತಂದೆತಾಯಿಗಳಿಂದ ಪ್ರಸ್ಥಿತೇ=ಗಮನಮಾಡುತ್ತಿರಲು, ಇಂಗಿತ-ಕೋವಿದಾ=ಮನಸಿನಲ್ಲಿರುವುದನ್ನು ತಿಳಿಯುವುದರಲ್ಲಿ ನಿಪುಣಳಾದ, ಸಾಧ್ವೀ=ಪತಿವ್ರತೆಯಾದ ದೇವಹೂತಿಯು ಪ್ರೀತ್ಯಾ=ಪ್ರೀತಿಯಿಂದ,ನಿತ್ಯಂ=ಯಾವಾಗಲೂ, ಪ್ರಭುಂ=ಪತಿಯಾದ, ಭವಂ=ರುದ್ರನನ್ನು ಭವಾನೀ ಇವ=ಪಾರ್ವತೀ ದೇವಿಯು ಸೇವಿಸುವಂತೆ, ಪತಿಂ=ಕರ್ದಮರನ್ನು ಪರ್ಯಚರತ್=(ಸೇವಿಸುವಳು) ಸೇವಿಸಿದಳು ॥೧॥

**ವಿಸ್ರಂಭೇಣಾತ್ಮಶೌಚೇನ ಗೌರವೇಣ ದಮೇನ ಚ ।**
**ಶುಶ್ರೂಷಯಾ ಸೌಹೃದೇನ ವಾಚಾ ಮಧುರಯಾ ಪ್ರಭೋ ॥೨॥**

ಹೇ ಪ್ರಭೋ=ವಿದುರನೇ ವಿಸ್ರಂಭೇಣ=ಪತಿಯನ್ನು ಸಂತೋಷಪಡಿಸುವುದ-ರಿಂದ ಅಭೀಷ್ಟಸಿದ್ಧಿಯಾಗುವುದೆಂಬ ವಿಶ್ವಾಸದಿಂದ,ಆತ್ಮಶೌಚೇನ=ಮೈಮನಗಳ ಶುದ್ಧಿಯಿಂದ, ಗೌರವೇಣ=ಮರ್ಯಾದೆಯಿಂದ, ದಮೇನ=ಇಂದ್ರಿಯನಿಗ್ರಹ-ದಿಂದ, ಚ=ಮತ್ತು, ಶುಶ್ರೂಷಯಾ=ಹಿತನುಡಿಗಳನ್ನು ಕೇಳುವ ಇಚ್ಛೆಯಿಂದ, ಸೌಹೃದೇನ=ನಿರ್ವ್ಯಾಜಸ್ನೇಹದಿಂದ, ಮಧುರಯಾ ವಾಚಾ=ಸಿಹಿಮಾತುಗಳಿಂದಲೂ ॥೨॥

**ವಿಸೃಜ್ಯ ಕಾಮಂ ದಂಭಂ ಚ ದ್ವೇಷಂ ಲೋಭಮಘಂ ಮದಮ್ ।**
**ಅಪ್ರಮತ್ತೋದ್ಯತಾ ನಿತ್ಯಂ ತೇಜೀಯಾಂಸಮತೋಷಯತ್ ॥೩॥**

ಕಾಮಂ=ವಿಷಯಾಭಿಲಾಷೆಯನ್ನು, ದಂಭಂ ಚ=ತನ್ನಲ್ಲಿ ಇಲ್ಲದಿರುವ ಮಹಾತ್ಮ್ಯದ ತೋರುವಿಕೆಯನ್ನು,ದ್ವೇಷಂ=ಅಸಹನೆಯನ್ನು, ಲೋಭಂ=ಜಿಪುಣತೆಯನ್ನು, ಅಘಂ =ನಿಷಿದ್ಧಾಚರಣವನ್ನು, ಮದಂ=ಗರ್ವವನ್ನೂ, ವಿಸೃಜ್ಯ=ತೊರೆದು, ನಿತ್ಯಂ=ಸರ್ವ-ಕಾಲದಲ್ಲಿ, ಅಪ್ರಮತ್ತಾ=ಪತಿಸೇವಾಪರಾಯಣಳಾಗಿ, ಉದ್ಯತಾ=ಪ್ರಯತ್ನಶೀಲಳಾಗಿ,

ತೇಜೀಯಾಂಸಂ=ಬ್ರಹ್ಮಾಪರೋಕ್ಷಜ್ಞಾನಿಯಾದ ಪತಿಯನ್ನು, ಅತೋಷಯತ್=ಸಂತೋಷಗೊಳಿಸಿದಳು. ॥೩॥

ಸಂತೋಷದ ಮೊದಲ ಗುರುತು ಮಾತನಾಡಿಸುವುದು. ಆ ಸಂಭಾಷಣೆ ನಡೆಯಿತು ಎಂದು ಹೇಳುವರು–

**ಸ ವೈ ದೇವರ್ಷಿವರ್ಯಸ್ತಾಂ ಮಾನವೀಂ ಸಮನುವ್ರತಾಮ್ ।**
**ದೈವಾದ್ ಗರೀಯಸಃ ಪತ್ಯುರಾಶಾಸಾನಾಂ ಮಹಾಶಿಷಃ ॥೪॥**

**ಕಾಲೇನ ಭೂಯಸಾ ಕ್ಷಾಮಾಂ ಕರ್ಶಿತಾಂ ವ್ರತಚರ್ಯಯಾ ।**
**ಪ್ರೇಮಗದ್ಗದಯಾ ವಾಚಾ ಪೀಡಿತಃ(ವ್ರೀಡಿತಃ)ಕೃಪಯಾಽಬ್ರವೀತ್॥೫॥**

ದೇವರ್ಷಿವರ್ಯಃ=ದೇವಋಷಿಗಳಲ್ಲಿ ಶ್ರೇಷ್ಠನಾದ, ಸಃ=ಕರ್ದಮರು, ಮಾನವೀಂ=ಮನುಪುತ್ರಿಯಾದ ಸಮನುವ್ರತಾಂ=ಚಾಚೂತಪ್ಪದೇ ಚೆನ್ನಾಗಿ ತನ್ನನ್ನು ಅನುಸರಿಸಿ ನಡೆಯುವ, ದೈವಾದ್=ತನಗೆ ದೇವಸ್ವರೂಪನಾದ ಗರೀಯಸಃ=ಶ್ರೇಷ್ಠನಾದ, ಪತ್ಯುಃ=ಗಂಡನಿಂದ ಮಹಾಶಿಷಃ=ದೊಡ್ಡದಾದ ಅಭೀಷ್ಟವನ್ನು (ಪುತ್ರ ಮುಂತಾದ) ಆಶಾಸಾನಾಂ=ಇಚ್ಛಿಸುವ ॥೪॥

ಭೂಯಸಾಕಾಲೇನ=ಬಹಳ ಕಾಲದಿಂದ, ವ್ರತಚರ್ಯಯಾ ವ್ರತಾನುಷ್ಠಾನದಿಂದ, ಕ್ಷಾಮಾಂ=ಬಾಡಿದ, ಕರ್ಶಿತಾಂ=ಸೊರಗಿದ, ತಾಂ=ದೇವಹೂತಿಯನ್ನು, ಕೃಪಯಾ=ದಯೆಯಿಂದ ಪೀಡಿತಃ=ಆರ್ದ್ರೀಕೃತಚಿತ್ತನಾಗಿ, ಪ್ರೇಮಗದ್ಗದಯಾ ವಾಚಾ ಅಬ್ರವೀತ್=ಸ್ನೇಹದಿಂದ ಬಿಗಿದ ಕಂಠದಿಂದ ಮಾತನಾಡಿದನು. ॥೫॥

**ತುಷ್ಟೋಽಹಮದ್ಯ ತವ ಮಾನಿನಿ ಮಾನದಾಯಾಃ**
**ಶುಶ್ರೂಷಯಾ ಪರಮಯಾ ಪರಯಾ ಚ ಭಕ್ತ್ಯಾ ।**
**ಯೋ ದೇಹಿನಾಮಯಮತೀವ ಸುಹೃತ್ ಸ್ವದೇಹೋ**
**ನಾಪೇಕ್ಷಿತಃ ಸಮುಚಿತಂ ಕ್ಷಯಿತುಂ ಯದರ್ಥೇ ॥೬॥**

ಹೇ ಮಾನಿನಿ=ಆತ್ಮಗೌರವವುಳ್ಳ ದೇವಹೂತಿಯೇ, ಪರಯಾ ಭಕ್ತ್ಯಾ=ಶ್ರೇಷ್ಠ (ದೃಡ) ಭಕ್ತಿಯಿಂದ, ಪರಮಯಾ ಶುಶ್ರೂಷಯಾ=ಶ್ರೇಷ್ಠಸೇವೆಯಿಂದ ಯದರ್ಥೇ=ಯಾವ ನನ್ನ ಪ್ರೀತಿಗಾಗಿ ದೇಹಿನಾಂ=ಜನರಿಗೆ ಯಃ ಅಯಂ ಸ್ವದೇಹಃ=ಯಾವ ಈ ತನ್ನ ಶರೀರವು ಸುಹೃತ್=ಅತಿಪ್ರಿಯವೋ ಅದೂ ಸಹ ಕ್ಷಯಿತುಂ=(ಕ್ಷಪಿತುಂ) ಕೃಶಗೊಳಿಸಲು ಸಮುಚಿತಂ=ಸ್ನಾನ,ಅಲಂಕಾರ, ಭೋಜನ ಮುಂತಾದ ಆವಶ್ಯಕಗಳನ್ನು ನಾಪೇಕ್ಷಿತಃ=ಬಯಸಲಿಲ್ಲ. ॥೬॥

ಕೇವಲ ಬೆಲ್ಲದಂತ ಮಾತಿನಿಂದೇನು ಪುರುಷಾರ್ಥ ಎಂಬ ಶಂಕೆಗೆ ತನ್ನ ಸಂತಸದ ಫಲವನ್ನು ತೋರಿಸುವನು -

**ಯಾ ಮೇ ಸ್ವಧರ್ಮನಿರತಸ್ಯ ತಪಃಸಮಾಧಿ -**
**ವಿದ್ಯಾತ್ಮಯೋಗವಿಜಿತಾ ಭಗವತ್ಪ್ರಸಾದಾತ್ ।**
**ತಾಮೇವ ತೇ ಮದ(ತದ)ನುಭಾವನಯಾಽವರುದ್ಧಾಂ**
**ದೃಷ್ಟಿಂ ಪ್ರಪಶ್ಯ ವಿತರಾಮ್ಯಭಯಾಮಶೋಕಾಮ್ ॥೭॥**

ಸ್ವಧರ್ಮನಿರತಸ್ಯ=ನನ್ನ ವರ್ಣಾಶ್ರಮೋಚಿತಧರ್ಮದಲ್ಲಿ ಆಸಕ್ತನಾದ, ಮೇ=ನನ್ನ, ಯಾ=ಯಾವ ದೃಷ್ಟಿಯು ತಪಃಸಮಾಧಿವಿದ್ಯಾತ್ಮಯೋಗವಿಜಿತಾ= ತಪಸ್ಸು ಚಿತ್ತೈಕಾಗ್ರತೆ ವಿದ್ಯಾ=ಪರೋಕ್ಷಜ್ಞಾನ ಭಗವದ್ಭಕ್ತಿಗಳಿಂದ ಪ್ರಾಪ್ತವಾಯಿತೋ, ತಾಂ=ಆ ದೃಷ್ಟಿಂ, ಅಪರೋಕ್ಷ ಜ್ಞಾನದ ಸಾಮರ್ಥ್ಯವನ್ನು, ಪ್ರಪಶ್ಯ=ನೋಡು, ಮದನುಭಾವನಯಾಽವರುದ್ಧಾಂ=ನನ್ನ ಸೇವೆಯಿಂದ ಫಲನೀಡಲು ನಿನಗಭಿ-ಮುಖವಾದ, ಅಭಯಾಂ=ಪತನ ಭಯರಹಿತವಾದ, ಅಶೋಕಾಂ=ದುಃಖವನ್ನು ಕಳೆಯುವ, ತಾಂ ಏವ=ಅದನ್ನೇ, ತೇ=ನಿನಗೆ, ಭಗವತ್ಪ್ರಸಾದಾತ್=ಶ್ರೀಹರಿಯ ಅನುಗ್ರಹದಿಂದ, ವಿತರಾಮಿ=ಕೊಡುವೆನು. "ತದನುಭಾವನಾಯಾಽವರುದ್ಧಾಂ" ಎಂಬ ಪಾಠದಲ್ಲಿ ಭಗವಂತನ ನಿರಂತರ ಉಪಾಸನೆಯಿಂದ ಉಂಟಾದ ಶ್ರೀಹರಿಪ್ರಸಾದದಿಂದ ವಶೀಕೃತವಾದ ನನ್ನ ಅಪರೋಕ್ಷಜ್ಞಾನದ ಸಮಾರ್ಥ್ಯವನ್ನು ನಿನಗೆ ಐಹಿಕಪುರಾಷಾರ್ಥ ಕೊಡುವಂತೆ ಪ್ರಕಟೀಕರಿಸುವೆನು ಎಂದು ಭಾವ. ॥೭॥

ನನ್ನ ಅಭೀಷ್ಟಸಿದ್ಧಿಗೆ ಕಾಮ್ಯಕರ್ಮಗಳು ಸಾಕಲ್ಲವೆ ? ಜ್ಞಾನಸಾಮರ್ಥ್ಯವೇಕೆ ? ಎಂದರೆ ಹೇಳುವನು -

**ಅನ್ಯೇ ಪುನರ್ಭಗವತೋ ಭ್ರುವ ಉದ್ವಿಜೃಂಭ-**
**ವಿಭ್ರಂಶಿತಾರ್ಥರಚನಾಃ ಕಿಮುರುಕ್ರಮಸ್ಯ ।**
**ಸಿದ್ಧಾಽಸಿ ಭುಂಕ್ಷ್ವ ವಿಭವಾನ್ ನಿಜಧರ್ಮದೋಹಾನ್**
**ದಿವ್ಯಾನ್ ನರೈರ್ದುರಧಿಗಾನಪಿ ವಿಕ್ರಿಯಾಭಿಃ ॥೮॥**

ಅನ್ಯೇ ಪುನಃ=ಕಾಮ್ಯಕರ್ಮವಿಶೇಷಗಳು, ಕಿಂ ನ ಕಿಮಪಿ=ಫಲದಾಯಕ-ಗಳೇನು ? ಅಲ್ಲ, ಅತಿತುಚ್ಛವಾದವು. ಏಕೆಂದರೆ, ಉರುಕ್ರಮಸ್ಯ=ಶ್ರೀಹರಿಯ, ಭ್ರುವಃ=ಹುಬ್ಬಿನ, ಉದ್ವಿಜೃಂಭ=ವಕ್ರತೆಯಿಂದ, ವಿಭ್ರಂಶಿತ=ನಾಶಹೊಂದಲ್ಪಟ್ಟ, ಅರ್ಥರಚನಾಃ=ಮನೋರಥವುಳ್ಳವುಗಳು. ಭಗವಂತನು ಕರ್ಮದಿಂದ ಪಡೆದ ಮನೋರಥಗಳನ್ನು ತನ್ನ ಭ್ರೂವಿಲಾಸದಿಂದ ನಾಶಗೊಳಿಸುವನು. ಜ್ಞಾನಸಾಮರ್ಥ್ಯ-

ದಿಂದ ಪಡೆದವನ್ನು ನಾಶಗೊಳಿಸುವುದಿಲ್ಲವೆಂದು ಭಾವ. ಆದ್ದರಿಂದ ತ್ವಂ ಸಿದ್ಧಾಽಸಿ= ನನ್ನ ಸೇವೆಯಿಂದ ಉತ್ತಮ ಐಶ್ವರ್ಯವನ್ನು ಪಡೆಯಲು ಯೋಗ್ಯಳಾಗಿರುವಿ. ಕಾರಣ ವಿಕ್ರಿಯಾಬಿಃ ಅಪಿ=ಅಶ್ವಮೇಧ ಮುಂತಾದ ವಿಶಿಷ್ಟಕರ್ಮಗಳಿಂದಲೂ, ನರೈಃ=ರಾಜರುಗಳಿಂದ, ದುರಧಿಗಾನ್=ಹೊಂದಲಾಗದ, ದಿವ್ಯಾನ್=ಲೋಕ- ವಿಲಕ್ಷಣವಾದ, ನಿಜಧರ್ಮದೇಹಾನ್=ಗೃಹಸ್ಥಾಶ್ರಮಕ್ಕೆ ಉಚಿತವಾದ ದೇಹಗಳಿಗೆ ಕಾರಣವಾದ ವಿಭವಾನ್=ವಿವಿಧ ವಿಷಯಗಳನ್ನು ಭುಂಕ್ಷ್ವ=ಅನುಭವಿಸು. ||೮||

ಈ ರೀತಿ ಹೇಳಿದಾಗ ದೇವಹೂತಿಯ ಮನಸಿನಲ್ಲೇನಾಯಿತು ? ಎಂದು ಹೇಳುವರು

**ಮೈತ್ರೇಯ ಉವಾಚ**

**ಏವಂ ಬ್ರುವಾಣಮಬಲಾಽಖಿಲಯೋಗಮಾಯಾ-**
**ವಿದ್ಯಾವಿಚಕ್ಷಣಮವೇತ್ಯ ಗತಾಧಿರಾಸೀತ್ ।**
**ಸಪ್ರಶ್ರಯಪ್ರಣಯವಿಹ್ವಲಯಾ ಗಿರೈಷಾ**
**ವ್ರೀಡಾವಲೋಕವಿಲಸದ್ಧಸಿತಾನನಾಽಽಹ ||೯||**

ಏವಂ=ಈರೀತಿ, ಬ್ರುವಾಣಂ=ಹೇಳುವ ಕರ್ದಮರನ್ನು, ಅಬಲಾ= ದೇವಹೂತಿಯು, ಅಖಿಲಯೋಗಮಾಯಾವಿದ್ಯಾವಿಚಕ್ಷಣಂ=ಭಗವದ್ಧ್ಯಾನರೂಪ ಯೋಗಸಾಮರ್ಥ್ಯದಿಂದ ದೊರಕಿದ ಅಣಿಮಾದಿ ಅಷ್ಟಸಿದ್ಧಿಗೆ ಸಾಧನವಾದ ವಿದ್ಯೆಗಳಲ್ಲಿ ನಿಪುಣನೆಂದು, ಅವೇತ್ಯ=ತಿಳಿದು, ಗತಾಧಿಃ ಆಸೀತ್=ನಿಶ್ಚಿಂತಳಾದಳು. ಸಪ್ರಶ್ರಯ=ವಿನಯ, ಪ್ರಣಯ, ಪ್ರೇಮಗಳಿಂದ, ವಿಹ್ವಲಯಾ=ಗದ್ಗದವಾದ, ಗಿರಾ=ಮಾತುಗಳಿಂದ, ವ್ರಿಡಾ=ನಾಚಿಕೆಯಿಂದ ಸಹಿತವಾದ, ಅವಲೋಕ= ನೋಟದಿಂದ ವಿಲಸತ್=ಶೋಭಿಸುವ, ಹಸಿತ=ಮುಗುಳುನಗೆಯಿಂದ ಕೂಡಿದ, ಆನನಾ=ಮುಖವುಳ್ಳ ಏಷಾ=ದೇವಹೂತಿಯು, ಆಹ=ಹೇಳಿದಳು. ||೯||

**ದೇವಹೂತಿರುವಾಚ**

**ರಾದ್ಧಂ ತವ ದ್ವಿಜವೃಷೈತದಮೋಘಯೋಗ-**
**ಮಾಯಾಧಿಪೇ ತ್ವಯಿ ವಿಭೋ ತದವೈಮಿ ಭರ್ತಃ ।**
**ಯಸ್ತೇಽಭ್ಯಧಾಯಿ ಸಮಯಃ ಸಕೃದಂಗಸಂಗೋ**
**ಭೂಯಾದ್ ಪರೀಯಸಿ ಗುಣಪ್ರಸವಃ ಸತೀನಾಮ್ ||೧೦||**

ಹೇ ದ್ವಿಜವೃಷ=ಬ್ರಾಹ್ಮಣಶ್ರೇಷ್ಠನೇ, ಏತತ್=ನೀನು ಹೇಳಿದುದು ಎಲ್ಲ, ತವ= ನಿನಗೆ, ರಾದ್ಧಂ=ಚೆನ್ನಾಗಿ ಸಿದ್ಧಿಸಿದೆ. ಹೇ ಭರ್ತಃ=ಪತಿಯೇ, ಅಮೋಘಯೋಗ-ಮಾಯಾಧಿಪೇ=ಸಫಲವಾದ ಯೋಗಸಮಾರ್ಥ್ಯವುಳ್ಳವರಿಗೆ ಒಡೆಯನಾದ, ತ್ವಯಿ=ನಿನ್ನಲ್ಲಿ, ತತ್=ಯೋಗಸಾಮರ್ಥ್ಯವನ್ನು, ಅವೈಮಿ=ತಿಳಿದಿರುವೆ. ತೇ= ನಿನ್ನಿಂದ, ಯಃ ಸಮಯಃ ಅಭ್ಯದಾಯಿ=ಯಾವ ಗರ್ಭಾಧಾನಪರ್ಯಂತ ಸಂಸಾರದಲ್ಲಿರುವೆನೆಂದು ನಿಯಮ ಹೇಳಲ್ಪಟ್ಟಿತ್ತೋ, ಸಃ=ಆ, ಸಕೃದಂಗಸಂಗಃ ಭೂಯಾತ್=ಒಂದು ಬಾರಿ ಗರ್ಭಾಧಾನವಾಗುವವರೆಗೆ ಶರೀರಸಂಬಂಧವು ಆಗಲಿ ಸತೀನಾಂ=ಪತಿವ್ರತಾಸ್ತ್ರೀಯರಿಗೆ,ವರೀಯಸಿ=ಗುಣಗಳಿಂದ ಉತ್ತಮನಾದ ಪತಿಯ ಅಂಗಸಗಂವು, ಗುಣಪ್ರಸವಃ=ಪುಣ್ಯಕರವು ಅಥವಾ ಗುಣಾಢ್ಯನಾದ ಪುತ್ರಜನ್ಮಕ್ಕೆ ಕಾರಣವಾದ್ದರಿಂದ ಸಫಲವೇ. ಇದರಿಂದ ಅನ್ಯರಸಂಗ ಪಾಪಕರವೆಂದು ಸೂಚಿತ. ||೧೦||

ಅಂಗಸಂಗಕ್ಕಾಗಿ ಮೊದಲು ಕೆಲವು ಸಿದ್ಧ ಸಹಕಾರಿಯನ್ನು ಸಂಪಾದಿಸು ಎಂದು ಹೇಳುವಳು -

**ತತ್ರೇತಿಕೃತ್ಯಮುಪಶಿಕ್ಷ ಯಥೋಪದೇಶಂ**
**ಯೇನೈಷ ಮೇ ಕರ್ಶಿತೋಽತಿರಿರಂಸಯಾತ್ಮಾ ।**
**ಸಿದ್ಧ್ಯೇತ ತೇ ಕೃತಮನೋಭವಧರ್ಷಿತಾಯಾಃ**
**ಕಾಮಸ್ತದೀಶ ಭವನಂ ಸದೃಶಂ ವಿಚಕ್ಷ್ವ ॥೧೧॥**

ಹೇ ಈಶ=ಪತಿಯೇ, ತತ್ರ=ಅಂಗಸಂಗವಿಷಯದಲ್ಲಿ, ಇತಿಕೃತ್ಯಂ=ಸಾಧನವನ್ನು ಯಥೋಪದೇಶಂ=ಕಾಮಶಾಸ್ತ್ರದಲ್ಲಿ ಹೇಳಿದಂತೆ, ಉಪಶಿಕ್ಷ=ವ್ಯವಸ್ಥೆ ಮಾಡು, ಯೇನ=ಯಾವ ಅಂಭ್ಯಂಗ, ಭೋಜನ, ಪಾನ ಮುಂತಾದ ಸಾಧನದಿಂದ, ಮೇ= ನನ್ನ, ಕರ್ಶಿತಃ=ಸೊರಗಿದ, ಏಷಃ=ಈ, ಆತ್ಮಾ=ದೇಹವು, ಸಿದ್ಧ್ಯೇತ=ರತಿಸಮರ್ಥ-ವಾಗುವುದು. ಅತಿರಿರಂಸಯಾ=ಬಹಳವಾಗಿ ರಮಣಮಾಡುವ ಇಚ್ಛೆಯಿಂದ, ತೇ=ನಿನ್ನಿಂದ ನಿನ್ನದರ್ಶನದಿಂದ ಎಂದರ್ಥ ಕೃತ=ಅಭಿವೃದ್ಧವಾದ, ಮನೋಭವ= ಕಾಮದಿಂದ ಧರ್ಷಿತಾಯಾಃ=ಪೀಡಿತಳಾದ, ಮೇ ಕಾಮಃ=ಮನೋರಥವು, ಸಿದ್ಧ್ಯೇತ=ಪೂರ್ಣವಾಗುವುದೋ ತತ್=ಅಂಥದನ್ನು, ಉಪಶಿಕ್ಷ=ವಿದ್ಯೆಯನ್ನು ಸ್ವೀಕರಿಸು. ಮೊದಲಿಗೆ ಸದೃಶಂ ಭವನಂ ವಿಚಕ್ಷ್ವ=ಸಾರ್ವಭೌಮನ ಮಗಳಾದ ನನಗೆ ಯೋಗ್ಯವಾದ ಮನೆಯನ್ನು ಮಾಡಲು ವಿಚಾರಮಾಡು. ||೧೧||

ವಿಷಯಗಳಿಂದ ಕಿತ್ತಿ ಪರಮಾತ್ಮನಲ್ಲಿಯೇ ಇರಿಸಿದ ಎಲ್ಲ ಇಂದ್ರಿಯಗಳುಳ್ಳ-ವರಾದರೂ ಕರ್ದಮರು 'ಆಶ್ರಿತವತ್ಸಲರು, ಮಹಾತ್ಮರು ಎಂಬುದನ್ನು ತೋರಿಸುತ್ತ

ಹೆಂಡತಿಯ ಮಾತನ್ನು ನಡೆಸಿ ತತ್‌ಕ್ಷಣ ಗೃಹ ನಿರ್ಮಾಣ ಮಾಡಿದನು ಎಂದು ಹೇಳುವರು -

**ಮೈತ್ರೇಯ ಉವಾಚ**

**ಪ್ರಿಯಾಯಾಃ ಪ್ರಿಯಮನ್ವಿಚ್ಛನ್ ಕರ್ದಮೋ ಯೋಗಮಾಸ್ಥಿತಃ ।**
**ವಿಮಾನಂ ಕಾಮಗಂ ಕ್ಷತ್ತಸ್ತರ್ಹ್ಯೇವಾವಿರಚೀಕರತ್ ॥೧೨॥**

ಹೇ ಕ್ಷತ್ತಃ=ವಿದುರನೇ, ಕರ್ದಮಃ=ಋಷಿಯು, ಪ್ರಿಯಾಯಾಃ=ಹೆಂಡತಿಗೆ, ಪ್ರಿಯಂ ಅನ್ವಿಚ್ಛನ್=ಸಂತೋಷಪಡಿಸಲಿಚ್ಛಿಸಿ, ಯೋಗಂ ಆಸ್ಥಿತಃ=ವಿಶೇಷ ಉಪಾಸನೆಯನ್ನು ಮಾಡಿ, ತರ್ಹಿ ಏವ=ಆಗಲೇ, ಕಾಮಗಂ=ಇಚ್ಛಾನುಸಾರ ಸಂಚರಿಸುವ, ವಿಮಾನಂ=ಏಳುಪ್ಪರಿಗೆಯ ಮನೆಯನ್ನು, ಆವಿರಚೀಕರತ್= ಸಿದ್ಧಪಡಿಸಿ ತೋರಿಸಿದನು. ॥೧೨॥

**ಸರ್ವಕಾಮದುಘಂ ದಿವ್ಯಂ ಸರ್ವರತ್ನಸಮನ್ವಿತಂ ।**
**ಸರ್ವರ್ದ್ಧ್ಯುಪಚಯೋದರ್ಕಂ ಮಣಿಸ್ತಂಭೈರುಪಸ್ಕೃತಂ ॥೧೩॥**

ಸರ್ವಕಾಮದುಘಂ=ಎಲ್ಲ ಅಭಿಲಾಷೆಗಳನ್ನಿಡೇರಿಸುವ, ದಿವ್ಯಂ= ಭವ್ಯವಾದ, ರಮಣೀಯವಾದ ಅಮಾನುಷವಾದ ಅದ್ಭುತವಾದ, ಸರ್ವರತ್ನ ಸಮನ್ವಿತಂ=ಎಲ್ಲ ರತ್ನಗಳಿಂದ ಕೂಡಿದ ಸರ್ವರ್ದ್ಧಿ=ಎಲ್ಲ ಸಮೃದ್ಧಿಗಳು ಉಪಚಯ=ಒಂದುಗೂಡಿದ್ದ-ರಿಂದ, ಉದರ್ಕಂ=ಉತ್ಕೃಷ್ಟವಾದ, ಮಣಿಸ್ತಂಭೈಃ ಉಪಸ್ಕೃತಂ=ಮಣಿಗಳಿಂದ ನಿರ್ಮಿತ ಕಂಬಗಳಿಂದ ಅಲಂಕೃತವಾದ ॥೧೩॥

**ದಿವ್ಯೋಪಸ್ಕರಣೋಪೇತಂ ಸರ್ವಕಾಲಸುಖಾವಹಮ್ ।**
**ಪಟ್ಟಿಕಾಭಿರ್ವಿಚಿತ್ರಾಭಿಃ ಪತಾಕಾಭಿರಲಂಕೃತಮ್ ॥೧೪॥**

ದಿವ್ಯೋಪಸ್ಕರಣೋಪೇತಂ=ಅಲೌಕಿವಾದ ಪಾತ್ರೆ ಮುಂತಾದ ಮನೆಗೆ ಬೇಕಾಗುವ ಸಲಕರಣೆಗಳಿಂದ ಕೂಡಿದ, ಸರ್ವಕಾಲಸುಖಾವಹಂ=ಮಳೆಗಾಲ, ಚಳಿಗಾಲ, ಬೇಸಿಗೆ ಕಾಲಗಳಲ್ಲಿಯೂ ಆನಂದವನ್ನೀವ, ಪಟ್ಟಿಕಾಭಿಃ=ರೇಷಿಮೆ ವಸ್ತ್ರದಿಂದ ನಿರ್ಮಿತವಾದ, ವಿಚಿತ್ರಾಭಿಃ=ಅನೇಕರೀತಿಯ, ಪತಾಕಾಭಿಃ=ಪತಾಕೆಗಳಿಂದ, ಅಲಂಕೃತಂ=ಸಿಂಗರಿಸಿದ ॥೧೪॥

**ಸ್ರಗ್ಭಿರ್ವಿಚಿತ್ರಮಾಲಾಭಿರ್ಮಂಜುಸಿಂಜತ್‌ಷಡಂಘ್ರಿಭಿಃ ।**
**ದುಕೂಲಕ್ಷೌಮಕೌಶೇಯೈರ್ನಾನಾವಸ್ತ್ರೈರ್ವಿರಾಜಿತಮ್ ॥೧೫॥**

ವಿಚಿತ್ರಮಾಲಾಭಿಃ=ವಿಚಿತ್ರ ಹೂಗಳುಳ್ಳ, ಸ್ರಗ್ಭಿಃ=ಮಾಲೆಗಳಿಂದ, ಮಂಜು= ಮಧುರವಾಗಿ, ಸಿಂಜತ್=ಧ್ವನಿಮಾಡುವ, ಷಡಂಘ್ರಿಭಿಃ=ಭ್ರಮರಗಳಿಂದ ಕೂಡಿದ, ದೂಕೂಲ=ಸೂಕ್ಷ್ಮವಾದ ನುಣುಪಾದ, ಕ್ಷೌಮ=ನಾರಿನ ಕೌಶೇಯ್ಯೈಃ=ರೇಷ್ಮೆಯ, ಹೀಗೆ ನಾನಾವಸ್ತ್ರೈಃ=ಅನೇಕ ವಸ್ತ್ರಗಳಿಂದ ವಿರಾಜಿತಂ=ಶೋಭಿಸುವ ॥೧೫॥

**ಉಪರ್ಯುಪರಿ ವಿನ್ಯಸ್ತನಿಲಯೇಷು ಪೃಥಕ್ ಪೃಥಕ್ ।**
**ಕ್ಷಪ್ತೈಃ ಕಶಿಪುಭಿಃ ಕಾಂತಂ ಪರ್ಯಂಕವ್ಯಜನಾಸನೈಃ ॥೧೬॥**

ಉಪರಿ ಉಪರಿ=ಒಂದರ ಮೇಲೆ ಒಂದು ವಿನ್ಯಸ್ತ=ರಚಿತವಾದ, ನಿಲಯೇಷು= ಮಹಡಿಗಳಲ್ಲಿ, ಪೃಥಕ್ ಪೃಥಕ್=ಪ್ರತ್ಯೇಕವಾಗಿ, ಕ್ಲೃಪ್ತೈಃ=ಸಿದ್ಧಪಡಿಸಿದ. ಕಶಿಪುಭಿಃ= ಹಾಸಿಗೆಗಳಿಂದ, ಪರ್ಯಂಕ=ಮಂಚಗಳು, ವ್ಯಜನ=ಬೀಸಣಿಕೆಗಳು, ಆಸನೈಃ= ಪೀಠೋಪಕರಣಗಳಿಂದ, ಕಾಂತಂ=ಮನೋಹರವಾದ ॥೧೬॥

**ತತ್ರ ತತ್ರ ವಿನಿಕ್ಷಿಪ್ತನಾನಾಶಿಲ್ಪೋಪಶೋಭಿತಮ್ ।**
**ಮಹಾಮರಕತಸ್ಥಲ್ಯಾ ಜುಷ್ಟಂ ವಿದ್ರುಮವೇದಿಭಿಃ ॥೧೭॥**

ತತ್ರ ತತ್ರ=ಅಲ್ಲಲ್ಲಿ ವಿನಿಕ್ಷಿಪ್ತ=ವಿಶೇಷವಾಗಿ ಇರಿಸಿದ, ನಾನಾ=ಅನೇಕ ವಿಧವಾದ, ಶಿಲ್ಪೋಪಶೋಭಿತಂ=ಶಿಲ್ಪಗಳಿಂದ ಶೋಭಿಸುವ ಮಹಾಮರಕತಸ್ಥಲ್ಯಾ=ಬೆಲೆಬಾಳುವ ಪಚ್ಚೆಯಿಂದ ನಿರ್ಮಿತಭೂಪ್ರದೇಶದಿಂದ, ಜುಷ್ಟಂ=ಕೂಡಿದ, ವಿದ್ರುಮವೇದಿಭಿಃ= ಹವಳದ ಕಟ್ಟೆಗಳುಳ್ಳ ॥೧೭॥

**ದ್ವಾಃಸು ವಿದ್ರುಮದೇಹಲ್ಯಾ ಭಾತಂ ವಜ್ರಕಪಾಟಿಮತ್ ।**
**ಶಿಖರೇಷ್ವಿಂದ್ರನೀಲೇಷು ಹೇಮಕುಂಭೈರಧಿಷ್ಠಿತಂ ॥೧೮॥**

ದ್ವಾಃಸು=ಹೊರಹೋಗುವ ದಾರಿಯಲ್ಲಿ ವಿದ್ರುಮದೇಹಲ್ಯಾ=ಹವಳದ ಚೌಕಟ್ಟುಗಳಿಂದ(ವಾಸ್ಗಾಲ್)ಭಾತಂ=ಹೊಳೆಯುವ, ವಜ್ರಕಪಾಟಿಮತ್=ವಜ್ರದ ಬಾಗಿಲುಗಳುಳ್ಳ, ಇಂದ್ರನೀಲೇಷು ಶಿಖರೇಷು=ಇಂದನೀಲಮಣಿಯ ಶಿಖರಗಳಲ್ಲಿ ಹೇಮಕುಂಭೈಃ ಅಧಿಷ್ಠಿತಂ=ಚಿನ್ನದ ಕಲಶಗಳನ್ನಿರಿಸಿದ ॥೧೮॥

**ಚಕ್ಷುಷ್ಮತ್‌ಪದ್ಮರಾಗಾದ್ಯೈರ್ವಜ್ರಭಿತ್ತಿಷು ನಿರ್ಮಿತೈಃ ।**
**ಜುಷ್ಟಂ ವಿಚಿತ್ರವೈತಾನೈರ್ಮಹಾರ್ಹೈರ್ಹೇಮತೋರಣೈಃ ॥೧೯॥**

ವಜ್ರಭಿತ್ತಿಷು=ವಜ್ರದ ಗೋಡೆಗಳಲ್ಲಿ, ಚಕ್ಷುಷ್ಮತ್=ಹೊಳೆಯುವ, ಪದ್ಮರಾಗಾದ್ಯೈಃ =ಪದ್ಮರಾಗ ಮುಂತಾದ ಮಣಿಗಳಿಂದ, ನಿರ್ಮಿತೈಃ=ಖಚಿತವಾದ ವಿಚಿತ್ರ= ವಿಚಿತ್ರವಾದ ವೈತಾನೈಃ=ಮೇಲ್ಕಾವಣಿಗಳ ಸಮೂಹಗಳಿಂದ, ಮಹಾರ್ಹೈಃ=ಬಹಳ

ಬೆಲೆ ಬಾಳುವ, ಹೇಮತೋರಣೈಃ=ಬಂಗಾರದ ತೋರಣಗಳಿಂದ, ಜುಷ್ಟಂ=ಯುಕ್ತವಾದ ॥೧೯॥

**ಹಂಸಪಾರಾವತವ್ರಾತೈಸ್ತತ್ರ ತತ್ರ ನಿಕೂಜಿತಂ ।**
**ಕೃತ್ರಿಮಾನ್ ಮನ್ಯಮಾನೈಃ ಸ್ವಾನಧಿರುಹ್ಯಾಧಿರುಹ್ಯ ಚ ॥೨೦॥**

**ಕೃತ್ರಿಮಾನ್ ಶೋಭಾರ್ಥಂ ಕೃತಾನ್ ।**

ಕೃತ್ರಿಮಾನ್=ಅಲಂಕಾರಕ್ಕಾಗಿ ಮಾಡಲ್ಪಟ್ಟ ಪಕ್ಷಿಗಳ ಗೊಂಬೆಗಳನ್ನು, ಸ್ವಾನ್ ಮನ್ಯಮಾನೈಃ=ತಮ್ಮ ಸಂಬಂಧಿಗಳಾದವುಗಳೆಂದು ತಿಳಿದ, ಹಂಸಪರಾವತವ್ರಾತೈಃ=ಹಂಸಪಾರಿವಾಳಗಳ ಸಮೂಹದಿಂದ, ಅಧಿರುಹ್ಯ ಅಧಿರುಹ್ಯ=ಮೇಲೆ ಹತ್ತಿ ಹತ್ತಿ, ತತ್ರ ತತ್ರ=ಅಲ್ಲಲ್ಲಿ, ನಿಕೂಜಿತಂ=ಶಬ್ದ ಮಾಡಲ್ಪಡುವ ॥೨೦॥

**ವಿಹಾರಸ್ಥಾನವಿಶ್ರಾಮ (ಶಯನ) ಸಂವೇಶಪ್ರಾಂಗಣಾಜಿರೈಃ ।**
**ಯಥೋಪಜೋಷಂ ರಚಿತೈಃ ವಿಸ್ಮಾಪನಮಿವಾತ್ಮನ ಃ ॥೨೧॥**

ವಿಹಾರಸ್ಥಾನ=ಕ್ರೀಡಾಂಗಣ, ವಿಶ್ರಾಮ=ಮಲಗುವ ಕೋಣೆ, ಸಂವೇಶ=ಉಪ-ಭೋಗಸ್ಥಾನ, ಪ್ರಾಂಗಣ=ಮನೆಯ ಮುಂದಿನ ಅಂಗಳ, ಅಜಿರೈಃ=ಪ್ರಾಕಾರದ ಹೊರಗಿನ ಅಂಗಳಗಳಿಂದ, ಯಥೋಪಜೋಷಂ=ಸುಖವಾಗುವಂತೆ ರಚಿತೈಃ=ನಿರ್ಮಿಸಿದ, ಆತ್ಮನಃ ತನಗೂ, ವಿಸ್ಮಾಪನಮಿವ=ಆಶ್ಚರ್ಯವಾಗುವಂತಿರುವ ಮನೆಯನ್ನು ನಿರ್ಮಿಸಿದನು. ॥೨೧॥

**ಈದೃಗ್ ಗೃಹಂ ತತ್ ಪಶ್ಯಂತೀಂ ನಾತಿಪ್ರೀತೇನ ಚೇತಸಾ ।**
**ಸರ್ವಭೂತಾಶಯಾಭಿಜ್ಞಃ ಪ್ರಾವೋಚತ್ ಕರ್ದಮಃ ಸ್ವಯಮ್ ॥೨೨॥**

ಈದೃಕ್=ಈ ವಿಧವಾದ, ತತ್ ಗೃಹಂ=ಆ ಮನೆಯನ್ನು, ನಾತಿಪ್ರೀತೇನ ಚೇತಸಾ=ಕೊಳೆಯಾದ ದೇಹವಿರುವುದರಿಂದ ದಾಸಿಯರಿಲ್ಲದಿರುವುದರಿಂದಲೂ ಬಹಳ ಸಂತೋಷವಿಲ್ಲದೇ, ಪಶ್ಯಂತೀಂ=ನೋಡುತ್ತಿರುವ ದೇವಹೂತಿಯನ್ನು ಕುರಿತು ಸರ್ವಭೂತಾಶಯಾಭಿಜ್ಞಃ=ಎಲ್ಲ ಜನರ ಮನದ ಅಭಿಪ್ರಾಯವನ್ನರಿತ, ಕರ್ದಮಃ=ಋಷಿಯು, ಸ್ವಯಂ ಪ್ರಾವೋಚತ್=ತಾನೇ ಹೇಳಿದನು. ॥೨೨॥

**ನಿಮಜ್ಜಾಸ್ಮಿನ್ ಹ್ರದೇ ಭೀರು ವಿಮಾನಮಿದಮಾರುಹ ।**
**ಇದಂ ಶುಕ್ಲಕೃತಂ ತೀರ್ಥಮಾಶಿಷಾಮಾಪ್ತಯೇ ನೃಣಾಮ್ ॥೨೩॥**

ನೃಣಾಂ=ಜನರಿಗೆ, ಆಶಿಷಾಂ ಆಪ್ತಯೇ=ಅಭೀಷ್ಟಗಳು ದೊರೆಯುವುದ-ಕ್ಕಾಗಿಯೇ, ಶುಕ್ಲಕೃತಂ ಇದಂ ತೀರ್ಥಂ=ಭಗವಂತನಿಂದ ನಿರ್ಮಿತವಾದುದು ಈ ತೀರ್ಥ. ಹೇ ಭೀರು=ಭಯಸ್ವಭಾವದವಳೇ ಅಸ್ಮಿನ್ ಹ್ರದೇ=ಈ ಬಿಂದುಸರೋವರ-ದಲ್ಲಿ ನಿಮಜ್ಜ=ಸ್ನಾನಮಾಡು, ಇದಂ ವಿಮಾನಂ ಆರುಹ=ಈ ವಿಮಾನವನ್ನು ಹತ್ತು. 'ನಿಮಜ್ಯ' ಎಂಬ ಪಾಠದಲ್ಲಿ ಸ್ನಾನ ಮಾಡಿ ಎಂದರ್ಥ. ॥೨೩॥

**ಸಾ ತದ್ ಭರ್ತುಃ ಸಮಾದಾಯ ವಚಃ ಕುವಲಯೇಕ್ಷಣಾ ।**
**ಸರಜಂ ಬಿಭ್ರತೀ ವಾಸೋ ವೇಣೀಭೂತಾಂಶ್ಚ ಮೂರ್ಧಜಾನ್ ॥೨೪॥**

ಕುವಲಯೇಕ್ಷಣಾ ಸಾ=ನೈದಿಲೆಯಂತೆ ಕಪ್ಪಾದ ಕಣ್ಣುಳ್ಳ ದೇವಹೂತಿಯು, ಭರ್ತುಃ=ಗಂಡನ, ತತ್ ವಚಃ ಸಮಾದಾಯ=ಆ ವಚನವನ್ನು ಸ್ವೀಕರಿಸಿ, ಸರಜಂ ವಾಸಃ=ಧೂಳು ತುಂಬಿದ ಬಟ್ಟೆ ವೇಣೀಭೂತಾನ್=ಮೂರ್ಧಜಾನ್ ಜಡೆಗಟ್ಟಿದ ಕೂದಲುಗಳನ್ನು, ಬಿಭ್ರತೀ=ಧರಿಸಿದವಳು. ॥೨೪॥

**ಅಂಗಂ ಚ ಮಲಪಂಕೇನ ಸಂಛನ್ನಂ ಶಬಲಸ್ತನಮ್ ।**
**ಆವಿವೇಶ ಸರಸ್ವತ್ಯಾಃ ಸರಃ ಶಿವಜಲಾಶಯವ್ ॥೨೫॥**

ಅಂಗಂ ಚ=ದೇಹವನ್ನೂ ಸಹ ಮಲಪಂಕೇನ ಸಂಛನ್ನಂ=ಅಭ್ಯಂಗಾದಿಗಳಿಲ್ಲದಿರು-ವುದರಿಂದ ಬೆಳೆದ ದೇಹದ ಕೊಳೆಯೆಂಬ ಕೆಸರಿನಿಂದ ಮುಚ್ಚಲ್ಪಟ್ಟ ತನ್ನ ಮೈಬಣ್ಣ-ವುಳ್ಳದ್ದನ್ನು ಆದ್ದರಿಂದಲೇ ಶಬಲಸ್ತನಂ=ವಿವರ್ಣವಾದ ಕಪ್ಪು ಬಿಳಿಮಿಶ್ರ ಕುಚಗಳನ್ನು, ಬಿಭ್ರತೀ=ಧರಿಸಿದವಳಾಗಿ, ಶಿವಜಲಾಶಯಂ=ಶುಭನೀರಿಗೆ ಆಶ್ರಯ-ವಾದ, ಸರಸ್ವತ್ಯಾಃ ಸರಃ ಆವಿವೇಶ=ಸರಸ್ವತೀ ಮಧ್ಯದಲ್ಲಿರುವ ಸರೋವರವನ್ನು ಪ್ರವೇಶಿಸಿದಳು. ॥೨೫॥

**ಸಾಽಂತಃಸರಸಿ ವೇಶ್ಮಸ್ಥಾಃ ಶತಾನಿದಶ ಕನ್ಯಕಾಃ ।**
**ಸರ್ವಾಃ ಕೈಶೋರವಯಸೋ ದದರ್ಶೋತ್ಪಲಗಂಧಯಃ ॥೨೬॥**

ಸಾ=ದೇವಹೂತಿಯು,ಸರಸಿ ಅಂತಃ=ಸರೋವರದಲ್ಲಿ ನಿಮಗ್ನಾ ಸತೀ=ಮುಳು-ಗಿದವಳಾಗಿ ವೇಶ್ಮಸ್ಥಾಃ=ಮನೆಯಲ್ಲಿರುವ ಸರ್ವಾಃ=ಎಲ್ಲ ಕೈಶೋರವಯಸಃ= ಹದಿನಾರುವರ್ಷವಯಸ್ಸಿನ, ಉತ್ಪಲಗಂಧಯಃ=ಕಮಲಗಂಧಿಯರಾದ, ದಶ ಶತಾನಿ=ಒಂದು ಸಾವಿರ ಕನ್ಯಕಾಃ ದದರ್ಶ=ಕನ್ಯೆಯರನ್ನು ಕಂಡಳು ॥೨೬॥

**ತಾಂ ದೃಷ್ಟ್ವಾ ಸಹಸೋತ್ಥಾಯ ಪ್ರೋಚುಃ ಪ್ರಾಂಜಲಯಃ ಸ್ತ್ರಿಯಃ ।**
**ವಯಂ ಕರ್ಮಕರೀಸ್ತುಭ್ಯಂ ಶಾಧಿ ನಃ ಕರವಾಮ ಕಿಮ್ ॥೨೭॥**

ತಾಂ ದೃಷ್ಟ್ವಾ=ದೇವಹೂತಿಯನ್ನು ನೋಡಿ, ಸಹಸಾ ಉತ್ಥಾಯ=ತಟ್ಟನೆ ಎದ್ದು ಪ್ರಾಂಜಲಯಃ ಸತ್ಯಃ=ಕೈ ಜೋಡಿಸಿ, ಸ್ತ್ರಿಯಃ=ಆ ಕನ್ಯೆಯರು, ವಯಂ=ನಾವು, ಕರ್ಮಕರೀಃ=ನಿನ್ನದಾಸಿಯರು, ತುಭ್ಯಂ=ನಿನಗೆ, ಕಿಂ ಕರವಾಮ=ಏನು ಸೇವೆ ಮಾಡೋಣ ಎಂಬುದನ್ನು, ನಃ=ನಮಗೆ, ಶಾಧಿ=ಆಜ್ಞಾಪಿಸು, ಎಂದು ಪ್ರೋಚುಃ= ಹೇಳಿದರು. ॥೨೭॥

**ಸ್ನಾನೇನ ತಾಂ ಮಹಾರ್ಹೇಣ ಸ್ನಾಪಯಿತ್ವಾ ಮನಸ್ವಿನೀಂ ।**
**ದುಕೂಲೇ ನಿರ್ಮಲೇ ನೂತ್ನೇ ದದುರಸ್ಯೈ ಚ ಮಾನದ ॥೨೮॥**

ಮನಸ್ವಿನೀಂ=ಪ್ರಶಸ್ತಮನಸುಳ್ಳ, ತಾಂ=ದೇವಹೂತಿಯನ್ನು ಮಹಾರ್ಹೇಣ= ರಾಣಿಗೆ ಯೋಗ್ಯವಾದ, ಸ್ನಾನೇನ=ಅಭ್ಯಂಗಾದಿಗಳಿಂದ, ಸ್ನಾಪಯಿತ್ವಾ=ಸ್ನಾನ ಮಾಡಿಸಿ, ಅಸ್ಯೈ=ಇವಳಿಗೆ, ನೂತ್ನೇ=ಹೊಸದಾದ ನಿರ್ಮಲೇ=ಸ್ವಚ್ಛವಾದ, ದುಕೂಲೇ=ರೇಷ್ಮೆವಸ್ತ್ರಗಳನ್ನು ದದುಃ=ಕೊಟ್ಟರು. ॥೨೮॥

**ಭೂಷಣಾನಿ ಪರಾರ್ಧ್ಯಾನಿ ವರೀಯಾಂಸಿ ದ್ಯುಮಂತಿ ಚ।**
**ಅನ್ನಂ ಸರ್ವಗುಣೋಪೇತಂ ಪಾನಂ ಚೈವಾಮೃತಾಸವಮ್ ॥೨೯॥**

ದ್ಯುಮಂತಿ=ಕಾಂತಿಯುಳ್ಳ,ವರೀಯಾಂಸಿ=ಅಪೇಕ್ಷಣೀಯವಾದ, ಪರರ್ಧ್ಯಾನಿ =ಬಹಳ ಬೆಲೆ ಬಾಳುವ, ಭೂಷಣಾನಿ=ಆಭರಣಗಳನ್ನು, ಚ=ಮತ್ತು, ಸರ್ವ-ಗುಣೋಪೇತಂ=ಷಡ್ರಸಗಳಿಂದ ಕೂಡಿದ ಅಥವಾ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯಗಳಿಂದ ಕೂಡಿದ, ಅನ್ನಂ=ಅನ್ನವನ್ನು ಅಮೃತಾಸವಂ=ಮದಕರವಾದ ಆಸವವನ್ನು, ಪಾನಂ=ಪೇಯವನ್ನು ದುದುಃ=ಕೊಟ್ಟರು. ॥೨೯॥

**ಅಥಾದರ್ಶೇ ಸ್ವಮಾತ್ಮಾನಂ ಸ್ರಗ್ವಿಣಂ ವಿರಜಾಂಬರಮ್ ।**
**ವಿರಜಂ ಕೃತಸ್ವಸ್ತ್ಯಯನಂ ಕನ್ಯಾಭಿರ್ಬಹುಮಾನಿತಮ್ ॥೩೦॥**

ಅಥ=ಅನಂತರ, ಸ್ರಗ್ವಿಣಂ=ಮಾಲೆಯನ್ನು ಧರಿಸಿದ, ವಿರಜಾಂಬರಂ= ನಿರ್ಮಲವಾದ ವಸ್ತ್ರವನ್ನು ಧರಿಸಿದ, ವಿರಜಂ=ನಿರ್ಮಲವಾದ, ಕೃತಸ್ವಸ್ತ್ಯಯನಂ= ಆಶೀರ್ವಚನವನ್ನು ಪಡೆದ, ಕನ್ಯಾಭಿಃ ಬಹುಮಾನಿತಂ=ಕನ್ಯೆಯರಿಂದ ಗೌರವಿಸಲ್ಪಟ್ಟ (೩೩ನೇ ಶ್ಲೋಕದಲ್ಲಿ ಲಸನ್‌ಮುಖಂ ಎಂಬಲ್ಲಿವರೆಗಿನ ವಿಶೇಷಣಗಳಿಂದ ಕೂಡಿದ) ಸ್ವಂ ಆತ್ಮಾನಂ=ತನ್ನ ದೇಹವನ್ನು, ಆದರ್ಶೇ=ಕನ್ನಡಿಯಲ್ಲಿ ದದರ್ಶ=ನೋಡಿದಳು.

**ದೃಷ್ಟ್ವಾ (ಸ್ನಾತಂ) ಕೃತಶಿರಃಸ್ನಾನಂ ಸರ್ವಾಭರಣಭೂಷಿತಮ್ ।**
**ನಿಷ್ಕಗ್ರೀವಂ ವಲಯಿನಂ ಕೂಜತ್‌ಕಾಂಚನನೂಪೂರಮ್ ॥೩೧॥**

ಕೃತಶಿರಃಸ್ನಾನಂ=ಅಭ್ಯಂಗಸ್ನಾನವನ್ನು ಮಾಡಿದ(ಎರೆದುಕೊಂಡ) ಸರ್ವಾಭರಣ-ಭೂಷಿತಂ=ಎಲ್ಲ ಆಭರಣಗಳಿಂದ ಅಲಂಕರಿಸಿದ, (ಅದನ್ನೇ ವಿವರಿಸುವ) ನಿಷ್ಕಗ್ರೀವಂ=ಕುತ್ತಿಗೆಯಲ್ಲಿ ಪದಕ, ವಲಯಿನಂ=ಕೈಯಲ್ಲಿ ಕಂಕಣಗಳು, (ಚಿನ್ನದ ಬಳೆಗಳು)ಕೂಜತ್=ಧ್ವನಿ ಮಾಡುವ, ಕಾಂಚನನೂಪುರಂ=ಚಿನ್ನದ ಕಾಲಗೆಜ್ಜೆಗಳುಳ್ಳ.

'ಕುಲಸ್ತ್ರೀ ತು ಶಿರಃಸ್ನಾನಂ ಉತ್ಸವೇ ಸ್ನಾತು ತೈಲತಃ ।
ವಾರೇ ವಾ ಪೈತೃಕೇ ಕರ್ಮಣ್ಯನ್ಯದಾ ಕಂಠಸಂಪ್ಲವಾ'॥

ಎಂದು ಸ್ಮೃತಿವಾಕ್ಯದಲ್ಲಿ ಕುಲಸ್ತ್ರೀಯರು ಮದುವೆ ಮುಂಜವಿ ಮುಂತಾದ ಉತ್ಸವಗಳಲ್ಲಿ ಅಥವಾ ವಾರಕ್ಕೊಂದು ಸಲ ಎಣ್ಣೆ ಹಚ್ಚಿಕೊಂಡಾಗಲಿ ಅಥವಾ ಪಿತೃಕಾರ್ಯಗಳಿಗೆ ಅಡಿಗೆ ಮಾಡುವಾಗ ಮಾತ್ರ ತಲೆಯ ಮೇಲೆ ಸ್ನಾನ ಮಾಡಬೇಕು. ಉಳಿದ ಕಾಲದಲ್ಲಿ ಕಂಠಪರ್ಯಂತ ಸ್ನಾನವೆಂದು ಹೇಳಿರುವುದರಿಂದ ಪ್ರಕೃತದಲ್ಲಿ ಪತಿಸಮಾಗಮರೂಪ ಸಂತೋಷಜನಕ ಹಬ್ಬದ ದಿನವಾದುದರಿಂದ ಇಲ್ಲಿ ಶಿರಸ್ನಾನವೆಂದರೆ ತೈಲಾಭ್ಯಂಗವೆಂದೇ ಅರ್ಥ. ॥೩೧॥

**ಶ್ರೋಣ್ಯೋರಧ್ಯಸ್ತಯಾ ಕಾಂಚ್ಯಾ ಕಾಂಚನ್ಯಾಬಹುರತ್ನಯಾ ।**
**ಹಾರೇಣ ಚ ಮಹಾರ್ಹೇಣ ರುಚಕೇನ ಚ ಭೂಷಿತಮ್ ॥೩೨॥**

ಶ್ರೋಣ್ಯೋಃ=ನಿತಂಬಗಳಲ್ಲಿ, ಅಧ್ಯಸ್ತಯಾ=ಇರಿಸಿದ, ಬಹುರತ್ನಯಾ=ಅನೇಕ ರತ್ನಖಚಿತವಾದ, ಕಾಂಚನ್ಯಾ=ಚಿನ್ನದ, ಕಾಂಚ್ಯಾ=ವಡ್ಯಾಣ (ಡಾಬು)ದಿಂದ, ಚ= ಮತ್ತು,ಹಾರೇಣ=ಚಿನ್ನದ ಸರದಿಂದಲೂ,ಮಹಾರ್ಹೇಣ=ಬೆಲೆಬಾಳುವ, ರುಚಕೇನ ಚ=ಗುಂಡಾದ ಕಂಠಾಭರಣದಿಂದ ಅಥವಾ ಕುಂಕುಮ ಮುಂತಾದ ಮಂಗಲ ದ್ರವಗಳಿಂದಲೂ, ಭೂಷಿತಂ=ಅಲಂಕರಿಸಿದ ॥೩೨॥

**ಸುಭ್ರುವಾ ಸುದತಾ ಶ್ಲಕ್ಷ್ಣಸ್ನಿಗ್ಧಾಪಾಂಗೇನ ಚಕ್ಷುಷಾ ।**
**ಪದ್ಮಕೋಶಸ್ಪೃಧಾ ನೀಲೈರಲಕೈಶ್ಚ ಲಸನ್ಮುಖಮ್ ॥೩೩॥**

ಸುಭ್ರುವಾ=ಧನುರಾಕಾರವಾಗಿರುವ ಒಳ್ಳೆಯ ಹುಬ್ಬುಗಳಿಂದ, ಸುದತಾ= ಒಳ್ಳೆಯ ದಾಳಿಂಬೆಯಂತಿರುವ ಹಲ್ಲಿನಿಂದ, ಶ್ಲಕ್ಷ್ಣ=ಮನೋಹರವಾದ ಸ್ನಿಗ್ಧ=ಸ್ನೇಹ-ಪೂರಿತವಾದ ಅಪಾಂಗೇನ=ಕುಡಿಗಣ್ಣಿನ ನೋಟವುಳ್ಳ, ಪದ್ಮಕೋಶಸ್ಪೃಧಾ=ಕಮಲ-ಕೋಶವನ್ನು ಸ್ಪರ್ಧಿಸುವ, ಚಕ್ಷುಷಾ=ಕಣ್ಣುಗಳಿಂದ, ನೀಲೈಃ ಅಲಕೈಃ ಚ=ಕಪ್ಪಾದ ಕೂದಲುಗಳಿಂದಲೂ, ಲಸನ್ಮುಖಂ=ಶೋಭಿಸುವ ಮುಖವುಳ್ಳ, ಸ್ವಂ ಆತ್ಮಾನಂ= ತನ್ನ ದೇಹವನ್ನು ದದರ್ಶ=ನೋಡಿದಳು. ದೃಷ್ಟ್ವಾ ನೋಡಿ

**ಯದಾ ಸಸ್ಮಾರ ಋಷಭಮೃಷೀಣಾಂ ದಯಿತಂ ಪತಿಮ್ ।**
**ತತ್ರ ಚಾಸ್ತೇ ಸಹಸ್ತ್ರೀಭಿರ್ಯತ್ರಾಸ್ತೇ ಸ ಪ್ರಜಾಪತಿಃ ॥೩೪॥**

ಯದಾ=ಯಾವಾಗ, ಋಷೀಣಾಂ ಋಷಭಂ=ಮುನಿಗಳಿಗೆ ಶ್ರೇಷ್ಠನಾದ, ದಯಿತಂ ಪತಿಂ=ಪ್ರಿಯನಾದ ಪತಿಯನ್ನು, ಸಸ್ಮಾರ=ಪತಿ ಇದ್ದರೆ ಇದೆಲ್ಲ ಶೋಭೆಯೆಂದು ಸ್ಮರಿಸಿದಳೋ, ತದಾ=ಆಗಲೇ, ಸಃ ಪ್ರಜಾಪತಿಃ=ಕರ್ದಮರು ಯತ್ರಾಸ್ತೇ=ಎಲ್ಲಿದ್ದರೋ ತತ್ರ ಚ=ಅಲ್ಲಿಯೇ ಸ್ತ್ರೀಭಿಃ ಸಹ=ಕನ್ಯೆಯರೊಡನೆ ಆಸ್ತೇ= ಇದ್ದಳು. ॥೩೪॥

**ಭರ್ತುಃ ಪುರಸ್ತಾದಾತ್ಮಾನಂ ಸ್ತ್ರೀಸಹಸ್ರವೃತಂ ತದಾ ।**
**ನಿಶಾಮ್ಯ ತದ್ಯೋಗಗತಿಂ ಸಂಶಯಂ ಪ್ರತ್ಯಪದ್ಯತ ॥೩೫॥**

ತದಾ=ಆಗ ಭರ್ತುಃ ಪುರಸ್ತಾತ್=ಪತಿಯ ಮುಂದೆ, ಸ್ತ್ರೀಸಹಸ್ರವೃತಂ=ಸಾವಿರ ಕನ್ಯೆಯರಿಂದ ಸುತ್ತುವರೆದ, ಆತ್ಮಾನಂ=ತನ್ನನ್ನು, ನಿಶಾಮ್ಯ=ನೋಡಿ, ತದ್ಯೋಗಗತಿಂ ನಿಶಾಮ್ಯ=ಕರ್ದಮರ ಯೋಗಸಾಮರ್ಥ್ಯವನ್ನು ಕಂಡು, ಸಂಶಯಂ ಪ್ರತ್ಯಪದ್ಯತ= ಏನಿದು ವಿಚಿತ್ರವೆಂದು ಆಶ್ಚರ್ಯಪಟ್ಟಳು. ॥೩೫॥

**ಸ ತಾಂ ಕೃತಮಲಸ್ನಾನಾಂ ವಿಭ್ರಾಜಂತೀಮಪೂರ್ವವತ್ ।**
**ಆತ್ಮನೋ ಬಿಭ್ರತೀಂ ರೂಪಂ ಸಂವೀತರುಚಿರಸ್ತನಮ್ ॥೩೬॥**

**ವಿದ್ಯಾಧರೀಸಹಸ್ರೇಣ ಸೇವ್ಯಮಾನಾಂ ಸುವಾಸಸಮ್ ।**
**ಜಾತಭಾವೋ ವಿಮಾನಂ ತದಾರೋಹಯದಮಿತ್ರಹನ್ ॥೩೭॥**

ಹೇ ಅಮಿತ್ರಹನ್=ಶತ್ರುಸಂಹಾರಕನಾದ ವಿದುರನೇ, ಸಃ=ಕರ್ದಮರು, ಕೃತಮಲಸ್ನಾನಾಂ=ಮಲಾಪಕರ್ಷಸ್ನಾನ ಮಾಡಿದ, (ಅಂದರೆ ದೇಹದ ಕೊಳೆ ಹೋಗುವಂತೆ ತೈಲಾಭ್ಯಂಗ ಮಾಡಿದ ಎಂದರ್ಥ). ಅಪೂರ್ವವತ್=ಹಿಂದಿಲ್ಲದ, ವಿಭ್ರಾಜಂತೀಂ=ಪ್ರಕಾಶಮಾನವಾದ ಆತ್ಮನಃ ರೂಪಂ=ದೇಹದ ಆಕಾರವನ್ನು, ಬಿಭ್ರತೀಂ=ಧರಿಸಿದ, ಸಂವೀತರುಚಿರಸ್ತನಂ=ಕುಪ್ಪಸದಿಂದ ಆಚ್ಛಾದಿತವಾದ ಕುಚಗಳುಳ್ಳ ವಿದ್ಯಾಧರೀಸಹಸ್ರೇಣ ಸೇವ್ಯಮಾನಾಂ=ಸಾವಿರ ವಿದ್ಯಾಧರಕನ್ಯೆಯರಿಂದ ಸೇವಿತಳಾದ, ಸುವಾಸಸಂ=ಒಳ್ಳೆಯ ವಸ್ತ್ರಗಳನ್ನು ಧರಿಸಿದ, ತಾಂ=ದೇವಹೂತಿಯನ್ನು ಜಾತಭಾವಃ =ಸ್ನೇಹ ಉಂಟಾಗಿ (ರತಿಯ ಇಚ್ಛೆ ಉಂಟಾಗಿ) ತದ್ ವಿಮಾನಂ ಆರೋಹಯತ್= ಆ ವಿಮಾನವನ್ನೇರಿಸಿದನು. ॥೩೬-೩೭॥

**ತಸ್ಮಿನ್ನಲುಪ್ತಮಹಿಮಾ ಪ್ರಿಯಯಾಽನುಷಕ್ತೋ
ವಿದ್ಯಾಧರೀಭಿರುಪಚೀರ್ಣವಪುರ್ವಿಮಾನೇ ।
ಬಭ್ರಾಜ ಉತ್ಕಚಕ ಉದ್ಗುಣಪಾನವೀಚ್ಯ-
ಸ್ತಾರಾಭಿರಾವೃತ ಇವೋಡುಪತಿರ್ನಭಸ್ಥಃ ॥೩೮॥**

ತಾರಾಭಿಃ=ನಕ್ಷತ್ರಗಳಿಂದ, ಆವೃತಃ=ಸುತ್ತುವರಿದ, ನಭಸ್ಥಃ=ಗಗನದಲ್ಲಿರುವ, ಉಡುಪತಿಃ ಇವ=ಚಂದ್ರನಂತೆ, ತಸ್ಮಿನ್ ವಿಮಾನೇ=ಆ ವಿಮಾನದಲ್ಲಿ ಅಲುಪ್ತ-ಮಹಿಮಾ=ಅಪರಿಚ್ಛಿನ್ನ ಮಾಹಾತ್ಮ್ಯವುಳ್ಳವನಾಗಿ, (ಸರ್ವೇಂದ್ರಿಯಾಣಾಂ ಜರಯಂತಿ ತೇಜಃ ಎಂದು ಶ್ರುತಿ ಇರುವುದರಿಂದ ಇತರರಿಗೆ ಗ್ರಾಮ್ಯಕರ್ಮಾ- ಸಕ್ತರಾದಾಗ ಸಾಮರ್ಥ್ಯಲೋಪವಾಗುವುದುಂಟು ಹಾಗೆ ಇವರಿಗಾಗಲಿಲ್ಲವೆಂದು ಭಾವ) ಪ್ರಿಯಯಾ ಅನುಷಕ್ತಃ=ಹೆಂಡತಿಯಿಂದ ಒಟ್ಟುಗೂಡಿದವನಾಗಿ, (ಆಲಿಂಗನೇ-ಚುಂಬನೇವಾಽಪ್ಯನುಷಂಗೋಽನುವರ್ತತೇ) ವಿದ್ಯಾಧರೀಭಿಃ=ವಿದ್ಯಾಧರಕನ್ಯೆಯ-ರಿಂದ, ಉಪಚೀರ್ಣವಪುಃ=ಅಂಗಮರ್ದನಾದಿಗಳಿಂದ ಸೇವಿಸಲ್ಪಟ್ಟ ದೇಹವುಳ್ಳ-ವನಾಗಿ, (ಕೈಕಾಲುಗಳನ್ನು ಒತ್ತುವುದು) ಉತ್ಕಚಕಃ=ದೋಷರಹಿತನಾದ ಉತ್ಕೃಷ್ಟ ಗುಂಗುರುಗೂದಲುಳ್ಳ, ('ಕಚಃ ಕಲಂಕೇ ದೋಷೇ ಚ ಕುಂತಲೇ ಭ್ರಮರೇತಥಾ' ಎಂದು ಅಭಿಧಾನವಿದೆ.) ಉದ್ಗುಣಪಾನವೀಚ್ಯಃ=ಉತ್ಕೃಷ್ಟವಾದ ಮಾಧುರ್ಯಾದಿ ಗುಣವುಳ್ಳ ಪೇಯವಾದ ಅಮೃತದ ತರಂಗಗಳುಳ್ಳ ಅಂದರೆ ಯಥೇಚ್ಛವಾಗಿ ಅಮೃತಪಾನ ಮಾಡುವವನಾಗಿ ಎಂದರ್ಥ ಬಭ್ರಾಜ= ಶೋಭಿಸಿದನು. ಅಥವಾ ಉತ್ಕೃಷ್ಟ ಗುಣವುಳ್ಳ ಪಾನಮಾಡಲು ಯೋಗ್ಯವಾದ ಅಧರಾಮೃತತರಂಗಗಳ ಪಾನವುಳ್ಳ ಎಂದರ್ಥ.

''ವಿದ್ಯಾಧರೀಭಿಃ ಉಪಚೀರ್ಣಃ'' ಎಂದದ್ದರಿಂದ ಸುರತಾಲಯದಲ್ಲಿ ಸ್ತ್ರೀಯರೇ ಪರಿಚಾರಿಕೆಯರು ಎಂದು ಸೂಚಿತವಾಗುವುದು.

ಸುರತಕ್ಕೆ ವನಕ್ರೀಡೆ ಜಲಕ್ರೀಡೆಗಳು ಅಂಗವಾದುದರಿಂದ ಅವುಗಳನ್ನೂ ಮಾಡಿದನೆಂದು ಸೂಚಿತವಾಗುವುದು. ಕಾಮಗಂ ಎಂದು ಹೇಳಿದ್ದನ್ನು ವಿವರಿಸುವರು ಎರಡು ಶ್ಲೋಕಗಳಿಂದ –

**ತೇನಾಷ್ಟಲೋಕಪವಿಹಾರಕುಲಾಚಲೇಂದ್ರ-
ದ್ರೋಣೀಷ್ವನಂಗಸಖಮಾರುತಸೌಭಗಾಸು ।
ಸಿದ್ಧೈರ್ನುತೋ ದ್ಯುಧುನಿಪಾತಶಿವಸ್ವನಾಸು
ರೇಮೇ ಚಿರಂ ಧನದವಲ್ಲಲನಾವರೂಥೀ ॥೩೯॥**

ತೇನ=ಆ ವಿಮಾನದಿಂದ, ದ್ಯುಧುನಿಪಾತಶಿವಶ್ವನಾಸು=ಆಕಾಶ ಗಂಗೆಯು ಬೀಳುವುದರಿಂದ ಕಿವಿಗಿಂಪಾದ ಶಬ್ದವುಳ್ಳ, ಅನಂಗಸಖ ಮಾರುತಸೌಭಗಾಸು= ಕಾಮನ ಗೆಳೆಯನಾದ ತಂಪಾದ ಸುಗಂಧಯುತವಾದ ಮಂದಮಾರುತದಿಂದ, ಸೌಭಗ=ಖೇದಪರಿಹಾರದಿಂದುಂಟಾದ ಸುಖವುಳ್ಳ, ಅಷ್ಟಲೋಕಪವಿಹಾರಕುಲಾ- ಚಲೇಂದ್ರದ್ರೋಣೀಷು=ಎಂಟು ಲೋಕಪಾಲಕರಾದ ಇಂದ್ರ ಮುಂತಾದವರ ಕ್ರೀಡಾ ಸ್ಥಾನಗಳಾದ ಏಳು ಕುಲಪರ್ವತಗಳು ಮತ್ತು ಅವುಗಲ್ಲಿ ಶ್ರೇಷ್ಠವಾದ ಮೇರು ಪರ್ವತಗಳ ದ್ರೋಣೀಷು=ಮಧ್ಯಪ್ರದೇಶದಲ್ಲಿ, ಸಿದ್ಧೈಃ=ಸಿದ್ಧರಿಂದ, ನುತಃ=ಸ್ತುತಿಸಲ್ಪಟ್ಟವನಾಗಿ, ಲಲನಾವರೂಥೀ=ಸ್ತ್ರೀಸಮೂಹದಿಂದ ಕೂಡಿದವನಾಗಿ, ಧನದವತ್=ಕುಬೇರನಂತೆ, ಚಿರಂ ರೇಮೇ=ಬಹುಕಾಲ ಕ್ರೀಡಿಸಿದನು. ॥೩೯॥

**ವೈಸ್ರಂಭಕೇ ಸುರವನೇ ನಂದನೇ ಪುಷ್ಪಭದ್ರಕೇ ।**
**ಮಾನಸೇ ಚೈತ್ರರಥ್ಯೇಚ ಸ ರೇಮೇ ರಾಮಯಾ ಸಹ ॥೪೦॥**

ವೈಸ್ರಂಭಕೇ=ದೇವತೆಗಳ ಉದ್ಯಾನಗಳಲ್ಲಿ ಸುರವನೇ=ನಂದನೇ=ದೇವತೆಗಳ ವನವಾದ ನಂದನವನದಲ್ಲಿ, ಪುಷ್ಪಭದ್ರಕೇ=ಪುಷ್ಪಭದ್ರಕ ವನದಲ್ಲಿ, ಮಾನಸೇ= ಮಾನಸಸರೋವರದಲ್ಲಿ, ಚೈತ್ರರಥ್ಯೇ=ಕುಬೇರನ ಉದ್ಯಾನವನದಲ್ಲಿ, ರಾಮಯಾ ಸಹ=ಪತ್ನಿಯೊಡನೆ, ಸಃ=ಕರ್ದಮನು ರೇಮೇ=ಕ್ರೀಡಿಸಿದನು. ॥೪೦॥

**ಭ್ರಾಜಿಷ್ಣುನಾ ವಿಮಾನೇನ ಕಾಮಗೇನ ಮಹೀಯಸಾ ।**
**ವೈಮಾನಿಕಾನತ್ಯಶೇತ ಚರನ್ ಲೋಕಾನ್ ಯಥಾಽನಿಲಃ ॥೪೧॥**

ಮಹೀಯಸಾ=ಅತ್ಯಂತದೊಡ್ಡದಾದ, ಭ್ರಾಜಿಷ್ಣುನಾ=ಪ್ರಕಾಶಮಾನವಾದ, ಕಾಮಗೇನ=ಇಚ್ಛಾನುಸಾರಹೋಗುವ, ವಿಮಾನೇನ=ವಿಮಾನದಿಂದ, ಅನಿಲಃ ಯಥಾ=ವಾಯುವಿನಂತೆ, ಲೋಕಾನ್ ಚರನ್=ಲೋಕಗಳನ್ನು ಸಂಚರಿಸುತ್ತ, ವೈಮಾನಿಕಾನ್=ವಿಮಾನದಲ್ಲಿ ಸಂಚರಿಸುವವರನ್ನು, ಅತ್ಯಶೇತ=ಅತಿಕ್ರಮಿಸಿ ನಿಂತನು. ಇತರರ ವಿಮಾನವು ನಿರ್ದಿಷ್ಟವಾದ ತಮ್ಮ ತಮ್ಮ ಸ್ಥಳದಲ್ಲಿ ಮಾತ್ರ ಸಂಚರಿಸುವುದು ಇವನದು ಹಾಗಲ್ಲ ಎಲ್ಲಿ ಬೇಕಾದರೂ ಹೋಗುವುದು ಕಾರಣ ಸರ್ವಾತಿಶಯಿ. ॥೪೧॥

**ಕಿಂ ದುರಾಪಾದನಂ ತೇಷಾಂ ಪುಂಸಾಮುದ್ದಾಮಚೇತಸಾಮ್ ।**
**ಯೈರಾಶ್ರಿತಸ್ತೀರ್ಥಪದಶ್ಚರಣೋ ವ್ಯಸನಾತ್ಯಯಃ ॥೪೨॥**

ಯೈಃ=ಯಾರಿಂದ ವ್ಯಸನಾತ್ಯಯಃ=ದುಃಖನಾಶಕವಾದ, ತೀರ್ಥಪದಃ= ಗಂಗಾಜನಕಪಾದವುಳ್ಳ ಶ್ರೀಹರಿಯ ಪಾದವು, ಆಶ್ರಿತಃ=ಆಶಯಿಸಲ್ಪಟ್ಟದೆಯೋ,

ತೇಷಾಂ=ಅಂಥ, ಉದ್ದಾಮಚೇತಸಾಂ=ಅಗಾಧಬುದ್ಧಿಯುಳ್ಳ, ಪುಂಸಾಂ=ಜನರಿಗೆ, ಕಿಂ ದುರಾಪಾದನಂ=ಯಾವುದು ಸಂಪಾದಿಸಲಸಾಧ್ಯವಾದುದು. ಎಲ್ಲವೂ ಸಾಧ್ಯವೇ ॥೪೨॥

**ಪ್ರೇಕ್ಷಯಿತ್ವಾ ಭುವೋ ಗೋಲಂ ಪತ್ನ್ಯೈ ಯಾವಾನ್ ಸ್ವಸಂಸ್ಥಯಾ ।**
**ಬಹ್ವಾಶ್ಚರ್ಯಂ ಮಹಾಯೋಗೀ ಸ್ವಾಶ್ರಮಾಯ ನ್ಯವರ್ತತ ॥೪೩॥**

ಮಹಾಯೋಗೀ=ಯೋಗಸಿದ್ಧಿಯನ್ನು ಪಡೆದ ಕರ್ದಮನು ಬಹ್ವಾಶ್ಚರ್ಯಂ= ಬಹಳ ಅದ್ಭುತವಾದ ಭುವಃ ಗೋಲಂ=ಭೂಮಂಡಲವನ್ನು ಸ್ವಸಂಸ್ಥಯಾ ಯಾವಾನ್ ತಾವಾನ್=ತನ್ನ ಸಮಾಧಿಯಿಂದ ಉಂಟಾದ ಪ್ರದೇಶಯಷ್ಟೋ ಅಷ್ಟನ್ನು ಅಥವಾ ದ್ವೀಪ, ವರ್ಷ, ಮುಂತಾದವುಗಳಿಂದ ಎಷ್ಟೋ ಅಷ್ಟು ಪ್ರದೇಶವನ್ನು ಪತ್ನ್ಯೈ=ಹೆಂಡತಿಗೆ ಪ್ರೇಕ್ಷಯಿತ್ವಾ=ತೋರಿಸಿ ಸ್ವಾಶ್ರಮಾಯ ನ್ಯವರ್ತತ =ತನ್ನ ಆಶ್ರಮಕ್ಕೆ ಹಿಂತಿರುಗಿದನು. ॥೪೩॥

**ವಿಭಜ್ಯ ನವಧಾತ್ಮಾನಂ ಮಾನವೀಂ ಸುರತೋತ್ಸುಕಾಂ ।**
**ರಾಮಾಂ ನಿರಮಯನ್ ರೇಮೇ ವರ್ಷಪೂಗಾನ್ ಮುಹೂರ್ತವತ್॥**

ಆತ್ಮಾನಂ=ತನ್ನನ್ನು, ನವಧಾ ವಿಭಜ್ಯ=ಯೋಗಸಾಮರ್ಥ್ಯದಿಂದ ಒಂಭತ್ತು ವಿಭಾಗಮಾಡಿಕೊಂಡು ಒಂಭತ್ತು ಶರೀರ ತೆಗೆದುಕೊಂಡು, ಸುರತೋತ್ಸುಕಾಂ ಮಾನವೀಂ ರಾಮಾಂ=ರತಿಯಲ್ಲಿ ಉತ್ಸುಕಳಾದ ಮನುಪುತ್ರಿಯಾದ ತನ್ನ ಪತ್ನಿಯನ್ನೂ ಒಂಭತ್ತು ದೇಹವುಳ್ಳವಳನ್ನಾಗಿ ಮಾಡಿ, ನಿರಮಯನ್=ಅಂತ್ಯಂತ ಸಂತೋಷಗೊಳಿಸುತ್ತ ವರ್ಷಪೂಗಾನ್=ಅನೇಕ ವರ್ಷಸಮೂಹಗಳನ್ನು ಮುಹೂರ್ತವತ್=ಒಂದು ಕ್ಷಣದಂತೆ, ರೇಮೇ=ಕ್ರೀಡಿಸಿದನು. ॥೪೪॥

**ತಸ್ಮಿನ್ ವಿಮಾನ ಉತ್ಕೃಷ್ಟಾಂ ಶಯ್ಯಾಂ ರತಿಕರೀಂ ಶ್ರಿತಾ ।**
**ನ ಚಾಬುಧ್ಯತ ತಂ ಕಾಲಂ ಪತ್ಯಾ(ಪೀ) ವೀಚ್ಯೇನ ಸಂಗತಾ ॥೪೫॥**

ತಸ್ಮಿನ್ ವಿಮಾನೇ=ಆ ವಿಮಾನದಲ್ಲಿ, ಉತ್ಕೃಷ್ಟಾಂ=ಶ್ರೇಷ್ಠವಾದ, ರತಿಕರೀಂ= ಮೃದುವಾದುದರಿಂದ ಸುಖದಾಯಕವಾದ ಶಯ್ಯಾಂ=ಹಾಸಿಗೆಯನ್ನು ಶ್ರಿತಾ ಸತೀ =ಆಶ್ರಯಿಸಿ, ಆವೀಚ್ಯೇನ ಪತ್ಯಾಸಂಗತಾ=ಹದಿನಾರು ವರ್ಷದ ಯೌವನಾವಸ್ಥೆ- ಯನ್ನು ಪಡೆದ ಪತಿಯಿಂದ ಕೂಡಿದವಳಾಗಿ, ತಂ ಕಾಲಂ=ಕಳೆದು ಹೋದ ಬಹುಕಾಲವನ್ನು, ನ ಚ ಅಬುಧ್ಯತ=ತಿಳಿಯಲೇ ಇಲ್ಲ.

'ಆವಿಚ್ಯ'ಶಬ್ದಾರ್ಥವನ್ನು ಪ್ರಮಾಣದಿಂದ ಹೇಳುವರು –

**ಪ್ರಾಪ್ತಷೋಡಶವರ್ಷಃ ಸನ್ನಾವೀಚ್ಯ ಇತಿ ಕಥ್ಯತೇ । ಇತ್ಯಭಿಧಾನಂ**

ಹದಿನಾರು ವರ್ಷವನ್ನು ಹೊಂದಿದ ಪುರುಷನು ಆವೀಚ್ಯ ಎಂದು ಕರೆಯಲ್ಪಡುವನು ಎಂದು ಅಭಿದಾನವಿದೆ ॥೪೫॥

**ಏವಂ ಯೋಗಾನುಭಾವೇನ ದಂಪತ್ಯೋರಮಮಾಣಯೋಃ ।**
**ಶತಂ ವ್ಯತೀಯುಃ ಶರದಃ ಕಾಮಲಾಲಸಯೋರ್ಮನಾಕ್ ॥೪೬॥**

ಏವಂ=ಈ ರೀತಿಯಾಗಿ, ಮನಾಕ್=ಮೆಲ್ಲಗೆ, ಕಾಮಲಾಲಸಯೋಃ=ವಿಷಯ–ಭೋಗಾಭಿಲಾಷೆಯುಳ್ಳ ದಂಪತ್ಯೋಃ=ಸತಿಪತಿಗಳು, ಯೋಗಾನುಭಾವೇನ=ಯೋಗಸಾಮರ್ಥ್ಯದಿಂದ ರಮಮಾಣಯೋಃ=ಕ್ರೀಡಿಸುತ್ತಿರಲು ಶತಂ ಶರದಃ ವ್ಯತೀಯುಃ=ನೂರುವರ್ಷಗಳು ಕಳೆದವು. ॥೪೬॥

**ತಸ್ಯಾಮಾಧತ್ತ ರೇತಸ್ತಾಂ ಭಾವಯನ್ನಾತ್ಮನಾತ್ಮವಿತ್ ।**
**ನವಧಾ ವಿಧಾಯ ರೂಪಂ ಸ್ವಂ ಸತ್ಯಸಂಕಲ್ಪವಿದ್ ವಿಭುಃ ॥೪೭॥**

ಆತ್ಮನಾ=ಮನಸ್ಸಿನಿಂದ, ಆತ್ಮವಿತ್=ಪರಮಾತ್ಮಾನುಸಂಧಾನವುಳ್ಳ, ಸತ್ಯಸಂಕಲ್ಪವಿತ್=ಶ್ರೀಹರಿಯ ಸಂಕಲ್ಪವನ್ನರಿತ, ವಿಭುಃ=ಸಮರ್ಥನಾದ ಮುನಿಯು, ಸ್ವಂ ರೂಪಂ ನವಧಾ ವಿಧಾಯ=ತನ್ನ ಸ್ವರೂಪವನ್ನು ಒಂಭತ್ತಾಗಿ ಮಾಡಿ, ತಾಮಪಿ ಅವಳನ್ನೂ, ನವಧಾ ಭಾವಯನ್= ಒಂಭತ್ತಾಗಿ ಮಾಡಿ, ತಸ್ಯಾಂ=ಒಂಭತ್ತಾಗಿ ವಿಭಕ್ತಳಾದ ದೇವಹೂತಿಯಲ್ಲಿ, ರೇತಃ ಆಧತ್ತ=ಗರ್ಭಾಧಾನ ಮಾಡಿದನು. ಶ್ರೀಹರಿಯ ಸಂಕಲ್ಪವನ್ನರಿತು ಹೀಗೆ ಮಾಡಿದನೆಂದು ಭಾವ. ॥೪೭॥

**ತತಸ್ತಾಃ ಸುಷವೇ ಸದ್ಯೋ ದೇವಹೂತಿಃ ಸ್ತ್ರಿಯಃ ಪ್ರಜಾಃ ।**
**ಸರ್ವಾಸ್ತಾಶ್ಚಾರು ಸರ್ವಾಂಗ್ಯೋ ಲೋಹಿತೋತ್ಪಲಗಂಧಯಃ ॥೪೮॥**

ತತಃ=ನಂತರ ಸದ್ಯಃ=ಆಗಲೇ, ದೇವಹೂತಿಃ=ದೇವಹೂತಿಯು, ಸ್ತ್ರಿಯಃ ಪ್ರಜಾಃ=ಹೆಣ್ಣುಮಕ್ಕಳನ್ನು ಸುಷುವೇ=ಹೆತ್ತಳು. ತಾಃ ಸರ್ವಾಃ=ಎಲ್ಲ ಮಕ್ಕಳು, ಚಾರು–ಸರ್ವಾಂಗ್ಯಃ=ಸುಂದರವಾದ ಎಲ್ಲ ಅವಯವಗಳುಳ್ಳವರು, ಲೋಹಿತೋತ್ಪಲ–ಗಂಧಯಃ=ಕೆಂಪುಬಣ್ಣ ಕಮಲಗಂಧವುಳ್ಳವರು ಆಗಿದ್ದರು, ತತಃ=ಪ್ರಸವಾನಂತರ ದಂಪತಿಗಳು ಏಕರೂಪತಾಳಿದರು ಎಂದು ತಿಳಿಯಬೇಕು. ॥೪೮॥

**ಪತಿಂ ಸಾ ಪ್ರವ್ರಜಿಷ್ಯಂತಂ ತದಾಲಕ್ಷ್ಯೋಶತೀ ಸತೀ ।**
**ಸ್ಮಯಮಾನಾ ವಿಕ್ಲವೇನ ಹೃದಯೇನ ವಿದೂಯತಾ ॥೪೯॥**

ಪತಿಂ=ಗಂಡನಾದ, ತಂ=ಕರ್ದಮರನ್ನು, ಪ್ರವ್ರಜಿಷ್ಯಂತಂ=ಸನ್ಯಾಸ ಸ್ವೀಕರಿಸಲಿಚ್ಛಿಸುವುದನ್ನು, ಆಲಕ್ಷ್ಯ=ವಿರಾಗದಿಂದ ಗಮನಿಸಿ, ಉಶತೀ= ಪುತ್ರೇಚ್ಛೆ ಉಳ್ಳ, ಸತೀ= ಪತಿವ್ರತೆಯಾದ, ಸಾ=ದೇವಹೂತಿಯು, ಸ್ಮಯಮಾನಾ=ಮುಗುಳುನಗುತ್ತ (ವಿಷಯಾಭಿಲಾಷೆಯಿದ್ದವಳಂತೆ) ವಿಕ್ಲವೇನ=ಮುಂದಾಗುವ ಪತಿಯ ವಿರಹದಿಂದುಂಟಾದ ವ್ಯಾಕುಲದಿಂದ, ವಿಧೂಯತಾ=ಸಂತಾಪಗೊಂಡ, ಹೃದಯೇನ =ಮನಸ್ಸಿನಿಂದ ॥೪೯॥

**ಲಿಖಂತ್ಯಧೋಮುಖೀ ಭೂಮಿಂ ಪದಾ ನಖಮಣಿಶ್ರಿಯಾ ।**
**ಉವಾಚ ಲಲಿತಾಂ ವಾಚಂ ನಿರುಧ್ಯಾಶ್ರುಕಲಾಂ ಶನೈಃ ॥೫೦॥**

ನಖಮಣಿಶ್ರಿಯಾ=ಉಗುರುಗಳೆಂಬ ಮಣಿಗಳ ಕಾಂತಿಯುಳ್ಳ ಪದಾ=ಕಾಲಿನ ಹೆಬ್ಬೆರಳಿನಿಂದ, ಭೂಮಿಂ=ನೆಲವನ್ನು, ಲಿಖಂತೀ=ಕೆದರುತ್ತ ಅಧೋಮುಖೀ=ಕೆಳಗೆ ಮುಖಮಾಡಿ, ಶನೈಃ=ಮೆಲ್ಲನೆ ಅಶ್ರುಕಲಾಂ=ಕಣ್ಣೀರನ್ನು ನಿರುಧ್ಯ=ತಡೆದು, ಲಲಿತಾಂ ವಾಚಂ ಉವಾಚ=ಮಂಜುಳವಾದ ಮಾತನಾಡಿದಳು. ॥೫೦॥

**ಸರ್ವಂ ತದ್ ಭಗವಾನ್ ಮಹ್ಯಮುಪೋವಾಹ ಪ್ರತಿಶ್ರುತಂ ।**
**ಅಥಾಪಿ ಮೇ ಪ್ರಪನ್ನಾಯಾ ಅಭಯಂ ದಾತುಮರ್ಹಸಿ ॥೫೧॥**

ಭಗವಾನ್=ಪೂಜ್ಯರಾದ ತಾವು, ಮಹ್ಯಂ=ನನಗೆ, ಪ್ರತಿಶ್ರುತಂ ಸರ್ವಂ= ಹೇಳಿದ್ದನ್ನೆಲ್ಲ, ಉಪೋವಾಹ=ನೆರವೇರಿಸಿರುವಿರಿ. ಅಥಾಪಿ=ಆದರೂ, ಪ್ರಪನ್ನಾಯಾಃ ಮೇ=ಶರಣಾಗತಳಾದ ನನಗೆ, ಅಭಯಂ ದಾತುಂ ಅರ್ಹಸಿ=ಐಹಿಕ ಆಮುಷ್ಮಿಕ ಅಭಯಗಳನ್ನು ನೀಡಲು ಸಮರ್ಥನಾಗಿರುವಿ, ಯೋಗ್ಯನಾಗಿರುವಿ. ॥೫೧॥

**ಬ್ರಹ್ಮನ್ ದುಹಿತೃಭಿಸ್ತುಭ್ಯಂ ವಿಮೃಶ್ಯಾಃ ಪತಯಃ ಸಮಾಃ ।**
**ಕಶ್ಚಿತ್‌ಸ್ಯಾನ್ಮೇ ವಿಶೋಕಾಯ ತ್ವಯಿ ಪ್ರವ್ರಜಿತೇ ವನಮ್ ॥೫೨॥**

ಹೇ ಬ್ರಹ್ಮನ್=ಋಷಿಯೇ, ತುಭ್ಯಂ=ನಿನ್ನ, ದುಹಿತೃಭಿಃ ಸಮಾಃ=ಕನ್ಯೆಯರಿಗೆ ಯೋಗ್ಯರಾದ, ಪತಯಃ=ಗಂಡದಿರು, ವಿಮೃಶ್ಯಾಃ=ವಿಚಾರಮಾಡಬೇಕು (ಹುಡುಕಬೇಕು), ತ್ವಯಿ=ನೀನು, ವನಂ ಪ್ರವ್ರಜಿತೇ=ಸನ್ಯಾಸಿಯಾಗಿ ವನಕ್ಕೆ ತೆರಳಿದಾಗ, ಮೇ=ನನಗೆ, ವಿಶೋಕಾಯ=ದುಃಖಶಮನಮಾಡಲು (ಮೋಕ್ಷ-ಮಾರ್ಗಕ್ಕೆ) ಕಶ್ಚಿತ್ ಸ್ಯಾತ್=ಒಬ್ಬ ಮಗ ಬೇಕು.

ಅಪಿಸ್ಯಾತ್, ಸಚ್ಚಿತ್‌ಸ್ಯಾತ್, ಕಶ್ಚಿತ್ ಸ್ಯಾತ್, ಹೀಗೆ ಮೂರು ಪಾಠಗಳು. ಅಪಿ ಎಂಬ ಪಾಠದಲ್ಲಿ ದುಃಖನಿವಾರಿಸಲು ಪುತ್ರಃ ಸ್ಯಾದಪಿ ಮಗನಾಗುವನೇನು ಎಂದರ್ಥ, ಸಚ್ಚಿತ್‌ಸ್ಯಾತ್ ಎಂಬ ಪಾಠದಲ್ಲಿ ನಿರ್ದುಷ್ಟ ಜ್ಞಾನಾನಂದಾತ್ಮಕ ಪರಮಾತ್ಮನು ಮಗನಾಗಬೇಕು. ಕಶಬ್ದ ಸುಖರೂಪಬ್ರಹ್ಮವಾಚಕವಾದ್ದರಿಂದ ಕಶ್ಚಿತ್ ಎಂಬ ಪಾಠದಲ್ಲೂ ಈ ಅರ್ಥ ಮಾಡಬಹುದು. ॥೫೨॥

ಪುತ್ರನ ವ್ಯಾಜದಿಂದ ವಿಷಯಾಭಿಲಾಷೆ ಉಳ್ಳವಳು ಎಂಬ ಶಂಕೆ ಪರಿಹರಿಸುವಳು.

**ಏತಾವತಾಽಲಂ ಕಾಲೇನ ವ್ಯತಿಕ್ರಾಂತೇನ ಮೇ ಪ್ರಭೋ ।**
**ಇಂದ್ರಿಯಾರ್ಥಪ್ರಸಂಗೇನ ಪರಿತ್ಯಕ್ತಪರಾತ್ಮನಃ ॥೫೩॥**

ಪ್ರಭೋ=ಸ್ವಾಮಿಯೇ, ಇಂದ್ರಿಯಾರ್ಥಪ್ರಸಂಗೇನ=ಇಂದ್ರಿಯವಿಷಯಗಳಾದ ಶಬ್ದಾದಿಗಳಲ್ಲಿ ಗುಣಬುದ್ಧಿಯಿಂದ ಮಾಡಿದ ಅತಿಸ್ನೇಹದಿಂದ, ಪರಿತ್ಯಕ್ತಪರಾತ್ಮನಃ= ಶ್ರೀಹರಿಯನ್ನು ಮರೆತ, ಮೇ=ನನಗೆ, ಏತಾವತಾ ಕಾಲೇನ ವ್ಯತಿಕ್ರಾಂತೇನ ಅಲಂ= ಇಲ್ಲಿಯವರೆಗೆ ಹೋದಕಾಲವೇ ಸಾಕು. ॥೫೩॥

**ಇಂದ್ರಿಯಾರ್ಥೇಷು ಸಜ್ಜಂತ್ಯಾ ಪ್ರಸಂಗಸ್ತ್ವಯಿ ಮೇ ಕೃತಃ ।**
**ಅಜಾನಂತ್ಯಾ ಪರಂ ಭಾವಂ ತಥಾಪ್ಯಸ್ತ್ವಭವಾಯ ಮೇ ॥೫೪॥**

ಪರಂ ಭಾವಂ ಅಜಾನಂತ್ಯಾ=ನಿನ್ನ ಯೋಗಸಾಮರ್ಥ್ಯವನ್ನು ತಿಳಿಯದ, ಇಂದ್ರಿಯಾರ್ಥೇಷು ಸಜ್ಜಂತ್ಯಾ=ವಿಷಯಾಸಕ್ತಳಾದ, ಮೇ=ನನ್ನಿಂದ, ತ್ವಯಿ ಪ್ರಸಂಗಃ ಕೃತಃ=ನಿನ್ನ ದೇಹಸಂಬಂದ ಮಾಡಲ್ಪಟ್ಟಿತು, ತಥಾಪಿ=ಹೀಗೆ ನನ್ನ ದೋಷವಿದ್ದರೂ, ಅಭವಾಯ ಮೇ ಅಸ್ತು=ಪರಮಭಾಗವತನಾದ ನಿನ್ನ ಸಂಗವಾದ್ದರಿಂದ ನನಗೆ ಮೋಕ್ಷಕ್ಕೆ ಸಾಧನವಾಗಲಿ ॥೫೫॥

**ಸಂಯೋಗಃ ಸಂಸೃತೇರ್ಹೇತುರಸತ್ಸು ವಿಹಿತೋ ಧಿಯಾ ।**
**ಸ ಏವ ಸಾಧುಷು ಕೃತೋ ನಿಃಸಂಗತ್ವಾಯ ಕಲ್ಪತೇ ॥೫೫॥**

ಧಿಯಾ=ಜೀವನಿಂದ ಅಸತ್ಸು=ಅಸಜ್ಜನರಲ್ಲಿ ವಿಹಿತಃ=ಮಾಡಿದ ಸಂಯೋಗಃ= ಸಂಬಂಧವು, ಸಂಸೃತೇಃ ಹೇತುಃ=ಸಂಸಾರಕ್ಕೆ ಕಾರಣವು, ಸಃ ಏವ=ಅದೇ ಸಂಗವು ಸಾಧುಷು ಕೃತಃ=ಸಜ್ಜನರಲ್ಲಿ ಮಾಡಿದಾಗ ನಿಃ ಸಂಗತ್ವಾಯ ಕಲ್ಪತೇ=ವೈರಾಗ್ಯಕ್ಕೆ ಕಾರಣವಾಗುವುದು. ಮುಂದೆ ಜ್ಞಾನದ್ವಾರಾ ಮೋಕ್ಷಕ್ಕೆ ಕಾರಣವಾಗುವುದು.॥೫೫॥

**ನೇಹ ಯತ್ ಕರ್ಮ ಧರ್ಮಾಯ ನ ವಿರಾಗಾಯ ಕಲ್ಪತೇ ।**
**ನ ತೀರ್ಥಪದಸೇವಾಯೈ ಜೀವನ್ನಪಿ ಮೃತೋ ಹಿ ಸಃ ॥೫೬॥**

ಯತ್‌ಕರ್ಮ=ಯಾವನು ಮಾಡಿದ ಕಾರ್ಯವು, ಧರ್ಮಾಯ=ಪುಣ್ಯ-ಸಂಪಾದನೆಗೆ, ವಿರಾಗಾಯ=ವೈರಾಗ್ಯಕ್ಕೆ, ತೀರ್ಥಪದಸೇವಾಯೈ=ಶ್ರೀಹರಿಯ ಸೇವೆಗೆ, ಇಹ=ಈ ಭರತಭೂಮಿಯಲ್ಲಿ ನಕಲ್ಪತೇ=ಸಮರ್ಥವಾಗುವುದಿಲ್ಲವೋ, ಸಃ=ಅವನು, ಜೀವನ್ನಪಿ ಮೃತಃ=ಬದುಕಿಯೂ ಸತ್ತಂತೆಯೇ ॥೫೬॥

**ಸಾಹಂ ಭಗವತೋ ನೂನಂ ವಂಚಿತಾ ಮಾಯಯಾ ದೃಢಂ ।**
**ಯಾ ತ್ವಾಂ ವಿಮುಕ್ತಿದಂ ಪ್ರಾಪ್ಯ ನ ಮುಮುಕ್ಷೇ ಹ ಬಂಧನಾತ್ ॥೫೭॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಚತುರ್ವಿಂಶೋಽಧ್ಯಾಯಃ ॥*

ಯಾ=ಯಾವ ನಾನು, ವಿಮುಕ್ತಿದಂ=ಮುಕ್ತಿಸಾಧನ ಜ್ಞಾನೋಪದೇಶ ಮಾಡುವ, ತ್ವಾಂ=ನಿನ್ನನ್ನು, ಪ್ರಾಪ್ಯ=ಹೊಂದಿಯೂ, ಬಂಧನಾತ್=ಬಂಧದಿಂದ ನ ಮುಮುಕ್ಷೇ=ಮುಕ್ತಿಪಡೆಯಲಿಚ್ಛಿಸಲಿಲ್ಲ, ಸಾ=ಆ ನಾನು ಭಗವತಃ ಮಾಯಯಾ=ಶ್ರೀಹರಿಯ ಬಂಧಕಶಕ್ತಿಯಿಂದ ದೃಢಂ ವಂಚಿತಾ=ಬಲವಾಗಿ, ವಂಚಿತಳಾಗಿದ್ದೇನೆ, ನೂನಂ=ಎಂದು ತರ್ಕವು. ॥೫೭॥

*ಇಲ್ಲಿಗೆ ಇಪ್ಪನ್ನಾಲ್ಕನೆ ಅಧ್ಯಾಯವು ಮುಗಿಯಿತು*

# ಇಪ್ಪತ್ನಾಲ್ಕನೆಯ ಅಧ್ಯಾಯದ ತಾತ್ಪರ್ಯ

ತಂದೆತಾಯಿಗಳು ಊರಿಗೆ ಪ್ರಯಾಣಮಾಡಿದ ಮೇಲೆ ದೇವಹೂತಿದೇವಿಯು ಪಾರ್ವತಿಯು ಈಶ್ವರನನ್ನು ಸೇವಿಸಿದಂತೆ ಕರ್ದಮರನ್ನು ಸೇವಿಸುತ್ತ ಬಂದಳು. ಗಂಡನ ಮನಸ್ಸಿನಲ್ಲಿರುವುದನ್ನು ಅರಿತು ಅದರಂತೆ ನಡೆಯುವುದರಲ್ಲಿ ಆಕೆ ನಿಪುಣಳಾಗಿದ್ದಳು. ಆಕೆಯ ಮನಸ್ಸು ಶುದ್ಧವಾಗಿದ್ದಿತು. ಗಂಡನಿಂದ ತನ್ನ ಅಭೀಷ್ಟವು ಫಲಿಸುವುದೆಂಬ ನಂಬುಗೆಯಿತ್ತು. ಆದ್ದರಿಂದಲೇ, ಗಂಡನಲ್ಲಿ ತುಂಬ ಗೌರವ ಆಕೆಗೆ. ಇಂದ್ರಿಯಗಳನ್ನು ಹರಿಯಬಿಡದೆ, ನಿರ್ನಿಮಿತ್ತವಾದ ಪ್ರೀತಿಯಿಂದ ಗಂಡನನ್ನು ಸೇವಿಸುತ್ತ ಇಂಪಾದ ಮಾತುಗಳಿಂದ ಆತನನ್ನು ಸಂತೋಷಪಡಿಸುತ್ತಿದ್ದಳು. ವಿಷಯಲಾಲಸೆ, ದಂಭ, ದ್ವೇಷ, ಲೋಭ, ಕುಲಮದ ಮತ್ತು ಪಾಪಾಸಕ್ತಿಗಳನ್ನು ಬಿಟ್ಟು ಬಹಳ ಎಚ್ಚರದಿಂದ ಪತಿಯನ್ನು ಸೇವಿಸಿ ಸಂತೋಷಗೊಳಿಸುತ್ತಿದ್ದಳು. ಪತಿಯು ತೇಜಸ್ವಿಯೆಂಬುದನ್ನಾಕೆ ಚೆನ್ನಾಗಿ ಮನವರಿತಿದ್ದಳು.

ಮನುರಾಜರ ಮಗಳಾದರೂ ಇಷ್ಟೊಂದು ಅನುಸರಿಸುತ್ತಿದ್ದ ಆಕೆಯನ್ನು ಕಂಡು ಕರ್ದಮರಿಗೆ ಮರುಕುಹುಟ್ಟಿತು. ತಮ್ಮಿಂದ ಉತ್ತಮಸಂತಾನ ಪಡೆಯಬೇಕೆಂಬ ಆಕೆಯ ಹೆಬ್ಬಯಕೆಯನ್ನು ಆ ದೇವರ್ಷಿಗಳು ಮನಗಂಡರು. ಬಹುವರ್ಷಗಳ ಪರಿಚರ್ಯೆಯಿಂದ ಬಾಡಿ ಬಳಲಿ ನಶಿಸಿಹೋಗಿದ್ದ ಆಕೆಯನ್ನು ನೋಡಿದ ಅವರಿಗೆ ಮನಸ್ಸಿನಲ್ಲಿ ವೇದನೆಯುಂಟಾಯಿತು. ಪ್ರೇಮದಿಂದ ಗಂಟಲು ಬಿಗಿದು ಮಾತು ಹೊರಡದಾಯಿತು. ಆಗ ಅವರು ಬಿಗಿದ ಕಂಠದಿಂದ 'ಎಲೌ ಮಾನಿನಿ, ನಿನ್ನ ಅತಿಶಯವಾದ ಸೇವೆ, ಅನುಪಮವಾದ ಭಕ್ತಿ ಇವುಗಳಿಂದ ನನಗೆ ಬಹು ಸಂತೃಪ್ತಿಯಾಗಿದೆ. ಪ್ರಾಣಿಗಳಿಗೆ ತಮ್ಮ ದೇಹಕ್ಕಿಂತ ಪ್ರೀತ್ಯಾಸ್ಪದವಾದ ವಸ್ತು ಬೇರೊಂದಿಲ್ಲ. ಅಂತಹ ನಿನ್ನ ದೇಹವನ್ನು ಉಚಿತರೀತಿಯಲ್ಲಿ ಕಾಪಾಡಿಕೊಳ್ಳದೆ ನನಗಾಗಿ ಕೃಶಪಡಿಸಿಕೊಂಡಿರುವೆ. ನನ್ನ ಧರ್ಮವನ್ನು ನಡೆಸಿಕೊಂಡು ಬರುತ್ತಾ ತಪಸ್ಸು, ಸಮಾಧಿ, ಶಾಸ್ತ್ರಾಧ್ಯಯನ ಮತ್ತು ವೈರಾಗ್ಯಗಳಿಂದ ಶ್ರೀಹರಿಯನ್ನು ಮೆಚ್ಚಿಸಿ ಅವನ ಅನುಗ್ರಹದಿಂದ ಜ್ಞಾನವನ್ನು ಸಂಪಾದಿಸಿದ್ದೇನೆ. ಅವನ ನಿರಂತರ ಉಪಾಸನೆಯ ಫಲವೇ ಇದು. ಆ ಜ್ಞಾನವನ್ನೇ ಈ ನಿನ್ನ ಸೇವೆಗೆ ಫಲವಾಗಿ ಕೊಡಲಿರುವೆನು. ಅದರಿಂದ ಸಂಸಾರದ ಭಯ ದೂರವಾಗುವುದು. ದುಃಖವು

ನಾಶವಾಗುವುದು. ಅದು ಜಾಗ್ರತೆ ನಿನಗೆ ಫಲವನ್ನು ಕೊಡಬಲ್ಲುದು. ಸ್ವರ್ಗ ಮೊದಲಾದ ಲೋಕಗಳು ನಶ್ವರವಾದುವು. ಶ್ರೀಹರಿಯು ತನ್ನ ಇಚ್ಛೆಯಿಂದ ಅವುಗಳನ್ನು ನಾಶಮಾಡುವನು. ಅವುಗಳನ್ನು ನಾಶಮಾಡಬೇಕೆಂಬ ಇಚ್ಛೆಯಿಂದ ಅವನು ಹುಬ್ಬು ಆಡಿಸುವುದೇ ತಡ. ಇವೆಲ್ಲವೂ ನಷ್ಟವಾಗುವುವು. ಆದ್ದರಿಂದ ಅಂತಹ ಲೋಕಗಳನ್ನು ಸಂಪಾದಿಸುವ ವಿದ್ಯೆಯಿಂದ ಪ್ರಯೋಜನವಿಲ್ಲ. ಪ್ರಿಯೆ, ನೀನು ಮೋಕ್ಷ ಮೊದಲಾದ ಪುರುಷಾರ್ಥಗಳನ್ನು ಪಡೆಯುವ ಸಿದ್ಧಿಯನ್ನು ಹೊಂದಿರುವೆ. ಬಹುಧನವ್ಯಯದಿಂದಲೂ ದೇಹಾಯಾಸದಿಂದಲೂ ಮಾಡುವ ಅಶ್ವಮೇಧ ಮೊದಲಾದ ಯಜ್ಞಗಳಿಂದಲೂ ಸಹ ಹೊಂದಲಾಗದ ಸಂಪತ್ತುಗಳನ್ನು ನೀನಿಗ ಹೊಂದುವೆ. ಅವುಗಳಿಂದ ಸ್ವಧರ್ಮವನ್ನು ಮಾಡಲು ಅನುಕೂಲವಾಗುವುದು. ದೇವಲೋಕದ ಆ ಸಂಪತ್ತಗಳನ್ನು ನೀನಿಲ್ಲಿಯೇ ಅನುಭವಿಸು' ಎಂದು ನುಡಿದರು.

ಕರ್ದಮರ ಈ ಮಾತುಗಳಿಂದ ದೇವಹೂತಿಗೆ ಪತಿದೇವನು ಪ್ರಸನ್ನ-ನಾಗಿರುವುದರ ಅರಿವಾಯಿತು. ಎಲ್ಲ ಯೋಗಸಿದ್ಧಿಗಳನ್ನೂ ಕರ್ದಮರು ಪಡೆದಿದ್ದರು. ಇದೂ ಆಕೆಗೆ ತಿಳಿಯದೆ ಇಲ್ಲ. ಆಕೆಯ ಮನಸ್ಸಿನಲ್ಲಿ ಯಾವ ಆತಂಕವೂ ಉಳಿಯಲಿಲ್ಲ. ತನ್ನ ಬಯಕೆಯನ್ನು ಪತಿಯಲ್ಲಿ ವಿಜ್ಞಾಪಿಸಲು ಸ್ವಲ್ಪ ನಾಚಿದಳು. ಒಮ್ಮೆ ವಿಲಾಸಪೂರಿತ ನೋಟವನ್ನು ಬೀರಿ ಮುಗುಳುನಗೆ ನಕ್ಕಳು. ವಿನಯಪ್ರೇಮಗಳ ತೆಕ್ಕೆಯಲ್ಲಿ ಸಿಕ್ಕಿದ್ದ ಆಕೆಗೆ ಮಾತು ನಿರರ್ಗಳವಾಗಿ ಹೊರಡಲಿಲ್ಲ. ಆಕೆ ನಿಂತು ನಿಂತು ಹೊರಡುತ್ತಿದ್ದ ಮಾತುಗಳಿಂದ 'ಬ್ರಾಹ್ಮಣಶ್ರೇಷ್ಠ ! ತಾವು ಹೇಳಿದುದೆಲ್ಲವೂ ಸಿದ್ಧವಚನಗಳೇ. ಪತಿದೇವ ! ತಮ್ಮ ಯೋಗಸಿದ್ಧಿಗಳು ಎಂದೂ ವ್ಯರ್ಥವಾದವು-ಗಳಲ್ಲ. ಅದರ ಅರಿವೂ ನನಗೆ ಇದ್ದೇ ಇದೆ. ಆದರೆ ಪತಿವ್ರತಾ ಸ್ತ್ರೀಯರಿಗೆ ಗುಣವಂತನಾದ ಪತಿದೇವನ ಅಂಗಸಂಗವು ಸತ್ಸಂತಾನಕ್ಕೆ ಕಾರಣವಲ್ಲವೇ ! ಆದ್ದರಿಂದ ತಾವು ಈ ಹಿಂದೆಯೇ ಮಾತುಕೊಟ್ಟಿದ್ದ ಆ ಅಂಗಸಂಗವು ಒಮ್ಮೆ ಆಗಲಿ ಎಂದು ಬಯಸುತ್ತೇನೆ. ಅದಕ್ಕಾಗಿ ಸಿದ್ಧತೆಗಳನ್ನು ಒದಗಿಸುವ ವಿದ್ಯೆಯನ್ನು ಉಪಯೋಗಿಸಿಕೊಂಡು ಅನುಗ್ರಹಿಸಬೇಕು. ತಮಗಾಗಿ ಮನ್ಮಥತಾಪಕ್ಕೆ ಗುರಿಯಾಗಿ ತಮ್ಮೊಡನೆ ಅತಿಯಾಗಿ ರಮಿಸಿ ಸುಖಿಸಬೇಕೆಂಬ ಬಯಕೆಯಿಂದ ಈ ನನ್ನ ದೇಹವನ್ನು ಕೃಶಮಾಡಿಕೊಂಡಿದ್ದೇನೆ. ಇಂತಹ ದೇಹವು ಸಫಲಗೊಳ್ಳುವ ವಿದ್ಯೆಯನ್ನು ಬಳಸುವ ಮನಸ್ಸು ಮಾಡಿರಿ. ನಾನು ಸಾರ್ವಭೌಮ ಪುತ್ರಿ. ನನ್ನ ಯೋಗ್ಯತೆಗೆ ತಕ್ಕಂತೆ ಸರ್ವಸಂಪತ್ತಿನಿಂದ ತುಂಬಿದ ಗೃಹವೊಂದನ್ನು ತಮ್ಮ ವಿದ್ಯಾಬಲದಿಂದ ಸಿದ್ಧಪಡಿಸುವ ಕೃಪೆಮಾಡಬೇಕು. ಸುಂದರವಾಗಿದ್ದ ಈ ನನ್ನ ದೇಹವು ಆ ಮನೆಯ ಪ್ರಭಾವದಿಂದ ಮತ್ತೆ ಸುಂದರವಾಗುವಂತಾಗಲಿ' ಎಂದು ವಿಜ್ಞಾಪಿಸಿಕೊಂಡಳು. ಮಹನೀಯರು ಆಶ್ರಿತವತ್ಸಲರಲ್ಲವೆ !

ಪತ್ನಿಯ ಈ ಮಾತುಗಳನ್ನು ಕೇಳಿದ ಕರ್ದಮರು ಆಕೆಯ ಇಷ್ಟವನ್ನು ನಡೆಸಿಕೊಡುವ ಮನಸ್ಸು ಮಾಡಿದರು. ಶ್ರೀಹರಿಯನ್ನು ಧ್ಯಾನಿಸಿ ಅವನ ಅನುಗ್ರಹದಿಂದ ಎಲ್ಲೆಡೆ ಸಂಚರಿಸುವ ವಿಮಾನ ಗೃಹವೊಂದನ್ನು ಪ್ರಕಾಶಪಡಿಸಿದರು. ಅದು ಎಲ್ಲ ಇಷ್ಟಾರ್ಥಗಳನ್ನೂ ಕೊಡುವಂತಹುದು; ದೇವಲೋಕಕ್ಕೆ ಸಂಬಂಧಿಸಿದುದು; ಎಲ್ಲ ಬಗೆಯ ರತ್ನಗಳಿಂದ ಕೂಡಿ ಸರ್ವಸಂಪತ್ಸಮೃದ್ಧಿಯಿಂದ ಶ್ರೇಷ್ಠವಾದುದು. ರತ್ನಸ್ತಂಭಗಳು, ದಿವ್ಯ ಉಪಕರಣಗಳು, ಬಣ್ಣಬಣ್ಣದ ರೇಷ್ಮೆಯ ಧ್ವಜ ಪತಾಕೆಗಳು ಇವುಗಳಿಂದ ಶೋಭಿತವಾಗಿದ್ದ ಆ ಗೃಹವು ಎಲ್ಲ ಕಾಲಗಳಲ್ಲಿಯೂ ಸುಖವನ್ನು ಕೊಡುವುದಾಗಿತ್ತು. ಅಲ್ಲಿ ಬಗೆ ಬಗೆಯ ಹೂಗಳ ಹಾರಗಳಲ್ಲಿ ದುಂಬಿಗಳು ಝೇಂಕರಿಸುತ್ತಿದ್ದುವು. ಹತ್ತಿಯಬಟ್ಟೆ ನಾರುಬಟ್ಟೆ ರೇಷ್ಮೆ ಬಟ್ಟೆ ರತ್ನಕಂಬಳಿ ಈ ಎಲ್ಲ ಬಗೆಯ ವಸ್ತ್ರಗಳಿಂದ ಆ ಭವನವು ವಿರಾಜಿಸುತ್ತಿತ್ತು. ಅನೇಕ ಅಂತಸ್ತು (ಮಹಡಿ)ಗಳಲ್ಲಿ ಪ್ರತಿಯೊಂದರಲ್ಲಿಯೂ ಹಾಸಿಗೆ ಮಂಚ ಮತ್ತು ಪಂಖಗಳಿಂದ ಸಜ್ಜುಗೊಳಿಸಿದ್ದರು. ಕೂಡುವುದಕ್ಕೆ ಆಸನಗಳು ಸಿದ್ಧವಾಗಿದ್ದುವು. ಬಗೆ ಬಗೆಯ ಕಲಾಪೂರ್ಣ ವಸ್ತುಗಳನ್ನು ಅಲ್ಲಲ್ಲಿ ಇಟ್ಟು ಅಲಂಕರಿಸಿದ್ದರು. ಮರಕತಮಣಿಯ ನೆಲದಲ್ಲಿ ಹವಳದ ಜಗುಲಿಗಳನ್ನು ನಿರ್ಮಿಸಿದ್ದರು. ಹವಳದ ಹೊಸ್ತಿಲಿನ ದ್ವಾರಗಳಲ್ಲಿ ರತ್ನದ ಬಾಗಿಲುಗಳನ್ನಿಟ್ಟಿದ್ದರು. ಇಂದ್ರನೀಲಮಣಿಯ ಶಿಖರಗಳನ್ನು ಮಾಡಿ ಬಂಗಾರದ ಕಲಶಗಳನ್ನಳವಡಿಸಿದ್ದರು. ವಜ್ರದ ಗೋಡೆಗಳಿಂದ ಕೂಡಿದ ಛಾವಣಿಗಳಲ್ಲಿ ಹೊಳಪಿನ ಕೆಂಪುಗಳಿಂದ ಚಿತ್ರಗಳನ್ನು ಚಿತ್ರಿಸಿದ್ದರು. ಬಹುಬೆಲೆ ಬಾಳುವ ಬಂಗಾರದ ತೋರಣಗಳನ್ನು ಕಟ್ಟಿದ್ದರು. ಅಲ್ಲಲ್ಲಿ ನಿರ್ಮಿಸಿದ್ದ ಕೃತ್ರಿಮ ಹಂಸ ಪಾರಿವಾಳ ಮೊದಲಾದುವನ್ನು ನಿಜವೆಂದೇ ಭ್ರಮಿಸಿ ಮೇಲೆ ಕುಳಿತು ಹಂಸ ಮೊದಲಾದವು ಕೂಗಿಕೊಳ್ಳುತ್ತಿದ್ದುವು. ಆ ಮನೆಯಲ್ಲಿ ಆಟದ ಸ್ಥಳ, ಮಲಗುವ ಸ್ಥಳ, ಅಂಗಳ, ಓತ್ತಲು ಇವುಗಳನ್ನು ಯಥೋಚಿತವಾಗಿ ನಿರ್ಮಿಸಿದ್ದರು. ಆ ದಿವ್ಯ ಭವನವನ್ನು ನೋಡಿ ರಾಜಪುತ್ರಿಯೂ ಅಚ್ಚರಿಗೊಳ್ಳುವಂತಿತ್ತು.

ಆದರೆ ಪರಿಚಾರಿಕೆಯರೂ ಯಾರೂ ಇರಲಿಲ್ಲ. ಇದರಿಂದ ಮನುಪುತ್ರಿಗೆ ಆ ಮನೆಯು ಅಷ್ಟೇನೂ ತೃಪ್ತಿಕರವಾಗಲಿಲ್ಲ. ಅವಳ ಮನಸ್ಸಿನ ಈ ಅಭಿಪ್ರಾಯವನ್ನು ಕರ್ದಮರು ತಿಳಿದರು. ಅವರಿಗೆ ಎಲ್ಲ ಪ್ರಾಣಿಗಳ ಮನಸ್ಸಿನಲ್ಲಿರುವುದನ್ನು ತಿಳಿಯುವ ಯೋಗ್ಯತೆ ಇತ್ತು. ಅವರು ಹೆಂಡತಿಯನ್ನು ಕುರಿತು 'ಪ್ರಿಯೆ, ಈ ಕೊಳದಲ್ಲಿ ಮುಳುಗು. ಅನಂತರ ಈ ವಿಮಾನವನ್ನು ಏರು. ಜನರು ಮಂಗಳವನ್ನು ಪಡೆಯಲೆಂದು ಶುಕ್ಲರೂಪಿಯಾದ ಶ್ರೀಹರಿಯು ಈ ಮಡುವನ್ನು ನಿರ್ಮಿಸಿರುವನು' ಎಂದರು. ದೇವಹೂತಿಯು ಉಟ್ಟಿದ್ದ ಬಟ್ಟೆ ಕೊಳೆಯಾಗಿತ್ತು. ತಲೆ ಗೂದಲು

ಜಡೆಗಟ್ಟಿದ್ದವು. ಮೈಯೆಲ್ಲ ಕೊಳೆಯಿಂದ ಮುಚ್ಚಿ ಹೋಗಿತ್ತು. ಸ್ತನಗಳು ಬಿಳಿಕಪ್ಪು ಮಿಶ್ರವಾಗಿ ಚಿತ್ರವರ್ಣವಾಗಿದ್ದುವು. ನೈದಿಲೆಯಂತೆ ಕಣ್ಣಿನಗಳನ್ನು ಹೊಂದಿ ಸುಂದರಿಯಾಗಿದ್ದ ಆಕೆ ಪತಿಯ ಮಾತಿನಂತೆ ಮಂಗಳಕರನೀರುಳ್ಳ ಆ ಬಿಂದುಸರೋವರದಲ್ಲಿ ಸರಸ್ವತೀ ನದಿಯ ಕೊಳದಲ್ಲಿ ಪ್ರವೇಶಿಸಿದಳು.

ಕೊಳದ ಒಳಗೆ ಮನೆಯೊಂದರಲ್ಲಿ ಒಂದು ಸಾವಿರ ಕನ್ಯೆಯರನ್ನು ಆಕೆ ಕಂಡಳು. ಅವರೆಲ್ಲರೂ ಹದಿನಾರು ವಯಸ್ಸಿನ ಹರೆಯದವರು; ಸುಗಂಧವಾದ ದೇಹವುಳ್ಳವರು. ಆ ಕನ್ಯೆಯರು ದೇವಹೂತಿಯನ್ನು ಕಂಡಕೂಡಲೆ ಇದಿರೆದ್ದು ಕೈಮುಗಿದು 'ದೇವಿ, ನಾವು ನಿನ್ನ ಕಿಂಕರಿಯರು, ನಿನಗೇನು ಸೇವೆ ಮಾಡೋಣ ? ಅಪ್ಪಣೆಮಾಡು.' ಎಂದು ಬಿನ್ನವಿಸಿಕೊಂಡರು. ದಾಸಿಯರನ್ನು ಕಂಡ ರಾಜಪುತ್ರಿಗೆ ಮನಸ್ಸು ಪ್ರಸನ್ನವಾಯಿತು. ಆಕೆಯ ಯೋಗ್ಯತೆಗೆ ತಕ್ಕಂತೆ ಉತ್ತಮ ರೀತಿಯಲ್ಲಿ ಸ್ನಾನ ಮಾಡಿಸಿ ಆ ದಾಸಿಯರು ಆಕೆಗೆ ಹೊಸವೂ ಶುದ್ಧಗಳೂ ಆದ ರೇಷ್ಮೆಸೀರೆ ಕುಪ್ಪಸಗಳನ್ನು ತೊಡಿಸಿದರು. ಹೊಳೆಯುವ ಬೆಲೆ ಬಾಳುವ ಶ್ರೇಷ್ಠ ಆಭರಣಗಳಿಂದ ಆಕೆಯನ್ನು ಅಲಂಕರಿಸಿದರು. ಭಕ್ಷ್ಯ ಭೋಜ್ಯಗಳಿಂದ ಕೂಡಿದ ಅನ್ನವನ್ನು ಬಡಿಸಿ ಸಿಹಿಯಾದ ಮದ್ಯಯುಕ್ತ ಪಾನೀಯವನ್ನು ಕೊಟ್ಟರು. ಆಗ ದೇವಹೂತಿಯ ದೇಹವು ಹಿಂದಿನಂತೆ ಇರಲಿಲ್ಲ. ಹಾರಹಾಕಿಕೊಂಡಿದ್ದ, ಶುದ್ಧ ಬಟ್ಟೆಯನ್ನುಟ್ಟಿದ್ದ ಕೊಳಕಿಲ್ಲದ ಅಲಂಕೃತವಾದ, ದಾಸಿಯರಿಂದ ಗೌರವಿಸಲ್ಪಟ್ಟಿದ್ದ ಆ ದೇಹವನ್ನು ಆಕೆ ಕನ್ನಡಿಯಲ್ಲಿ ನೋಡಿಕೊಂಡಳು. ತಲೆಯ ಮೇಲೆ ಸ್ನಾನಮಾಡಿದ್ದಳು. ಕಂಠದಲ್ಲಿ ಕಾಸಿನ ಸರವನ್ನೂ ಕೈಯಲ್ಲಿ ಬಳೆಗಳನ್ನೂ, ಕಾಲಿನಲ್ಲಿ ದನಿಗೈಯುವ ಬಂಗಾರದ ನೂಪುರಗಳನ್ನೂ, ನಡುವಿನಲ್ಲಿ ರತ್ನಖಚಿತವಾದ ಬಂಗಾರದ ವಡ್ಯಾಣವನ್ನೂ, ವಕ್ಷಃಸ್ಥಳದಲ್ಲಿ ಬೆಲೆ ಬಾಳುವ ಹಾರವನ್ನೂ, ಅಡ್ಡಿಕೆಯನ್ನೂ ಧರಿಸಿ ಸರ್ವಾಭರಣ-ಭೂಷಿತೆಯಾಗಿದ್ದಳು. ಆಕೆಯ ಮುಖವು ಸುಂದರವಾದ ಹುಬ್ಬುಗಳಿಂದಲೂ, ಶ್ರೇಷ್ಠವಾದ ಹಲ್ಲುಗಳಿಂದಲೂ, ಸುಂದರ ಸ್ನೇಹಮಯ ನೋಟವುಳ್ಳ ತಾವರೆಯ ಮೊಗ್ಗಿನಂತಿರುವ ಕಣ್ಣುಗಳಿಂದಲೂ, ಕಪ್ಪಾಗಿರುವ ಮುಂಗೂದುಲುಗಳಿಂದಲೂ ಕಂಗೊಳಿಸುತ್ತಿತ್ತು. ಈ ಬಗೆಯ ಸೌಂದರ್ಯವು ಪತಿಯು ಸಮೀಪದಲ್ಲಿರದಿದ್ದರೆ ಉಪಯೋಗವಿಲ್ಲವೆಂಬ ಅಭಿಪ್ರಾಯದಿಂದ ಆ ಮನುಪುತ್ರಿಯು ಪ್ರಿಯತಮನೂ ಋಷಿಶ್ರೇಷ್ಠನೂ ಆದ ಪತಿಯನ್ನು ಸ್ಮರಿಸಿಕೊಳ್ಳುವಷ್ಟರಲ್ಲಿಯೇ ತನ್ನ ದಾಸಿಯರೊಂದಿಗೆ ಪತಿದೇವನಿದ್ದ ಸ್ಥಳಕ್ಕೆ ಬಂದು ಬಿಟ್ಟಿದ್ದಳು. ಪತಿದೇವನ ಎದುರಿನಲ್ಲಿಯೇ ಸಾವಿರ ದಾಸಿಯರಿಂದ ಪರಿವೃತಳಾಗಿ ತಾನಿರುವುದನ್ನು ಕಂಡ ಆಕೆಗೆ ಪತಿದೇವನ ಭಗವದ್ಭಕ್ತಿಯ ಮಹಿಮೆಯು ಗೋಚರವಾಯಿತು. ಆಗ ಅಚ್ಚರಿಗೊಂಡಳು.

ವಿದುರ, ಸ್ನಾನಮಾಡಿದ್ದ ಆಕೆಯಲ್ಲಿ ಅಪೂರ್ವದ ಶೋಭೆಯು ಕಾಣುತ್ತಿತ್ತು. ಬಿಗಿದುಕಟ್ಟಿದ್ದರಿಂದ ಮನೋಹರವಾಗಿದ್ದ ಸ್ತನಗಳಿಂದ ಆಕೆಯ ಸೌಂದರ್ಯವು ಹೊರಹೊಮ್ಮಿಕಾಣುತ್ತಿತ್ತು. ಒಳ್ಳೆಯ ವಸ್ತ್ರವನ್ನುಟ್ಟಿದ್ದ ಆಕೆಯನ್ನು ಒಂದು ಸಾವಿರ ವಿದ್ಯಾಧರಿಯರು ಸೇವಿಸುತ್ತಿದ್ದರು. ಆಕೆಯ ಇಷ್ಟಸಿದ್ಧಿಗಾಗಿ ವಿಷಯ ಭೋಗಲಾಲಸೆ-ಯನ್ನು ಹೊಂದಿದ್ದ ಕರ್ದಮರು ಆಕೆಯನ್ನು ವಿಮಾನದಲ್ಲಿ ಕೂಡಿಸಿದರು.

ಭಗವದ್ಭಕ್ತರಾದ ಕರ್ದಮರು ಇಷ್ಟೊಂದು ವಿಷಯಾಸಕ್ತರಾಗಿದ್ದರೂ ಅವರ ಮಹಿಮೆಯು ಸ್ವಲ್ಪವಾದರೂ ಕಡಿಮೆಯಾಗಿರಲಿಲ್ಲ. ಹೆಂಡತಿಯ ಆಲಿಂಗನಾದಿಗಳಲ್ಲಿ ತೊಡಗಿದ್ದರು. ವಿದ್ಯಾಧರಿಯರಿಂದ ಸೇವೆ ತೆಗೆದುಕೊಳ್ಳುತ್ತಿದ್ದರು. ಹದಿನಾರು ವರ್ಷದ ಹರೆಯನ್ನು ಹೊಂದಿದ್ದ ಅವರು ಆ ವಿಮಾನದಲ್ಲಿದ್ದುಕೊಂಡು ಆಕಾಶದಲ್ಲಿ ತಾರೆಗಳಿಂದ ಕೂಡಿದ ಚಂದ್ರನಂತೆ ಪ್ರಕಾಶಿಸುತ್ತಿದ್ದರು. ಆ ವಿಮಾನದಲ್ಲಿ ಕುಳಿತು ವಿಹಾರಕ್ಕೆ ಯೋಗ್ಯಳಾದ ಕುಲಪರ್ವತಗಳ ತಗ್ಗಿನ ಗುಹೆಗಳಲ್ಲಿ ಹೆಂಡತಿಯೊಂದಿಗೆ ಕರ್ದಮರು ಕ್ರೀಡಿಸಿದರು. ಆ ಗುಹೆಗಳಲ್ಲಿ ಮಂದಮಾರುತವು ಬೀಸುತ್ತ ಸುಖದಾಯಕವಾಗಿತ್ತು. ಅಲ್ಲಲ್ಲಿ ದೇವಗಂಗೆಯ ಜಲಪಾತದ ಸುಮಧುರಶಬ್ದವು ಮಾರ್ದನಿಗೊಡುತ್ತಿತ್ತು. ದಿಕ್ಪಾಲಕರು ವಿಹರಿಸುವ ಈ ಸ್ಥಳಗಳಲ್ಲಿ ಹೆಂಗಸರಿಂದ ಕೂಡಿದ ಕುಬೇರನು ವಿರಹಿಸುವಂತೆ ಕರ್ದಮರು ವಿಹರಿಸಿದರು. ಸಿದ್ಧರು ಇವರನ್ನು ಹೊಗಳುತ್ತಿದ್ದರು. ವೈಸ್ರಂಭಕ, ದೇವವನ, ನಂದನ, ಪುಷ್ಪಭದ್ರಕ, ಮತ್ತು ಚೈತ್ರರಥ ಮೊದಲಾದ ಉದ್ಯಾನವನಗಳಲ್ಲಿಯೂ ಮಾನಸಸರೋವರದಲ್ಲಿಯೂ ದೇವಹೂತಿ-ಯನ್ನು ಸಂತೋಷಪಡಿಸುತ್ತಾ ಕ್ರೀಡಿಸಿದರು. ಹೊಳೆಯುವ, ಎಲ್ಲೆಡೆಯೂ ಆ ವಿಮಾನದಲ್ಲಿ ಕುಳಿತು ಸ್ವರ್ಗ ಮೊದಲಾದ ಲೋಕಗಳಲ್ಲಿ ಗಾಳಿಯಂತೆ ಯಾರ ಅಡ್ಡಿಯೂ ಇಲ್ಲದೆ ಸಂಚರಿಸುತ್ತಿದ್ದ ಇವರು ನಿಯಮಿತಪ್ರದೇಶಗಳಲ್ಲಿ ಮಾತ್ರ ಸಂಚರಿಸುವ ಶಕ್ತಿಯುಳ್ಳ ವಿಮಾನಚಾರಿಗಳನ್ನು ಮೀರಿಸಿದುದು ಆಶ್ಚರ್ಯವೇನಲ್ಲ. ಪವಿತ್ರವಾದ ಗಂಗೆಯನ್ನು ಪಡೆದ ಶ್ರೀಹರಿಯ ಚರಣಗಳು ಆಶ್ರಯಿಸಿದವರ ಸಂಸಾರರೂಪವ್ಯಸನವನ್ನೇ ಹೋಗಲಾಡಿಸಿ ಮೋಕ್ಷವನ್ನು ಹೊಂದಿಸುವ ಸಾಮರ್ಥ್ಯವುಳ್ಳವು. ಅಂತಹ ಚರಣಗಳನ್ನೇ ನಿರಂತರ ಉಪಾಸಿಸಿದ ಮಹಾಮಹಿಮರಾದ ಕರ್ದಮರಿಗೆ ಮೇಲೆ ಹೇಳಿದ ಮಹಿಮೆಯು ಸಿದ್ಧಿಸಿದ್ದುದು ಶ್ರೀಹರಿಯ ಭಕ್ತರಿಗೆ ಅಸಾಧ್ಯವಾದುದು ಅವುದೂ ಇಲ್ಲವೆಂಬುದಕ್ಕೆ ನಿದರ್ಶನಾವಾಗಿದೆ. ಹೀಗೆ ತಮ್ಮ ಯೋಗಸಿದ್ಧಿಗೆ ಒಳಪಟ್ಟು ಭೂಮಂಡವನ್ನೆಲ್ಲ ಅದರ ಅನೇಕ ಆಶ್ಚರ್ಯಗಳೊಂದಿಗೆ ಹೆಂಡತಿಗೆ ತೋರಿಸಿ ಕರ್ದಮರು ತಮ್ಮ ಆಶ್ರಮಕ್ಕೆ ಹಿಂತಿರುಗಿದರು. ಮನುಪುತ್ರಿಯು ಮಾನುಷರತಿಯನ್ನು ಅತಿಯಾಗಿ

ಬಯಸುತ್ತಿದ್ದಳೆಂಬುದನ್ನರಿತ ಆ ಜ್ಞಾನಿಗಳು ತಮ್ಮ ಯೋಗಸಾಮರ್ಥ್ಯದಿಂದ ತಮ್ಮ ದೇಹವನ್ನು ಒಂಬತ್ತು ದೇಹಗಳನ್ನಾಗಿ ಮಾಡಿ ಹೆಂಡತಿಯನ್ನೂ ಅಷ್ಟೇ ದೇಹಗಳನ್ನು ಹೊಂದಿಸಿ ಕಾಮಶಾಸ್ತ್ರದಂತೆ ಎಲ್ಲ ರೀತಿಯಿಂದಲೂ ಆಕೆಯನ್ನು ರಮಿಸಿ ಬಹುವರ್ಷಗಳನ್ನೂ ಮುಹೂರ್ತದಂತೆ ಕಳೆದರು. ಮೊದಲೇ ದಿವ್ಯವಾದ ವಿಮಾನ, ಅದರಲ್ಲಿಯೂ ರತಿಗನುಕೂಲವಾದ ಅತಿಮೆತ್ತನೆಯ ಹಾಸಿಗೆ. ಪತಿಯಾದರೋ ಒಳ್ಳೆಯ ಪ್ರಾಯದವನು. ಹೀಗೆ ರತಿಸುಖವನ್ನು ಅನುಭವಿಸುತ್ತಿದ್ದ ಆಕೆಗೆ ಕಳೆದುಹೋದ ಕಾಲದ ಅರಿವೇ ಆಗಲಿಲ್ಲ. ವಿಷಯಸುಖಾನುಭವವೇ ಹೀಗೆ ! ಯೋಗಸಿದ್ಧಿಯ ಬಲದಿಂದ ಹೀಗೆ ಕ್ರೀಡಿಸುತ್ತಿದ್ದ ಆ ದಂಪತಿಗಳಿಗೆ ಭೋಗೇಚ್ಛೆಯು ದಿನದಿನಕ್ಕೂ ಅಭಿವೃದ್ಧಿಯಾಗುತ್ತಲೇ ಬಂದಿತು. ಒಂದುನೂರು ವರ್ಷಗಳು ಹೀಗೆ ಕಳೆದುವು. ಇಷ್ಟರಿಂದ ಕರ್ದಮರನ್ನು ಕಾಮಲಂಪಟರೆಂದು ಎಂದೂ ತಿಳಿಯಲಾಗದು. ಅವರು ಶ್ರೀಹರಿಯು ಸತ್ಯಸಂಕಲ್ಪನೆಂದು ಉಪಾಸಿಸಿ ತಮ್ಮ ಸಂಕಲ್ಪಗಳೂ ಸತ್ಯವಾಗುವಂತೆ ಮಾಡಿಕೊಂಡಿದ್ದರು. ಆದ್ದರಿಂದಲೇ ಜ್ಞಾನಿಗಳು ಅವರನ್ನು ಆತ್ಮಜ್ಞಾನಿಗಳೆಂದು ಕರೆಯುತ್ತಿದ್ದರು. ಯೋಗಸಿದ್ಧಿಯನ್ನು ಪಡೆದಿದ್ದ ಅವರು ಒಂಭತ್ತು ರೂಪಗಳಿಂದ ದೇವಹೂತಿಯಲ್ಲಿ ಮನಸಾ ಒಂಭತ್ತು ರೂಪಳೆಂದು ತಿಳಿದು ಗರ್ಭಧಾರಣೆಗೆ ಅನುಕೂಲರಾದರು. ಕರ್ದಮರಿಂದ ಗರ್ಭವನ್ನು ಧರಿಸಿದಕೂಡಲೆ ದೇವಹೂತಿದೇವಿಯು ಸರ್ವಾಂಗಸುಂದರಿಯರೂ ಸುವಾಸಿನಿಯರೂ ಆದ ಒಂಭತ್ತು ಹೆಣ್ಣುಮಕ್ಕಳಿಗೆ ಜನ್ಮವಿತ್ತಳು.

ಹೆಂಡತಿಯಲ್ಲಿ ಸಂತತಿಯನ್ನು ಕಂಡ ಕರ್ದಮರು ಹಿಂದೆಯೇ ನಿಶ್ಚಯಿಸಿದಂತೆ ಮನೆಯನ್ನು ಬಿಟ್ಟು ಹೊರಟು ಸನ್ಯಾಸಿಯಾಗಲು ಹವಣಿಸುತ್ತಿದ್ದರು. ಅವರು ಹಿಂದಿನಂತೆ ವಿಷಯಸುಖದಲ್ಲಿ ಲಾಲಸೆಯನ್ನು ತೋರುತ್ತಿರಲಿಲ್ಲ. ಗಂಡನ ಹವಣಿಕೆ ದೇವಹೂತಿಗೆ ತಿಳಿಯದೆ ಹೋಗಲಿಲ್ಲ. ಕೇವಲ ಹೆಣ್ಣುಮಕ್ಕಳನ್ನೇ ಪಡೆದಿದ್ದ ಆಕೆಗೆ ಮಗನೊಬ್ಬನನ್ನು ಪಡೆಯಬೇಕೆಂಬ ಬಯಕೆಯಿತ್ತು. ಪತಿವ್ರತೆಯಾದ ಆಕೆಗೆ ಈ ತನ್ನ ಬಯಕೆಯು ಈಡೇರುವ ಪರಿಸ್ಥಿತಿಯು ಇಲ್ಲವೆಂದು ತೋರಿತು. ಮನಸ್ಸು ನೋಯುತ್ತಿತ್ತು. ಮುಂಬರಲಿರುವ ಗಂಡನ ಅಗಲುವಿಕೆಯನ್ನು ನೆನೆದು ಕಾತುರತೆಯು ಇಮ್ಮಡಿಸಿತ್ತು. ಕಣ್ಣಿನಿಂದ ನೀರು ಹನಿಯಿಡಲಾರಂಭಿಸಿತು. ಹೇಗೋ ಅದನ್ನು ತಡೆಹಿಡಿದು ಕಾಲಹೆಬ್ಬೆರಳಿನ ಉಗುರಿನಿಂದ ಭೂಮಿಯನ್ನು ಕೆರೆಯುತ್ತಾ ಮುಖವನ್ನು ತಗ್ಗಿಸಿ ತನ್ನ ವಿಷಲಾಲಸೆಯನ್ನು ಮುಗುಳುನಗೆಯಿಂದ ಸೂಸುತ್ತಾ ವಿಲಾಸಪೂರ್ವಕವಾಗಿ 'ಪೂಜ್ಯನಾದ ಪತಿದೇವ, ನನಗೆ ಕೊಟ್ಟಿದ್ದ ಎಲ್ಲ ಮಾತುಗಳನ್ನೂ ನಡೆಸಿಕೊಟ್ಟಿರುವಿರಿ. ತಮ್ಮ ಅನುಗ್ರಹಪೂರ್ವಕವಾದ ಈ

ಉಪಕಾರಕ್ಕೆ ನಾನು ಋಣಿಯಾಗಿದ್ದೇನೆ. ಮತ್ತೊಂದು ಉಪಕಾರವನ್ನೂ ತಮ್ಮಿಂದ ಅಪೇಕ್ಷಿಸುತ್ತೇನೆ. ತಮ್ಮ ವಿನಹ ನನಗೆ ಮತ್ತೊಬ್ಬರು ರಕ್ಷಕರಿಲ್ಲ. ಅಭಯಪ್ರದನಾದ ಪುತ್ರನೊಬ್ಬನನ್ನು ಕರುಣಿಸಬೇಕು. ತಮ್ಮಿಂದ ಜನಿಸಿದ ಈ ಹೆಣ್ಣುಮಕ್ಕಳಿಗೆ ಸದೃಶರಾದ ಗಂಡಂದಿರನ್ನು ತಂದು ಮದುವೆಮಾಡಬೇಕು. ತಾವು ಸನ್ಯಾಸಿಗಳಾಗಿ ಮನೆಬಿಟ್ಟು ಹೊರಟಮೇಲೆ ನನ್ನ ಸಂಸಾರದುಃಖಮೋಚಕನಾದ ಮಗನೊಬ್ಬನನ್ನು ಅನುಗ್ರಹಿಸದಿದ್ದರೆ ನನ್ನ ಗತಿಯೇನು? ಆದ್ದರಿಂದ ಸಚ್ಚಿದಾನಂದರೂಪಿಯು ಮಗನಾಗುವಂತೆ ಪರಮಾನುಗ್ರಹ ಮಾಡಬೇಕು. ಶಬ್ದಾದಿವಿಷಯಗಳೇ ಸುಖಕರಗಳೆಂದು ಬಗೆದು ಅವುಗಳಲ್ಲಿಯೇ ಅತ್ಯಾಸಕ್ತಳಾಗಿ ಸರ್ವೋತ್ತಮನಾದ ಶ್ರೀಹರಿಯನ್ನು ಸೇವಿಸದೆ ಹೋದೆ. ಹೀಗೆ ಈ ಕಳೆದ ಕಾಲವೆಲ್ಲವೂ ವ್ಯರ್ಥವಾಯಿತು. ತಾವು ಭಗವದ್ಭಕ್ತರು' ಮಹಾಮಹಿಮರು ಎಂಬುದನ್ನು ಅರಿಯದಾದೆ. ಕೇವಲ ಇಂದ್ರಿಯಾರ್ಥಗಳಲ್ಲಿಯೇ ಮಗ್ನಳಾದ ನಾನು ವಿಷಯಸುಖಗಳಿಗಾಗಿಯೇ ತಮ್ಮನ್ನು ನೆರೆದೆ. ಆದರೇನು ! ತಮ್ಮ ಈ ಸಹವಾಸವು ನನ್ನ ಮರುಹುಟ್ಟನ್ನು ಹೋಗಲಾಡಿಸಿ ಮೋಕ್ಷಕ್ಕೆ ಕಾರಣವಾಗುವಂತೆ ಅನುಗ್ರಹಿಸಿಬೇಕು. ಭಗವದ್ಭಕ್ತರಲ್ಲ-ದವರ ಸಹವಾಸವು ಸಂಸಾರರೂಪವಾದ ಬಂಧಕ್ಕೆ ಕಾರಣವಾಗುವುದು. ಆದರೆ ಭಗವದ್ಭಕ್ತರ ಸಹವಾಸವು ಸಂಸಾರದಲ್ಲಿ ವಿರಕ್ತಿಯನ್ನು ಹುಟ್ಟಿಸಿ ಶ್ರೀಹರಿಯಲ್ಲಿ ಜ್ಞಾನಭಕ್ತಿಗಳನ್ನು ಉಂಟುಮಾಡುವುದರ ಮೂಲಕ ಮೋಕ್ಷಕ್ಕೆ ಕಾರಣವಾಗುವುದು. ಸತ್ಸಹವಾಸದಿಂದ ಜನರು ಕರ್ಮವನ್ನು ಶ್ರೀಹರಿಗೆ ಸಮರ್ಪಿಸುವುದನ್ನು ಅಭ್ಯಸಿಸಿ ಮೋಕ್ಷಕ್ಕೆ ಕಾರಣ ಮಾಡಿಕೊಳ್ಳುವರು. ಹಾಗಿಲ್ಲದೆ ಯಾವನು ಮಾಡಿದ ಕರ್ಮವು ಧರ್ಮಕ್ಕೂ, ವೈರಾಗ್ಯಕ್ಕೂ ಶ್ರೀಹರಿಯ ಸೇವೆಗೂ ಕಾರಣವಾಗದೆ ಹೋಗುವುದೋ ಅವನ ಜನ್ಮವು ವ್ಯರ್ಥ. ಅವನು ಬದುಕಿದ್ದೂ ಪ್ರಯೋಜನವಿಲ್ಲ. ಶ್ರೀಹರಿಯನ್ನು ತೋರಿ ಮೋಕ್ಷಕ್ಕೆ ಕಾರಣರಾಗುವ ತಮ್ಮನ್ನು ಪತಿಯನ್ನಾಗಿ ಪಡೆದ ನಾನು ಸಂಸಾರಬಂಧನದಿಂದ ಮೋಕ್ಷವನ್ನು ಅಪೇಕ್ಷಿಸಲಿಲ್ಲ. ಶ್ರೀಹರಿಯ ಬಂಧಕಶಕ್ತಿಯಿಂದ ವಂಚಿತಳಾಗಿ ಸಂಸಾರವನ್ನೇ ಅಪೇಕ್ಷಿಸಿದೆ. ಆದ್ದರಿಂದ ತಾವು ಅನುಗ್ರಹಿಸಿ ಮೋಕ್ಷಕ್ಕೆ ಕಾರಣನಾಗುವ ಪುತ್ರನನ್ನು ಕರುಣಿಸಬೇಕು' ಎಂದು ನುಡಿದಳು.



# ಅಥ ಪಂಚವಿಂಶೋಽಧ್ಯಾಯಃ

ಶ್ರೀಹರಿಯ ಅವತಾರಗಳು ಜ್ಞಾನಾನಂದದೇಹವುಳ್ಳವುಗಳೆ ಆದ್ದರಿಂದ ಶುಕ್ರ-ಶೋಣಿತಸಂಪರ್ಕದಿಂದುಂಟಾದ ದೇಹವುಳ್ಳವುಗಳಲ್ಲವೆಂಬುದನ್ನು ತಿಳಿಸುತ್ತಾರೆ ಈ ಅಧ್ಯಾಯದಲ್ಲಿ. ಮೊದಲಿಗೆ ದೇವಹೂತಿಗೆ ಕರ್ದಮರ ಉತ್ತರವೇನೆಂದು ಹೇಳುವರು–

**ಮೈತ್ರೇಯ ಉವಾಚ**

**ನಿರ್ವೇದವಾದಿನೀಮೇವಂ ಮನೋರ್ದುಹಿತರಂ ಮುನಿಃ ।**
**ದಯಾಲುಃ ಶಾಲಿನೀಮಾಹ ಶುಕ್ಲಾಭಿವ್ಯಾಹೃತಂ ಸ್ಮರನ್ ॥೧॥**

ಏವಂ=ಈ ರೀತಿ ನಿರ್ವೇದವಾದಿನೀಂ=ವೈರಾಗ್ಯವನ್ನು ಹೇಳುವ ಸ್ವಭಾವವುಳ್ಳ, ಮನೋಃ ದುಹಿತರಂ=ಮನುವಿನ ಮಗಳಾದ, ಶಾಲಿನೀಂ=ತನ್ನ ಹೆಂಡತಿಯಾದ ದೇಹಹೂತಿಯನ್ನು ಕುರಿತು, ದಯಾಲುಃ=ಕೃಪಾಲುವಾದ, ಮುನಿಃ=ಕರ್ದಮನು, ಶುಕ್ಲಾಭಿವ್ಯಾಹೃತಂ=ಶ್ರೀಹರಿಯು ಹೇಳಿದ್ದನ್ನು, ಸ್ಮರನ್=ಜ್ಞಾಪಿಸಿಕೊಂಡು, ಆಹ= ಹೇಳಿದನು. ॥೧॥

**ಋಷಿರುವಾಚ**

**ಮಾ ಖಿದೋ ರಾಜಪುತ್ರೀತ್ಥಮಾತ್ಮಾನಂ ಪ್ರತ್ಯನಿಂದಿತೇ ।**
**ಭಗವಾಂಸ್ತೇಽಕ್ಷರೋಗರ್ಭಮದೂರಾತ್ ಸಂಪ್ರಪತ್ಸ್ಯತೇ ॥೨॥**

ಹೇ ಅನಿಂದಿತೇ ರಾಜಪುತ್ರೀ=ದೋಷರಹಿತಳಾದ ಮನುಪುತ್ರಿಯಾದ ದೇವ-ಹೂತಿಯೇ, ಆತ್ಮಾನಂ ಪ್ರತಿ=ನಿನ್ನ ವಿಷಯದಲ್ಲಿ, ಇತ್ಥಂ=ಈರೀತಿ, ಮಾ ಖಿದಃ= ದುಃಖಿಸಬೇಡ. ತೇ=ನಿನ್ನ, ಗರ್ಭಂ=ಗರ್ಭವನ್ನು, ಅದೂರಾತ್=ಶೀಘ್ರದಲ್ಲಿ ಭಗವಾನ್=ಐಶ್ವರ್ಯಶಾಲಿಯಾದ, ಅಕ್ಷರಃ=ನಾಶರಹಿತನಾದ, ಅಥವಾ ತಂದೆಯ ಶುಕ್ರರೂಪದಿಂದ ತಾಯಿಯ ಯೋನಿಯಲ್ಲಿ ಕ್ಷರಿಸದಿರುವುದರಿಂದ ಅಕ್ಷರ ನೆನಿಸಿದ ಶ್ರೀಹರಿಯು ಸಂಪ್ರಪತ್ಸ್ಯತೇ ತಲುಪುವನು. ॥೨॥

**ಧೃತವ್ರತಾ ಸುಭದ್ರಂ ತೇ ದಮೇನ ನಿಯಮೇನ ಚ ।**
**ತಪೋದ್ರವಿಣದಾನೈಶ್ಚ ಶ್ರದ್ಧಯಾ ಚೇಶ್ವರಂ ಭಜ ॥೩॥**

ಧೃತವ್ರತಾ=ವ್ರತವನ್ನು ಸ್ವೀಕರಿಸಿ, ದಮೇನ=ಇಂದ್ರಿಯನಿಗ್ರಹದಿಂದ, ನಿಯಮೇನ =ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ ಮುಂತಾದ ನಿಯಮಗಳಿಂದ ತಪೋದ್ರವಿಣದಾನೈಃ=ತಪಸ್ಸು ಧನವನ್ನು ದಾನಮಾಡುವುದು ಮುಂತಾದವುಗಳಿಂದ, ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ ಸುಭದ್ರಂ ಈಶ್ವರಂ ಭಜ= ಮಂಗಲಪ್ರದನಾದಶ್ರೀಹರಿಯನ್ನು ಸೇವಿಸು. ॥೩॥

**ಸ ತ್ವಯಾರಾಧಿತಃ ಶುಕ್ಲೋ ವಿತನ್ವನ್ ಮಾಮಕಂ ಯಶಃ ।**
**ಛೇತ್ತಾ ತೇ ಹೃದಯಗ್ರಂಥಿಮೌದರ್ಯೋ ಬ್ರಹ್ಮಭಾವನಃ ॥೪॥**

ಸಃ ಶುಕ್ಲಃ=ಆ ಭಗವಂತನು, ತ್ವಯಾ=ನಿನ್ನಿಂದ ಆರಾಧಿತಃ ಸನ್=ಪೂಜಿತನಾಗಿ (ಸಂತೋಷಿತನಾಗಿ), ಮಾಮಕಂ ಯಶಃ ವಿತನ್ವನ್=ನನ್ನ ಕೀರ್ತಿಯನ್ನು ವಿಸ್ತರಿಸುತ್ತ, ಬ್ರಹ್ಮಭಾವನಃ=ಚತುರ್ಮುಖಜನಕನಾದ, (ಪರಬ್ರಹ್ಮನನ್ನು ಉಪದೇಶಿಸುವವನು) ತೇ ಔದರ್ಯಃ=ನಿನ್ನ ಮಗನಾಗಿ ಅವತರಿಸಿ, ತೇ=ನಿನ್ನ ಹೃದಯಗ್ರಂಥಿಂ= ಅಹಂಕಾರಮಮಕಾರರೂಪವಾದ ಸಂಸಾರಕಾರಣವನ್ನು, ಛೇತ್ತಾ=ಕತ್ತರಿಸುವನು, ಎಂದು ಹೇಳಿದನು. ॥೪॥

**ಮೈತ್ರೇಯ ಉವಾಚ**

**ದೇವಹೂತ್ಯಪಿ ಸಂದೇಶಂ ಗೌರವೇಣ ಪ್ರಜಾಪತೇಃ ।**
**ಸಮ್ಯಕ್ ಶ್ರದ್ಧಾಯ ಪುರುಷಂ ಕೂಟಸ್ಥಮಭಜದ್ ಗುರುಮ್ ॥೫॥**

ದೇವಹೂತಿಃ ಅಪಿ=ದೇವಹೂತಿಯೂ ಸಹ, ಪ್ರಜಾಪತೇಃ=ಕರ್ದಮರ, ಸಂದೇಶಂ=ಆಜ್ಞೆಯನ್ನು, ಸಮ್ಯಕ್ ಶ್ರದ್ಧಾಯ=ಚೆನ್ನಾಗಿ ವಿಶ್ವಾಸಮಾಡಿ, ಕೂಟಸ್ಥಂ= ನಿರ್ವಿಕಾರನಾದ, ಗುರುಂ=ಉಪದೇಶಕನಾದ, ಪುರುಷಂ=ಸರ್ವರ ಶರೀರದಲ್ಲಿ- ರುವ ಶ್ರೀಹರಿಯನ್ನು, ಅಭಜತ್=ಸೇವಿಸಿದಳು. ॥೫॥

**ತಸ್ಯಾಂ ಬಹುತಿಥೇ ಕಾಲೇ ಭಗವಾನ್ ಮಧುಸೂದನಃ ।**
**ಕಾರ್ದಮಂ ವೀರ್ಯಮಾಪನ್ನೋ ಜಜ್ಞೇಽಗ್ನಿರಿವ ದಾರುಣಿ ॥೬॥**

ಬಹುತಿಥೇ ಕಾಲೇ=ಅನೇಕ ದಿನಗಳು ಕಳೆದ ಮೇಲೆ ಭಗವಾನ್ ಮಧು- ಸೂದನಃ=ಶ್ರೀಹರಿಯು, ಕಾರ್ದಮಂ ವಿರ್ಯಂ=ಕರ್ದಮರ ವೀರ್ಯವನ್ನು, ಆಪನ್ನಃ=ಪ್ರವೇಶಿಸಿ, ತಸ್ಯಾಂ=ದೇವಹೂತಿಯಲ್ಲಿ, ದಾರುಣಿ ಅಗ್ನಿರಿವ=ಕಟ್ಟಿಗೆಯಲ್ಲಿ ಬೆಂಕಿಯಂತೆ, ಜಜ್ಞೇ=ಆವಿರ್ಭವಿಸಿದನು.

ಇಲ್ಲಿ ಶುಕ್ಲಶೋಣಿತಸಂಬಂಧದಿಂದ ನಮ್ಮಂತೆ ಭಗವಂತನ ದೇಹ ಜನಿಸಿತೆಂದು ತೋರುವುದು. ಅದು ಸರಿಯಲ್ಲ. ಅವನು ಅಪ್ರಾಕೃತ ದೇಹವುಳ್ಳವನು ಕಾರಣ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು-

**ನಾವತಾರೇಷ್ವಪಿ ಹರೇರ್ದೇಹಃ ಶುಕ್ಲಾದಿಸಂಭವಃ ।**
**ತಥಾಪಿ ಶುಕ್ಲಸಂಸ್ಥಃ ಸನ್ ಮಾತೃದೇಹಂ ಪ್ರವಿಶ್ಯ ಚ ॥**
**ವಿಲಾಪ್ಯ ಶುಕ್ಲಂ ತತ್ರೈವ ಕೇವಲಜ್ಞಾನರೂಪಕಃ ।**
**ಉದೇತಿ ಭಗವಾನ್ ವಿಷ್ಣುಃ ಕಾಲೇ ಲೋಕಂ ವಿಮೋಹಯನ್॥**
**ಅಗ್ನಿರಿವ ದಾರುಣಿ ಇತಿ ವ್ಯಕ್ತಿಸ್ಥಾನಮಾತ್ರತ್ವೇ ದೃಷ್ಟಾಂತಃ ।**

**ಇತಿ ಮಹಾವರಾಹೇ ।**

ಅವತಾರಮಾಡಿದಾಗಲೂ ಶ್ರೀಹರಿಯ ದೇಹವು ಶುಕ್ಲಶೋಣಿತಗಳಿಂದ ವಿಕೃತವಾದುದಲ್ಲ, ಆದರೂ ತಂದೆಯ ರೇತಸ್ಸಿನಲ್ಲಿದ್ದು ತಾಯಿಯ ದೇಹವನ್ನೂ ಪ್ರವೇಶಿಸಿ ಅಲ್ಲಿಯೇ ಆ ರೇತಸ್ಸನ್ನು ನಾಶಮಾಡಿ ಕೇವಲ ಜ್ಞಾನರೂಪದಿಂದ ಶ್ರೀಹರಿ ಹತ್ತನೇ ತಿಂಗಳಿನಲ್ಲಿ ಅಜ್ಞರಿಗೆ ಮೋಹಗೊಳಿಸುವುದಕ್ಕೆ ಉದ್ಭವಿಸುವನು. ಕಟ್ಟಿಗೆಯಲ್ಲಿ ಬೆಂಕಿಯಂತೆ ಎಂದು ಹೇಳಿದ್ದು ವ್ಯಕ್ತಿಸ್ಥಾನ ಎಂಬ ವಿಷಯದಲ್ಲಿ ಮಾತ್ರ ಹೊರತು ದೇವಹೂತಿಯನ್ನು ಬಿಟ್ಟು ಇರಲಾಗುವುದಿಲ್ಲವೆಂದಲ್ಲ. ॥೬॥

**ಅವಾದಯಂಸ್ತದಾ ವ್ಯೋಮ್ನಿ ವಾದಿತ್ರಾಣಿ ಘನಾಘನಾಃ ।**
**ಗಾಯಂತಿ ತಂ ಸ್ಮ ಗಂದರ್ವಾ ನೃತ್ಯಂತ್ಯಪ್ಸರಸೋ ಮುದಾ ॥೭॥**

ತದಾ=ಶ್ರೀಹರಿಯು ಅವತರಿಸಿದಾಗ, ವ್ಯೋಮ್ನಿ=ಆಕಾಶದಲ್ಲಿ, ವಾದಿತ್ರಾಣಿ ಅವಾದಯನ್=ವಾದ್ಯಗಳು ಮೊಳಗಿದವು. ಘನಾಘನಾಃ=ಮಳೆಗರೆಯುವ ಮೋಡಗಳು, ಜಗರ್ಜುಃ=ಗರ್ಜಿಸಿದವು. ತಂ=ಭಗವಂತನನ್ನು, ಗಂದರ್ವಾಃ= ಗಂಧರ್ವರು ಗಾಯಂತಿ, ಸ್ಮ=ಗಾನಮಾಡುತ್ತಿದ್ದರು. ಮುದಾ ಸಂತೋಷದಿಂದ, ಅಪ್ಸರಸಃ=ಅಪ್ಸರಾಸ್ತ್ರೀಯರು, ನೃತ್ಯಂತಿ, ಸ್ಮ=ಕುಣಿಯುತ್ತಿದ್ದರು. ॥೭॥

**ಪೇತುಃ ಸುಮನಸೋ ದಿವ್ಯಾಃ ಖೇಚರೈರಪವರ್ಜಿತಾಃ ।**
**ಪ್ರಸೇದುಶ್ಚ ದಿಶಃ ಸರ್ವಾ ಅಂಭಾಂಸಿ ಚ ಮನಾಂಸಿ ಚ ॥೮॥**

ಖೇಚರೈಃ=ಆಕಾಶದಲ್ಲಿ ಸಂಚರಿಸುವ ದೇವತೆಗಳಿಂದ, ಅಪವರ್ಜಿತಾಃ= ಹಾಕಲ್ಪಟ್ಟ ದಿವ್ಯಾಃ=ಅಲೌಕಿಕವಾದ, ಸುಮನಸಃ=ಹೂಗಳು, ಪೇತುಃ=ಬಿದ್ದವು, ಸರ್ವಾಃ ದಿಶಃ=ಎಲ್ಲ ದಿಕ್ಕುಗಳು, ಚ=ಮತ್ತು ಅಂಭಾಂಸಿ=ನೀರುಗಳು, ಚ=ಮತ್ತು ಮನಾಂಸಿ=ಮನಸ್ಸುಗಳು, ಪ್ರಸೇದುಃ=ಪ್ರಸನ್ನವಾದವು. ॥೮॥

**ತತ್ ಕರ್ದಮಾಶ್ರಮಪದಂ ಸರಸ್ವತ್ಯಾ ಪರಿಪ್ಲುತಂ ।**
**ಸ್ವಯಂಭೂಃ ಸಾರ್ಧಮೃಷಿಭಿರ್ಮರೀಚ್ಯಾದಿಭಿರಭ್ಯಗಾತ್ ॥೯॥**

ಸರಸ್ವತ್ಯಾ ಪರಿಪ್ಲುತಂ=ಸರಸ್ವತೀನದಿಯಿಂದ ಸುತ್ತುವರಿದ, ತತ್=ಆ, ಕರ್ದಮಾಶ್ರಮಪದಂ=ಕರ್ದಮರ ಆಶ್ರಮವಿರುವ ಸ್ಥಳಕ್ಕೆ, ಮರೀಚ್ಯಾದಿಭಿಃ ಋಷಿಭಿಃ ಸಾರ್ಧಂ=ಮರೀಚಿ ಮುಂತಾದ ಋಷಿಗಳಿಂದ ಕೂಡಿಕೊಂಡು ಸ್ವಯಂಭೂಃ=ಬ್ರಹ್ಮದೇವರು ಅಭ್ಯಗಾತ್=ಬಂದರು. ॥೯॥

**ಭಗವಂತಂ ಪರ ಬ್ರಹ್ಮ ಸತ್ವೇನಾಂಶೇನ ಶತ್ರುಹನ್ ।**
**ತತ್ವಸಂಖ್ಯಾನವಿಜ್ಞಪ್ತ್ಯೈ ಜಾತಂ ವಿದ್ವಾನಜಃ ಸ್ವರಾಟ್ ॥೧೦॥**

ಹೇ ಶತ್ರುಹನ್=ವಿದುರನೇ, ಸತ್ವೇನ=ಮಹಾಗುಣಪೂರ್ಣವಾದ, ಅಂಶೇನ=ಸ್ವರೂಪಾಂಶದಿಂದ, ತತ್ವಸಂಖ್ಯಾನವಿಜ್ಞಪ್ತ್ಯೈ=ಇಪ್ಪತ್ನಾಲ್ಕು ತತ್ವಗಳ ಸಮೀಚಿನ ಜ್ಞಾನ ಮಾಡಿಕೊಡಲು, ಜಾತಂ=ಅವತರಿಸಿದ, ಭಗವಂತಂ ಪರಂ ಬ್ರಹ್ಮ=ಐಶ್ವರ್ಯಶಾಲಿಯಾದ ಶ್ರೀಮನ್ನಾರಾಯಣ(ನೆಂದು)ನನ್ನು ವಿದ್ವಾನ್=ತಿಳಿದ, ಅಜಃ=ಪರಮಾತ್ಮನಿಂದ ಜನಿಸಿದ, ಸ್ವರಾಟ್=ಸ್ವತಂತ್ರನಾದ ಶ್ರೀಹರಿಯಿಂದ ರಾಜಿಸುವ ಬ್ರಹ್ಮದೇವನು ಹೇಳಿದನು ಎಂದನ್ವಯ.

ಇಲ್ಲಿ ಸತ್ವೇನ ಎಂಬುದಕ್ಕೆ ಪ್ರಾಕೃತ ಸತ್ವಗುಣದಿಂದ ಎಂಬ ಭ್ರಾಂತಿಯನ್ನು ನಿವಾರಿಸಲು ವಿವಕ್ಷಿತ ಅರ್ಥವನ್ನು ಪ್ರಮಾಣದಿಂದಲೇ ತಿಳಿಸುವರು –

**ಮಹಾ(ಗುಣಾಭಿ)ಗುಣೈಶ್ಚ ಪೂರ್ಣತ್ವಂ ಸತ್ವಮಿತ್ಯುಚ್ಯತೇ ಬುಧೈಃ ।**
**ಇತಿ ವಾಮನೇ ।**

ಮಹಾಗುಣಗಳಿಂದ ಪೂರ್ಣತೆಯು ಸತ್ವವೆನಿಸುವುದು ಎಂದು ವಾಮನ-ದಲ್ಲಿದೆ. ಚ ಶಬ್ದದಿಂದ ವಾಮನದಲ್ಲಿ ಪೂರ್ವಪ್ರಸಕ್ತವಾದುದನ್ನು ಸ್ವೀಕರಿಸಬೇಕು. ಅಭಿಪೂರ್ಣ ಎಂಬ ಪಾಠದಲ್ಲಿ ಈ ತೊಂದರೆ ಇಲ್ಲ. ಗುಣೈಶ್ಚ ಎಂಬುದು ಯಾದವಾರ್ಯರ ಪಾಠ. ॥೧೦॥

**ಸಭಾಜಯನ್ ವಿಶುದ್ಧೇನ ಚೇತಸಾ ತಚ್ಚಿಕೀರ್ಷಿತಂ ।**
**ಪ್ರಹೃಷ್ಯಮಾಣೈರಸುಭಿಃ ಕರ್ದಮಂ ಚೇದಮಭ್ಯಧಾತ್ ॥೧೧॥**

ತಚ್ಚಿಕೀರ್ಷಿತಂ=ಶ್ರೀಹರಿಯು ಮಾಡಲಿಚ್ಛಿಸಿದ ಸಾಂಖ್ಯಶಾಸ್ತ್ರನಿರ್ಮಾಣವನ್ನು ವಿಶುದ್ಧೇನ ಚೇತಸಾ=ಪರಿಶುದ್ಧಮನಸ್ಸಿನಿಂದ, ಸಭಾಜಯನ್=ಬಹಳ ಸಾಧುವೆಂದು ಗೌರವಿಸಿ, ಪ್ರಹೃಷ್ಯಮಾಣೈಃ ಅಸುಭಿಃ=ಸಂತುಷ್ಟವಾದ ಇಂದ್ರಿಯಗಳಿಂದ,

ಕರ್ದಮಂ ಚ=ಕರ್ದಮದೇವಹೂತಿಯರಿಗೆ, ಇದಂ ಅಭ್ಯದಾತ್=ಮುಂದೆ ಹೇಳುವುದನ್ನು ಹೇಳಿದನು ॥೧೧॥

ಬ್ರಹ್ಮೋವಾಚ

**ತ್ವಯಾ ಮೇಽಪಚಿತಿಸ್ತಾತ ಕಲ್ಪಿತಾ ನಿರ್ವ್ಯಲೀಕತಃ ।**
**ಯನ್ಮೇ ಸಂಜಗೃಹೇ ವಾಕ್ಯಂ ಭವಾನ್ ಮಾನದ ಮಾನಯನ್॥೧೨॥**

ಹೇ ತಾತ ಮಾನದ=ಎಲೇ ಮಗನೆ ಗೌರವವನ್ನು ನೀಡುವವನೇ !, ಯತ್=ಯಾವ ಕಾರಣ, ಭವಾನ್=ನೀನು, ಮೇ=ನನ್ನ, ವಾಕ್ಯಂ=ಮಾತನ್ನು, (ಪ್ರಜೆಗಳನ್ನು ಸೃಷ್ಟಿಸು ಎಂಬ) ಮಾನಯನ್=ಗೌರವಿಸಿ, ಸಂಜಗೃಹೇ=ಸ್ವೀಕರಿಸಿದಿಯೋ, ತತ್=ಆದ್ದರಿಂದ, ತ್ವಯಾ=ನಿನ್ನಿಂದ, ಮೇ=ನನ್ನ ಅಪಚಿತಿಃ=ಪೂಜೆಯು, ನಿರ್ವ್ಯಲೀಕತಃ=ನಿಷ್ಕಪಟತೆಯಿಂದ, ಕಲ್ಪಿತಾ=ಮಾಡಲ್ಪಟ್ಟಿತು. ॥೧೨॥

**ಏತಾವತ್ಯೇವ ಶುಶ್ರೂಷಾ ಕಾರ್ಯಾ ಪಿತರಿ ಪುತ್ರಕೈಃ ।**
**ಬಾಢಮಿತ್ಯನುಮನ್ಯೇತ ಗೌರವೇಣ ಗುರೋರ್ವಚಃ ॥೧೩॥**

ಪುತ್ರಕೈಃ=ಮಕ್ಕಳಿಂದ, ಪಿತರಿ=ತಂದೆಯ ವಿಷಯದಲ್ಲಿ, ಕಾರ್ಯಾ=ಮಾಡಬೇಕಾದ, ಶುಶ್ರೂಷಾ=ಸೇವೆಯು, ಗೌರವೇಣ=ಮರ್ಯಾದೆಯಿಂದ, ಗುರೋಃ ವಚಃ=ತಂದೆಯ ಮಾತನ್ನು, ಬಾಢಂ ಇತಿ ಅನುಮನ್ಯೇತ=ಹಾಗೆ ಆಗಲಿ ತಾವು ಹೇಳಿದುದು ನನಗೆ ಸಮ್ಮತವು ಆದರಂತೆ ಮಾಡುವೆನು ಎಂದು ಅಂಗೀಕರಿಸುವುದು ಏನಿದೆಯೋ, ಏತಾವತೀ ಏವ=ಇಷ್ಟೇ ! ॥೧೩॥

**ಇಮಾ ದುಹಿತರಃ ಸತ್ಯಸ್ತವ ವತ್ಸ ಸುಮಧ್ಯಮಾಃ ।**
**ಸರ್ಗಮೇತಾ ಪ್ರಭಾವೈಃ ಸ್ವೈರ್ಬೃಂಹಯಿಷ್ಯಂತಿ ನೈಕಧಾ ॥೧೪॥**

ಹೇ ವತ್ಸ=ಕರ್ದಮನೇ, ಇಮಾಃ=ಈ ತವ=ನಿನ್ನ, ದುಹಿತರಃ=ಮಕ್ಕಳು ಸತ್ಯಃ=ಪತಿವ್ರತೆಯರು, ಸಂತು=ಆಗಲಿ. ಸುಮಧ್ಯಮಾಃ=ಸಣ್ಣನಡುವಿನ ಏತಾಃ=ಇವರು, ಸ್ವೈಃ ಪ್ರಭಾವೈಃ=ತಮ್ಮ ಸಾಮರ್ಥ್ಯದಿಂದ, ಸರ್ಗಂ=ಪ್ರಜಾಸೃಷ್ಟಿಯನ್ನು, ನೈಕಧಾ=ಅನೇಕರೀತಿಯಿಂದ, ಬೃಹಂಯಿಷ್ಯಂತಿ=ಬೆಳೆಸುವರು. ಇದರಿಂದ ನನ್ನ ಆಜ್ಞೆ ಪೂರ್ಣಗೊಳಿಸಿದಂತಾಗುವುದು ಎಂದು ಭಾವ. ॥೧೪॥

**ಅತಸ್ತ್ವಮೃಷಿಮುಖ್ಯೇಭ್ಯೋ ಯಥಾಶೀಲಂ ಯಥಾರುಚಿ ।**
**ಆತ್ಮಜಾಃ ಪರಿದೇಹ್ಯಂಗ ವಿಸ್ತಣೀಹಿ ಯಶೋ ಭುವಿ ॥೧೫॥**

ಹೇ ಅಂಗ=ಕರ್ದಮನೇ, ಅತಃ=ಮಾನುಷಸರ್ಗವು ಮಿಥುನದಿಂದ ಆಗುವುದರಿಂದ, ತ್ವಂ=ನೀನು, ಋಷಿಮುಖ್ಯೇಭ್ಯಃ=ಮರೀಚಿಮುಂತಾದ ಶ್ರೇಷ್ಠ ಮುನಿಗಳಿಗೆ, ಯಥಾಶೀಲಂ=ಸ್ವಭಾವಾನುಗುಣವಾಗಿ, ಯಥಾರುಚಿ=ಅವರವರ ಇಚ್ಛಾನುಸಾರ, ಆತ್ಮಜಾಃ=ಮಕ್ಕಳನ್ನು ಪರಿದೇಹಿ=ವಿವಾಹ ಮಾಡಿಕೊಡು, ಭುವಿ= ಜಗತ್ತಿನಲ್ಲಿ ಯಶಃ=ಕೀರ್ತಿಯನ್ನು ವಿಸ್ತೃಣೀಹಿ=ವಿಸ್ತಾರಗೊಳಿಸು. ||೧೫||

**ವೇದಾಹಮಾದ್ಯಂ ಪುರುಷಮವತೀರ್ಣಂ ಸ್ವಮಾಯಯಾ ।**
**ಭೂತಾನಾಂ ಶೇವಧಿಂ ದೇಹಂ ಬಿಭ್ರಾಣಂ ಕಪಿಲಂ ಮುನಿಮ್||೧೬||**

ಸ್ವಮಾಯಯಾ=ತನ್ನ ಇಚ್ಛೆಯಿಂದ, ಭೂತಾನಾಂ=ಮುಕ್ತಿಯೋಗ್ಯರಿಗೆ, ಶೇವಧಿಂ =ಪುರುಷಾರ್ಥಸಾಧನೆಗೆ ನಿಧಿಯಂತಿರುವ, ದೇಹಂ=ಶರೀರವನ್ನು, ಬಿಭ್ರಾಣಂ= ಧರಿಸಿರುವ, ಮುನಿಂ=ಸರ್ವಜ್ಞನಾದ, ಕಪಿಲಂ=ಕಂ=ಸುಖವನ್ನು ಪಿಬತಿ=ಸರ್ವದಾ ಅನುಭವಿಸುವನು ಲಾತಿ=ಇತರರಿಗೆ ಕೊಡುವನಾದ್ದರಿಂದ ಕಪಿಲನಾಮಕನಾಗಿ, ಅವತೀರ್ಣಂ=ಅವತರಿಸಿದ, ಆದ್ಯಂ ಪುರುಷಂ=ಸಾಕ್ಷಾನ್ನಾರಾಯಣನೇ ಎಂದು, ಅಹಂ ವೇದ=ನಾನು ತಿಳಿದಿರುವೆನು. ನೀನು ಹಾಗೆಯೇ ತಿಳಿಯೆಂದು ಭಾವ. ||೧೬||

ಹಿಂದಿನ ಐದು ಶ್ಲೋಕದಿಂದ ಕರ್ದಮರಿಗೆ ಹೇಳಿ ಈಗ ದೇವಹೂತಿಗೆ ಮೂರುಶ್ಲೋಕದಿಂದ ಹೇಳುವರು –

**ಜ್ಞಾನವಿಜ್ಞಾನಯೋಗೇನ ಕರ್ಮಣಾಮುದ್ಧರಂಶ್ಚ ಯಃ ।**
**ಹಿರಣ್ಯಕೇಶಃ ಪದ್ಮಾಕ್ಷಃ ಪದ್ಮಮುದ್ರಾಪದಾಂಬುಜಃ ||೧೭||**

ಜ್ಞಾನವಿಜ್ಞಾನಯೋಗೇನ=ಸಾಮಾನ್ಯಜ್ಞಾನ ವಿಶೇಷಜ್ಞಾನಗಳೆಂಬ ಮೋಕ್ಷೋ-ಪಾಯದಿಂದ ಕರ್ಮಣಾಂ ಉದ್ಧರನ್=ಸಂಸಾರಮೂಲಭೂತ ಕರ್ಮಗಳನ್ನು ಕಿತ್ತೆಸೆಯುತ್ತ, ಯಃ=ಯಾವನು, ಹಿರಣ್ಯಕೇಶಃ=ಬಂಗಾರದ ಕೂದಲು, ಪದ್ಮಾಕ್ಷಃ= ಕಮಲದಂತೆ ಕಣ್ಣುಗಳು, ಪದ್ಮಮುದ್ರಾಪದಾಂಬುಜಃ=ಕಮಲಚಿನ್ಹಿತ ಪಾದಪದ್ಮ-ವುಳ್ಳವನು (ತನ್ನ=ಲಕ್ಷಣಗಳಿಂದ ಕೂಡಿದ) ||೧೭||

**ಏಷ ಮಾನವಿ ತೇ ಗರ್ಭಃ ಪ್ರವಿಷ್ಟಃ ಕೈಟಭಾರ್ದನಃ ।**
**ಅವಿದ್ಯಾಸಂಶಯಗ್ರಂಥಿಂ ಛಿತ್ವಾ ಗಾಂ ವಿಚರಿಷ್ಯತಿ ||೧೮||**

ಹೇ ಮಾನವಿ=ಮನುಕುವರಿಯೇ, ತೇ=ನಿನ್ನ ಗರ್ಭಂ ಪ್ರವಿಷ್ಟಃ=ಗರ್ಬದಲ್ಲಿ ಪ್ರವೇಶಿಸಿದವನು, ಕೈಟಭಾರ್ದನಃ=ಕೈಟಭನೆಂಬ ದೈತ್ಯಸಂಹಾರಕನಾದ ಶ್ರೀಹರಿಯು, ಏಷಃ=ಇವನು ತೇ=ನಿನ್ನ ಅವಿದ್ಯಾಸಂಶಯಗ್ರಂಥಿಂ ಅಜ್ಞಾನಮೂಲಕಭ್ರಮ,

ಪರಾಪರತತ್ತ್ವವಿಷಯಕ ಸಂಶಯಗಳ ಮೂಲಕಾರಣವಾದ ಜಡಅಂತಃಕರಣವನ್ನು ಛಿತ್ತ್ವಾ=ನಾಶಪಡಿಸಿ ಗಾಂ ವಿಚರಿಷ್ಯತಿ=ಇತರ ಭಕ್ತರ ಜ್ಞಾನೋಪದೇಶಕ್ಕಾಗಿ ಭೂಸಂಚಾರ ಮಾಡುವನು. ॥೧೮॥

**ಅಯಂ ಸಿದ್ಧಗಣಾಧೀಶಃ ಸಾಂಖ್ಯಾಚಾರ್ಯೈಃ ಸುಸಮ್ಮತಃ ।**
**ಲೋಕೇ ಕಪಿಲ ಇತ್ಯಾಖ್ಯಾಂ ಗಂತಾ ತೇ ಕೀರ್ತಿವರ್ಧನಃ॥೧೯॥**

ಅಯಂ=ಇವನು, ಸಿದ್ಧಗಣಾಧೀಶಃ=ಜ್ಞಾನಿಸಮೂಹಕ್ಕೆ, ಮುಕ್ತರಿಗೆ ನಿಯಾಮ-ಕನು, ಸಾಂಖ್ಯಾಚಾರ್ಯೈಃ ಸುಸಮ್ಮತಃ=ಸಮ್ಯಕ್ ಜ್ಞಾನಪ್ರವರ್ತಕರಿಂದ ತಮ್ಮ ಗುರುವೆಂದು ನಿಶ್ಚಿತನಾದವನು, ಲೋಕೇ=ಜಗತ್ತಿನಲ್ಲಿ ಕಪಿಲ ಇತಿ ಆಖ್ಯಾಂ ಗಂತಾ= ಕಪಿಲನೆಂಬ ಹೆಸರು ಪಡೆಯುವನು, ತೇ=ನಿನ್ನ ಕೀರ್ತಿವರ್ಧನಃ=ಯಶವನ್ನು ವಿಸ್ತರಿಸುವವನು. ॥೧೯॥

**ಮೈತ್ರೇಯ ಉವಾಚ**

**ತಾವಾಶ್ವಾಸ್ಯ ಜಗತ್ಸ್ರಷ್ಟಾ ಕುಮಾರೈಃ ಸಹನಾರದಃ ।**
**ಹಂಸೋ ಹಂಸೇನ ಯಾನೇನ ಸ್ವಧಾಮ ಪ್ರತ್ಯಪದ್ಯತ ॥೨೦॥**

ಜಗತ್ಸ್ರಷ್ಟಾ ಹಂಸಃ=ಸೃಷ್ಟಿಕರ್ತನಾದ ನಿರ್ಮಲನಾದ,ಬ್ರಹ್ಮನು ತೌ=ಕಪಿಲದೇವ-ಹೂತಿಯರನ್ನು, ಆಶ್ವಾಸ್ಯ=ಸಮಾಧಾನಗೊಳಿಸಿ ಕುಮಾರೈಃಸಹ ನಾರದಃ=ಸನಕಾದಿ-ಗಳಿಂದ ನಾರದರಿಂದಲೂ ಸಹಿತನಾಗಿ, ಹಂಸೇನ ಯಾನೇನ=ಹಂಸವಾಹನದಿಂದ, ಸ್ವಧಾಮ ಪ್ರತ್ಯಪದ್ಯತ=ತನ್ನ ಮನೆ ತಲುಪಿದನು. ॥೨೦॥

**ಗತೇ ಶತಧೃತೌ ಕ್ಷತ್ತಃ ಕರ್ದಮಸ್ತೇನ ಚೋದಿತಃ ।**
**ಯಥೋದಿತಂ ಸ್ವದುಹಿತೄಃ ಪ್ರಾದಾದ್ ವಿಶ್ವಸೃಜಾಂ ತತಃ ॥೨೧॥**

ಹೇ ಕ್ಷತ್ತಃ=ವಿದುರನೇ, ಶತಧೃತೌ ಗತೇ=ಬ್ರಹ್ಮದೇವನು ತನ್ನ ಮನೆಗೆ ತೆರಳುತ್ತಿರಲು, ತೇನ=ಬ್ರಹ್ಮನಿಂದ, ಚೋದಿತಃ=ಪ್ರೇರಿತನಾದ, ಕರ್ದಮಃ=ಕರ್ದಮ ಋಷಿಯು, ತತಃ=ಅನಂತರವೇ,ಯಥೋದಿತಂ=ಬ್ರಹ್ಮಹೇಳಿದ ಪ್ರಕಾರ, ಸ್ವದುಹಿತೄಃ =ತನ್ನ ಕನ್ಯೆಯರನ್ನು, ವಿಶ್ವಸೃಜಾಂ=ಮರೀಚಿಮುಂತಾದ ಸೃಷ್ಟಿಕರ್ತೃಗಳಿಗೆ, ಪ್ರಾದಾತ್=ಕೊಟ್ಟನು. ॥೨೧॥

**ಮರೀಚಯೇ ಕಲಾಂ ಪ್ರಾದಾದನುಸೂಯಾಮಥಾತ್ರಯೇ ।**
**ಶ್ರದ್ಧಾಮಂಗಿರಸೇಽಯಚ್ಛತ್ ಪುಲಸ್ತ್ಯಾಯ ಹವಿರ್ಭುವಂ ॥೨೨॥**

ಹೇ ಅಂಗ=ಕರ್ದಮನೇ, ಅತಃ=ಮಾನುಷಸರ್ಗವು ಮಿಥುನದಿಂದ ಆಗುವುದರಿಂದ, ತ್ವಂ=ನೀನು, ಋಷಿಮುಖ್ಯೇಭ್ಯಃ=ಮರೀಚಿಮುಂತಾದ ಶ್ರೇಷ್ಠ ಮುನಿಗಳಿಗೆ, ಯಥಾಶೀಲಂ=ಸ್ವಭಾವಾನುಗುಣವಾಗಿ, ಯಥಾರುಚಿ=ಅವರವರ ಇಚ್ಛಾನುಸಾರ, ಆತ್ಮಜಾಃ=ಮಕ್ಕಳನ್ನು ಪರಿದೇಹಿ=ವಿವಾಹ ಮಾಡಿಕೊಡು, ಭುವಿ= ಜಗತ್ತಿನಲ್ಲಿ ಯಶಃ=ಕೀರ್ತಿಯನ್ನು ವಿಸ್ತೃಣೀಹಿ=ವಿಸ್ತಾರಗೊಳಿಸು. ॥೧೫॥

**ವೇದಾಹಮಾದ್ಯಂ ಪುರುಷಮವತೀರ್ಣಂ ಸ್ವಮಾಯಯಾ ।**
**ಭೂತಾನಾಂ ಶೇವಧಿಂ ದೇಹಂ ಬಿಭ್ರಾಣಂ ಕಪಿಲಂ ಮುನಿಮ್॥೧೬॥**

ಸ್ವಮಾಯಯಾ=ತನ್ನ ಇಚ್ಛೆಯಿಂದ, ಭೂತಾನಾಂ=ಮುಕ್ತಿಯೋಗ್ಯರಿಗೆ, ಶೇವಧಿಂ =ಪುರುಷಾರ್ಥಸಾಧನೆಗೆ ನಿಧಿಯಂತಿರುವ, ದೇಹಂ=ಶರೀರವನ್ನು ಬಿಭ್ರಾಣಂ= ಧರಿಸಿರುವ, ಮುನಿಂ=ಸರ್ವಜ್ಞನಾದ, ಕಪಿಲಂ=ಕಂ=ಸುಖವನ್ನು ಪಿಬತಿ=ಸರ್ವದಾ ಅನುಭವಿಸುವನು ಲಾತಿ=ಇತರರಿಗೆ ಕೊಡುವನಾದ್ದರಿಂದ ಕಪಿಲನಾಮಕನಾಗಿ, ಅವತೀರ್ಣಂ=ಅವತರಿಸಿದ, ಆದ್ಯಂ ಪುರುಷಂ=ಸಾಕ್ಷಾನ್ನಾರಾಯಣನೇ ಎಂದು, ಅಹಂ ವೇದ=ನಾನು ತಿಳಿದಿರುವೆನು. ನೀನು ಹಾಗೆಯೇ ತಿಳಿಯೆಂದು ಭಾವ. ॥೧೬॥

ಹಿಂದಿನ ಐದು ಶ್ಲೋಕದಿಂದ ಕರ್ದಮರಿಗೆ ಹೇಳಿ ಈಗ ದೇವಹೂತಿಗೆ ಮೂರುಶ್ಲೋಕದಿಂದ ಹೇಳುವರು –

**ಜ್ಞಾನವಿಜ್ಞಾನಯೋಗೇನ ಕರ್ಮಣಾಮುದ್ಧರಂಶ್ಚ ಯಃ ।**
**ಹಿರಣ್ಯಕೇಶಃ ಪದ್ಮಾಕ್ಷಃ ಪದ್ಮಮುದ್ರಾಪದಾಂಬುಜಃ ॥೧೭॥**

ಜ್ಞಾನವಿಜ್ಞಾನಯೋಗೇನ=ಸಾಮಾನ್ಯಜ್ಞಾನ ವಿಶೇಷಜ್ಞಾನಗಳೆಂಬ ಮೋಕ್ಷೋ-ಪಾಯದಿಂದ ಕರ್ಮಣಾಂ ಉದ್ಧರನ್=ಸಂಸಾರಮೂಲಭೂತ ಕರ್ಮಗಳನ್ನು ಕಿತ್ತೆಸೆಯುತ್ತ, ಯಃ=ಯಾವನು, ಹಿರಣ್ಯಕೇಶಃ=ಬಂಗಾರದ ಕೂದಲು, ಪದ್ಮಾಕ್ಷಃ= ಕಮಲದಂತೆ ಕಣ್ಣುಗಳು, ಪದ್ಮಮುದ್ರಾಪದಾಂಬುಜಃ=ಕಮಲಚಿನ್ಹಿತ ಪಾದಪದ್ಮ-ವುಳ್ಳವನು (ತನ್ನ=ಲಕ್ಷಣಗಳಿಂದ ಕೂಡಿದ) ॥೧೭॥

**ಏಷ ಮಾನವಿ ತೇ ಗರ್ಭಃ ಪ್ರವಿಷ್ಟಃ ಕೈಟಭಾರ್ದನಃ ।**
**ಅವಿದ್ಯಾಸಂಶಯಗ್ರಂಥಿಂ ಛಿತ್ತ್ವಾ ಗಾಂ ವಿಚರಿಷ್ಯತಿ ॥೧೮॥**

ಹೇ ಮಾನವಿ=ಮನುಕುವರಿಯೇ, ತೇ=ನಿನ್ನ ಗರ್ಭಂ ಪ್ರವಿಷ್ಟಃ=ಗರ್ಬದಲ್ಲಿ ಪ್ರವೇಶಿಸಿದವನು, ಕೈಟಭಾರ್ದನಃ=ಕೈಟಭನೆಂಬ ದೈತ್ಯಸಂಹಾರಕನಾದ ಶ್ರೀಹರಿಯು, ಏಷಃ=ಇವನು ತೇ=ನಿನ್ನ ಅವಿದ್ಯಾಸಂಶಯಗ್ರಂಥಿಂ ಅಜ್ಞಾನಮೂಲಕಭ್ರಮ,

ಪರಾಪರತತ್ತ್ವವಿಷಯಕ ಸಂಶಯಗಳ ಮೂಲಕಾರಣವಾದ ಜಡಅಂತಃಕರಣವನ್ನು ಛಿತ್ತ್ವಾ=ನಾಶಪಡಿಸಿ ಗಾಂ ವಿಚರಿಷ್ಯತಿ=ಇತರ ಭಕ್ತರ ಜ್ಞಾನೋಪದೇಶಕ್ಕಾಗಿ ಭೂಸಂಚಾರ ಮಾಡುವನು. ॥೧೮॥

**ಅಯಂ ಸಿದ್ಧಗಣಾಧೀಶಃ ಸಾಂಖ್ಯಾಚಾರ್ಯೈಃ ಸುಸಮ್ಮತಃ ।**
**ಲೋಕೇ ಕಪಿಲ ಇತ್ಯಾಖ್ಯಾಂ ಗಂತಾ ತೇ ಕೀರ್ತಿವರ್ಧನಃ॥೧೯॥**

ಅಯಂ=ಇವನು, ಸಿದ್ಧಗಣಾಧೀಶಃ=ಜ್ಞಾನಿಸಮೂಹಕ್ಕೆ, ಮುಕ್ತರಿಗೆ ನಿಯಾಮಕನು, ಸಾಂಖ್ಯಾಚಾರ್ಯೈಃ ಸುಸಮ್ಮತಃ=ಸಮ್ಯಕ್ ಜ್ಞಾನಪ್ರವರ್ತಕರಿಂದ ತಮ್ಮ ಗುರುವೆಂದು ನಿಶ್ಚಿತನಾದವನು, ಲೋಕೇ=ಜಗತ್ತಿನಲ್ಲಿ ಕಪಿಲ ಇತಿ ಆಖ್ಯಾಂ ಗಂತಾ=ಕಪಿಲನೆಂಬ ಹೆಸರು ಪಡೆಯುವನು, ತೇ=ನಿನ್ನ, ಕೀರ್ತಿವರ್ಧನಃ=ಯಶವನ್ನು ವಿಸ್ತರಿಸುವವನು. ॥೧೯॥

**ಮೈತ್ರೇಯ ಉವಾಚ**

**ತಾವಾಶ್ವಾಸ್ಯ ಜಗತ್ಸ್ರಷ್ಟಾ ಕುಮಾರೈಃ ಸಹನಾರದಃ ।**
**ಹಂಸೋ ಹಂಸೇನ ಯಾನೇನ ಸ್ವಧಾಮ ಪ್ರತ್ಯಪದ್ಯತ ॥೨೦॥**

ಜಗತ್ಸ್ರಷ್ಟಾ ಹಂಸಃ=ಸೃಷ್ಟಿಕರ್ತನಾದ ನಿರ್ಮಲನಾದ,ಬ್ರಹ್ಮನು ತೌ=ಕಪಿಲದೇವಹೂತಿಯರನ್ನು, ಆಶ್ವಾಸ್ಯ=ಸಮಾಧಾನಗೊಳಿಸಿ ಕುಮಾರೈಃಸಹ ನಾರದಃ=ಸನಕಾದಿಗಳಿಂದ ನಾರದರಿಂದಲೂ ಸಹಿತನಾಗಿ, ಹಂಸೇನ ಯಾನೇನ=ಹಂಸವಾಹನದಿಂದ, ಸ್ವಧಾಮ ಪ್ರತ್ಯಪದ್ಯತ=ತನ್ನ ಮನೆ ತಲುಪಿದನು. ॥೨೦॥

**ಗತೇ ಶತಧೃತೌ ಕ್ಷತ್ತಃ ಕರ್ದಮಸ್ತೇನ ಚೋದಿತಃ ।**
**ಯಥೋದಿತಂ ಸ್ವದುಹಿತೄಃ ಪ್ರಾದಾದ್ ವಿಶ್ವಸೃಜಾಂ ತತಃ ॥೨೧॥**

ಹೇ ಕ್ಷತ್ತಃ=ವಿದುರನೇ, ಶತಧೃತೌ ಗತೇ=ಬ್ರಹ್ಮದೇವನು ತನ್ನ ಮನೆಗೆ ತೆರಳುತ್ತಿರಲು, ತೇನ=ಬ್ರಹ್ಮನಿಂದ, ಚೋದಿತಃ=ಪ್ರೇರಿತನಾದ, ಕರ್ದಮಃ=ಕರ್ದಮ ಋಷಿಯು, ತತಃ=ಅನಂತರವೇ,ಯಥೋದಿತಂ=ಬ್ರಹ್ಮಹೇಳಿದ ಪ್ರಕಾರ, ಸ್ವದುಹಿತೄಃ =ತನ್ನ ಕನ್ಯೆಯರನ್ನು, ವಿಶ್ವಸೃಜಾಂ=ಮರೀಚಿಮುಂತಾದ ಸೃಷ್ಟಿಕರ್ತೃಗಳಿಗೆ, ಪ್ರಾದಾತ್=ಕೊಟ್ಟನು. ॥೨೧॥

**ಮರೀಚಯೇ ಕಲಾಂ ಪ್ರಾದಾದನುಸೂಯಾಮಥಾತ್ರಯೇ ।**
**ಶ್ರದ್ಧಾಮಂಗಿರಸೇಽಯಚ್ಛತ್ ಪುಲಸ್ತ್ಯಾಯ ಹವಿರ್ಭುವಂ ॥೨೨॥**

ಅಥ=ನಂತರ ಮರೀಚಯೇ=ಮರೀಚಿಗೆ, ಕಲಾಂ=ಕಲಾಳನ್ನು ಅತ್ರಯೇ=ಅತ್ರಿ ಋಷಿಗೆ, ಅನುಸೂಯಾಂ=ಅನುಸಾಯಳನ್ನು ಪ್ರಾದಾತ್=ಕೊಟ್ಟನು. ಅಂಗಿರಸೇ= ಅಂಗಿರಸರಿಗೆ, ಶ್ರದ್ಧಾಂ=ಶ್ರದ್ಧಾಳನ್ನು ಪುಲಸ್ತ್ಯಾಯ=ಪುಲಸ್ತ್ಯರಿಗೆ, ಹವಿರ್ಭುವಂ= ಹವಿರ್ಭೂಳನ್ನೂ ಅಯಚ್ಛತ್=ಇತ್ತನು. ॥೨೨॥

**ಪುಲಹಾಯ ಗತಿಂ ಯುಕ್ತಾಂ ಕ್ರತವೇ ಚ ಕ್ರಿಯಾಂ ಸತೀಂ ।**
**ಖ್ಯಾತಿಂ ಚ ಭೃಗವೇಽಯಚ್ಛದ್ ವಸಿಷ್ಠಾಯಾಪ್ಯರುಂಧತೀಂ ॥೨೩॥**

ಪುಲಹಾಯ=ಪುಲಹರಿಗೆ, ಯುಕ್ತಾಂ=ಯೋಗ್ಯಳಾದ, ಗತಿಂ=ಗತಿಯೆಂಬು- ವಳನ್ನು ಚ=ಮತ್ತು, ಕ್ರತವೇ=ಕ್ರತುವಿಗೆ, ಸತೀ ಚ=ಪತಿವ್ರತೆಯಾದ, ಕ್ರಿಯಾಂ= ಕ್ರಿಯಾಳನ್ನು ಚ=ಮತ್ತು, ಭೃಗವೇ=ಭೃಗುವಿಗೆ ಖ್ಯಾತಿಂ=ಖ್ಯಾತಿಯನ್ನು ವಸಿಷ್ಠಾಯ =ವಸಿಷ್ಠರಿಗೆ ಅರುಂಧತೀಂ=ಅರುಂಧತಿಯನ್ನೂ ಅಯಚ್ಛತ್=ಇತ್ತನು ಯುಕ್ತಾಂ ಸತೀಂ ಎಂಬ ವಿಶೇಷಣಗಳು ಎಲ್ಲರಿಗೂ ಅನ್ವಯಿಸುವುವು. ॥೨೩॥

**ಅಥರ್ವಣೇಽದದಾಚ್ಛಾಂತಿಂ ಯಯಾ ಯಜ್ಞೋ ವಿತನ್ಯತೇ ।**
**ವಿಪ್ರರ್ಷಭಾನ್ ಕೃತೋದ್ವಾಹಾನ್ ಸದಾರಾನ್ ಸಮಲಾಲಯತ್ ॥**

ಅಥರ್ವಣೇ=ಅಥರ್ವನಿಗೆ, ಶಾಂತಿಂ ಅದಾತ್=ಶಾಂತಿ ಎಂಬುವಳನ್ನು ಇತ್ತನು, ಯಯಾ=ಯಾವಳಿಂದ, ಯಜ್ಞಃ=ಯಜ್ಞವು, ವಿತನ್ಯತೇ=ಸಮೃದ್ಧಿಯಾಗುವುದು. ಕೃತೋದ್ವಾಹಾನ್=ವಿವಾಹಮಾಡಿಕೊಂಡ, ವಿಪ್ರರ್ಷಭಾನ್=ಬ್ರಾಹ್ಮಣಶ್ರೇಷ್ಠರನ್ನು ಸದಾರಾನ್=ಪತ್ನೀಸಹಿತವಾಗಿ, ಸಮಲಾಲಯತ್=ಧನಮಾನಗಳಿಂದ ಸಂತೋಷ- ಗೊಳಿಸಿದನು. ॥೨೪॥

**ತತಸ್ತ ಋಷಯಃ ಕ್ಷತ್ತಃ ಕೃತದಾರಾ ನಿಮಂತ್ರ್ಯ ತಂ ।**
**ಪ್ರಾತಿಷ್ಠನ್ ನಂದಮಾಪನ್ನಾ ಸ್ವಂ ಸ್ವಮಾಶ್ರಮಮಂಡಲಂ ॥೨೫॥**

ಹೇ ಕ್ಷತ್ತಃ=ವಿದುರನೇ ತತಃ=ನಂತರ ಕೃತದಾರಾಃ ತೇ ಋಷಯಃ=ವಿವಾಹಿತ- ರಾದ ಆ ಋಷಿಗಳು ನಂದಂ ಆಪನ್ನಾಃ=ಸಂತೋಷವನ್ನು ಹೊಂದಿದವರಾಗಿ ತಂ= ಕರ್ದಮರನ್ನು ನಿಮಂತ್ರ್ಯ ಹೋಗಿ ಬರುವೆವು ಎಂದು ಹೇಳಿ ಸ್ವಂ ಸ್ವಂ=ತಮ್ಮ ತಮ್ಮ ಆಶ್ರಮಮಂಡಲಂ=ಆಶ್ರಮಪ್ರದೇಶಕ್ಕೆ ಪ್ರಾತಿಷ್ಠನ್=ಹೊರಟರು. ॥೨೫॥

**ಸ ಚಾವತೀರ್ಣಂ ತ್ರಿಯುಗಮಾಜ್ಞಾಯ ವಿಬುಧರ್ಷಭಂ ।**
**ವಿವಿಕ್ತ ಉಪಸಂಗಮ್ಯ ಪ್ರಣಮ್ಯ ಸಮಭಾಷತ ॥೨೬॥**

ಸ ಚ=ಕರ್ದಮನಾದರೂ, ಅವತೀರ್ಣಂ=ತನ್ನಲ್ಲಿ ವ್ಯಕ್ತನಾದ ಮಗನನ್ನು ತ್ರಿಯುಗಂ=ಕೃತ, ತ್ರೇತ, ದ್ವಾಪರಗಳೆಂಬ ಮೂರು ಯುಗಗಳಲ್ಲಿ ಮಾತ್ರ ಅವತರಿಸುವ ವಿಬುಧರ್ಷಭಂ=ದೇವೋತ್ತಮನೆಂದು, ಆಜ್ಞಾಯ=ತಿಳಿದು, ವಿವಿಕ್ತೇ =ಏಕಾಂತದಲ್ಲಿ, ಉಪಸಂಗಮ್ಯ=ಸಂಧಿಸಿ, ಪ್ರಣಮ್ಯ=ನಮಸ್ಕರಿಸಿ, ಸಮಭಾಷತ= ಮಾತನಾಡಿದನು.

**ಯುಗತ್ರಯಾವತಾರೇಣ ತ್ರಿಯುಗಶ್ಚೇತಿ ಕಥ್ಯತೇ । ಇತಿ ಪಾದ್ಮೇ ।**

ಮೂರು ಯುಗಗಳಲ್ಲಿ ಅವತಾರ ಮಾಡುವದರಿಂದ ಭಗವಂತನು ತ್ರಿಯುಗ-ನೆಂದು ಹೇಳಲ್ಪಡುವನು ಎಂದು ಪಾದ್ಮದಲ್ಲಿದೆ. ॥೨೬॥

**ಅಹೋ ಪಾಪಚ್ಯಮಾನಾನಾಂ ನಿರಯೇ ಸ್ವೈರಮಂಗಲೈಃ ।**
**ಕಾಲೇನ ಭೂಯಸಾ ನೂನಂ ಪ್ರಸೀದಂತೀಹ ದೇವತಾಃ ॥೨೭॥**

ಸ್ವೈಃ=ತಾವು ಮಾಡಿದ, ಅಮಂಗಲೈಃ=ಅಶುಭಗಳಿಂದ, ನಿರಯೇ=ನರಕ-ಸಮಾನವಾದ ಸಂಸಾರದಲ್ಲಿ, ಪಾಪಚ್ಯಮಾನಾನಾಂ=ಪುನಃ ಪುನಃ ಬಹಳ ಬೆಂದು ಬಳಲುವರಿಗೆ, ಭೂಯಸಾ ಕಾಲೇನ=ಬಹಳ ಕಾಲದನಂತರ, ನೂನಂ= ನಿಶ್ಚಯವಾಗಿ, ದೇವತಾಃ=ತಾತ್ವಿಕರಾದ ಇಂದ್ರಿಯಾಭಿಮಾನಿದೇವತೆಗಳು, ಪ್ರಸೀದಂತಿ=ಪ್ರಸನ್ನ-ರಾಗುವರು. ॥೨೭॥

**ಬಹುಜನ್ಮವಿಪಕ್ವೇನ ಸಮ್ಯಗ್ಯೋಗಸಮಾಧಿನಾ ।**
**ದ್ರಷ್ಟುಂ ಯತಂತೇ ಯತಯಃ ಶೂನ್ಯಾಗಾರೇಷು ಯತ್ಪದಂ ॥೨೮॥**

ಬಹುಜನ್ಮವಿಪಕ್ವೇನ=ಬಹಳಜನ್ಮಗಳಲ್ಲಿ ಸುಸಿದ್ಧವಾದ ('ವಿಪಾಕೇನ', ಎಂಬ ಪಾಠವಿದ್ದಾಗ ಬಹುಜನ್ಮಗಳಿಂದ ಸಿದ್ಧಿಸುವ ಎಂದರ್ಥ) ಸಮ್ಯಗ್‌ಯೋಗಸಮಾಧಿ ನಾ=ಸಮೀಚಿನ ಭಕ್ತಿಯೋಗದಿಂದ ಅಥವಾ ಅಷ್ಟಾಂಗಯೋಗದಿಂದಲೋ ಉಂಟಾದ ಚಿತ್ತೇಕಾಗ್ರತೆಯಿಂದ (ಅಸಂಪ್ರಜ್ಞಾತಸಮಾಧಿಯಿಂದ), ಶೂನ್ಯಾಗಾರೇಷು =ಏಕಾಂತಸ್ಥಳಗಳಾದ ಮಠವನಗಳಲ್ಲಿ, ಯತ್ಪದಂ=ಯಾವನ ಸ್ವರೂಪವನ್ನು, ದ್ರಷ್ಟುಂ=ನೋಡಲು, ಯತಯಃ=ಜಿತೇಂದ್ರಿಯರು, ಯತಂತೇ=ಪ್ರಯತ್ನಿಸುವರೊ,

**ಸ ಏವ ಭಗವಾನದ್ಯ ಹೇಲನಂ ನಗಣಯ್ಯ ನಃ ।**
**ಗೃಹೇಷು ಜಾತೋ ಗ್ರಾಮ್ಯಾಣಾಂ ಯಃ ಸ್ವಾನಾಂ ಪಕ್ಷಪೋಷಣಃ ॥**

ಸಃ=ಅಂಥ ಯಃ=ಯಾವನು, ಸ್ವಾನಾಂ=ಭಕ್ತರ, ಪಕ್ಷಪೋಷಣಃ=ಅಭೀಷ್ಟವನ್ನು ಪೋಷಿಸುವ, ಭಗವಾನ್=ಶ್ರೀಹರಿಯು, ಗ್ರಾಮ್ಯಾಣಾಂ=ವಿಷಯಲೋಲುಪರಾದ,

ನಃ=ನಮ್ಮ ಹೇಲನಂ=ಅನಾದರವನ್ನು (ಅವಜ್ಞೆ) ನಗಣಯ್ಯ=ಲೆಕ್ಕಿಸದೇ, ನಃ=ನಮ್ಮ ಗೃಹೇಷು=ಮನೆಯಲ್ಲಿ (ಪತ್ನಿಯಲ್ಲಿ) ಅಧ್ಯ=ಈಗ ಜಾತಃ ಅವತರಿಸಿರುವನು. ॥೨೯॥

**ಸ್ವೀಯಂ ವಾಕ್ಯಮೃತಂ ಕರ್ತುಮವತೀರ್ಣೋಽಸಿ ಮೇ ಗೃಹೇ ।**
**ಚಿಕೀರ್ಷುರ್ಭಗವನ್ ಶರ್ಮ ಭಕ್ತಾನಾಮಭಿವರ್ಧನಃ ॥**

ಭಕ್ತಾನಾಂ=ಭಕ್ತರಿಗೆ, ಜ್ಞಾನಂ=ಜ್ಞಾನವನ್ನು, ಅಭಿವರ್ಧನಃ=ಅಭಿವೃದ್ಧಿಗೊಳಿಸುವ, ಶರ್ಮ=ಸುಖವನ್ನು ಚಿಕೀರ್ಷುಃ=ಉಂಟುಮಾಡಲು ಸ್ವೀಯಂ ವಾಕ್ಯಂ=ನಿನ್ನ ಮಗನಾಗಿ ಅವತರಿಸುವೆನೆಂಬ ನಿನ್ನ ಮಾತನ್ನು ಋತಂಕರ್ತುಂ= ಸತ್ಯಮಾಡಲು, ಮೇ ಗೃಹೇ=ನನ್ನ ಪತ್ನಿಯಲ್ಲಿ ಅವತೀರ್ಣೋಽಸಿ=ಅವತರಿಸಿರುವಿ. ॥೩೦॥

**ತಾನ್ಯೇವ ತೇಽಭಿರೂಪಾಣಿ ರೂಪಾಣಿ ಭಗವಂಸ್ತವ ।**
**ಯಾನಿ ಯಾನೀಹ ರೋಚಂತೇ ಸ್ವಜನಾನಾಮರೂಪಿಣಃ ॥೩೦॥**

ಹೇ ಭಗವಾನ್=ಕಪಿಲನೇ, ಅರೂಪಿಣಃ ತವ=ಪ್ರಾಕೃತಶರೀರರಹಿತನಾದ ನಿನಗೆ ಅವತಾರಮಾಡಲು ಪ್ರವೇಶಿಸುವುದಕ್ಕೆ, ಸ್ವಜನಾನಾಂ=ಭಕ್ತರಾದ ಬ್ರಹ್ಮಾದಿಗಳಿಗೆ, ಇಹ=ಭೂಮಿಯಲ್ಲಿ, ಯಾನಿ ಯಾನಿ ರೂಪಾಣಿ=ಯಾವ ಯಾವ ಅತ್ರಿ ಪರಾಶರ ಮುಂತಾದ ಬ್ರಾಹ್ಮಣ ಶರೀರಗಳಾಗಲಿ, ದಶರಥ ವಸುದೇವ ಮುಂತಾದ ಕ್ಷತ್ರಿಯ ಶರೀರವಾಗಲಿ, ರೋಚಂತೇ=ಇಷ್ಟವಾಗುವವೋ. ತಾನ್ಯೇವ=ಅವೇ, ತೇ=ನಿನಗೆ, ಅಭಿರೂಪಾಣಿ=ಪ್ರಿಯವಾಗುವುವು, ಆದ್ದರಿಂದ ಈಗ ಅವತಾರ ಮಾಡಲು ಬ್ರಾಹ್ಮಣನಾದ ನನ್ನಲ್ಲಿ ಪ್ರವೇಶ ಮಾಡುವುದು ಬ್ರಹ್ಮಾದಿಗಳಿಗೆ ಅಭೀಷ್ಟವಾದ್ದರಿಂದ ನನ್ನಲ್ಲಿ ಪ್ರವೇಶಿಸಿ ನನ್ನ ಮನೆಯಲ್ಲಿ ನನ್ನ ಪತ್ನಿಯಲ್ಲಿ ಅವತರಿಸಿರುವಿ ಎಂದು ಭಾವ.

ಈ ಶ್ಲೋಕಕ್ಕೆ ಪ್ರಕೃತ ಸಂಗತವಾದ ಯೋಜನೆ ತೋರಿಸುವರು –

**ಯಾನಿ ಯಾನಿ ಬ್ರಹ್ಮಾದಿರೂಪಾಣಿ ರೋಚಂತೆ ಸ್ವಜನಾನಾಂ ತಾನ್ಯೇವ ತೇ ವ್ಯಕ್ತ್ಯರ್ಥಂ ಅಭಿರೂಪಾಣಿ ।**

**ವ್ಯಕ್ತೋ ಭವೇದ್ಧರಿಸ್ತತ್ರ ಯತ್ ಸ್ಥಾನಂ ರುಚಿತಂ ಸತಾಂ । ಇತಿ ಕೌರ್ಮೇ ।**

ಸತಾಂ=ಬ್ರಹ್ಮಾದಿಭಕ್ತರಿಗೆ, ಯತ್‌ಸ್ಥಾನಂ=ಯಾವ ಬ್ರಾಹ್ಮಣರೂಪವು, ರುಚಿತಂ= ನಿನ್ನ ಅವತಾರಕ್ಕೆ ಇಷ್ಟವೋ ಅಲ್ಲಿ ಶ್ರೀಹರಿಯು ವ್ಯಕ್ತನಾಗುವನು ಎಂದು ಕೂರ್ಮ ಪುರಾಣದಲ್ಲಿ ಹೇಳಿರುವುದರಿಂದ ಮೇಲಿನಂತೆ ಯೋಜನೆ ಅರ್ಥವನ್ನು ತಿಳಿಯಬೇಕೆಂದರ್ಥ.

ಯಾದುಪತ್ಯಪ್ರಕಾರ - ಬ್ರಹ್ಮಾದಿರೂಪಾಣಿಯೆಂಬುದಕ್ಕೆ ಬ್ರಾಹ್ಮಣ, ಕ್ಷತ್ರಿಯ ಮುಂತಾದ ಶರೀರಗಳೆಂದರ್ಥ. ವಿಜಯಧ್ವಜಿಪ್ರಕಾರ ಯಾನಿ ಯಾನಿ ಯೆಂಬುದಕ್ಕೆನೇ ಬ್ರಾಹ್ಮಣಾದಿಶರೀರಗಳೆಂದು ಅರ್ಥಮಾಡಿ ಬ್ರಹ್ಮಾದಿರೂಪಗಳು ಭಗವಂತನ ಉಪಾಸನೆಮಾಡಲು ಪ್ರತಿಮಾರೂಪವಾಗಿ ಹೇಳಲ್ಪಟ್ಟಿವೆ ಎಂದು ಅಭಿಪ್ರಾಯವಿದೆ. ॥೩೧॥

**ತ್ವಾಂ ಸೂರಿಭಿಸ್ತತ್ವಬುಭುತ್ಸಯಾಽದ್ಧಾ**
**ಸದಾಭಿವಾದಾರ್ಹಣಪಾದಪೀಠಂ ।**
**ಐಶ್ವರ್ಯವೈರಾಗ್ಯಯಶೋಽವಬೋಧ-**
**ವೀರ್ಯಶ್ರಿಯಾ ಪೂರ್ಣಮಹಂ ಪ್ರಪದ್ಯೇ ॥೩೨॥**

ಸೂರಿಭಿಃ=ಬ್ರಹ್ಮಾದಿಜ್ಞಾನಿಗಳಿಂದ, ತತ್ವಬುಭುತ್ಸಯಾ=ಪರಾಪರತತ್ವಗಳನ್ನು ತಿಳಿಯುವ ಇಚ್ಛೆಯಿಂದ, ಅದ್ಧಾ=ಪ್ರತ್ಯಕ್ಷವಾಗಿ (ಸತ್ಯವಾಗಿ) ಸದಾ=ಯಾವಾಗಲೂ, ಅಭಿವಾದಾರ್ಹಣಪಾದಪೀಠಂ=ಸ್ತುತಿಸಲು ಸಮೀಪಿಸಲು ಯೋಗ್ಯವಾದ ಪಾದಗಳುಳ್ಳ, ಐಶ್ವರ್ಯ=ಈಶ್ವರತ್ವ ವೈರಾಗ್ಯ=ಇತರ ಪದಾರ್ಥಗಳಲ್ಲಿ ಅಸಾರತಾಜ್ಞಾನ, ಯಶಃ=ಕೀರ್ತಿ, ಅವಬೋಧ=ಜ್ಞಾನ, ವೀರ್ಯ=ಆರಬ್ಧಾಂತ-ಗಾಮಿತ್ವ, ಶ್ರೀ=ಸಂಪತ್ತು ಇವುಗಳಿಂದ ಆಪೂರ್ಣ=ಚೆನ್ನಾಗಿ ಪೂರ್ಣನಾದ ತ್ವಾಂ= ನಿನ್ನನ್ನು, ಅಹಂ=ನಾನು ಪ್ರಪದ್ಯೇ= ಶರಣಾಗುವೆನು. ॥೩೨॥

**ಪರಂ ಪ್ರಧಾನಂ ಪುರುಷಂ ಮಹಾಂತಂ**
**ಕಾಲಂ ಕವಿಂ ತ್ರಿವೃತಂ ಲೋಕಪಾಲಮ್ ।**
**ಆತ್ಮಾನುಭೂತ್ಯಾಽನುಗತಪ್ರಪಂಚಂ**
**ಸ್ವಚ್ಛಂದಶಕ್ತಿಂ ಕಪಿಲಂ ಪ್ರಪದ್ಯೇ ॥೩೩॥**

ಪರಂ=ಸರ್ವವಿಲಕ್ಷಣನಾದ ಪ್ರಧಾನಂ=ಸರ್ವೋತ್ತಮನಾದ, ಪುರುಷಂ= ಎಲ್ಲರ ಶರೀರದಲ್ಲಿರುವ, ಮಹಾಂತಂ=ಮೂರುವಿಧ ಆನಂತ್ಯವುಳ್ಳ, ಕಾಲಂ= ಸರ್ವಸಂಹಾರಕನಾದ, ಕವಿಂ=ಸರ್ವಜ್ಞನಾದ, ತ್ರಿವೃತಂ=ಮೂರು ವೇದಗಳಿಂದ ಪ್ರತಿಪಾದ್ಯನಾದ, ಲೋಕಪಾಲಂ=ಮುಕ್ತಾಮುಕ್ತಪ್ರಪಂಚರಕ್ಷಕನಾದ, ಆತ್ಮಾನುಭೂತ್ಯಾ =ಸ್ವರೂಪಜ್ಞಾನದಿಂದ, ಅನುಗತಪ್ರಪಂಚಂ=ಯಥಾರ್ಥವಾಗಿ ಸಮಸ್ತ ಪ್ರಪಂಚ-ವನ್ನರಿತ ಸ್ವಚ್ಛಂದಶಕ್ತಿಂ=ತನ್ನ ಇಚ್ಛೆಯಿಂದಲೇ ಎಲ್ಲ ಸೃಷ್ಟ್ಯಾದಿ ಶಕ್ತಿಯುಳ್ಳ, ಕಪಿಲಂ ಸುಖವನ್ನನುಭವಿಸುವ ಭಕ್ತರಿಗೆ ಸುಖವನ್ನೀವ ಶ್ರೀಹರಿಯನ್ನು ಪ್ರಪದ್ಯೇ= ಶರಣಾಗುವೆನು.

ತ್ರಿವೃತಂ ಎಂಬುದಕ್ಕೆ ಸತ್ವಾದಿ ಮೂರುಗುಣಗಳಿಂದ ಕೂಡಿದವನೆಂದು ಅಪಾರ್ಥ ನಿವಾರಿಸಲು ಪ್ರಮಾಣದಿಂದ ವ್ಯಾಖ್ಯಾನಿಸುವರು –

**ವೇದೈರ್ವ್ಯತತ್ವಾದ್ಭಗವಾಂಸ್ತ್ರಿವೃದಿತ್ಯುಚ್ಯತೇ ಬುಧೈಃ । ಇತಿ ಚ ।**

ಮೂರು ವೇದಗಳಿಂದ ತಾತ್ಪರ್ಯದಿಂದ ಪ್ರತಿಪಾದಿತನಾದುದರಿಂದ ತ್ರಿವೃತ್ ಎನಿಸುವನು, ಎಂದು ಭಾವ. ॥೩೩॥

**ತಂ ತ್ವಾಭಿಪೃಚ್ಛೇಽದ್ಯ ಪತಿಂ ಪ್ರಜಾನಾಂ**
**ತ್ವಯಾ ವತೀರ್ಣೇನ ಉತಾಪ್ತಕಾಮಃ ।**
**ಪರಿವ್ರಾಜಾಂ ಪದವೀಮಾಸ್ಥಿತೋಽಹಂ**
**ಚರಿಷ್ಯೇ ತ್ವಾಂ ಹೃದಿ ಯುಂಜನ್ ವಿಶೋಕಃ ॥೩೪॥**

ತ್ವಯಾ ಅವತೀರ್ಣೇನ ಆಪ್ತಕಾಮಃ ಉತ=ನೀನು ಅವತರಿಸಿದರಿಂದ ಪೂರ್ಣಕಾಮನಾದರೂ, ಅಹಂ=ನಾನು, ಪರಿವ್ರಾಜಾಂ ಪದವೀಂ ಆಸ್ಥಿತಃ= ಸನ್ಯಾಸಿಗಳ ಮಾರ್ಗವನ್ನು ಹಿಡಿದು, ಹೃದಿ=ಮನಸ್ಸಿನಲ್ಲಿ, ತ್ವಾಂ=ನಿನ್ನನ್ನು ಉದ್ದೇಶಿಸಿ, ಯುಂಜನ್=ಮನೋಯೋಗವನ್ನು ಮಾಡುತ್ತ, ವಿಶೋಕಂ=ನಿನ್ನ ವಿಯೋಗ ನಿಮಿತ್ತ ದುಃಖರಹಿತನಾಗಿ, ಚರಿಷ್ಯೇ=ಗ್ರಾಮೈಕರಾತ್ರನಾಗಿ ಸಂಚರಿಸುವೆನು ಎಂದು, ಪ್ರಜಾನಾಂ ಪತಿಂ ತಂ ತ್ವಾ ಅಭಿಪೃಚ್ಛೇ=ಪ್ರಜೆಗಳಿಗೆ ಅಧಿಪತಿಯಾದ ಆ ನಿನ್ನನ್ನು ಅಪ್ಪಣೆ ಕೇಳುವೆನು. ॥೩೪॥

**ಭಗವಾನುವಾಚ**

**ಮಯಾ ಪ್ರೋಕ್ತಂ ಹಿ ಲೋಕಸ್ಯ ಪ್ರಮಾಣಂ ಸತ್ಯಲೌಕಿಕೇ ।**
**ಅಥಾಜನಿ ಮಯಾ ತುಭ್ಯಂ ಯದವೋಚಮೃತಂ ಮುನೇ ॥೩೫॥**

ಹೇ ಮುನೇ=ಎಲೇ ಕರ್ದಮನೇ, ತುಭ್ಯಂ=ನಿನಗೆ, ಯದವೋಚಂ=ನಾನು ನಿನಗೆ ಮಗನಾಗುವೆನೆಂದು ಏನು ಹೇಳಿದನೋ ಅದನ್ನು, ಋತಂ ಕರ್ತುಂ= ಸತ್ಯಮಾಡಲು, ಮಯಾ ಅಜನಿ=ನನ್ನಿಂದ ಅವತರಿಸಿಲ್ಪಟ್ಟಿತು. ಹಿ=ಯಾವ ಕಾರಣ, ಲೋಕಸ್ಯ=ಜನರಿಗೆ ಸತ್ಯಲೌಕಿಕೇ=ಅಬಾಧ್ಯವಾದ ಜ್ಞಾನವಿಷಯದಲ್ಲಿ ಮಯಾ ಪ್ರೋಕ್ತಂ=ನನ್ನಿಂದ ಹೇಳಲ್ಪಟ್ಟ ಇತಿಹಾಸಪುರಾಣಗಳು, ಪ್ರಮಾಣಂ=ನಿರ್ಣಾಯಕ- ಗಳಾಗಿವೆ, ಆದ್ದರಿಂದ ನನ್ನ ಮಾತು ಸುಳ್ಳಾದರೆ ನನ್ನ ಮಾತಿನ ಪ್ರಕಾರ ನಿರ್ಣಯಮಾಡಬಾರದು ಎಂದು ಭಾವ.

ಸತ್ಯಲೌಕಿಕೆ ಎಂಬ ಶಬ್ದಾರ್ಥವನ್ನು ತಿಳಿಸುವರು-

**ಸತ್ಯಲೌಕಿಕೇ ಯಥಾರ್ಥಜ್ಞಾನವಿಷಯೇ ।**
**ಆಭಾಸೋ ಜ್ಞಾನಮಾಲೋಕೋ ಲೋಕಾಭಾಸಶ್ಚ ಕಥ್ಯತೇ ।**
**ಇತ್ಯಭಿಧಾನಂ ।**

ಜ್ಞಾನವು ಆಭಾಸ ಆಲೋಕ ಲೋಕಾಭಾಸ ಎಂದು ಕರೆಸಿಕೊಳ್ಳುವುದು. ॥೩೫॥

ನಿನ್ನ ಮನೆಯಲ್ಲಿ ನಾನು ಅವತರಿಸಿದ್ದು ಕೇವಲ ನಿನ್ನ ಉಪಕಾರಕ್ಕೆ ಮಾತ್ರವಲ್ಲ ಎಲ್ಲರ ಉಪಕಾರಕ್ಕೆ ಎಂದು ಹೇಳುವನು -

**ಏತನ್ಮೇ ಜನ್ಮ ಲೋಕೇಽಸ್ಮಿನ್ ಮುಮುಕ್ಷೂಣಾಂ ದುರಾಶಯಾತ್ ।**
**ಪ್ರಸಂಖ್ಯಾನಾಯ ತತ್ತ್ವಾನಾಂ ಸಮತ್ವಾಯಾತ್ಮದರ್ಶಿನಾಮ್ ॥೩೬॥**

ಅಸ್ಮಿನ್ ಲೋಕೇ=ಈ ಭೂಲೋಕದಲ್ಲಿ ಏತತ್ ಜನ್ಮ=ಈ ನನ್ನ ಅವತಾರವು, ದುರಾಶಯಾತ್=ದುಃಖಸ್ಥಾನವಾದ(ನಿಮಿತ್ತವಾದ)ಸಂಸಾರದಿಂದ, ಮುಮುಕ್ಷೂಣಾಂ =ಮುಕ್ತಿಪಡೆಯಲಿಚ್ಛಿಸುವರಿಗೆ, ತತ್ತ್ವಾನಾಂ=ಪರಮಾತ್ಮ ಮೊದಲಾದ ತತ್ತ್ವಗಳನ್ನು, ಪ್ರಸಂಖ್ಯಾನಾಯ=ಚೆನ್ನಾಗಿ ತಿಳಿಸುವುದಕ್ಕೂ, ಆತ್ಮದರ್ಶಿನಾಂ=ಅಪರೋಕ್ಷಜ್ಞಾನಿ-ಗಳಿಗೆ, ಸಮತ್ವಾಯ=ವಿಶೇಷಜ್ಞಾನಲಾಭಕ್ಕೆ ಮತ್ತು ಇದ್ದಜ್ಞಾನ ಸ್ಥಿರವಾಗುವುದಕ್ಕೆ ಎಂದು ತಿಳಿ. ॥೩೬॥

ಭಗವಂತನ ಜ್ಞಾನಮಾರ್ಗವು ಮೊದಲಿಗೆ ಇದ್ದುದೆ ಅದನ್ನು ಪುನಃ ತಿಳಿಸುವುದೇಕೆ ಎಂದರೆ ಹೇಳುವನು-

**ಏಷ ಆತ್ಮಪಥೋಽವ್ಯಕ್ತೋ ನಷ್ಟಃ ಕಾಲೇನ ಭೂಯಸಾ ।**
**ತಂ ಪ್ರವರ್ತಯಿತುಂ ದೇಹಮಿಮಂ ವಿದ್ಧಿ ಮಯಾ ಭೃತಮ್ ॥೩೭॥**

ಏಷಃ=ಈ ಆತ್ಮಪಥಃ=ತತ್ತ್ವಜ್ಞಾನಮಾರ್ಗವು ಭೂಯಸಾ ಕಾಲೇನ=ಬಹಳ-ಕಾಲದಿಂದ ಜ್ಞಾನಪ್ರವರ್ತಕರಿಲ್ಲದ್ದರಿಂದ ಅವ್ಯಕ್ತಃ=ಸೂಕ್ಷ್ಮವಾಗಿಯೇ ಇದೆ. ನಷ್ಟಃ= ತಿರೋಹಿತವಾಗಿದೆ. ಕಾರಣ ತಂ ಪ್ರವರ್ತಯಿತುಂ=ಸಾಂಖ್ಯಶಾಸ್ತ್ರ ಮಾಡುವ ಮೂಲಕ ಅದನ್ನು ಮುಂದುವರಿಸಲು ಮಯಾ ಇಮಂ ದೇಹಂ ಭೃತಂ ವಿದ್ಧಿ= ನನ್ನಿಂದ ಈ ದೇಹ ಸ್ವೀಕೃತವೆಂದು ತಿಳಿ. ॥೩೭॥

**ಗಚ್ಛ ಕಾಮಂ ಮಯಾಽಽಪೃಷ್ಟೋ ಮಯಿ ಸನ್ನ್ಯಸ್ತಕರ್ಮಣಾ ।**
**ಜಿತ್ವಾ ಸುದುರ್ಜಯಂ ಮೃತ್ಯುಮಮೃತತ್ವಾಯ ಮಾಂ ಭಜ ॥೩೮॥**

ಮಯಾ=ನನ್ನಿಂದ, ಆಪೃಷ್ಟಃ=ಅಪ್ಪಣೆ ಪಡೆದ ನೀನು, ಕಾಮಂ ಗಚ್ಛ=ಸುಖವಾಗಿ ಹೋಗು, ಮಯಿ=ನನ್ನಲ್ಲಿ ಸನ್ಯಸ್ತೇನ ಕರ್ಮಣಾ=ಅರ್ಪಿತವಾದ ಕರ್ಮಗಳಿಂದ, ಸುದುರ್ಜಯಂ=ಗೆಲ್ಲಲು ಅತ್ಯಂತ ಅಸಾಧ್ಯವಾದ, ಮೃತ್ಯುಂ=ಸಂಸಾರ ಕಾರಣವಾದ ಮನಸ್ಸನ್ನು (ಇಂದ್ರಿಯಗಳನ್ನು) ಜಿತ್ವಾ=ಗೆದ್ದು ಅಮೃತತ್ವಾಯ ಮಾಂ ಭಜ=ಮೋಕ್ಷಕ್ಕಾಗಿ ನನ್ನನ್ನು ಸೇವಿಸು. ॥೩೮॥

**ಮಾಮಾತ್ಮಾನಂ ಸ್ವಯಂಜ್ಯೋತಿಃ ಸರ್ವಭೂತಗುಹಾಶಯಂ ।**
**ಆತ್ಮನ್ಯೇವಾತ್ಮನಾ ವೀಕ್ಷ್ಯ ವಿಶೋಕೋಽಭಯಮೃಚ್ಛಸಿ ॥೩೯॥**

ಸರ್ವಭೂತಗುಹಾಶಯಂ=ಎಲ್ಲರ ಹೃದಯಗುಹಾದಲ್ಲಿರುವ, ಸ್ವಯಂಜ್ಯೋತಿಃ=ಸ್ವಪ್ರಕಾಶನಾದ, ಆತ್ಮಾನಂ=ಆದಾನಾದಿಕರ್ತೃವಾದ, ಮಾಂ=ನನ್ನನ್ನು, ಆತ್ಮನಿ=ಚಿದ್ರೂಪವಾದ ಸ್ವರೂಪದೇಹದಲ್ಲಿ, ಆತ್ಮನಾ=ಮನಸ್ಸಿನಿಂದ ವೀಕ್ಷ್ಯ=ನೋಡಿ, ಅಭಯಂ=ಮೋಕ್ಷವನ್ನು, ಋಚ್ಛಸಿ=ಹೊಂದುವಿ. ॥೩೯॥

ಮೋಕ್ಷಕ್ಕೆ ವೈರಾಗ್ಯಮುಖ್ಯಸಾಧನವೆಂದು ಹೇಳುವರು–

**ವಿಶ್ವಮೇತದ್ಧಿ ಶಾಸ್ತ್ರೇಣ ವಿಜ್ಞಾಯಾತ್ಮಾನಮೀಶ್ವರಮ್ ।**
**ಮುನಿಃ ಶಾಂತಮನೋವಾಕ್ಯಸ್ತದಾ ನಖ್ಯಾತ್ಯುಪಪ್ಲವಃ ॥೪೦॥**

ಯತಃ=ಯಾವಕಾರಣ, ವಿಶ್ವಂ=ಪ್ರಪಂಚವು, ಏತತ್(ಏತಾದೃಶಂ)=ಅನಿತ್ಯ ಅಸಾರವು ಅತಃ ತತ್ಪರಿತ್ಯಜ್ಯ=ಆದ್ದರಿಂದ ಅದನ್ನು ತ್ಯಜಿಸಿ, ಆತ್ಮಾನಂ=ಸರ್ವಾಂತರ್ಯಾಮಿಯಾದ, ಈಶ್ವರಂ=ಸರ್ವೇಶ್ವರನಾದ ಶ್ರೀಹರಿಯನ್ನು, ಶಾಸ್ತ್ರೇಣ ವಿಜ್ಞಾಯ=ಗುರುಗಳ ಉಪದೇಶಮುಖಾಂತರ ಶಾಸ್ತ್ರದಿಂದ ತಿಳಿದು, ಮುನಿಃ=ಮನನಶೀಲನು, (ಅಪರೋಕ್ಷಜ್ಞಾನಿಯು) ಶಾಂತಮನೋವಾಕ್ಯಃ=ಅನ್ಯವಿಷಯಕ ಮನೋವಾಕ್‌ವ್ಯಾಪಾರಗಳನ್ನು ಬಿಟ್ಟವನು ಅಥವಾ ನಿವೃತ್ತವಾದ ಲಿಂಗಶರೀರರೂಪಮನ ಮುಂತಾದ ಇಂದ್ರಿಯವುಳ್ಳವನು, ಯದಾ=ಯಾವಾಗ, ಭವತಿ=ಆಗುವನೋ, ತದಾ=ಆಗ, ಉಪಪ್ಲವಃ ನ ಖ್ಯಾತಿ=ದುಃಖ, ಅಜ್ಞಾನಾದ್ಯುಪದ್ರವಗಳು ತೋರಲಾರವು, ಪುನಃ=ಅವುಗಳ ಅನುಭವ ಬರಲಾರದು. ಉಪದ್ರವಗಳೇ ಇರಲಾರವೆಂದು ಎಂದು ಭಾವ.

ಇಲ್ಲಿ 'ವಿಶ್ವಂ ಆತ್ಮಾನಂ ಚ ಈಶ್ವರಂ ವಿಜ್ಞಾಯ' ಎಂದು ಯೋಜಿಸಿ ಪ್ರಪಂಚವನ್ನು ತನ್ನನ್ನು ದೇವರೆಂದು ತಿಳಿದು ಎಂದು ವಿಪರೀತ ಅರ್ಥವಾಗುವುದು ಕಾರಣ ಯೋಜನೆ ತೋರಿಸುವರು–

**ವಿಶ್ವಂ ಏತತ್ ಏತಾದೃಶಂ ಅಸಾರಂ ಯತಃ । ಅತಃ ಈಶ್ವರಂ ವಿಜ್ಞಾಯ । ನ ಖ್ಯಾತ್ಯುಪಪ್ಲವಃ ದುಃಖಾಜ್ಞಾನಾದ್ಯುಪದ್ರವೋ ನ ।**

ಯಾವ ಕಾರಣ ಪ್ರಪಂಚ ಅಸಾರವಾಗಿದೆಯೋ ಆ ಕಾರಣ ಈಶ್ವರನ ಅಪರೋಕ್ಷ ಮಾಡಿಕೊಂಡಮೇಲೆ ದುಃಖಾಜ್ಞಾನಾದಿ ಉಪದ್ರವಗಳಿರಲಾರವು ಎಂದು ಭಾವ. ॥೪೦॥

ನನ್ನ ತಾಯಿಯ ಚಿಂತೆ ನಿನಗೆ ಬೇಡವೆಂದು ಹೇಳುವನು -

**ಮಾತ್ರ ಆಧ್ಯಾತ್ಮಿಕೀಂ ವಿದ್ಯಾಂ ಶಮನೀಂ ಸರ್ವಕರ್ಮಣಾಂ ।**
**ವಿತರಿಷ್ಯೇ ಯಯಾ ಚಾಸೌ ಭಯಂ ಚಾತಿತರಿಷ್ಯತಿ ॥೪೧॥**

ಯಯಾ=ಯಾವುದರಿಂದ, ಅಸೌ=ಇವಳು, ಭಯಂ ಅತಿತರಿಷ್ಯತಿ=ಸಂಸಾರ ಭಯವನ್ನು ದಾಟುವಳು, ಚ=ಮತ್ತು ಮೋಕ್ಷವನ್ನು ಹೊಂದುವಳು, ಅಂಥ ಸರ್ವಕರ್ಮಣಾಂ=ಎಲ್ಲ ಕರ್ಮಗಳ, ಶಮನೀಂ=ಉನ್ಮೂಲನ ಮಾಡುವ, ಆಧ್ಯಾತ್ಮಿಕೀಂ=ಪರಮಾತ್ಮಾದಿತತ್ವವಿಷಯಕವಾದ ವಿದ್ಯಾಂ ಮಾತ್ರೇ ವಿತರಿಷ್ಯೇ ಶಾಸ್ತ್ರವನ್ನು ತಾಯಿಗೆ ಉಪದೇಶ ಮಾಡುವೆನು. ॥೪೧॥

**ಮೈತ್ರೇಯ ಉವಾಚ**

**ಏವಂ ಸಮುದಿತಸ್ತೇನ ಕಪಿಲೇನ ಪ್ರಜಾಪತಿಃ ।**
**ದಕ್ಷಿಣೀಕೃತ್ಯ ತಂ ಪ್ರೀತೋ ವನಮೇವ ಜಗಾಮ ಹ ॥೪೨॥**

ಏವಂ=ಈ ರೀತಿ, ತೇನ ಕಪಿಲೇನ ಸಮುದಿತಃ=ಆ ಕಪಿಲನಿಂದ ಉಪದಿಷ್ಟನಾಗಿ, ಪ್ರಜಾಪತಿಃ=ಕರ್ದಮನು, ತಂ=ಕಪಿಲನನ್ನು, ದಕ್ಷಿಣೀಕೃತ್ಯ=ಪ್ರದಕ್ಷಿಣೆ ಮಾಡಿ, ಪ್ರೀತಃ=ಸಂತುಷ್ಟನಾಗಿ, ವನಮೇವ ಜಗಾಮ ಹ ಅಡವಿಗೆನೇ ಹೋದನು ॥೪೨॥

**ವ್ರತಂ ಸ ಆಸ್ಥಿತೋ ಮೌನಮಾತ್ಮೈಕಶರಣೋ ಮುನಿಃ ।**
**ನಿಃಸಂಗೋ ವ್ಯಚರತ್ ಕ್ಷೋಣೀಮನಗ್ನಿರನಿಕೇತನಃ ॥೪೩॥**

ಸಃ ಮುನಿಃ=ಆ ಕರ್ದಮನು, ಮೌನಂ ವ್ರತಂ ಆಸ್ಥಿತಃ=ವಾಗಿಂದ್ರಿಯನಿಗ್ರಹ ರೂಪವಾದ ಅಥವಾ ಮುನಿಗಳ ಸಂಬಂಧಿಯಾದ ಅಂದರೆ ಅಹಿಂಸಾ ವ್ರತವನ್ನು ಮಾಡುತ್ತ, ಆತ್ಮೈಕಶರಣಃ=ಶ್ರೀಹರಿಯೊಬ್ಬನೇ ರಕ್ಷಕನೆಂದು ತಿಳಿದವನಾಗಿ, ಅನಗ್ನಿಃ= ಅಗ್ನಿಹೋತ್ರಾದಿಗಳಿಲ್ಲದವನಾಗಿ ಅಗ್ನಿಯನ್ನು ತನ್ನಲ್ಲಿ ಸಮಾರೋಪ ಮಾಡಿಕೊಂಡು, ಅನಿಕೇತನಃ=ಮಠ ಮಂದಿರಗಳಿಲ್ಲದವನಾಗಿ, ನಿಃಸಂಗಃ= ಬೇರೆಯವರಸಂಗವಿಲ್ಲದೆ ಒಬ್ಬನೇ, ಕ್ಷೋಣೀಂ ವ್ಯಚರತ್=ಭೂಸಂಚಾರ ಮಾಡಿದನು. ॥೪೩॥

**ಮನೋ ಬ್ರಹ್ಮಣಿ ಯುಂಜಾನೋ ಯತ್ ತತ್ ಸದಸತಃ ಪರಮ್ ।**
**ಗುಣಾವಭಾಸೇ ವಿಗುಣ ಏಕಭಕ್ತ್ಯಾಽನುಭಾವಿತೇ ॥೪೪॥**

ಯತ್=ಯಾವನು ಸದಸತಃಪರಂ=ಮೂರ್ತಾಮೂರ್ತವಿಲಕ್ಷಣನೋ, ಗುಣಾವಭಾಸೇ=ಜನರಿಗೆ ಶ್ರುತ್ಯಾದಿಗಳಿಂದ ಜ್ಞಾನಾನಂದಾದಿ ಗುಣಗಳ ಜ್ಞಾನವಾಗುವ, ವಿಗುಣೇ=ಸತ್ವಾದಿಗುಣ ರಹಿತನಾದ, ಏಕಭಕ್ತ್ಯಾ ಅನುಭಾವಿತೇ= ಕೇವಲ ಭಕ್ತಿಯಿಂದ ಧ್ಯಾತನಾದ, ತತ್ ಬ್ರಹ್ಮಣಿ=ಆ ಬ್ರಹ್ಮನಲ್ಲಿ ಮನಃ ಯುಂಜಾನಃ= ಮನಸ್ಸನ್ನಿಟ್ಟವನಾಗಿ ಸಂಚರಿಸಿದನು ಎಂದರ್ಥ. ಅಥವಾ ಶ್ರೀಹರಿಯೇ ಮುಖ್ಯ ಸರ್ವೋತ್ತಮ ಎಂಬ ಜ್ಞಾನಪೂರ್ವಕ ಭಕ್ತಿಯಿಂದ ಎಂದರ್ಥ. ॥೪೪॥

**ನಿರಹಂಕೃತಿರ್ನಿರ್ಮಮಶ್ಚ ನಿರ್ದ್ವಂದ್ವಃ ಸಮದೃಕ್ ಸ್ವದೃಕ್ ।**
**ಪ್ರತ್ಯಗ್ರಃ ಶಾಂತಧೀರ್ಧೀರಃ ಪ್ರಶಾಂತೋರ್ಮಿರಿವೋದಧಿಃ ॥೪೫॥**

ನಿರಹಂಕೃತಿಃ=ನಾನೇ ಕರ್ತೃ ಎಂಬ ಕರ್ತೃತ್ವಾಭಿಮಾನವಿಲ್ಲದವನಾಗಿ, ನಿರ್ಮಮಃ=ಈ ದೇಹಾದಿಗಳು ನನ್ನವು ಎಂಬ ಸ್ವಾಮಿತ್ವಾಭಿಮಾನ ರಹಿತನಾಗಿ, ನಿರ್ದ್ವಂದ್ವಃ=ಶೀತೋಷ್ಣಾದಿಕೃತಉಪದ್ರವರಹಿತನಾಗಿ, ಸಮದೃಕ್=ಯೋಗ್ಯತಾ-ನುಸಾರವಾಗಿ ಆ ಆ ಪದಾರ್ಥಗಳನ್ನು ತಿಳಿದವನಾಗಿ, ಸ್ವದೃಕ್=ಪರಮಾತ್ಮ-ಜ್ಞಾನಿಯಾಗಿ, ಪ್ರತ್ಯಗ್ರಃ=ತನ್ನ ಅಂತರ್ಯಾಮಿಯ ದರ್ಶನದಿಂದ ವ್ಯಕ್ತವಾದ ಸುಖವುಳ್ಳವನಾಗಿ ಶಾಂತಧೀಃ=ನಿಶ್ಚಲ ಬುದ್ಧಿಯುಳ್ಳವನು ಧೀರಃ=ಸಂಪತ್ತು ವಿಪತ್ತುಗಳಲ್ಲಿ ಏಕರೀತಿಯಾಗಿ ಶ್ರೀಹರಿಯಲ್ಲಿ ಅಚಲಬುದ್ಧಿಯುಳ್ಳವನಾಗಿ, ಪ್ರಶಾಂತೋರ್ಮಿಃ=ತೆರೆಗಳಿಲ್ಲದ ಉದಧಿರಿವ=ಸಮುದ್ರದಂತೆ ಇದ್ದನು.

ಸ್ವದೃಕ್ ಎಂಬಲ್ಲಿ ಸ್ವಶಬ್ದವು ಜೀವವಾಚಕವಲ್ಲ. ಅವನ ಜ್ಞಾನ ಮೋಕ್ಷಸಾಧನ-ವಲ್ಲವಷ್ಟೆ ! ಆದ ಕಾರಣ ಅದು ಪರಮಾತ್ಮವಾಚಕವೆಂಬ ಅಭಿಪ್ರಾಯದಿಂದ ಪರಮಾತ್ಮ ವಾಚಕವಾಗಲು ನಿಮಿತ್ತವನ್ನು ಪ್ರಮಾಣದಿಂದ ತಿಳಿಸುವರು –

**ಅನನ್ಯಾಧೀನಶಕ್ತಿತ್ವಾತ್ ಹರಿಃ ಸ್ವ ಇತಿ ಚೋಚ್ಯತೇ । ಇತಿ ಮಾತ್ಸ್ಯೇ ।**
**ಪ್ರತ್ಯಗ್ರಃ ಪ್ರತ್ಯಗ್ರತಿಃ ।**

ಮತ್ತೊಬ್ಬರ ಅಧೀನವಾಗದ ಶಕ್ತಿವುಳ್ಳವನಾದ್ದರಿಂದ ಶ್ರೀಹರಿಯು ಸ್ವಯಂ ಎನಿಸುವನು. ಚಶಬ್ದ ಆ ಗ್ರಂಥದಲ್ಲಿ ಹೇಳಿದ್ದಕ್ಕೆ ಸಮುಚ್ಚಾಯಕ ತನ್ನ ಅತರ್ಯಾಮಿಯಲ್ಲಿ ಸಂತೋಷವುಳ್ಳವನು ಪ್ರತ್ಯಗ್ರನು ಎಂದು ಭಾವ. ॥೪೫॥

**ಆತ್ಮಾನಂ ಸರ್ವಭೂತೇಷು ಭಗವಂತಮವಸ್ಥಿತಮ್ ।**
**ಅಪಶ್ಯತ್ ಸರ್ವಭೂತಾನಿ ಭಗವತ್ಯಪಿ ಚಾತ್ಮನಿ ॥೪೬॥**

**ವಾಸುದೇವೇ ಭಗವತಿ ಸರ್ವಜ್ಞೇ ಪ್ರತ್ಯಗಾತ್ಮನಿ ।**
**ಪರೇಣ ಭಕ್ತಿಭಾವೇನ ಲಬ್ಧಾತ್ಮಾ ಮುಕ್ತಬಂಧನಃ ॥೪೭॥**
**ಇಚ್ಛಾದ್ವೇಷವಿಹೀನೇನ ಸರ್ವತ್ರ ಸಮಚೇತಸಾ ।**
**ಭಗವದ್ಭಕ್ತಿಯೋಗೇನ ಪ್ರಾಪ್ತೋ ಭಗವತೀಂ ಗತಿಮ್ ॥೪೮॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಪಂಚವಿಂಶೋऽಧ್ಯಾಯಃ ॥*

ಸರ್ವಭೂತೇಷು=ಎಲ್ಲ ಪ್ರಾಣಿಗಳಲ್ಲಿ, ಅವಸ್ಥಿತಃ=ಇರುವ, ಆತ್ಮಾನಂ=ಸರ್ವದಾ ಸಮಸ್ತಗುಣಗಳನ್ನು ಹೊಂದಿದವನಾದ್ದರಿಂದ ಆತ್ಮಶಬ್ದವಾಚ್ಯನಾದ, ಭಗವಂತಂ= ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯನ್ನು, ಅಪಶ್ಯತ್=ನೋಡಿದನು, ಸರ್ವ-ಭೂತಾನಿ=ಎಲ್ಲ ಪ್ರಾಣಿಗಳನ್ನೂ, ಆತ್ಮನಿ=ಸರ್ವಗತನಾದ, ಭಗವತಿ ಅಪಿ ಭಗವಂತ-ನಲ್ಲಿಯೂ, ಅಪಶ್ಯತ್=ನೋಡಿದನು. ವಾಸುದೇವೇ=ಎಲ್ಲಡೆಯಲ್ಲಿ ಇದ್ದು ಕ್ರೀಡಿಸುವ, ಸರ್ವಜ್ಞೇ=ಎಲ್ಲವನ್ನೂ ಎಲ್ಲ ವಿಶೇಷಾಕಾರದಿಂದ ತಿಳಿದ, ಪ್ರತ್ಯಗಾತ್ಮನಿ= ತನ್ನ ಅಂತರ್ಯಾಮಿಯಾದ, ಭಗವತಿ=ಪರಮಾತ್ಮನಲ್ಲಿ, ಪರೇಣ=ಪೂರ್ಣವಾದ, ಭಕ್ತಿಭಾವೇನ=ಭಕ್ತಿಯಿಂದ, ಲಬ್ಧಾತ್ಮಾ=ಕೂಡಿದ ಮನಸ್ಸುಳ್ಳವನಾಗಿ ಮುಕ್ತಬಂಧನಃ =ದೇಹಾಭಿಮಾನ ರಹಿತನಾದನು. ಮೊದಲು ವಾಸುದೇವೇ ಶ್ರೀ ಕೃಷ್ಣನಲ್ಲಿ ನಂತರ ಸೂಕ್ಷ್ಮನಾದ ತನ್ನ ಬಿಂಬರೂಪದಲ್ಲಿ ಲಬ್ಧಾತ್ಮಾ=ಮನಸ್ಸಿರಿಸಿದವನಾಗಿ. ಇಚ್ಛಾದ್ವೇಷ-ವಿಹೀನೇನ=ನಿಷಿದ್ಧ ಇಚ್ಛೆ ವೈಷ್ಣವದ್ವೇಷಗಳಿಂದ ರಹಿತವಾದ ಸರ್ವತ್ರಸಮಚೇತಸಾ= ಎಲ್ಲ ಪದಾರ್ಥಗಳಲ್ಲಿರುವ ಭಗವದ್ರೂಪಗಳಲ್ಲಿ ನಿರ್ದೋಷತ್ವ ಸರ್ವಗುಣ-ಪೂರ್ಣತ್ವ ಮುಂತಾದುವುಗಳಿಂದ ಸಮತ್ವಬುದ್ಧಿಯಿಂದ, ಭಗವದ್ಭಕ್ತಿಯೋಗೇನ= ಶ್ರೀಹರಿಯಲ್ಲೇ ಭಕ್ತಿರೂಪ ಉಪಾಯದಿಂದ, ಭಾಗವತೀಂ ಗತೀಂ ಪ್ರಾಪ್ತಃ= ಭಗವತ್ಪ್ರಾಪ್ತಿರೂಪ ಮುಕ್ತಿ ಹೊಂದಿದನೆಂದು ಭಾವ.

ಇಲ್ಲಿ ಆತ್ಮ ಶಬ್ದಗಳೆರಡೂ ಭಗವತ್ಪರವೇ ಎಂಬ ವಿಷಯದಲ್ಲಿ ಸಮಾಖ್ಯಾ ಪ್ರಮಾಣ ಹೇಳಿರುವರು -

**ಭೂತಗರ್ಭಶ್ಚ ಭೂತಸ್ಥಃ ಪೂರ್ಣ ಏವಂ ದ್ವಿರೂಪವಾನ್ ।**
**ಅತ ಆತ್ಮೇತಿ ತಂ ಪ್ರಾಹುಃ ಸದೈವಾಪ್ತಗುಣೋ ಯತಃ ॥ ಇತಿ ಚ ।**

ಅದರ ಭಾವ - ಹೀಗೆ ತನ್ನ ಗರ್ಭದಲ್ಲಿ ಎಲ್ಲ ಭೂತಗಳನ್ನೂ ಇರಿಸಿಕೊಂಡವನು ಎಲ್ಲ ಭೂತಗಳಲ್ಲಿರುವವನು. ಹೀಗೆ ಎರಡೂ ರೂಪವುಳ್ಳವನು ಪೂರ್ಣನು. ಆದ್ದರಿಂದ ಆತ್ಮಾ ಎಂದು ಕರೆಯುವರು. ಅವನು ಯಾವಾಗಲೂ ಎಲ್ಲ ಗುಣಗಳನ್ನು ಪಡೆದವನು ಎಂದು ಭಾವ. ॥೪೬-೪೮॥

*ಇಲ್ಲಿಗೆ ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು.*

# ಇಪ್ಪತ್ತೈದನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ದಯಾವಂತರೂ ಮನನಶೀಲರೂ ಆದ ಕರ್ದಮರು ಮನುಪುತ್ರಿಯು ಆಡಿದ ವೈರಾಗ್ಯದ ಮಾತುಗಳನ್ನು ಕೇಳಿದರು. ಶ್ರೀಹರಿಯು ನುಡಿದಿದ್ದನ್ನು ಸ್ಮರಿಸಿಕೊಂಡರು. ಆಗ ಹೆಂಡತಿಯನ್ನು ಕುರಿತು 'ರಾಜಪುತ್ರಿ ! ನೀನು ಯಾವ ನಿಂದೆಯೂ ಇಲ್ಲದವಳು. ಹೀಗೇಕೆ ನಿನ್ನ ವಿಷಯದಲ್ಲಿ ಖೇದಗೊಳ್ಳುವೆ. ಇಷ್ಟರಲ್ಲಿಯೇ ಶುಕ್ರಶೋಣಿತ ಸಂಪರ್ಕವಿಲ್ಲದ ನಾಶರಹಿತನಾದ ಶ್ರೀಹರಿಯು ನಿನ್ನ ಗರ್ಭವನ್ನು ವಿಶೇಷ ಸನ್ನಿಧಾನದಿಂದ ಸೇರುವನು. ನಿನಗೆ ಮಂಗಳವಾಗು-ವುದು. ಇಂದ್ರಿಯನಿಗ್ರಹ, ಶೌಚ, ತಪಸ್ಸು ಮತ್ತು ದಾನಗಳಿಂದ ವ್ರತವನ್ನು ಪಾಲಿಸುವವಳಾಗಿ ಶ್ರದ್ಧೆಯಿಂದ ಶ್ರೀಹರಿಯನ್ನು ಸೇವಿಸು. ಅವನೇ ಸರ್ವನಿಯಾಮಕನು. ಬ್ರಹ್ಮದೇವರಿಗೂ ಕಾರಣನು; ಉಪದೇಶಕನು. ನಿನ್ನಿಂದ ಆರಾಧಿತನಾದ ಆತನು ನಿನ್ನ ಉದರದಿಂದ ಪುತ್ರನಾಗಿ ಅವತರಿಸಿ ನನ್ನ ಕೀರ್ತಿಯನ್ನೂ ವಿಸ್ತರಿಸುವನಾಗಿ ನಿನ್ನ ಸಂಸಾರಬಂಧವನ್ನು ಹೋಗಲಾಡಿಸುವನು' ಎಂದು ಅನುಗ್ರಹಿಸಿದರು.

ದೇವಹೂತಿಯು ಆ ಪ್ರಜೇಶ್ವರರ ಮಾತಿನಲ್ಲಿ ಗೌರವಿಟ್ಟು ಶ್ರೀಹರಿಯನ್ನು ಶ್ರದ್ಧೆಯಿಂದ ಸೇವಿಸಿದಳು. ಶ್ರೀಹರಿಯು ಯಾವಾಗಲೂ ಒಂದೇ ರೀತಿಯಲ್ಲಿರುವನು; ಜಗದ್ಗುರುವು ಮತ್ತು ಸಮಸ್ತ ಪುರುಷಾರ್ಥ ಪ್ರದಾತನು. ಹೀಗೆ ಅನೇಕ ದಿನಗಳು ಸೇವಿಸಿದ ಮೇಲೆ ಶ್ರೀಹರಿಯು ಕರ್ದಮರ ವೀರ್ಯವನ್ನು ಪ್ರವೇಶಿಸಿ ಅದನ್ನು ವಿಲಾಪನಗೊಳಿಸಿ ಆ ದೇವಹೂತಿಯ ದೇಹದಲ್ಲಿ ಮೊದಲೇ ಇದ್ದವನು ವ್ಯಕ್ತನಾದನು. ದಾರುವಿನಲ್ಲಿ ಅಗ್ನಿಯು ಮೊದಲೇ ಇದ್ದದ್ದು ದಾರುಮಥನದಿಂದ ವ್ಯಕ್ತವಾಗುವಂತೆ ವ್ಯಕ್ತನಾದನು. ಆಗ ಆಕಾಶದಲ್ಲಿ ವಾದ್ಯಗಳನ್ನು ಬಾರಿಸಿದರು. ಮೋಡಗಳು ಗರ್ಜಿಸಿದುವು. ಗಂಧರ್ವರು ಶ್ರೀಹರಿಯನ್ನೇ ಗಾನಮಾಡುತ್ತಿದ್ದರು. ಅಪ್ಸರೆಯರು ಸಂತೋಷದಿಂದ ಕುಣಿದರು. ಗಗನಚಾರಿಗಳು ಸುರಿಸಿದ ಹೂಗಳು ಕೆಳಗೆ ಬೀಳುತ್ತಿದ್ದುವು. ಎಲ್ಲ ದಿಕ್ಕುಗಳೂ, ಎಲ್ಲರ ಮನಸ್ಸೂ ನೀರುಗಳೂ ಪ್ರಸನ್ನವಾದುವು.

ಸರಸ್ವತೀ ನದಿಯ ನೀರಿನಿಂದ ಪಾವಿತವಾಗಿದ್ದ ಆ ಕರ್ದಮರ ಆಶ್ರಮಕ್ಕೆ ಮರೀಚಿ ಮೊದಲಾದ ಋಷಿಗಳೊಂದಿಗೆ ಬ್ರಹ್ಮದೇವರು ಬಂದರು. ಗುಣಪರಿಪೂರ್ಣನಾದ ಶ್ರೀಹರಿಯು ತತ್ವಗಳ ಸಮೀಚೀನ ಜ್ಞಾನವನ್ನು ಉಪದೇಶಿಸಲು ದೇವಹೂತಿಯಿಂದ ವ್ಯಕ್ತನಾಗಿರುವುದನ್ನು ಅವರು ತಿಳಿದಿದ್ದರು. ಶ್ರೀಹರಿಯನ್ನೂ ಸ್ತೋತ್ರಮಾಡಿ ಹೋಗಲು ಅವರು ಅಲ್ಲಿಗೆ ಬಂದರು. ತತ್ವಜ್ಞಾನೋಪದೇಶಕ್ಕಾಗಿ ಶ್ರೀಹರಿಯು ಮನಸ್ಸು ಮಾಡಿರುವುದನ್ನು ನಿರ್ಮಲವಾದ ಮನಸ್ಸಿನಿಂದ ಮೆಚ್ಚಿ ಗೌರವಿಸಿದರು. ಅವರ ಇಂದ್ರಿಯಗಳನ್ನು ಸಂತೋಷವು ಆವರಿಸಿತ್ತು. ಆಗ ಅವರು ಕರ್ದಮರನ್ನು ಕುರಿತು 'ಮಗನೇ, ನೀನು ನನ್ನ ಪೂಜೆಯನ್ನು ಯಾವ ಮೋಸವು ಇಲ್ಲದೆ ಸರಿಯಾಗಿ ಮಾಡಿರುವೆ. ನಾನು ಹೇಳಿದ ಮಾತನ್ನು ಅಲ್ಲಗಳೆಯದೆ ಮಾಡಿದೆಯಲ್ಲವೆ ! ನನ್ನ ಮಾತಿಗೆ ಗೌರವವನ್ನು ಕೊಟ್ಟಿರುವೆ. ತಂದೆಯ ಮಾತಿನಲ್ಲಿ ಗೌರವವಿಟ್ಟು ಮಕ್ಕಳು 'ಆಗಲಿ' ಎಂದು ಒಪ್ಪಿಕೊಳ್ಳಬೇಕು. ಅದೇ ಅವರು ತಂದೆಗೆ ಮಾಡುವ ಶುಶ್ರೂಷೆ. ಈ ನಿನ್ನ ಸುಂದರಿಯರಾದ ಹೆಣ್ಣುಮಕ್ಕಳು ಪತಿವ್ರತೆಯರಾಗಿ ಬಾಳಲಿ. ಇವರು ತಮ್ಮ ಮಕ್ಕಳಿಂದ ಈ ಸೃಷ್ಟಿಯನ್ನು ಅನೇಕ ರೀತಿಯಲ್ಲಿ ತುಂಬುವರು. ನೀನು ಇವರನ್ನು ಇವರಿವರ ಇಷ್ಟಕ್ಕೆ ತಕ್ಕಂತೆ, ಶೀಲಕ್ಕೆ ಅನುಗುಣವಾಗಿ ಈ ಋಷಿಶ್ರೇಷ್ಠರಿಗೆ ಮದುವೆ ಮಾಡಿಕೊಡು. ನಿನ್ನ ಯಶಸ್ಸನ್ನು ಎಲ್ಲೆಡೆಯಲ್ಲಿಯೂ ಹಬ್ಬಿಸು. ಶ್ರೀಹರಿಯೇ ತನ್ನ ಇಚ್ಛೆಯಿಂದ ನಿನ್ನ ಹೆಂಡತಿಯಲ್ಲಿ ಕಪಿಲನಾಗಿ ಅವತರಿಸಿರುವನು. ಸುಖವನ್ನು ತಾನು ಸದಾ ಅನುಭವಿಸುವುದರಿಂದಲೂ ಭಕ್ತರಿಗೆ ಶಾಶ್ವತ ಸುಖವನ್ನು ಕೊಡುವುದರಿಂದಲೂ ಇವನಿಗೆ ಈ ಹೆಸರು ಅನ್ವರ್ಥವಾದುದು. ಇವನೇ ಪುರುಷೋತ್ತಮನು. ಇವನ ಈ ದೇಹವು ಭಕ್ತರ ಸಾಧನೆಗೆ ನಿಧಿಯಂತಿರುವುದು. ಇವನೇ ಜ್ಞಾನಯೋಗವನ್ನೂ ವಿಜ್ಞಾನಯೋಗವನ್ನೂ ಜಗತ್ತಿಗೆ ಉಪದೇಶಿಸಿ ಕರ್ಮಸ್ವರೂಪವನ್ನು ಪ್ರಕಾಶಪಡಿಸುವನು ಮತ್ತು ಜ್ಞಾನಕ್ಕಿಂತ ಕರ್ಮವು ಅಮುಖ್ಯವೆಂದು ಅದನ್ನು ಕೆಳಗಿಳಿಸುವನು. ಸಮೀಚೀನ ಜ್ಞಾನವು ಸಾಂಖ್ಯವು ಕಾಲಕ್ರಮದಲ್ಲಿ ತಿರೋಹಿತವಾಗಿರಲು ಅದನ್ನು ಮತ್ತೆ ಆಸುರಿ ಎಂಬ ಋಷಿಯ ಮೂಲಕ ಜಗತ್ತಿನಲ್ಲಿ ಪ್ರವರ್ತಿಸುವಂತೆ ಮಾಡುವನು. ಬಂಗಾರದಂತಿರುವ ಇವನ ಕೇಶಗಳೂ, ಕಮಲದಂತಿರುವ ಇವನ ಕಣ್ಣುಗಳೂ, ಪದ್ಮ ಮೊದಲಾದ ರೇಖೆಗಳಿಂದ ಕೂಡಿದ ಇವನ ಕಮಲದಂತಿರುವ ಪಾದಗಳೂ ಇವನು ವಿಷ್ಣುವೆಂಬುದನ್ನು ತಿಳಿಸಿಕೊಡುವುವು. ನಾನಿವನು ವಿಷ್ಣುವೆಂಬುದನ್ನು ಬಲ್ಲೆ ಎಂದು ಹೇಳಿ ದೇವಹೂತಿಯನ್ನು ಸಂಬೋಧಿಸಿ 'ಹೇ ಮನುಪುತ್ರಿ ಕೈಟಭ ದೈತ್ಯನನ್ನು ಸಂಹರಿಸಿದ ಶ್ರೀಹರಿಯು ನಿನ್ನ ಗರ್ಭವನ್ನು ವಿಶೇಷ ಸನ್ನಿಧಾನದಿಂದ ಪ್ರವೇಶಿಸಿರುವನು.

ಈತನು ನಿನ್ನ ಅಜ್ಞಾನ ಮತ್ತು ಸಂಶಯಗಳಿಂದ ಬಂದ ಸಂಸಾರ ಪಾಶವನ್ನು ಹೋಗಲಾಡಿಸುವನು. ಅಷ್ಟೇ ಅಲ್ಲ. ಇನ್ನೂ ಅನೇಕ ಭಕ್ತರ ಸಂಸಾರ ಬಂಧವನ್ನು ಕಳೆಯಲು ಭೂಮಂಡಲವನ್ನೇ ಸಂಚರಿಸಿ ತತ್ತ್ವೋಪದೇಶಮಾಡುವನು. ಇವನನ್ನು ಸಾಮಾನ್ಯನೆಂದು ತಿಳಿಯಬೇಡ. ಸಿದ್ಧರೆನಿಸಿದ ಮುಕ್ತಜೀವರಿಗೆ ಇವನ ಒಡೆಯ. ಜ್ಞಾನಿಗಳಿಗೆಲ್ಲ ಆಚಾರ್ಯರಾದವರಿಗೂ ಗುರುವೆಂದು ಸಮ್ಮತನಾದವನಿವನು. ಸಂಸಾರ ಕಂಪವನ್ನು ಹೋಗಲಾಡಿಸುವುದರಿಂದ ಕಪಿಲನೆನಿಸಿಕೊಳ್ಳುವನು' ಎಂದು ಉಪದೇಶಿಸಿದರು.

ಜಗತ್ತಿನ ಸೃಷ್ಟಿಕರ್ತರೂ ನಿರ್ಮಲರೂ ಆದ ಬ್ರಹ್ಮದೇವರು ಹೀಗೆ ಆ ದಂಪತಿಗಳಿಗೆ ಶ್ರೀಹರಿಯೆಂದು ತಿಳಿಸಿಕೊಟ್ಟು ಆಶ್ವಾಸನೆ ಮಾಡಿ ನಾರದರನ್ನು ಕರೆದುಕೊಂಡು ಸನತ್ಕುಮಾರಾದಿಗಳೊಂದಿಗೆ ಹಂಸಯಾನದಿಂದ ತಮ್ಮ ಸತ್ಯಲೋಕಕ್ಕೆ ಮರಳಿದರು.

ಬ್ರಹ್ಮದೇವರು ಹೊರಟು ಹೋದಮೇಲೆ ಕರ್ದಮರು ಅವರ ಮಾತಿನಂತೆ ಬಂದಿದ್ದ ಮರೀಚಿ ಮೊದಲಾದ ಪ್ರಜೇಶ್ವರರಿಗೆ ತಮ್ಮ ಮಕ್ಕಳನ್ನು ಕೊಟ್ಟು ಮದುವೆ ಮಾಡಿದರು. ಕಲೆಯನ್ನು ಮರೀಚಿಗಳಿಗೂ, ಅನಸೂಯೆಯನ್ನು ಅತ್ರಿಗಳಿಗೂ ಶ್ರದ್ಧೆಯನ್ನು ಅಂಗೀರಸರಿಗೂ, ಹವಿರ್ಭುವಳನ್ನು ಪುಲಸ್ತ್ಯರಿಗೂ ಗತಿಯನ್ನೂ ಪುಲಹರಿಗೂ, ಕ್ರಿಯೆಯನ್ನು ಕ್ರತುಗಳಿಗೂ, ಖ್ಯಾತಿಯನ್ನು ಭೃಗುಗಳಿಗೂ ಅರುಂಧತಿಯನ್ನು ವಸಿಷ್ಠರಿಗೂ, ಶಾಂತಿಯನ್ನು ಅಥರ್ವಣರಿಗೂ ಕೊಟ್ಟರು. ಇವರೆಲ್ಲರೂ ತಮ್ಮ ತಮ್ಮ ಪತಿಗಳಿಗೆ ಅನುಕೂಲೆಯರಾಗಿ ಶ್ರೀಹರಿಯ ಪೂಜಾರೂಪವಾದ ಯಜ್ಞಕ್ಕೆ ಸಹಾಯಕರಾದರು. ಇವರ ಸುಗುಣಗಳಿಗೆ ಮೆಚ್ಚಿದ್ದ ಅವರು ಬೇರೊಂದು ವಿವಾಹಮಾಡಿಕೊಳ್ಳಲು ಇಚ್ಛಿಸಲಿಲ್ಲ. ಸಪತ್ನೀಕರಾದ ಆ ಋಷಿವರ್ಯರನ್ನು ಕರ್ದಮರು ಅತ್ಯಂತ ಆದರದಿಂದ ಸತ್ಕರಿಸಿದರು.

ಮರೀಚಿ ಮೊದಲಾದ ಋಷಿಗಳು ತಮ್ಮ ತಮ್ಮ ಪತ್ನಿಯರನ್ನು ಹೊಂದಿ ಆನಂದಿಸಿದರು. ಅವರಿಗೆ ಮತ್ತೊಂದು ಮದುವೆ ಮಾಡಿಕೊಳ್ಳುವ ಬಯಕೆ ಬಾರದಿರುವಷ್ಟು ಆ ಸತಿಯರು ಅನುಕೂಲೆಯರಾಗಿದ್ದರು. ಕರ್ದಮರು ಕೊಟ್ಟ ಧನ, ಮಾಡಿದ ಸನ್ಮಾನಗಳಿಂದ ಅವರು ಸಂತೃಪ್ತರಾಗಿದ್ದರು. ಕೆಲಕಾಲವಿದ್ದ ಮೇಲೆ ಅವರು ಕರ್ದಮರಿಗೆ ಹೇಳಿ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು.

ತಮ್ಮ ಮನೆಯಲ್ಲಿ ಅವತರಿಸಿರುವ ಕಪಿಲನು ಶ್ರೀಹರಿಯೆಂದು ಕರ್ದಮರು ತಿಳಿದಿದ್ದರು. ಬ್ರಹ್ಮದೇವರೂ ಅದನ್ನೇ ನುಡಿದಿದ್ದರು. ಏಕಾಂತದಲ್ಲಿ ಕಪಿಲನನ್ನು

ಸಮೀಪಿಸಿದ ಅವರು ಆತನಿಗೆ ನಮಸ್ಕಾರ ಮಾಡಿ 'ಸ್ವಾಮಿನ್, ಜನರು ತಾವು ತಾವು ಮಾಡಿದ ದುಷ್ಕರ್ಮಗಳ ಫಲವಾಗಿ ಸಂಸಾರದಲ್ಲಿ ತೊಳಲಿ ಬಳಲುವರು. ಎಷ್ಟೋ ಕಾಲದ ನಂತರ ತತ್ವಾಭಿಮಾನಿ ದೇವತೆಗಳು ಅವರ ವಿಷಯದಲ್ಲಿ ಪ್ರಸನ್ನರಾಗಿ ನಿನ್ನ ಕಡೆಗೆ ಮನಸ್ಸು ಮೊದಲಾದ ಇಂದ್ರಿಯಗಳನ್ನು ಪ್ರೇರಿಸುವರು. ನಿನ್ನನ್ನೇ ವಿಷಯೀಕರಿಸುವ ಇಂದ್ರಿಯಗಳುಳ್ಳ ಈ ಜನರು ಜಿತೇಂದ್ರಿಯರೆನಿಸು-ವರು. ಹೀಗೆ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದ ಫಲವಾಗಿ ಏಕಾಂತ ಸ್ಥಳಗಳಲ್ಲಿ ನಿರ್ದುಷ್ಟವಾದ ಭಕ್ತಿಯಿಂದ ನಿನ್ನನ್ನು ಭಜಿಸಿದ ಈ ಮುಕ್ತಿಯೋಗ್ಯ ಜೀವರಿಗೆ ನೀನು ನಿನ್ನ ಸ್ವರೂಪವನ್ನು ಅಪರೋಕ್ಷವಾಗಿ ತೋರುವೆ. ಅವರ ಈ ಪ್ರಯತ್ನಗಳೆಲ್ಲವೂ ಇದಕ್ಕಾಗಿಯೇ. ನಿನ್ನ ಭಕ್ತರಾದ ದೇವತೆಗಳನ್ನೂ ಅವರಿಂದ ಅನುಗೃಹೀತರಾದ ಯೋಗ್ಯ ಜೀವರನ್ನೂ ಪೋಷಿಸುವ ನೀನು ಕೇವಲ ವಿಷಯಾಸಕ್ತರಾಗಿ ನಿನ್ನನ್ನು ಮರೆತು ತಿರಸ್ಕರಿಸಿರುವ ನಮ್ಮ ಅಪರಾಧವನ್ನು ಗಣನೆಗೆ ತಂದುಕೊಳ್ಳದೆ ನಮ್ಮಲ್ಲಿ ವ್ಯಕ್ತನಾಗಿರುವೆ. ಭಕ್ತರ ಸಾಧನೆಯನ್ನು ಅಭಿವೃದ್ಧಿಗೊಳಿಸುವುದೇ ನಿನ್ನ ಮುಖ್ಯ ಗುರಿ. ಅವರಿಗೆ ಶಾಶ್ವತ ಸುಖವನ್ನು ತಂದು ಕೊಡುವ ಬಯಕೆಯಿಂದ ಅವತರಿಸಿದ ನೀನು ನಿಮ್ಮ ಮಗನಾಗಿ ಅವತರಿಸುವೆ ಎಂಬ ನಿನ್ನ ವಾಕ್ಯವನ್ನು ಸತ್ಯವನ್ನಾಗಿಸಿರುವೆ. ನಿನ್ನ ಭಕ್ತರಾದ ಬ್ರಹ್ಮಾದಿ ಚೇತನರು ಯಾವ ಜನರ ಮೂಲಕ ನಿನ್ನ ಅಭಿವ್ಯಕ್ತಿಯನ್ನು ಇಷ್ಟಪಡುವರೋ ಆ ಜನರಿಂದ ಅಭಿವ್ಯಕ್ತನಾಗಲು ನೀನು ಇಷ್ಟಪಡುವೆ. ನಿನಗೆಂದೂ ಪ್ರಾಕೃತರೂಪಗಳಿಲ್ಲ. ಈ ಕಾರಣದಿಂದಲೇ ನಿನ್ನನ್ನು ಆರೋಪಿಯೆನ್ನುವರು. ಯೋಗ್ಯ ಜನರು ತಮ್ಮ ತಮ್ಮ ಅಭಿರುಚಿಗೆ ತಕ್ಕಂತೆ ಬ್ರಹ್ಮಮೊದಲಾದ ಅಧಿಷ್ಠಾನಗಳಲ್ಲಿ ನಿನ್ನನ್ನು ಉಪಾಸಿಸಿದರೆ ನೀನು ಅಲ್ಲಿಯೇ ವ್ಯಕ್ತನಾಗಿ ಅವರಿಗೆ ಫಲಗಳನ್ನು ಕೊಡುವೆ. ಬ್ರಹ್ಮ ಮೊದಲಾದ ಜ್ಞಾನಿಶ್ರೇಷ್ಠರು ನಿನ್ನ ತಿಳಿಯುವ ಇಚ್ಛೆಯಿಂದ ಯಾವಾಗಲೂ ನಿನ್ನನ್ನು ಸೇವಿಸುತ್ತಿರುವರು. ನಿನ್ನಲ್ಲಿ ಭೇದವಿಲ್ಲದ ಐಶ್ವರ್ಯ, ಯಶಸ್ಸು, ಜ್ಞಾನ, ವೀರ್ಯ, ಕಾಂತಿ ಮತ್ತು ನಿನಗಿಂತ ಭಿನ್ನವಾದ ಜಗತ್ತು ಅಸಾರವೆಂಬ ಜ್ಞಾನ ಇವು ಯಾವಾಗಲೂ ಪರಿಪೂರ್ಣವಾಗಿರುವುವು. ನೀನು ಪ್ರಕೃತಿಪುರುಷರಿಗಿಂತ ಉತ್ತಮನು; ಜಗತ್ತನ್ನು ಪೋಷಿಸುವವನು; ಕಾಲದಿಂದಲೂ ಗುಣದಿಂದಲೂ ಸ್ವರೂಪದಿಂದಲೂ ಅನಂತನಾಗಿ ಮಹಾಂತನೆನಿಸಿ ಕೊಂಡಿರುವವನು. ನಿನ್ನ ಜ್ಞಾನವು ನಿನಗೆ ಎಂದೂ ತಿರೋಹಿತವಾಗುವುದಿಲ್ಲ. ಆದ್ದರಿಂದಲೇ ಜಗತ್ತಿನ ಸಮಸ್ತ ವಿಶೇಷಗಳನ್ನೂ ನೀನು ಬಲ್ಲೆ. ನಿನ್ನ ಶಕ್ತಿಯು ಎಂದೂ ಮತ್ತೊಬ್ಬರ ಅಧೀನವಲ್ಲ. ನಿನ್ನ ಇಷ್ಟದಂತೆ ಆ ಶಕ್ತಿಯನ್ನು ವ್ಯಕ್ತಗೊಳಿಸುವೆ. ಬ್ರಹ್ಮರುದ್ರಾದಿಗಳನ್ನು ಲಾಲಿಸುವುದರಿಂದಲೂ ಲಯಗೊಳಿಸುವದರಿಂದಲೂ ಕಪಿಲನೆಂಬ ನಿನ್ನಹೆಸರು ಅನ್ವರ್ಥವಾದುದು. ಹೀಗೆ ಮೂರು ವೇದಗಳಿಂದಲೂ

ನೀನು ಪ್ರತಿಪಾದಿತನಾಗಿರುವೆ. ಇಂತಹ ನಿನ್ನನ್ನು ನಾನು ಶರಣು ಹೊಂದಿರುವೆನು. ನಿನ್ನ ಈ ಅವತಾರದಿಂದಲೇ ನನ್ನ ಇಷ್ಟಗಳೆಲ್ಲವೂ ಸಿದ್ಧವಾದವು. ಆದರೂ ಪ್ರಜಾಪಾಲಕನಾದ ನಿನ್ನನ್ನು ಈ ವಿಷಯದಲ್ಲಿ ಅಪ್ಪಣೆ ಬೇಡುತ್ತೇನೆ. ನಾನು ಸನ್ಯಾಸಿಯಾಗಿ ಗ್ರಾಮಗಳನ್ನು ಸಂಚರಿಸುತ್ತಾ ನಿನ್ನಲ್ಲಿಯೇ ಮನಸ್ಸಿಟ್ಟು ನಿನ್ನ ಈ ವಿರಹದಿಂದಾಗುವ ದುಃಖವಿಲ್ಲದವನಾಗಿ ನನ್ನ ಮುಂದಿನ ಆಯುಸ್ಸನ್ನು ಸಾರ್ಥಕ ಮಾಡಿಕೊಳ್ಳುವೆನು' ಎಂದು ವಿಜ್ಞಾಪಿಸಿದರು.

ಆಗ ಕಪಿಲರೂಪಿಯಾದ ಶ್ರೀಹರಿಯು 'ಕರ್ದಮ, ಯಥಾರ್ಥಜ್ಞಾನದ ವಿಷಯದಲ್ಲಿ ನಾನು ಹೇಳುವುದೆಲ್ಲವೂ ಪ್ರಮಾಣವಾದುದು. ಕಾರಣವೇನೆಂದರೆ ನಾನು ಆಪ್ತತಮ. ನಿನಗೆ ಕೊಟ್ಟ ಮಾತನ್ನು ಸತ್ಯವನ್ನಾಗಿ ಮಾಡಲು ನಿನ್ನ ಮಗನಾಗಿ ವ್ಯಕ್ತನಾಗಿರುವೆನು. ಮುಕ್ತಿಯೋಗ್ಯ ಜನರು ಸಂಸಾರ ಬಂಧನದಿಂದ ಮುಕ್ತರಾಗ ಬಯಸುತ್ತಾರೆ. ಅವರ ದೇಹದಲ್ಲಿ ಇರುವ ಪರಮಾತ್ಮ ಮೊದಲಾದ ತತ್ವಗಳ ಸಮೀಚೀನ ಜ್ಞಾನವನ್ನು ಅವರಿಗೆ ಉಪದೇಶಿಸುವುದಕ್ಕಾಗಿಯೇ ನಾನಿಲ್ಲಿ ಅವತರಿಸಿರುವೆನು. ಅಪರೋಕ್ಷಜ್ಞಾನಿಗಳ ಸಮೀಚೀನಜ್ಞಾನವನ್ನು ದೃಢಪಡಿಸುವುದೂ ನನ್ನ ಈ ಅವತಾರದ ಕೆಲಸವಾಗಿರುವುದು. ಆಪ್ತಕಾಮನಾದ ನನಗೆ ಮತ್ತೇನು ಪ್ರಯೋಜನವಿದೆ ! ಈಚೆಗೆ ಬಹುಕಾಲದಿಂದ ಸರಿಯಾದ ಸಂಪ್ರದಾಯ-ಪ್ರವರ್ತಕರಿಲ್ಲದೆ ಈ ಸೂಕ್ಷ್ಮವಾದ ಆತ್ಮತತ್ವಮಾರ್ಗವು ತಿರೋಹಿತವಾಗಿ ಹೋಗಿದೆ. ಅದನ್ನು ಮತ್ತೆ ಪ್ರವೃತ್ತಿಗೊಳಿಸುವುದಕ್ಕಾಗಿ ಯಥಾರ್ಥಜ್ಞಾನವನ್ನು ಸಾಂಖ್ಯಶಾಸ್ತ್ರದಿಂದ ಸ್ಥಾಪಿಸಲು ನಾನು ಈ ರೂಪದಿಂದ ವ್ಯಕ್ತನಾಗಿದ್ದೇನೆ. ನನ್ನ ಅನುಜ್ಞೆಯನ್ನು ಪಡೆದ ನೀನು ನಿನಗೆ ಸುಖವಾಗುವಂತೆ ಹೊರಡು. ನೀನು ಮಾಡುವ ಕರ್ಮಗಳೆಲ್ಲವನ್ನೂ ನನ್ನಲ್ಲಿ ಸಮರ್ಪಿಸು. ಆಗ ಸುಲಭವಾಗಿ ಗೆಲ್ಲಲಾಗದ ಇಂದ್ರಿಯಗಳನ್ನು ನೀನು ಗೆಲ್ಲುವೆ. ಈ ಬಗೆಯ ನನ್ನ ಸೇವೆಯಿಂದ ಮೋಕ್ಷವನ್ನು ಹೊಂದಿ ಸುಖಿಸುವೆ. ನನ್ನನ್ನು ಸ್ವಪ್ರಕಾಶನೆಂದೂ, ಸರ್ವಭೂತಗಳ ಹೃದಯಗುಹಾವಾಸಿಯೆಂದೂ, ಕರ್ಮಫಲಕೊಡುವ ಸ್ವಾಮಿಯೆಂದೂ ಉಪಾಸಿಸು. ಆ ಉಪಾಸನೆಯ ಫಲವಾಗಿ ಲಿಂಗದೇಹಕ್ಕಿಂತ ಭಿನ್ನವಾದ ನಿನ್ನ ಸ್ವರೂಪವಾದ ಚಿದ್ದೇಹದಲ್ಲಿ ಸ್ವರೂಪೇಂದ್ರಿಯ-ಗಳಿಂದ ನನ್ನ ಸ್ವರೂಪವನ್ನು ಕಾಣುವೆ. ನಿನ್ನೀ ಚಿದಾನಂದಾತ್ಮಕವಾದ ದೇಹವು ನನ್ನ ನಿತ್ಯ ಸೇವಾರೂಪವಾಗಿರುವುದು. ಆಗ ಸಾಂಸಾರಿಕ ಕ್ಲೇಶಗಳು ನಷ್ಟವಾಗುವುವು. ಹಾಗೆ ಕಾಣುವನೇ ಅಪರೋಕ್ಷಜ್ಞಾನಿಯು. ಪ್ರಪಂಚವು ಅನಿತ್ಯವೂ ಅಸಾರವೂ ಎಂದು ತಿಳಿದ ಅವನು ಶಾಸ್ತ್ರವನ್ನು ಉಪದೇಶಿಸುವ ಆಚಾರ್ಯನಿಂದ ಶ್ರೀಹರಿಯು ಅಂತರ್ಯಾಮಿಯೆಂದೂ ಸಕಲಗುಣಪರಿಪೂರ್ಣನೆಂದೂ ಆದ್ದರಿಂದಲೇ

ಸರ್ವೋತ್ತಮನೆಂದೂ ತಿಳಿದು ಉಪಾಸಿಸುವನು. ಇದರ ಫಲವಾಗಿ ಶ್ರೀಹರಿಯ ಅಪರೋಕ್ಷವಾಗಿ ಅವನ ಲಿಂಗಶರೀರವು ತದ್ರೂಪವಾದ ಮನಸ್ಸು ಮೊದಲಾದ ಇಂದ್ರಿಯಗಳು ನಾಶವಾಗುವುದು. ಆಗ ಅವನಿಗೆ ದುಃಖ ಅಜ್ಞಾನ, ಭಯ ಮತ್ತು ಶೋಕಗಳಿಗೆ ಅವಕಾಶವೇ ಇರುವುದಿಲ್ಲ. ಇಂತಹ ಸ್ವರೂಪಾನಂದಾನುಭವವೇ ಮುಕ್ತಿಯು. ಈ ಮುಕ್ತಿಯನ್ನು ನೀನೂ ಹೊಂದುವೆ. ನನ್ನ ತಾಯಿಯೆನಿಸಿದ ಈ ದೇವಹೂತಿಗೆ ಈ ಅಧ್ಯತ್ಮವಿದ್ಯೆಯನ್ನು ಉಪದೇಶಿಸುವೆನು. ಇದರಿಂದ ಕರ್ಮಕ್ಕಿಂತ ಜ್ಞಾನವು ಮುಖ್ಯವೆಂದು ಆಕೆ ತಿಳಿಯುವಳು. ನನ್ನ ಉಪದೇಶದಂತೆ ಉಪಾಸನೆಮಾಡಿ ಸಂಸಾರವನ್ನು ಕಳೆದುಕೊಂಡು ಅಭಯರೂಪವಾದ ನನ್ನನ್ನು ಸೇರಿ ಮುಕ್ತಳಾಗುವಳು' ಎಂದು ಅನುಗ್ರಹಿಸಿದನು.

ಹೀಗೆ ಕಪಿಲನಿಂದ ಉಪದಿಷ್ಟರಾದ ಕರ್ದಮರು ಸಂತುಷ್ಟರಾದರು. ಶ್ರೀಹರಿಗೆ ಬಲವಂದು ಕಾಡಿಗೆ ಹೊರಟುಹೋದರು. ಭಿಕ್ಷಕ್ಕೆ ಮಾತ್ರ ಗ್ರಾಮ ಪ್ರವೇಶಮಾಡುತ್ತಿದ್ದರು. ಪ್ರಿಯಾಪ್ರಿಯವ್ಯವಹಾರಕ್ಕೆ ವಾಗಿಂದ್ರಿಯವೇ ಮುಖ್ಯ ಕಾರಣವೆಂದು ತಿಳಿದಿದ್ದ ಅವರು ಮೌನವ್ರತವನ್ನು ಹಿಡಿದರು. ಅಗ್ನಿಗಳನ್ನು ಆತ್ಮಾರೋಪಣಮಾಡಿಕೊಂಡಿದ್ದುದರಿಂದ ಯಾವ ಹೋಮಾದಿಕಾರ್ಯಗಳನ್ನೂ ಅವರು ಮಾಡುತ್ತಿರಲಿಲ್ಲ. ನೆಲೆಯಾಗಿ ನಿನ್ನಲು ಎಲ್ಲಿಯೂ ಅವರು ಆಶ್ರಯವನ್ನು ಕಟ್ಟಿಕೊಳ್ಳಲಿಲ್ಲ. ಮತ್ತೊಬ್ಬರ ಸಹವಾಸವನ್ನು ಮಾಡದ ಅವರು ಶ್ರೀಹರಿಯನ್ನೇ ರಕ್ಷಕನನ್ನಾಗಿ ಆಶ್ರಯಿಸಿದರು. ಎಲ್ಲಿಯೂ ನಿಲ್ಲದೆ ಭೂಮಂಡಲವನ್ನೇ ಸಂಚರಿಸಿದರು. ಸಂಚಾರಮಾಡುತ್ತಿದ್ದರೂ ಅವರ ಮನಸ್ಸು ಶ್ರೀಹರಿಯಲ್ಲಿಯೇ ಲೀನವಾಗಿತ್ತು. ಶ್ರೀಹರಿಯು ಮೂರ್ತಾಮೂರ್ತ ಪ್ರಪಂಚಕ್ಕಿಂತ ವಿಲಕ್ಷಣನು; ಜ್ಞಾನಸ್ವರೂಪನು; ಎಲ್ಲ ತತ್ವಗಳಲ್ಲಿಯೂ ಅಂತರ್ಯಾಮಿಯಾಗಿ ಪ್ರಕಾಶಿಸುವವನು; ಪ್ರಾಕೃತಗುಣ ರಹಿತನು; ಸರ್ವೋತ್ತಮನೆಂದು ಧ್ಯಾನಿಸುವ ಭಕ್ತರ ಮನಸ್ಸನ್ನು ಬಿಟ್ಟಗಲನು. ಭಕ್ತರ ನಿರ್ದೋಷವಾದ ಭಕ್ತಿಯುಕ್ತಧ್ಯಾನಕ್ಕೆ ವಿಷಯನು ಮತ್ತು ಗುಣಪೂರ್ಣನು ಎಂದು ಉಪಾಸಿಸಿ ಮಮಕಾರವನ್ನು ಬಿಟ್ಟು ದ್ವಂದ್ವಸಹಿಷ್ಣುಗಳಾಗಿ ಎಲ್ಲೆಡೆಯೂ ಇರುವ ಶ್ರೀಹರಿಯು ಪೂರ್ಣನೆಂದು ತಿಳಿಯುತ್ತಾ ಸ್ವತಂತ್ರನಾದ ಶ್ರೀಹರಿಯನ್ನೇ ತಿಳಿದು ನಿರಹಂಕಾರಿಗಳಾಗಿ ಬಿಂಬರೂಪಿಯಲ್ಲೇ ಆನಂದಿಸಿದರು. ಅವರ ಮನಸ್ಸು ಶಾಂತವಾಗಿತ್ತು. ಅಲೆಗಳಿಲ್ಲದ ಸಮುದ್ರದಂತೆ ಸಂಪತ್ತಿನಲ್ಲಿಯೂ ವಿಪತ್ತಿನಲ್ಲಿಯೂ ಕ್ಷುಬ್ಧವಾಗದೆ ಸ್ಥೈರ್ಯವನ್ನು ಅವರು ಹೊಂದಿದ್ದರು. ಎಲ್ಲ ಭೂತಗಳಲ್ಲಿಯೂ ವ್ಯಾಪ್ತನಾಗಿರುವ ಶ್ರೀಹರಿಯನ್ನು ಅಪರೋಕ್ಷೀಕರಿಸಿಕೊಂಡರು. ಅಲ್ಲದೆ ಶ್ರೀಹರಿಯು ಎಲ್ಲ ಭೂತಗಳಿಗೂ ಆಶ್ರಯನೆಂಬುದನ್ನೂ ಕಂಡರು. ಗುಣಪೂರ್ಣನಾದ

ಶ್ರೀಹರಿಯ ಈ ಎರಡು ರೂಪಗಳನ್ನು ಕಂಡ ಅವರು ತಮ್ಮ ಅಂತರ್ಯಾಮಿಯಾದ ಬಿಂಬರೂಪಿಯಲ್ಲಿ ಸರ್ವೋತ್ತಮ ಭಕ್ತಿಯನ್ನು ಮಾಡಿ ಮೊದಲು ಅವತಾರರೂಪಗಳಲ್ಲಿಯೂ, ಅನಂತರ ಮೂಲರೂಪದಲ್ಲಿಯೂ, ಆಮೇಲೆ ಜೀವಾಂತರ್ಯಾಮಿ ರೂಪದಲ್ಲಿಯೂ ಮನಸ್ಸನ್ನು ನೆಲೆಗೊಳಿಸಿ ಈ ಸಂಸಾರಕ್ಕೆ ಕಾರಣವಾದ ದೇಹಾಭಿಮಾನವನ್ನು ಬಿಟ್ಟು ನಿಷಿದ್ಧೇಚ್ಛೆಯನ್ನು ಮಾಡದೆ, ವೈಷ್ಣವ ದ್ವೇಷರಹಿತರಾಗಿ ಸರ್ವತ್ರ ಶ್ರೀಹರಿಯನ್ನು ನಿರ್ದೋಷ ಗುಣಪೂರ್ಣನನ್ನಾಗಿ ಕಂಡು ಸ್ವಯೋಗ್ಯತೆಗೆ ತಕ್ಕ ಭಕ್ತಿಯಿಂದ ಶ್ರೀಹರಿಯನ್ನು ಸೇವಿಸಿ ಅವನನ್ನೇ ಸೇರಿ ಮುಕ್ತರಾದರು.



# ಅಥ ಷಡ್ವಿಂಶೋಽಧ್ಯಾಯಃ

ಆತ್ಯಂತಿಕ ಭಕ್ತಿಯೋಗ, ಶ್ರೀಹರಿಯಲ್ಲಿ ಮನೋಯೋಗಪ್ರಕಾರ, ಭಕ್ತಿಗೆ ಅಧಿಕಾರಿಗಳಾದವರಿಗೆ ಭಕ್ತಿಸಾಧನ ಇವುಗಳನ್ನು ಪ್ರತಿಪಾದಿಸಲು ಈ ಅಧ್ಯಾಯ ಪ್ರಾರಂಭವಾಗಿದೆ. ಮೊದಲಿಗೆ ಮೈತ್ರೇಯರು ವಿದುರನಿಗೆ ಹೇಳಿದ್ದನ್ನು ಶುಕಾಚಾರ್ಯರ ಮುಖದಿಂದ ಕೇಳಿದ ರಾಜನು ದೇವಹೂತಿಗೆ ಕಪಿಲನು ಮಾಡಿದ ಉಪದೇಶವನ್ನು ಕೇಳುವ ಇಚ್ಛೆಯಿಂದ ಹಿಂದೆ ಹೇಳಿದ್ದನ್ನು ಅನುವಾದ ಮಾಡಿ ಪ್ರಶಂಸಿಸಿ ಕಪಿಲರು ಉಪದೇಶಿಸಿದ್ದನ್ನು ಹೇಳಿರಿ ಎಂದು ಕೇಳುವನು–

**ರಾಜೋವಾಚ**

**ಕಪಿಲಸ್ತತ್ವಸಂಖ್ಯಾತಾ ಭಗವಾನಾತ್ಮಮಾಯಯಾ ।**
**ಜಾತಃ ಸ್ವಯಮಜಃ ಸಾಕ್ಷಾದಾತ್ಮಪ್ರಜ್ಞಪ್ತಯೇ ನೃಣಾಂ ॥೧॥**

ಭಗವಾನ್=ಷಡ್ಗುಣೈಶ್ವರ್ಯಸಂಪನ್ನನಾದ ಭಗವನಂತನು, ನೃಣಾಂ=ಅಧಿಕಾರಿಗಳಿಗೆ, ಆತ್ಮಪ್ರಜ್ಞಪ್ತಯೇ=ತನ್ನ ಜ್ಞಾನಮಾಡಿಕೊಡಲು, ತತ್ವಸಂಖ್ಯಾತಾ=ಪರಾಪರತತ್ವಗಳನ್ನು ತಿಳಿಸುವ ಶಾಸ್ತ್ರನಿರ್ಮಾತೃವಾದ, ಸಾಕ್ಷಾತ್ ಅಜಃ=ಶ್ರೀಮನ್ನಾರಾಯಣನು ('ಅಜಾ ವಿಷ್ಣುಹರಚ್ಛಾಗಾಃ' ಎಂದಿರುವುದರಿಂದ ಸಂಶಯನಿವಾರಿಸಲು ಸಾಕ್ಷಾತ್ ಎಂದಿದ್ದಾರೆ. 'ಸಾಕ್ಷಾತ್‌ಪ್ರತ್ಯಕ್ಷತುರ್ಯಯೋಃ' ಎಂದಿರುವುದರಿಂದ ತುರ್ಯಃ ಅಜಃ ಎಂದರೆ ನಾರಾಯಣನೇ) ಸ್ವಯಂ=ತಾನೇ ಆವೇಶಾದಿಗಳಿಲ್ಲದೇ, ಕಪಿಲಃ=ಕಪಿಲನೆಂಬ ಹೆಸರಿನಿಂದ, ಆತ್ಮಮಾಯಯಾ ಜಾತಃ=ತನ್ನ ಇಚ್ಛೆಯಿಂದ ಅವತರಿಸಿದನು ಎಂದು ನಿಮ್ಮಿಂದ ಕೇಳಿದೆನು. ॥೧॥

ಇತರರಿಗೆ ಅಲಂಬುದ್ಧಿ ಬರಬಹುದು ನನಗೆ ಹಾಗಲ್ಲ, ರಸಾಯನ ಪಾನ ಮಾಡಿದವನಂತೆ ಹರಿಕಥಾಶ್ರವದಿಂದ ಪರಮತೃಪ್ತಿಯಾಗುವುದು ಎಂದು ಹೇಳುವನು –

**ಅರ್ಹಸ್ಯ ಧರ್ಮಿಣಾಂ ಪುಂಸಾಂ ಗರಿಮ್ಣಃ ಸರ್ವಯೋಗಿನಾಂ ।**
**ವಿಶ್ರುತೌ ಶ್ರುತದೇವಸ್ಯ ಭೂರಿ ತೃಪ್ಯಂತಿ ಮೇಽಸವಃ ॥೨॥**

ಧರ್ಮಿಣಾಂ=ಭಗವದ್ವಿಷಯಕ ಮೋಕ್ಷಸಾಧನನಿವೃತ್ತಧರ್ಮಾನುಷ್ಠಾನ ಮಾಡುವ, ಪುಂಸಾಂ=ಜನರಿಗೆ, ಅರ್ಹಸ್ಯ=ಸಂಮಾನ್ಯನಾದ, ಸರ್ವಯೋಗಿನಾಂ= ಸನಕಾದಿ ಎಲ್ಲ ಯೋಗಿಗಳಿಗಿಂತ, ಗರಿಮ್ಣಃ=ಗುರುತಮನಾದ, ವಿಶ್ರುತೌ= ವಿಶೇಷವಾಗಿ, ಶ್ರವಣ ಮಾಡಿದಾಗ ಶ್ರುತದೇವಸ್ಯ=ಶ್ರೀಹರಿಯ ಶ್ರವಣ ಮಾಡಿದ, ಮೇ=ನನ್ನ ಅಸವಃ=ಇಂದ್ರಿಯಗಳು ಭೂರಿ ತೃಪ್ಯಂತಿ=ಬಹಳ ಆನಂದ ಪಡೆಯುವವು. ಬೇಕಾದಷ್ಟು ಹರಿಕಥಾಶ್ರವಣ ಮಾಡಿದ್ದರೂ ನನಗೆ ತೃಪ್ತಿಯಿಲ್ಲ ಎಂದು ಭಾವ. ॥೨॥

**ಯದ್ ಯದ್ ವಿಧತ್ತೇ ಭಗವಾನ್ ಸ್ವಚ್ಛಂದಾತ್ಮಾತ್ಮಮಾಯಾಯಾ ।**
**ತಾನಿ ಮೇ ಶ್ರದ್ಧಧಾನಸ್ಯ ಕೀರ್ತನ್ಯಾನ್ಯನುಕೀರ್ತಯ ॥೩॥**

ಸ್ವಚ್ಛಂದಾತ್ಮಾ=ಸ್ವತಂತ್ರನಾದ, ಭಗವಾನ್=ಪರಮಾತ್ಮನು, ಆತ್ಮಮಾಯಯಾ= ತನ್ನ ಇಚ್ಛೆಯಿಂದ, ಯದ್ ಯದ್ ವಿಧತ್ತೇ=ಏನೇನು ಮಾಡುವನೋ, ತಾನಿ= ಅವುಗಳನ್ನು ಕೀರ್ತನ್ಯಾನಿ=ನಿತ್ಯವೂ ಹೇಳಲು ಯೋಗ್ಯವಾದವುಗಳನ್ನು ಶ್ರದ್ಧಧಾನಸ್ಯ ಮೇ=ಶ್ರದ್ಧಾಳುವಾದ ನನಗೆ ಅನುಕೀರ್ತಯ=ಉಪದೇಶಿಸು. ॥೩॥

**ಶುಕ ಉವಾಚ**

**ದ್ವೈಪಾಯನಸಖಶ್ತ್ವೇವಂ ಮೈತ್ರೇಯೋ ಭಗವಾಂಸ್ತಥಾ ।**
**ಪ್ರಾಹೇನಂ ವಿದುರಂ ಪ್ರೀತ ಆನ್ವೀಕ್ಷಿಕ್ಯಾಂ ಪ್ರಚೋದಿತಃ ॥೪॥**

ದ್ವೈಪಾಯನಸಖಃ=ವೇದವ್ಯಾಸರ ಗೆಳೆಯರಾದ, (ಪರಾಶರರ ಶಿಷ್ಯರಾದ್ದರಿಂದ) ಮೈತ್ರೇಯಃ=ಮೈತ್ರೇಯರು, ಏವಂ=ಹೇಗೆ ನೀನು ಕೇಳಿದಿಯೋ, ತಥಾ= ನಿನ್ನಂತೆಯೇ ಹಾಗೇ, ಆನ್ವಿಕ್ಷಿಕ್ಯಾಂ ಪ್ರಚೋದಿತಃ=ವಿದುರನಿಂದ ಬ್ರಹ್ಮವಿದ್ಯೆಯಲ್ಲಿ ಪ್ರೇರಿತರಾಗಿ, ಪ್ರೀತಃ=ಸಂತುಷ್ಟರಾಗಿ ವಿದುರಂ=ವಿದುರನನ್ನು ಕುರಿತು ಏನಂ= ಮುಂದೆ ನಿನಗೆ ನಾನು ಹೇಳುವುದನ್ನೇ, ಪ್ರಾಹ=ಹೇಳಿದರು. ॥೪॥

**ಪಿತರಿ ಪ್ರಸ್ಥಿತೇಽರಣ್ಯಂ ಮಾತುಃ ಪ್ರಿಯಚಿಕೀರ್ಷಯಾ ।**
**ತಸ್ಮಿನ್ ಬಿಂದುಸರೇಽವಾತ್ಸೀದ್ ಭಗವಾನ್ ಕಪಿಲಃ ಕಿಲ ॥೫॥**

ಭಗವಾನ್ ಕಪಿಲಃ=ಐಶ್ವರ್ಯಶಾಲಿಯಾದ ಕಪಿಲದೇವನು, ಪಿತರಿ= ತಂದೆಯಾದ ಕರ್ದಮರು, ಅರಣ್ಯಂ ಪ್ರಸ್ಥಿತೇ=ಸನ್ಯಾಸಿಯಾಗಿ ಅಡವಿಗೆ ಹೋಗುತ್ತಿರಲು, ಮಾತುಃ ಪ್ರಿಯಚಿಕೀರ್ಷಯಾ=ತಾಯಿಗೆ ಪ್ರೀತಿಯನ್ನು ಮಾಡುವ ಇಚ್ಛೆಯಿಂದ, ತಸ್ಮಿನ್ ಬಿಂದುಸರೇ=ಆ ಬಿಂದುಸರೋವರದಲ್ಲಿ ಅವಾತ್ಸೀತ್ ಕಿಲ=ವಾಸ ಮಾಡಿದನಷ್ಟೇ. ॥೫॥

**ತಮಾಸೀನಮಕರ್ಮಾಣಂ ತತ್ವಮಾರ್ಗಾಗ್ರದರ್ಶನಂ ।**
**ಸ್ವಸುತಂ ದೇವಹೂತ್ಯಾಹ ಧಾತುಃ ಸಂಸ್ಮರತೀ ವಚಃ ॥೬॥**

ಆಸೀನಂ=ಕುಳಿತಿರುವ ಅಕರ್ಮಾಣಂ=ಯಾವ ಕೆಲಸವನ್ನು ಮಾಡದ ತತ್ವಮಾರ್ಗಾಗ್ರದರ್ಶನಂ=ತತ್ವವನ್ನು ತಿಳಿಸುವ ಶ್ರೇಷ್ಠಜ್ಞಾನವುಳ್ಳ ಶಾಸ್ತ್ರರಚಿಸಿದ, ಸ್ವಸುತಂ=ತನ್ನ ಮಗನಾದ, ತಂ=ಕಪಿಲನನ್ನು ಕುರಿತು, ಧಾತುಃ ವಚಃ ಸ್ಮರನ್=ಬ್ರಹ್ಮದೇವರು ಹೇಳಿದ 'ನಿನ್ನ ಗರ್ಭದಲ್ಲಿ ಅವತರಿಸಿ ತತ್ವೋಪದೇಶ ಮಾಡುವನು' ಎಂಬ ಮಾತನ್ನು ಜ್ಞಾಪಿಸಿಕೊಂಡು, ಆಹ=ಹೇಳಿದಳು. (ಆಸೀನಂ ಎಂಬುವುದ-ರಿಂದಲೇ ಅಕರ್ಮಾಣಂ=ಕರ್ಮಸಿದ್ಧವಾದಾಗ ಪುನಃ ಹೇಳಿದರಿಂದ ರೆಪ್ಪೆ ಬಡಿಯುವುದೇ ಮುಂತಾದದ್ದು ಇಲ್ಲವಾದ್ದರಿಂದ ಸಚ್ಚಿದಾನಂದ ದೇಹವುಳ್ಳ-ವನೆಂದು ಸೂಚಿತ ವಿಜಯಧ್ವಜೀಯ. ॥೬॥

**ದೇವಹೂತಿರುವಾಚ**

**ನಿರ್ವಿಣ್ಣಾತಿತರಾಂ ಭೂಮನ್ನಸದಿಂದ್ರಿಯತರ್ಪಣಾತ್ ।**
**ಯೇನ ಸಂಭಾವ್ಯಮಾನೇನ ಪ್ರಪನ್ನಾಽಂಧತಮಃ ಪ್ರಭೋ ॥೭॥**

ಹೇ ಭೂಮನ್=ಪೂರ್ಣನೇ, ಅಸದಿಂದ್ರಿಯತರ್ಪಣಾತ್=ಅಮಂಗಲ ವಿಷಯಗಳಿಂದ ಇಂದ್ರಿಯಗಳನ್ನು ತೃಪ್ತಿಪಡಿಸುವುದರಿಂದ, ಅತಿತರಾಂ=ಬಹಳವಾಗಿ, ನಿರ್ವಿಣ್ಣಾ=ವಿರಕ್ತಳಾಗಿರುವೆನು, ಸಂಭಾವ್ಯಮಾನೇನ=ಲಾಲಿಸುವ, ಯೇನ=ಯಾವ ಇಂದ್ರಿಯಗಳಿಂದ, ಪ್ರಭೋ=ಸ್ವಾಮಿಯೇ, ಅಂಧತಮಃ ಪ್ರಪನ್ನಾ=ಅಜ್ಞಾನವನ್ನು ಹೊಂದಿರುವೆನು. ॥೭॥

**ತಸ್ಯ ತ್ವಂ ತಮಸೋಽಂಧಸ್ಯ ದುಷ್ಪಾರಸ್ಯಾದ್ಯ ಪಾರಗಂ ।**
**ಸಚ್ಚಕ್ಷುರ್ಜನ್ಮನಾಮಂತೇ ಲಬ್ಧಂ ಮೇ ತ್ವದನುಗ್ರಹಾತ್ ॥೮॥**

ತ್ವದನುಗ್ರಹಾತ್=ನಿನ್ನ ಅನುಗ್ರಹದಿಂದ, ಮೇ=ನನ್ನ, ಜನ್ಮನಾಂ ಅಂತೇ=ಕಳೆದ ಅನೇಕ ಜನ್ಮಗಳ ಕೊನೆಗೆ ಚರಮಜನ್ಮದಲ್ಲಿ, ತಸ್ಯ=ಆ, ದುಷ್ಪಾರಸ್ಯ=ದಾಟಲಾಗದ, ಅಂಧಸ್ಯ ತಮಸಃ=ಅಜ್ಞಾನದ, ಪಾರಗಂ=ದಂಡೆಯನ್ನು ತಲುಪಿಸುವ ಎಂಬ ತ್ವಂ=ನೀನು ಸಚ್ಚಕ್ಷುಃ=ನಿರ್ದುಷ್ಟವಾದ ಕಣ್ಣು ಮೇ=ನನ್ನಿಂದ, ಲಬ್ಧಂ=ಹೊಂದಲ್ಪಟ್ಟಿದೆ. ಅಜ್ಞಾನ ಎಂಬ ಕತ್ತಲೆಯನ್ನು ದಾಟಲು ಸಚ್ಚಕ್ಷುವಾಗಿ ನೀನು ನನಗೆ ದೊರಿತಿದ್ದಿ ಎಂದು ಭಾವ. ॥೮॥

**ಯ ಆದ್ಯೋ ಭಗವಾನ್ ಪುಂಸಾಮೀಶ್ವರೋ ವೈ ಭವಾನ್ ಕಿಲ ।**
**ಲೋಕಸ್ಯ ತಮಸಾಽಂಧಸ್ಯ ಚಕ್ಷುಃ ಸೂರ್ಯ ಇವೋದಿತಃ ॥೯॥**

ಯಃ=ಯಾವನು, ಪುಂಸಾಂ=ಬ್ರಹ್ಮಾದಿಗಳಿಗೂ, ಆದ್ಯಃ=ಮೊದಲಿಗನು, ಈಶ್ವರಃ=ಐಶ್ವರ್ಯಪ್ರದನು, ಭಗವಾನ್=ಐಶ್ವರ್ಯಾದಿಗುಣಸಮುದ್ರನು, ಸಃ ವೈ ಭವಾನ್=ಆ ನೀನು, ಲೋಕಸ್ಯ=ಎಲ್ಲ ಜನರ, ಅಂಧಸ್ಯ ತಮಸಃ=ಅಜ್ಞಾನಕ್ಕೆ, ಸೂರ್ಯಃ ಇವ=ಸೂರ್ಯನಂತೆ, ಚಕ್ಷುಃ=ಕಣ್ಣಾಗಿ ಉದಿತಃ ಕಿಲ=ಉದಯಿಸಿ-ರುವೆಯಷ್ಟೇ ! ॥೯॥

**ಅಥ ಮೇ ದೇವ ಸಂಮೋಹಮಪಾಕ್ರಷ್ಟುಂ ತ್ವಮರ್ಹಸಿ ।**
**ಯೋಽವಗ್ರಹೋಽಹಂಮಮೇತೀತ್ಯೇತಸ್ಮಿನ್ ಯೋಜಿತಸ್ತ್ವಯಾ ॥**

ಅಥ=ವಿಹಿತವನ್ನು ಮಾಡದೆ ಹೋದರೆ ಅನರ್ಥವಿದ್ದಂತೆ ಜ್ಞಾನೋಪದೇಶಕನಾದ ನೀನು ಸಿಕ್ಕಾಗ ಉಪದೇಶ ಪಡೆಯದಿದ್ದರೆ ಅನರ್ಥವಾಗುವುದರಿಂದ ಹೇ ದೇವ=ಸ್ವಾಮಿಯೇ, ತ್ವಯಾ=ನಿನ್ನಿಂದ, ಏತಸ್ಮಿನ್=ದೇಹಗೇಹಾದಿಗಳಲ್ಲಿ, ಅಹಂ ಮಮ ಇತಿ=ನಾನು ನನ್ನದು ಎಂಬ, ಯಃ=ಯಾವ, ಅವಗ್ರಹಃ=ದುಷ್ಟ ಅಭಿಮಾನವು, ಯೋಜಿತಃ=ಉತ್ಪಾದಿಸಲ್ಪಟ್ಟಿದೆಯೋ, ತಂ ಸಂಮೋಹಂ=ಆ ಅಭಿಮಾನವನ್ನು, ಅಥ=ನೀನೇ ನೀಡಿದ್ದರಿಂದ, ಅಪಾಕ್ರಷ್ಟುಂ=ಬೇರುಸಹಿತ ಕಿತ್ತೆಸೆಯಲು ಅರ್ಹಸಿ=ಯೋಗ್ಯನಾಗಿರುವಿ. ನೀನೇ ಬಂಧಕನಾದ್ದರಿಂದ ನೀನೇ ಮೋಚಕನಾಗಬೇಕು. ನೀನಿತ್ತ ಬಂಧಪರಿಹರಿಸಲು ಅನ್ಯರಿಗೆ ಸಾಮರ್ಥ್ಯವಿಲ್ಲವೆಂದು ಭಾವ. ॥೧೦॥

'ಉಪಸನ್ನಾಯ ಶಿಷ್ಯಾಯ ವಕ್ತವ್ಯಂ ಬ್ರಹ್ಮ ಶಾಶ್ವತಂ' ಎಂದಿರುವುದರಿಂದ ಉಪಸತ್ತಿ ಮಾಡದೆ ಉಪದೇಶಮಾಡಲು ಹೇಗೆ ಸಾಧ್ಯ? ಎಂದು ಶಂಕೆ ಬೇಡವೆಂದು ಹೇಳುವಳು ದೇವಹೂತಿಯು –

**ತಂ ತ್ವಾ ಗತಾಹಂ ಶರಣಂ ಶರಣ್ಯಂ**
**ಸ್ವಭೃತ್ಯಸಂಸಾರತರೋಃ ಕುಠಾರಮ್ ।**
**ಜಿಜ್ಞಾಸಯಾ ಪ್ರಕೃತೇಃ ಪೂರುಷಸ್ಯ**
**ನಮಾಮಿ ಸದ್ಧರ್ಮವಿದಾಂ ವರಿಷ್ಠಮ್ ॥೧೧॥**

ಸದ್ಧರ್ಮವಿದಾಂ ವರಿಷ್ಠಂ=ಮೋಕ್ಷಸಾಧನವಾದ ನಿರ್ದುಷ್ಟವಾದ ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನಾದ, ಸ್ವಭೃತ್ಯಸಂಸಾರತರೋಃ ಕುಠಾರಂ=ತನ್ನ ಸೇವಕರ ಸಂಸಾರವೃಕ್ಷಕ್ಕೆ ಕೊಡಲಿಯಂತಿರುವ, ಶರಣ್ಯಂ=ಮೊರೆಹೊಂದಲು ಯೋಗ್ಯನಾದ,

ತಂ ತ್ವಾ=ಆ ನಿನ್ನನ್ನು, ಶರಣಂ ಗತಾ=ಮೊರೆ ಹೋಗಿರುವೆನು ಪೂರುಷಸ್ಯ ಪ್ರಕೃತೇಃ=ನಾರಾಯಣನೇ ಮೊದಲಾದವರ ಲಕ್ಷ್ಮೀದೇವಿಯೇ ಮುಂತಾದ ಚೇತನಾಚೇತನಾತ್ಮಕ ಪರಾಪರತತ್ವಗಳ, ಜಿಜ್ಞಾಸಯಾ=ತಿಳಿಯುವ ಇಚ್ಛೆಯಿಂದ, ನಮಾಮಿ=ನಮಸ್ಕರಿಸುವೆನು.

ಇಲ್ಲಿ ದೇವಹೂತಿಯು ಕೇವಲ ಪ್ರಕೃತಿಪುರುಷರ ಸ್ವರೂಪವನ್ನು ತಿಳಿಯಲಿಚ್ಛಿಸಿದ್ದರೆ ಮುಂದೆ ನಾರಾಯಣನೆಂಬ ಪರತತ್ವವನ್ನು ಚೇತನಾಚೇತನ ಅಪರತತ್ವವನ್ನು ಕಪಿಲನು ಉಪದೇಶಿಸುವುದು ಅಸಂಗತವೆಂಬ ಶಂಕೆಗೆ ಅದೆಲ್ಲವೂ ಪ್ರಕೃತಿಪುರುಷಶಬ್ದಾರ್ಥವೇ ಆಗಿದೆ. ಆದ್ದರಿಂದ ಕೇಳದಿರುವುದನ್ನು ಹೇಳಿದಂತೇನಲ್ಲ ಎಂಬ ಅಭಿಪ್ರಾಯದಿಂದ ಪ್ರಕೃತಿಪುರುಷಶಬ್ದಾರ್ಥವನ್ನು ಹೇಳುವ ಪ್ರಮಾಣವನ್ನು ತಿಳಿಸುವರು –

**ನಾರಾಯಣೋ ಬ್ರಹ್ಮವಾಯೂ ವೀಂದ್ರಶೇಷೌ ಹರಸ್ತಥಾ ।**
**ಕಾಮಃ ಶಕ್ರೋ ಗುರುರ್ದಕ್ಷೋ ಮನ್ವಾದ್ಯಾ ಭಾಸ್ಕರಾದಯಃ ।**
**ಸರ್ವಜೀವಾಶ್ಚ ಕ್ರಮಶಃ ಪುರುಷಾಖ್ಯಾಭಿಶಬ್ದಿತಾಃ ।**
**ಏತತ್ಪತ್ನ್ಯೋ ಬಂಧಶಕ್ತಿಃ ಸ್ತ್ರಿಯಃ ಸರ್ವಾಃ ತಥಾ ಜಡಂ ।**
**ಕ್ರಮಾತ್ ಪ್ರಕೃತಿಶಬ್ದೋಕ್ತಾಸ್ತಜ್ಜ್ಞಾನಾದ್ವಿಪ್ರಮುಚ್ಯತೇ ॥**

**ಇತಿ ದತ್ತಾತ್ರೇಯಯೋಗೇ ।**

ಶ್ರೀಮನ್ನಾರಾಯಣನು, ಬ್ರಹ್ಮವಾಯುಗಳು, ಗರುಡಶೇಷರು, ಮತ್ತು ರುದ್ರದೇವರು, ಕಾಮನು, ಇಂದ್ರನು ಬೃಹಸ್ಪತಿಯು, ದಕ್ಷಪ್ರಜಾಪತಿಯು ಸ್ವಾಯಂಭುವಮನು ಮುಂತಾದವರು ಸೂರ್ಯಮೊದಲಾದವರು ಮತ್ತು ಎಲ್ಲ ಜೀವರು ಕ್ರಮವಾಗಿ ಪುರುಷಶಬ್ದದಿಂದ ಕರೆಸಿಕೊಳ್ಳುವರು. ಇವರ ಪತ್ನಿಯರು, ಶ್ರೀಹರಿಯ ಬಂಧಕಶಕ್ತಿಯು, ಮಿಕ್ಕೆಲ್ಲ ಸ್ತ್ರೀಯರು ಮತ್ತು ಜಡವು ಕ್ರಮವಾಗಿ ಪ್ರಕೃತಿಶಬ್ದದಿಂದ ಹೇಳಲ್ಪಡುವರು. ಇವರೆಲ್ಲರ ತಾರತಮ್ಯ ವೈಲಕ್ಷಣ್ಯ ಜ್ಞಾನದಿಂದ ಮುಕ್ತನಾಗುವನು''. ಎಂದು ದತ್ತಾತ್ರೇಯಯೋಗದಲ್ಲಿದೆ, ಕಾರಣ ಇವೆಲ್ಲವನ್ನು ಪ್ರಶ್ನಿಸಿದಂತಾಯಿತು ಎಂದು ಭಾವ. ॥ ೧೧॥

**ಮೈತ್ರೇಯ ಉವಾಚ**

**ಇತಿ ಸ್ವಮಾತುರ್ನಿರವದ್ಯಮೀಪ್ಸಿತಂ**
**ನಿಶಮ್ಯ ಪುಂಸಾಮಪವರ್ಗಚೋದನಮ್ ।**
**ಧಿಯಾಽಭಿನಂದ್ಯಾತ್ಮವತಾಂ ಸತಾಂ ಗತಿ-**
**ರ್ಬಭಾಷ ಈಷತ್ ಸ್ಮಿತಶೋಭಿತಾನನಃ ॥೧೨॥**

ಇತಿ=ಈ ರೀತಿಯಾದ, ಸ್ವಮಾತುಃ=ತನ್ನ ತಾಯಿಯ, ನಿರವದ್ಯಂ= ದೋಷ ರಹಿತವಾದ, ಆತ್ಮವತಾಂ=ಮನಸ್ಸನ್ನು ವಶಮಾಡಿಕೊಂಡ, ಪುಂಸಾಂ=ಜನರಿಗೆ, ಅಪವರ್ಗಚೋದನಂ=ಮೋಕ್ಷಸಾಧನ ಉಪದೇಶ ಪ್ರಾರ್ಥನೆಯಾದ, ಈಪ್ಸಿತಂ= ಅಭೀಷ್ಟವನ್ನು, ನಿಶಮ್ಯ=ಕೇಳಿ, ಧಿಯಾ ಅಭಿನಂದ್ಯ=ಮನಸಾ ಅಭಿನಂದಿಸಿ, ಸತಾಂ ಗತಿಃ=ಸಜ್ಜನರಿಗೆ ಆಶ್ರಯನಾದ, ಸ್ಮಿತಶೋಭಿತಾನನಃ=ಮಂದಹಾಸದಿಂದ ಸುಂದರವಾದ ಮುಖವುಳ್ಳ ಕಪಿಲದೇವನು, ಈಷತ್ ಬಭಾಷೇ=ಮಿತವಾಗಿ ಮಾತಾಡಿದನು. ಇದು ಮಹಾತ್ಮರ ಗುಣವು. ॥೧೨॥

**ಭಗವಾನುವಾಚ**

**ಯೋಗ ಆಧ್ಯಾತ್ಮಿಕಃ ಪುಂಸಾಂ ಮತೋ ನಿಃಶ್ರೇಯಸಾಯ ಮೇ ।**
**ಅತ್ಯಂತೋಪರತಿರ್ಯತ್ರ ದುಃಖಸ್ಯ ಚ ಸುಖಸ್ಯ ವೈ ॥೧೩॥**

ಆಧ್ಯಾತ್ಮಿಕಃ=ದೇಹದಲ್ಲಿರುವ ಪರಮಾತ್ಮಾದಿತತ್ತ್ವಗಳ ಯೋಗಃ=ಸ್ವರೂಪಜ್ಞಾನ-ರೂಪಉಪಾಯವು ಮೇ=ನನ್ನಿಂದ, ಪುಂಸಾಂ=ಅಧಿಕಾರಿಗಳ, ನಿಶ್ರೇಯಸಾಯ= ಮೋಕ್ಷಕ್ಕಾಗಿ, ಮತಃ=ಸಮ್ಮತವು,(ನಿರೂಪಿತವಾಗಿದೆ) ಯತ್ರ=ಯಾವ ಮೋಕ್ಷದಲ್ಲಿ, ದುಃಖಸ್ಯ=ಎಲ್ಲ ದುಃಖದ ಮತ್ತು ಸುಖಸ್ಯ ಚ=ಶರೀರವಿದ್ದಾಗ ಭೋಗ್ಯವಾದ ಜಡ ಅಂತಃಕರಣಪರಿಣಾಮರೂಪವಾದ ಪ್ರಾಕೃತಸುಖದ, ಅತ್ಯಂತೋಪರತಿಃ=ಸಂಪೂರ್ಣ ವಾಗಿ ಮುಂದೆಂದೂ ಬಾರದಂತೆ ನಾಶವಾಗುವುದು ಅಲ್ಲದೇ, ನಿತ್ಯಸುಖಾನುಭವಃ ಚ ಭವತಿ=ನಿತ್ಯವಾದ ಅಪ್ರಾಕೃತಸ್ವರೂಪಸುಖಾನುಭವು ಆಗುವುದು.

ಹಿಂದೆ ಪ್ರಕೃತಿಪುರುಷಶಬ್ದದಿಂದ ಪರಾಪರತತ್ತ್ವಗಳೇ ಸಂಗ್ರಹವಾಗಿ ಕೇಳಲ್ಪಟ್ಟಿದ್ದ-ರಿಂದ ಅವುಗಳನ್ನೇ ಈಗ ಹೇಳಬೇಕು. ಹೀಗಿರುವಾಗ ಆಧ್ಯಾತ್ಮಿಕಯೋಗ-ನಿರೂಪಣವು ಅಸಂಗತವೆಂಬ ಶಂಕೆಗೆ ಇಲ್ಲಿ ಆಧ್ಯಾತ್ಮಿಕ ಪದದಿಂದಲೂ ಹಿಂದೆ ಹೇಳಿದ ಪರಮಾತ್ಮಾದಿಗಳ ಸ್ವರೂಪವೇ ವಿವಕ್ಷಿತವಾಗಿದೆ. ಆದ್ದರಿಂದ ಅಸಂಗತವಲ್ಲ ಎಂಬ ಅಭಿಪ್ರಾಯದಿಂದ ಆಧ್ಯಾತ್ಮಿಕಶಬ್ದಾರ್ಥವನ್ನು ಪ್ರಮಾಣದಿಂದ ತಿಳಿಸುವರು-

**ಪರಮಾತ್ಮಾದಿಕಂ ದೇಹೇ ಯದಧ್ಯಾತ್ಮಂ ತದೀರಿತಂ । ಇತಿ ಚ ।**

ದೇಹದಲ್ಲಿರುವ ಪರಮಾತ್ಮಾದಿಗಳೇ ಅಧ್ಯಾತ್ಮ ಎನಿಸುವರು ಎಂದು ಹೇಳಿದೆ.

ಈ ಶ್ಲೋಕದಲ್ಲಿ ಮೋಕ್ಷದಲ್ಲಿ ದುಃಖದಂತೆ ಸುಖವೂ ನಾಶವಾಗುವುದು ಎಂದು ಹೇಳಿದಂತೆ ತೋರುವುದು. ಹಾಗಾದರೆ ಮೋಕ್ಷವು ಪುರುಷಾರ್ಥವಾಗಲಾರದು ಆದ್ದರಿಂದ ದುಃಖದ ಜೊತೆಗೆ ಹೋಗುವ ಸುಖದ ಸ್ವರೂಪವನ್ನು ಪ್ರಮಾಣದಿಂದ ತಿಳಿಸುವರು –

**ಸುಖಂ ಶರೀರಬೋಗ್ಯಂ ತು ದುಃಖಂ ಸರ್ವಂ ತಥೈವ ಚ ।**
**ಮುಕ್ತೌ ವಿಲಯಮಾಯಾತಿ ನಿತ್ಯಾನಂದಸ್ತು ಭುಜ್ಯತೇ ॥ ಇತಿ ಚ ।**

ಪ್ರಾಕೃತಶರೀರವಿದ್ದಾಗ ಮಾತ್ರ ಅನುಭವಿಸುವ ಅಂತಃಕರಣ ಪರಿಣಾಮವಾದ ವಿಷಯಜನ್ಯಸುಖವು ಮತ್ತು ಸಮಸ್ತದುಃಖವೂ ಮುಕ್ತಿಯಲ್ಲಿ ನಾಶವಾಗುವುದು. ನಿತ್ಯವಾದ ಸ್ವರೂಪಾನಂದವು ಅನುಭವಿಸುವಿಸಲ್ಪಡುವುದು ಎಂದೂ ಹೇಳಿದೆ .

**ತಮಿಮಂ ತೇ ಪ್ರವಕ್ಷ್ಯಾಮಿ ಯಮವೋಚಂ ಪುರಾಽನಘೇ ।**
**ಋಷೀಣಾಂ ಶ್ರೋತುಕಾಮಾನಾಂ ಯೋಗಮುರ್ವಂಗನೈಪುಣಮ್ ॥**

**ಚೇತಃ ಖಲ್ವಸ್ಯ ಬಂಧಾಯ ಮುಕ್ತಯೇ ಚಾತ್ಮನೋ ಮತಮ್ ।**
**ಗುಣೇಷು ಸಕ್ತಂ ಬಂಧಾಯ ರತಂ ವಾ ಪುಂಸಿ ಮುಕ್ತಯೇ ॥೧೫॥**

ಹೇ ಅನಘೇ=ಪಾಪರಹಿತಳೇ, ಶ್ರೋತುಕಾಮಾನಾಂ ಋಷೀಣಾಂ=ಕೇಳಲ-ಪೇಕ್ಷಿಸುವ ಬ್ರಹ್ಮಾದಿಜ್ಞಾನಿಗಳಿಗೆ, ಉರ್ವಂಗನೈಪುಣಂ=ಶ್ರೇಷ್ಠವಾದ ಯಮನಿಯ-ಮಾದಿಸಾಧನಗಳಿಂದ ಸಮರ್ಥವಾದ, ಯೋಗಂ=ಉಪಾಯವನ್ನು, ಯಂ ಅವೋಚಂ=ಯಾವುದನ್ನು ಹೇಳಿದೆನೋ, ತಂ ಇಮಂ=ಆ ಯೋಗವನ್ನೇ, ತೇ ಪ್ರವಕ್ಷ್ಯಾಮಿ=ನಿನಗೆ ಹೇಳುವೆನು. ॥೧೪॥

ಯೋಗವು ಸಫಲವಾಗಬೇಕಾದರೆ ಮನಸ್ಸು ವಶವಾಗುವುದು ಮೊದಲನೇ ಸಾಧನವೆಂದು ಹೇಳುವರು –

ಅಸ್ಯ ಆತ್ಮನಃ=ಈ ಜೀವನ ಚೇತಃ=ಮನಸ್ಸು ಬಂಧಾಯ ಖಲು=ಸಂಸಾರ-ಬಂಧಕ್ಕೆ ಕಾರಣವು, ಮುಕ್ತಯೇ ಚ=ಮುಕ್ತಿಗೂ ಸಾಧನವು ಎಂದು, ಮತಂ= ಸಂಮತವು, ಗುಣೇಷು ಸಕ್ತಂ ಬಂಧಾಯ=ವಿಷಯಗಳಲ್ಲಿ ಆಸಕ್ತವಾದರೆ ಬಂಧಕ್ಕೆ ಕಾರಣವು, ಪುಂಸಿ ರತಂ ಮುಕ್ತಯೇ=ಪರಮಪುರುಷನಾದ ಶ್ರೀಹರಿಯಲ್ಲಿ ಆಸಕ್ತವಾದುದು ಮುಕ್ತಿಗೆ ಸಾಧನವಾಗುವುದು. ॥೧೫॥

ಮುಕ್ತಿಯು ಕೇವಲ ಶ್ರೀಹರಿಯ ಅಪರೋಕ್ಷಜ್ಞಾನದಿಂದ ಸಾಧ್ಯ, ಅಂದ ಮೇಲೆ ಅದಿಲ್ಲದೆ ಮುಕ್ತಿಗೆ ಸಾಧನ ಹೇಗಾಗುವುದು ? ಎಂಬ ಶಂಕೆಗೆ ಮನಸ್ಸಿನಿಂದ ಅಪರೋಕ್ಷ ಜ್ಞಾನವೂ ಆಗುವುದು ಎಂದು ಹೇಳುವರು ಅಹಂಮಮ ಮುಂತಾದ ಮೂರು ಶ್ಲೋಕಗಳಿಂದ –

**ಅಹಂಮಮಾಭಿಮಾನೋತ್ಥೈಃ ಕಾಮಲೋಭಾದಿಭಿರ್ಮಲೈಃ ।**
**ವೀತಂ ಯದಾಽಽತ್ಮನಃ ಶುದ್ಧಮದುಃಖಮಸುಖಂ ಸಮಮ್ ॥೧೬॥**

**ತದಾ ಪುರುಷ ಆತ್ಮಾನಂ ಕೇವಲಂ ಪ್ರಕೃತೇಃ ಪರಮ್ ।**
**ನಿರಂತರಂ ಸ್ವಯಂಜ್ಯೋತಿರಣಿಮಾನಮಖಂಡಿತಮ್ ॥೧೭॥**

**ಜ್ಞಾನವೈರಾಗ್ಯಯುಕ್ತೇನ ಭಕ್ತಿಯೋಗೇನ ಚಾತ್ಮನಾ ।**
**ಪರಿಪಶ್ಯಂತ್ಯುದಾಸೀನಾಂ ಪ್ರಕೃತಿಂ ಚ ಹತೌಜಸಮ್ ॥೧೮॥**

ಯದಾ=ಯಾವಾಗ, ಮನಃ=ಮನಸ್ಸು ಆತ್ಮನಃ=ಜೀವನ, ಅಹಂಮಮಾಭಿ-ಮಾನೋತ್ಥೈಃ=ವಿಷಯಗಳಲ್ಲಿ ನಾನು ನನ್ನದೆಂಬ ಅಭಿಮಾನದಿಂದ ಉಂಟಾದ, ಕಾಮಲೋಭಾದಿಭಿಃ ಮಲೈಃ=ವಿಷಯಾಭಿಲಾಷೆ ಲೋಭ ಮುಂತಾದ, ಮಲೈಃ= ಹೊಲಸುಗಳಿಂದ, ವೀತಂ=ರಹಿತವಾಗುವುದೋ,ತದಾ=ಆಗ, ಶುದ್ಧಂ=ನಿರ್ದುಷ್ಟವೂ, ಅದುಃಖಂ=ದುಃಖಕಾರಣಗಳಾದ ಕಾಮ್ಯನಿಷಿದ್ಧ ಕರ್ಮಗಳನ್ನು ಪರಿತ್ಯಾಗ-ಮಾಡಿದ್ದರಿಂದ ಸರ್ವಥಾ ದುಃಖರಹಿತವೂ ಅಸುಖಂ=ಬಾಹ್ಯಸುಖಗಳಲ್ಲಿ ಆಸಕ್ತಿಯಿಲ್ಲದಿರುವುದರಿಂದ ಸುಖರಹಿತವೂ, ಸಮಂ=ಶಿತೋಷ್ಣಗಳ ಸಂಬಂಧ-ವಾದಾಗಲೂ ನಿರ್ವಿಕಾರವೂ ಆಗುವುದೋ,

ತದಾ=ಆಗ, ಪುರುಷಃ=ಜಿಜ್ಞಾಸುವು, ಕೇವಲಂ=ತನ್ನ ಗುಣದೇಹ ಇಂದ್ರಿಯಾದಿಗಳಿಂದ ಅಭಿನ್ನನಾದ, ಪ್ರಕೃತೇಃ ಪರಂ=ಚೇತನಾಚೇತನಪ್ರಕೃತಿಗಿಂತ ಉತ್ತಮನಾದ, ನಿರಂತರಂ=ತನ್ನ ಅವತಾರಗಳಲ್ಲಿ ಭೇದರಹಿತನಾದ, ಸ್ವಯಂ-ಜ್ಯೋತಿಃ=ಸ್ವಪ್ರಕಾಶನಾದ, ಅಣಿಮಾನಂ=ಪರಮಸೂಕ್ಷ್ಮನಾದ ತನ್ನ ಬಿಂಬನಾದ, ಅಖಂಡಿತಂ=ಅವ್ಯಾಹತಶಕ್ತಿಯುಳ್ಳ.

ಆತ್ಮಾನಂ=ಪರಮಾತ್ಮನನ್ನು, ಆತ್ಮನಃ=ತನ್ನ, ಜ್ಞಾನವೈರಾಗ್ಯಯುಕ್ತೇನ= ಪರೋಕ್ಷನಿಶ್ಚಯ, ವೈರಾಗ್ಯಗಳಿಂದ ಕೂಡಿದ, ಭಕ್ತಿಯೋಗೇನ=ಭಕ್ತಿಯಿಂದ ಕೂಡಿದ ಧ್ಯಾನದಿಂದ, ಆತ್ಮನಾ=ಮನಸ್ಸಿನಿಂದ ಭಗವಂತನಪ್ರಸಾದಿಂದಲೂ, ಪರಿಪಶ್ಯತಿ=ತನ್ನ ಯೋಗ್ಯತಾನುಸಾರ ನೋಡುವನು. ಪ್ರಕೃತಿಂ=ಪರಮಾಚ್ಛಾದಿಕಾರೂಪವಾದ ದುಷ್ಟವಾದ ಚೇತನರೂಪವಾದ ಬಂಧಕಶಕ್ತಿ ಎಂದು ಕರೆಸಿಕೊಳ್ಳುವ ಪ್ರಕೃತಿ-ಯನ್ನು, ಹತೌಜಸಂ=ವಿಷ್ಣುವಿನ ಶಕ್ತಿಯಿಂದ ಸಾಮರ್ಥ್ಯವನ್ನು ಕಳೆದುಕೊಂಡ, ಉದಾಸೀನಾಂ=ಅಧಿಕಾರಿಗಳನ್ನು ಬಿಟ್ಟು ಬೇರೆಡೆಗೆ ಇರುವುದನ್ನು, ಯಃ= ಯಾವನು, ಪಶ್ಯತಿ ನೋಡುವನೋ, ಸಃ=ಅವನು, ಆತ್ಮಾನಂ ಪಶ್ಯತಿ'' ಎಂದು ಅನ್ವಯ. ಆದ್ದರಿಂದ ಪರಮಾಚ್ಛಾದಿಕಾ ಇರುವಾಗ ಪರಮಾತ್ಮನನ್ನು ನೋಡುವುದು ಹೇಗೆಂಬ ಶಂಕೆಗೆ ಅವಕಾಶವಿಲ್ಲ. ಮತ್ತು ಅಪರೋಕ್ಷವಿಲ್ಲದೆ ಮುಕ್ತಿ ಹೇಗೆ ? ಎಂಬ ಶಂಕೆಗೂ ಅವಕಾಶವಿಲ್ಲ.

ಮೇಲಿನ ಶ್ಲೋಕಗಳಲ್ಲಿ ಭಗವಂತನನ್ನು ಭಜಿಸುವಾಗ ದುಃಖದಂತೆ ಸುಖವೂ ಸರ್ವಾತ್ಮನಾ ಇಲ್ಲ ಎಂದು ಹೇಳುವುದು ಸರಿಯಲ್ಲ. ಅನಿಷಿದ್ಧ ಬಾಹ್ಯಸುಖ ಅನುಭವಿಸುವದು ಕಂಡಿದೆ. ಧ್ಯಾನದಿಂದ ಸ್ವರೂಪಸುಖವು ಅಭಿವ್ಯಕ್ತವಾಗುವುದು ಪ್ರಮಾಣಸಿದ್ಧವಾಗಿದೆ ಕಾರಣ ಅಭಿಪ್ರಾಯವನ್ನು ಪ್ರಮಾಣದಿಂದ ತಿಳಿಸುವರು –

**ಬಾಹ್ಯೇ ಸುಖೇ ತ್ವನಾಸಕ್ತೇರಸುಖಂ ದುಃಖವರ್ಜನಾತ್ ।**
**ಅದುಃಖಂ ಹರಿಭಕ್ತ್ಯೈವ ನಿತ್ಯಾನಂದಂ ಯದಾ ಮನಃ ।**
**ತದಾ ತಂ ಪರಮಾತ್ಮಾನಂ ಪಶ್ಯತ್ಯಾತ್ಮಪ್ರಸಾದತಃ ॥ ಇತಿ ಕಾಪಿಲೇಯೇ ।**

ದೇಹಯಾತ್ರಾರ್ಥವಾಗಿ ಬಾಹ್ಯವಾದ ಅನಿಷಿದ್ಧ ಸುಖವನ್ನು ಅನುಭವಿಸಿದರೂ ಅದರಲ್ಲಿ ಆಸಕ್ತಿಯಿಲ್ಲದಿರುವುದರಿಂದ ಸುಖರಹಿತವೆನಿಸುವುದು. ಸರ್ವಥಾ ದುಃಖ ರಹಿತವಾದುದರಿಂದ ಅದುಃಖವೆನಿಸುವುದು. ಶ್ರೀಹರಿಯ ಭಕ್ತಿಯಿಂದ ಅಭಿವ್ಯಕ್ತವಾದ ಆನಂದವುಳ್ಳದ್ದು ಯಾವಾಗ ಆಗುವುದೋ ಆಗ ಮನಸ್ಸು ಆ ಪರಮಾತ್ಮನನ್ನು ಅವನ ಅನುಗ್ರಹದಿಂದ ನೋಡುವುದು ಎಂದು ಕಾಪಿಲದಲ್ಲಿದೆ.

ಹದಿನೇಳನೆ ಶ್ಲೋಕದ ನಿರಂತರ ಕೇವಲ ಅಖಂಡಿತ ಶಬ್ದಗಳ ಅರ್ಥ ತಿಳಿಸುವರು –

**ಅಭೇದಾತ್ ಸ್ವಾವತಾರೇಷು ನಿರಂತರ ಉದಾಹೃತಃ ।**
**ಗುಣದೇಹೇಂದ್ರಿಯಾಭೇದಾತ್ ಕೇವಲೋಽಸದೃಶತ್ವತಃ ।**
**ಅಖಂಡಃ ಪೂರ್ಣಶಕ್ತಿತ್ವಾದಹಮೇಕಃ ಸದಾ ಮತಃ ॥ ಇತಿ ಚ ।**

ನನ್ನ ಅವತಾರಗಳಲ್ಲಿ ಅಭೇದವಿರುವುದರಿಂದ ಕೇವಲನು. ಮತ್ತು ನನ್ನ ಗುಣ ದೇಹ, ಇಂದ್ರಿಯಗಳಿಂದ ಅಭೇದ ಇರುವುದರಿಂದಲೂ ನಿರಂತರನು. ಅಸದೃಶನಾದುದರಿಂದ ಏಕ ಎಂದು ನನ್ನನ್ನು ಕರೆಯುತ್ತಾರೆ. ಪೂರ್ಣಶಕ್ತಿ ಉಳ್ಳದ್ದರಿಂದ ಅಖಂಡಿತನು.

ಹದಿನೆಂಟನೆ ಶ್ಲೋಕದಲ್ಲಿ ಅಭಿಪ್ರೇತ ಪ್ರಕೃತಿಯನ್ನು ತಿಳಿಸುವರು.

**ಬಂಧಶಕ್ತಿಃ ಪ್ರಕೃತ್ಯಾಖ್ಯಾ ವಿಷ್ಣುಶಕ್ತ್ಯಾ ವಿಯುಜ್ಯತೇ । ಇತಿ ಚ ।**

ಪರಮಾಚ್ಛಾದಿಕವಾದ ದುಷ್ಟಪ್ರಕೃತಿಯು ಬಂಧಕಶಕ್ತಿಯು. ವಿಷ್ಣುವಿನ ಶಕ್ತಿಯಿಂದ ಅಧಿಕಾರಿಯನ್ನು ಬಿಟ್ಟು ತೊಲಗುವುದು ಎಂದು ಭಾವ. ॥೧೮॥

ವಿಷಯವಿರಕ್ತನಾದವನಿಗೆ ಶ್ರೀಹರಿಯ ಅಪರೋಕ್ಷಜ್ಞಾನಕ್ಕೆ ಭಕ್ತಿಯೇ ಮುಖ್ಯ ಸಹಕಾರಿ ಎಂದು ಹೇಳುವರು –

**ನ ಯುಜ್ಯಮಾನಯಾ ಭಕ್ತ್ಯಾ ಭಗವತ್ಯಖಿಲಾತ್ಮನಿ ।**
**ಸದೃಶೋಽಸ್ತಿ ಶಿವಃ ಪಂಥಾ ಯೋಗಿನಾಂ ಬ್ರಹ್ಮಸಿದ್ಧಯೇ ॥೧೯॥**

ಯೋಗಿನಾಂ=ಉಪಾಯವನ್ನು ಮಾಡುವವರಿಗೆ, ಬ್ರಹ್ಮಸಿದ್ಧಯೇ=ಬ್ರಹ್ಮಾಪರೋಕ್ಷವಾಗಲು, ಅಖಿಲಾತ್ಮನಿ=ಸರ್ವಾಂತರ್ಯಾಮಿಯಾದ, ಭಗವತಿ=ಶ್ರೀಹರಿಯಲ್ಲಿ, ಯುಜ್ಯಮಾನಯಾ=ಮಾಡಲ್ಪಡುವ, ಭಕ್ತ್ಯಾ ಸದೃಶಃ=ಭಕ್ತಿಗೆ ಸಮಾನವಾದ, ಶಿವಃ ಪಂಥಾಃ=ಮಂಗಲಕರವಾದ ಮಾರ್ಗವು ನ ಅಸ್ತಿ=ಬೇರೊಂದಿಲ್ಲ. ॥೧೯॥

ವಿಷಯಾಸಕ್ತನಾದವನಿಗೆ ಆಸಕ್ತಿ ಹೋಗಲು ಮುಖ್ಯ ಕಾರಣ ಸಾಧುಸಂಗವೆಂದು ಹೇಳುವರು –

**ಪ್ರಸಂಗಮಜರಂ ಪಾಶಮಾತ್ಮನಃ ಕವಯೊ ವಿದುಃ ।**
**ಸ ಏವ ಸಾಧುಷು ಕೃತೋ ಮೋಕ್ಷದ್ವಾರಮಪಾವೃತಂ ॥೨೦॥**

ಕವಯಃ=ಜ್ಞಾನಿಗಳು, ಪ್ರಸಂಗಂ=ವಿಷಯಗಳಲ್ಲಿ ಅತಿಯಾದ ಸ್ನೇಹವು, ಅಜರಂ=ಮತ್ತೆ ಮತ್ತೆ ಬೆಳೆಯುವುದರಿಂದ ನಾಶರಹಿತವೂ, ಪಾಶಂ=ಪಾಶದಂತೆ ಬಂಧಕವು ಸಃ ಏವಸಾಧುಷುಕೃತಃ=ಅದೇ ಸ್ನೇಹವೇ ಸಜ್ಜನರಲ್ಲಿ ಮಾಡಿದ್ದಾದರೆ, ಆತ್ಮನಃ=ಅಧಿಕಾರಿಗೆ, ಅಪಾವೃತಂ ಮೋಕ್ಷದ್ವಾರಂ=ತೆರೆದಿಟ್ಟ ಮೋಕ್ಷದ ಬಾಗಿಲು ಇದ್ದಂತೆ ಎಂದು. ವಿದುಃ=ತಿಳಿಯುವರು. ॥ ೨೦॥

ಸಾಧುಗಳ ಲಕ್ಷಣ ಹೇಳುವರು –

**ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಮ್ ।**
**ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ॥೨೧॥**

ತಿತಿಕ್ಷವಃ=ತನಗಿಂತ ಉತ್ತಮರು ಮಾಡಿದ ಅಪರಾಧವನ್ನು ಸಹಿಸುವವರು, ಕಾರುಣಿಕಾಃ=ತನಗಿಂತ ಕಡಿಮೆಯಾದ ಸಜ್ಜನರಲ್ಲಿ ದಯೆಯುಳ್ಳವರು, ಸರ್ವದೇಹಿನಾಂ ಸುಹೃದಃ=ತನಗೆ ಸಮರಾದ ಎಲ್ಲರಲ್ಲಿಯೂ ಸ್ನೇಹವುಳ್ಳವರು ಅಜಾತಶತ್ರವಃ=ಸಜ್ಜನರಲ್ಲಿ ಶತೃತ್ವಭಾವನೆ ಇಲ್ಲದವರು, ಶಾಂತಾಃ=ಭಗವಂತನಲ್ಲಿ ನಿಷ್ಠೆಯುಳ್ಳವರು, ಸಾಧುಭೂಷಣಾಃ=ಪ್ರಶಸ್ತಕರ್ಮಗಳೇ ಅಲಂಕಾರವಾಗಿ ಉಳ್ಳವರು, ಸಾಧವಃ=ಸಾಧುಗಳು. 'ಅಜಾ' ಎಂದರೆ ಪ್ರಕೃತಿಕಾರ್ಯವಾದ ದೇಹವು ಅದರೊಡನೆ ಯಾವಾಗಲೂ ''ಅತ'' ಇರುವುದರಿಂದ ''ಅಜಾತಾಃ'' ಎಂದರೆ ಕಾಮಕ್ರೋಧಾದಿಗಳು. ಅವುಗಳಿಗೆ ಶತ್ರುಗಳಾದವರು ಅಜಾತಶತ್ರುಗಳು ಹೀಗೂ ಅರ್ಥ. 'ಅತ ಸಾತತ್ಯಗಮನೇ' ಎಂದು ಧಾತುವಿದೆ ॥೨೧॥

**ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ ದೃಢಾಂ ।**
**ಮತ್ಕೃತೇ ತ್ಯಕ್ತಕರ್ಮಾಣಸ್ತ್ಯಕ್ತಸ್ವಜನಬಾಂಧವಾಃ ॥೨೨॥**

ಯೇ=ಯಾರು, ಮಯಿ=ನನ್ನಲ್ಲಿ, ಅನನ್ಯೇನ ಭಾವೇನ=ಇತರರಲ್ಲಿ ಆ ರೀತಿ ಮಾಡದೆ, ದೃಢಾಂ=ನಿಶ್ಚಲವಾದ ಭಕ್ತಿಂ=ಜ್ಞಾನಪೂರ್ವಕ ಸ್ನೇಹವನ್ನು, ಕುರ್ವಂತಿ= ಮಾಡುವರು ಮತ್ಕೃತೇ=ನನ್ನ ಪ್ರೀತಿಗಾಗಿ, ತ್ಯಕ್ತಕರ್ಮಾಣಃ=ಕಾಮ್ಯ ಮತ್ತು ನಿಷಿದ್ಧ ಕರ್ಮಗಳನ್ನು ಬಿಟ್ಟವರು, ತ್ಯಕ್ತಸ್ವಜನಬಾಂಧವಾಃ=ತಮ್ಮ ಲೌಕಿಕ ಬಾಂಧವರನ್ನು ತ್ಯಜಿಸಿದವರು.

ಅನನ್ಯೇನ ಭಾವೇನ ಎಂಬುದಕ್ಕೆ ಬೇರೆಯವರಲ್ಲಿ ಭಕ್ತಿ ಮಾಡದೇ ಇರುವುದೆಂದು ಅರ್ಥ ತೋರುವುದು. ಅದು ಸರಿಯಲ್ಲ, ಬ್ರಹ್ಮಾದಿಗಳಲ್ಲಿ ಭಕ್ತಿಯೂ ಮೋಕ್ಷಸಾಧನವೇ ಆಗಿದೆ ಕಾರಣ ತಾತ್ಪರ್ಯ ಹೇಳುವರು-

**ಯಾದೃಶೀ ಮಯಿ ಭಕ್ತಿಃ ಸ್ಯಾತ್ತಾದೃಶ್ಯನ್ಯತ್ರ ನೈವ ಚೇತ್ ।**
**ಅನನ್ಯಭಕ್ತಿರುದ್ರೇಕಾತ್ ಸಾ ಯಯೈವ ತರೇತ್ಸೃತಿಂ ॥ ಇತಿ ಚ ।**

ನನ್ನಲ್ಲಿ ಯಾವ ವಿಧವಾದ ಸರ್ವೋತ್ತಮತ್ವಜ್ಞಾನಪೂರ್ವಕವಾದ ಸುದೃಢವಾದ ಭಕ್ತಿಯಿರುವದೋ ಆ ವಿಧ ಭಕ್ತಿಯನ್ನು ಇತರರಲ್ಲಿ ಮಾಡದಿದ್ದರೆ ಅದು ಅನನ್ಯಭಕ್ತಿ ಎನಿಸುವುದು. ಯಾವ ಇಂಥಹ ಭಕ್ತಿಯಿಂದ ಸಂಸಾರವನ್ನು ದಾಟುವನು ಎಂದು ಹೇಳಿದೆ. ॥೨೨॥

**ಮದಾಶ್ರಯಾಃ ಕಥಾ ಮೃಷ್ಟಾಃ ಶೃಣ್ವಂತಿ ಕಥಯಂತಿ ಚ ।**
**ತಪಂತಿ ವಿವಿಧಾಂಸ್ತಾಪಾನ್ಯೈಕಾತ್ಮ್ಯಗತಚೇತಸಃ ॥೨೩॥**

ಮದಾಶ್ರಯಾಃ=ನನ್ನನ್ನು ಪ್ರತಿಪಾದಿಸುವ, ಮೃಷ್ಟಾಃ=ಸುಂದರವಾದ, ಕಥಾಃ= ಚರಿತ್ರೆಗಳನ್ನು, ಶೃಣ್ವಂತಿ=ಕೇಳುವರು, ಕಥಯಂತಿ=ಹೇಳುವರು, ಐಕಾತ್ಮ್ಯಗತ-ಚೇತಸಃ=ಶ್ರೀಹರಿಯೇ ಸರ್ವೋತ್ತಮನು ಪೂರ್ಣನು ಈ ಪ್ರಪಂಚವೆಲ್ಲ ಅವನ ಅಧೀನವೆಂಬ ವಿಷಯದಲ್ಲಿ ಮನಸಿಟ್ಟವರಾಗಿ, ವಿವಿಧಾನ್ ತಾಪಾನ್ ತಪಂತಿ= ಅನೇಕ ವಿಧ ತಪಸ್ಸನ್ನು ಮಾಡುವರು.

ಐಕಾತ್ಮ್ಯಗತಚೇತಸಃ ಎಂಬುದಕ್ಕೆ ಜೀವೇಶ್ವರಾಭೇದಜ್ಞಾನಿಗಳೆಂದು ಅರ್ಥ ತೋರುವುದು ಕಾರಣ ಪ್ರಮಾಣದಿಂದ ವ್ಯಾಖ್ಯಾನಿಸುವರು.

ಏಕಃ ಪೂರ್ಣೋ ಹರಿರ್ನಾನ್ಯಸ್ತದನ್ಯೇ ತದ್ವಶಾ ಮತಾಃ ।
ಇತಿ ಜ್ಞಾನಂ ಸ್ಥಿರಂ ಯತ್ತದೈಕಾತ್ಮ್ಯಜ್ಞಾನಮುಚ್ಯತೇ ॥ ಇತಿ ಬ್ರಹ್ಮಾಂಡೇ ।

ಭಗವಂತನು ದೇಶಕಾಲಗುಣಗಳಿಂದ ಪೂರ್ಣನು. ಇನ್ನುಳಿದವರೆಲ್ಲ ಅವನ ಅಧೀನರು ಎಂಬ ದೃಢವಾದ ಜ್ಞಾನವು ಏಕಾತ್ಮ್ಯಜ್ಞಾನವೆನಿಸುವುದು ಎಂದು ಬ್ರಹ್ಮಾಂಡ ಪುರಾಣದಲ್ಲಿದೆ. ॥೨೩॥

**ತ ಏತೇ ಸಾಧವಃ ಸಾಧ್ವಿ ಸರ್ವಸಂಗವಿವರ್ಜಿತಾಃ ।**
**ಸಂಗಸ್ತೇಷ್ವಥ ತೇ ಪ್ರಾರ್ಥ್ಯಃ ಸಂಗದೋಷಹರಾ ಹಿ ತೇ ॥೨೪॥**

ಹೇ ಸಾಧ್ವಿ=ದೇವಹೂತಿಯೇ, ಸರ್ವಸಂಗವಿರ್ಜಿತಾಃ=ದುಷ್ಟವಾದ ಎಲ್ಲ ಸಂಗವನ್ನು ತ್ಯಜಿಸಿದವರು, ತೇ ಏತೇ ಸಾಧವಃ=ಈ ಸಜ್ಜನರು ಯಾವ ಕಾರಣ ಸಂಗದೋಷಹರಾಃ=ವಿಷಯಾಸಕ್ತಿಯಿಂದ ಬರುವ ದೋಷವನ್ನು ಪರಿಹರಿಸುವರು ಅಥ=ಆದ್ದರಿಂದ, (ತೇ) ತೇಷು ಸಂಗಃ ಪ್ರಾರ್ಥ್ಯಃ=ನಿನ್ನಿಂದ ಸಾಧುಗಳಲ್ಲಿ ಸಂಗವು ಅಪೇಕ್ಷಣೀಯವು ॥೨೪॥

**ಸತಾಂ ಪ್ರಸಂಗಾನ್ಮಮ ವೀರ್ಯಸಂಪದೋ**
**ಭವಂತಿ ಹೃತ್ಕರ್ಣರಸಾಯನಾಃ ಕಥಾಃ ।**
**ತಜ್ಜೋಷಣಾದಾಶ್ವಪವರ್ಗವರ್ತ್ಮನಿ**
**ಶ್ರದ್ಧಾವತೀ ಭಕ್ತಿರನುಕ್ರಮಿಷ್ಯತಿ ॥೨೫॥**

ಸತಾಂ=ಸಜ್ಜನರ, ಪ್ರಸಂಗಾತ್=ಶ್ರೇಷ್ಠವಾದ ಸಹವಾಸದಿಂದ, ಮಮ=ನನ್ನ, ವೀರ್ಯಸಂಪದಃ=ಪರಾಕ್ರಮಗಳಿಂದ ಬಂದ ಸಂಪತ್ತುಗಳುಳ್ಳ ಹೃತ್ಕರ್ಣರಸಾಯನಾಃ =ಮನಸ್ಸು ಕಿವಿಗಳಿಗೆ ಸುಖವನ್ನುಂಟು ಮಾಡುವ,ಕಥಾಃ ಭವಂತಿ=ಕಥೆಗಳು ಕೇಳಲು ಸಿಗುವುವು. ತಜ್ಜೋಷಣಾತ್=ಅವುಗಳನ್ನು ಕೇಳುವುದರಿಂದ, ಅಪವರ್ಗವರ್ತ್ಮನಿ= ಮೋಕ್ಷಸಾಧನಜ್ಞಾನವನ್ನು ನೀಡುವ ಭಗವಂತನಲ್ಲಿ, ಶ್ರದ್ಧಾವತೀ=ಆಸ್ತಿಕ್ಯಬುದ್ಧಿಯಿಂದ ಸಹಿತವಾದ, ಭಕ್ತಿಃ=ಭಕ್ತಿಯು, ಅನುಕ್ರಮಿಷ್ಯತಿ=ಹುಟ್ಟಲಾರಂಭಿಸುವುದು. ॥೨೫॥

**ಭಕ್ತ್ಯಾ ಪುಮಾನ್ ಜಾತವಿರಾಗ ಐಂದ್ರಿಯಾದ್**
**ದೃಷ್ಟಶ್ರುತಾತ್ಮದ್ರವಿಣಾನುಚಿಂತಯಾ ।**
**ಚಿತ್ತಸ್ಯ ಯತ್ತೋ ಗ್ರಹಣೇ ಯೋಗಯುಕ್ತೋ**
**ಯತಿಷ್ಯತೇ ಋಜುಭಿರ್ಯೋಗಮಾರ್ಗೈಃ ॥೨೬॥**

ಭಕ್ತ್ಯಾ=ಭಕ್ತಿಯಿಂದಭಕ್ತಿಯ ನಂತರ, ಪುಮಾನ್=ಅಧಿಕಾರಿಯು, ದೃಷ್ಟಶ್ರುತಾತ್ಮ-ದ್ರವಿಣಾನುಚಿಂತಯಾ=ಉತ್ತಮಾಧಿಕಾರಿಗಳಿಂದ ನೋಡಿದ, ಅವರಾಧಿಕಾರಿಗಳಿಂದ ಕೇಳಿದ, ಪರಮಾತ್ಮನ ಗೋಪ್ಯವಾದುದರಿಂದ ದ್ರವಿಣ (ಧನ) ದಂತಿರುವ ರೂಪಗಳ

ಧ್ಯಾನಮಾಡುವುದರಿಂದ, ಐಂದ್ರಿಯಾತ್=ಇಂದ್ರಿಯಭೋಗ್ಯವಾದ ವಿಷಯಗಳಲ್ಲಿ ಜಾತವಿರಾಗಃ ಅನಾಸಕ್ತಿವುಳ್ಳವನಾಗಿ, ಚಿತ್ತಸ್ಯ=ಮನಸ್ಸಿನ, ಗ್ರಹಣೇ=ಪರಮಾತ್ಮ- ನಲ್ಲಿಯೇ ಇರಿಸಲು, ಯೋಗಯುಕ್ತಃ=ಕಥಾಶ್ರವಣಾದಿ ಉಪಾಯವುಳ್ಳವನಾಗಿ ಋಜುಭಿಃ ಯೋಗಮಾರ್ಗೈಃ=ತನ್ನದೇಹಕ್ಕೆ ಅನುಕೂಲವಾದ ಯಮಾದಿಗಳಿಂದ ಯತಿಷ್ಯತೇ=ಪ್ರಯತ್ನಿಸುವನು. ॥೨೬॥

**ಅಸೇವಯಾಽಯಂ ಪ್ರಕೃತೇರ್ಗುಣಾನಾಂ**
**ಜ್ಞಾನೇನ ವೈರಾಗ್ಯವಿಜೃಂಭಿತೇನ ।**
**ಯೋಗೇನ ಮಯ್ಯರ್ಪಿತಯಾ ಚ ಭಕ್ತ್ಯಾ**
**ಮಾಂ ಪ್ರತ್ಯಗಾತ್ಮಾನಮಿಹಾವರುಂಧೇ ॥೨೭॥**

ಅಯಂ=ಈ ಅಧಿಕಾರಿಯು ಪ್ರಕೃತೇಃ ಗುಣಾನಾಂ=ಪ್ರಕೃತಿಯಿಂದ ಉಂಟಾದ ವಿಷಯಗಳ, ಅಸೇವಯಾ=ಸೇವನೆಯನ್ನು ಮಾಡದಿರುವುದರಿಂದ ಉಂಟಾದ, ವೈರಾಗ್ಯವಿಜೃಂಭಿತೇನ=ವೈರಾಗ್ಯದಿಂದ ಅಭಿವೃದ್ಧವಾದ, ಜ್ಞಾನೇನ=ಪರೋಕ್ಷ ನಿಶ್ಚಯದಿಂದ ಉಂಟಾದ, ಯೋಗೇನ=ಧ್ಯಾನಾದಿಗಳಿಂದ, ಚ=ಮತ್ತು, ಮಯಿ ಅರ್ಪಿತಯಾ ನನ್ನಲ್ಲಿ ಸಮರ್ಪಿಸಿದ, ಭಕ್ತ್ಯಾ=ಭಕ್ತಿಯಿಂದಲೂ ಪ್ರತ್ಯಗಾತ್ಮಾನಂ=ಜೀವ ಸ್ವರೂಪಾಂತರ್ಗತನಾದ ಅಥವಾ ತನಗೆ ಯೋಗ್ಯವಾದ, ಹರಿಂ=ಭಗವಂತನ ರೂಪವನ್ನು ಇಹ=ದೇಹದಲ್ಲಿ, ಅವರುಂಧೇ=ವಶ ಮಾಡಿಕೊಂಡವನಂತೆ ನೋಡುವನು. ॥೨೭॥

ಭಕ್ತಿಯು ಜ್ಞಾನಸಾಧನಗಳಲ್ಲಿ ಶ್ರೇಷ್ಠವೆಂದು ಹೇಳಿದಾಗ ಜಿಜ್ಞಾಸೆಯಿಂದ ದೇವಹೂತಿಯು ಕೇಳುವಳು. ಅಧಿಕಾರಿಗಳು ಎರಡು ವಿಧವಾಗಿರುವರು. ಮೋಕ್ಷ ಬಯಸುವವರು, ಬಯಸದವರೆಂದು. ಅವುಗಳಲ್ಲಿ ಮೋಕ್ಷವನ್ನು ಇಚ್ಛಿಸುವರ ಭಕ್ತಿಯು ಶ್ರೇಷ್ಠವೋ ಅಥವಾ ಮೋಕ್ಷವನ್ನಪೇಕ್ಷಿಸದಿರುವವರ ಭಕ್ತಿ ಉತ್ತಮವೋ ? ಒಂದು ವೇಳೆ ಮೋಕ್ಷಾಪೇಕ್ಷಿಗಳಲ್ಲದವರ ಭಕ್ತಿಯೇ ಉತ್ತಮವೆಂದಾದರೆ ಅದು ಎಂಥಹುದು ಮುಂತಾಗಿ ಕೇಳುವಳು –

**ದೇವಹೂತಿರುವಾಚ**

**ಕಾಚಿತ್ ತ್ವಯ್ಯರ್ಪಿತಾ ಭಕ್ತಿಃ ಕೀದೃಶೀ ಮಮ ಗೋಚರಾ ।**
**ಯಯಾ ಪದಂ ತೇ ನಿರ್ವಾಣಮಂಜಸಾ ಪ್ರಾಪ್ನುಯಾಮ್ಯಹಂ ॥೨೮॥**

ತ್ವಯಿ ಅರ್ಪಿತಾ ಭಕ್ತಿಃ=ನಿನ್ನಲ್ಲಿ ಸಮರ್ಪಿಸಿದ ಭಕ್ತಿಯು, ಕಾಚಿತ್= ಯಾವುದು ? ಕಿದೃಶೀ ಮಮ ಗೋಚರಾ=ಅದರ ಲಕ್ಷಣವೇನು ? ನಾನು

ತಿಳಿಯಬೇಕಾದುದು ಯಾವುದು ? ಮಾಡಬೇಕಾದುದು ಯಾವುದು ? ಯಯಾ =ಯಾವುದರಿಂದ, ಅಹಂ=ನಾನು, ತೇ ಪದಂ ನಿರ್ವಾಣಂ=ನಿನ್ನ ಸ್ಥಾನವಾದ ಮೋಕ್ಷವನ್ನು, ಅಂಜಸಾ ಪ್ರಾಪ್ನುಯಾಂ=ಮೋಕ್ಷಾಪೇಕ್ಷಿಗಳಗಿಂತ ಚೆನ್ನಾಗಿ ಹೊಂದುವೆನು?(ತೇ=ನಿನ್ನ ನಿರ್ವಾಣಂ=ಪ್ರಾಕೃತದೇಹರಹಿತಾದ ಪದಂ=ಸ್ವರೂಪ-ವನ್ನು ಎಂದೂ ಅರ್ಥ ಮಾಡಬಹುದು) ॥೨೮॥

**ಯೋ ಯೋಗೋ ಭಗವತ್ಪ್ರಾಪ್ತೌ ನಿರ್ವಾಣಾತ್ಮಂಸ್ತ್ವಯೋದಿತಃ ।**
**ಕೀದೃಶಃ ಕತಿ ಚಾಂಗಾನಿ ಯತಸ್ತತ್ತ್ವಾವಬೋಧನಮ್ ॥೨೯॥**

ನಿರ್ವಾಣಾತ್ಮನ್=ಪರಮಾನಂದಮೂರ್ತಿಯೇ, ತ್ವಯಾ=ನಿನ್ನಿಂದ ಭಗವತ್ಪ್ರಾಪ್ತೌ =ಶ್ರೀಹರಿಯನ್ನು ಹೊಂದಲು, ಉದಿತಃ=ಹೇಳಲ್ಪಟ್ಟ ಯಃ ಯೋಗಃ=ಯಾವ ಉಪಾಯವಿದೆಯೋ ಸಃ=ಅದು ಕೀದೃಶಃ=ಯಾವ ವಿಧವಾದುದು ? ಕತಿ ಚ ಅಂಗಾನಿ=ಅದಕ್ಕೆ ಸಾಧನಗಳೇನು? ಯತಃ=ಯಾವುದರಿಂದ ತತ್ತ್ವಾವಬೋಧನಮ್ =ತತ್ತ್ವಜ್ಞಾನವಾಗುವುದು ? ॥೨೯॥

**ತದೇತನ್ಮೇ ವಿಜಾನೀಹಿ ಯಥಾಽಹಂ ಮಂದಧೀರ್ಹರೇ ।**
**ಸುಖಂ ಬುಧ್ಯೇಯ ದುರ್ಬೋಧಂ ಯೋಷಾ ಭವದನುಗ್ರಹಾತ್ ॥೩೦॥**

ಹೇ ಹರೇ=ಕಪಿಲನೆ, ಮಂದಧೀಃ=ಅಲ್ಪಬುದ್ಧಿಯುಳ್ಳ, ಯೋಷಾ= ಸ್ತ್ರೀಯಾದ, ಅಹಂ=ನಾನು, ದುರ್ಬೋಧಂ=ಸುಲಭವಾಗಿ ತಿಳಿಯಲಾಗದ್ದನ್ನು, ಭವದನು-ಗ್ರಹಾತ್=ನಿನ್ನ ಅನುಗ್ರಹದಿಂದ, ಸುಖಂ ಬುಧ್ಯೇಯ ಯಥಾ=ಹೇಗೆ ಸುಖವಾಗಿ ತಿಳಿದೇನೋ, ತಥಾ=ಹಾಗೆ, ತತ್=ಭಕ್ತಿಯನ್ನು, ಏತತ್= ಯೋಗವನ್ನೂ ವಿಜಾನೀಹಿ=ವಿಶೇಷವಾಗಿ ತಿಳಿಸು. ॥೩೦॥

**ಮೈತ್ರೇಯ ಉವಾಚ**

**ವಿದಿತ್ವಾರ್ಥಂ ಕಪಿಲೋ ಮಾತುರಿತ್ಥಂ**
**ಜಾತಸ್ನೇಹೋ ಯತ್ರ ತನ್ವಾಽಭಿಜಾತಃ ।**
**ತತ್ತ್ವಾಮ್ನಾಯಂ ಯತ್ ಪ್ರವದಂತಿ ಸಾಂಖ್ಯಂ**
**ಪ್ರೋವಾಚ ವೈ ಭಕ್ತಿವಿತಾನಯೋಗಮ್ ॥೩೧॥**

ಕಪಿಲಃ=ಕಪಿಲನು, ಯತ್ರ=ಯಾವ ದೇಹಹೂತಿಯಲ್ಲಿ, ತನ್ವಾ=ಜ್ಞಾನಾ-ನಂದಾತ್ಮಕಶರೀರದಿಂದ, ಅಭಿಜಾತಃ=ವ್ಯಕ್ತನಾದನೋ ತನ್ಮಾತುಃ=ಆ ತಾಯಿಯ

ಇತ್ಥಂ ಅರ್ಥಂ=ಈ ವಿಧವಾದ ಅಭಿಪ್ರಾಯವನ್ನು, ವಿದಿತ್ವಾ=ತಿಳಿದು, ಜಾತಸ್ನೇಹಃ= ಪ್ರವೃದ್ಧವಾದ ಅನುಗ್ರಹರೂಪವಾದ ಸ್ನೇಹ ಉಳ್ಳವನಾಗಿ, ಯತ್=ಯಾವುದನ್ನು, ಭಕ್ತಿವಿತಾನಯೋಗಂ=ಭಕ್ತಿವಿಸ್ತಾರಕ್ಕೆ ಕಾರಣವಾದ, ತತ್ವಾಮ್ನಾಯಂ=ಪರಮಾತ್ಮಾದಿ ತತ್ವಪ್ರತಿಪಾದಕವಾದ ಸಾಂಖ್ಯಂ ಪ್ರವದಂತಿ=ಸಾಂಖ್ಯಶಾಸ್ತ್ರವೆಂದು ಹೇಳುವರೋ, ತತ್=ಅದನ್ನು ಪ್ರಾವೋಚತ್=ಉಪದೇಶಿಸಿದನು.

ಇಲ್ಲಿ ತನ್ವಾಽಭಿಜಾತಃ ಎಂದದ್ದರಿಂದ ಭಗವಂತನಿಗೆ ಪ್ರಾಕೃತದೇಹ ಉಂಟೆಂದು ತೋರುವುದು ಕಾರಣ ತಾತ್ಪರ್ಯ ಹೇಳುವರು-

**ಶುಕ್ಲೇನ ಜನಿರನ್ಯೇಷಾಂ ಹರೇಃ ಸ್ವತನುವೈವ ತು ।**
**ನಿತ್ಯೋದಿತಜ್ಞಾನತನೋಃ ಕುತಃ ಸ್ಯಾಚ್ಛುಕ್ಲತೋ ಜನಿಃ ॥ ಇತಿ ಗಾರುಡೇ ।**

ಶ್ರೀ ಶ್ರೀಶರಿಂದ ಭಿನ್ನರಾದವರಿಗೆ ಶುಕ್ಲಶೋಣಿತಗಳಿಂದ ಉತ್ಪತ್ತಿಯು. ಶ್ರೀಹರಿಗೆ ತನ್ನ ಸ್ವರೂಪದೇಹದಿಂದಲೇ ಪ್ರಾದುರ್ಭಾವವು. ನಿತ್ಯದಲ್ಲೂ ವ್ಯಕ್ತವಾದ ಜ್ಞಾನರೂಪಶರೀರವುಳ್ಳ ಭಗವಂತನಿಗೆ ಶುಕ್ಲಶೋಣಿತಗಳಿಂದ ಜನಿಯಾಕಾದೀತು ? ಆಗಲಾರದು ಎಂದು ಭಾವ. ॥೩೧॥

**ಭಗವಾನುವಾಚ**

**ದೇವಾನಾಂ ಗುಣಲಿಂಗಾನಾಮಾನುಶ್ರಾವಿಕಕರ್ಮಣಾಂ ।**
**ಸತ್ವ ಏವೈಕಮನಸೋ ವೃತ್ತಿಃ ಸ್ವಾಭಾವಿಕೀ ತು ಯಾ ॥೩೨॥**

ಸತ್ವೇ ಏವ=ಯಾವಾಗಲು ಸರ್ವಗುಣಪೂರ್ಣನಾದ ಭಗವಂತನಲ್ಲಿಯೇ ಏಕಮನಸಃ=ಮುಖ್ಯವಾದ ಮನಸ್ಸುಳ್ಳ, ಗುಣಲಿಂಗಾನಾಂ=ಗಂಧಾದಿಗುಣಗಳ ಜ್ಞಾನರೂಪವಾದ ಕಾರ್ಯದಿಂದ ಅನುಮೇಯರಾದ, ಆನುಶ್ರಾವಿಕಕರ್ಮಣಾಂ =ವೇದೋಕ್ತ ಕರ್ಮಾನುಷ್ಠಾನ ಮಾಡಲು ಸಾಧನರಾದ ಮತ್ತು ಸ್ವಯಂ ಅನುಷ್ಠಾನ ಮಾಡುವುದರಿಂದ ವೇದೋಕ್ತವಾದುದನ್ನು ಉಲ್ಲಂಘಿಸದಿರುವ, ದೇವಾನಾಂ=ದ್ಯೋತಮಾನವಾದ ಇಂದ್ರಿಯಾಭಿಮಾನಿಗಳಾದ ತಾತ್ವಿಕದೇವತೆಗಳ, ಸ್ವಾಭಾವಿಕೀ ಯಾ ವೃತ್ತಿಃ=ಸ್ವಾಭಾವಿಕವಾದ ಗಂಗಾಪ್ರವಾಹದಂತಿರುವ ಭಕ್ತಿಯು ನಾಶಗೊಳಿಸುವುದು, ಎಂದು ಮುಂದಿನ ಶ್ಲೋಕದಿಂದ ಅನ್ವಯ.

ಆನುಶ್ರಾವಿಕಕರ್ಮಣಾಂ ಎಂಬುದರ ಅರ್ಥ ಹೇಳುವರು -

**ಆನುಶ್ರಾವಿಕಕರ್ಮಾಽಸೌ ಶ್ರುತ್ಯುಕ್ತಂ ಯೋ ನ ಲಂಘಯೇತ್'' ।**
**ಇತಿ ಭವಿಷ್ಯತ್ಪರ್ವಣಿ ।**

ಗುರೂಚ್ಚಾರಣಾನುಸಾರವಾಗಿ ಕೇಳಲ್ಪಡುವುದರಿಂದ ಅನುಶ್ರವಾ ಎಂದರೆ ಶ್ರುತಿಯು. ಅದರಲ್ಲಿ ವಿಹಿತವಾದುದು ಆನುಶ್ರಾವಿಕ. ಅದೇ ಕಾರ್ಯವಾಗಿ-ವುಳ್ಳವರು ಆನುಶ್ರಾವಿಕರ್ಮಾ ಎನಿಸುವರು. ಅದರ ತಾತ್ಪರ್ಯವನ್ನು ಶ್ರುತ್ಯುಕ್ತವಾದುದನ್ನು ಉಲ್ಲಂಘಿಸದಿರುವುದು ಎಂದು ಹೇಳಿರುವರು.

ಸತ್ವಶಬ್ದಾರ್ಥವನ್ನು ಹೇಳುವರು –

**ಸದಾ ಸರ್ವಗುಣಾಢ್ಯತ್ವಾತ್ ಸತ್ವೋ ವಿಷ್ಣುರುದೀರ್ಯತೇ ।**

**ಇತಿ ಕಾಪಿಲೇಯೇ ।**

ಸರ್ವಸರ್ವಗುಣಪೂರ್ಣನಾದ್ದರಿಂದ ವಿಷ್ಣುವು ಸತ್ವವೆನಿಸುವನು, ಎಂದು ಕಾಪಿಲೇಯದಲ್ಲಿದೆ. ॥೩೨॥

**ಅನಿಮಿತ್ತಾ ಭಗವತಿ ಭಕ್ತಿಃ ಸಿದ್ಧೇರ್ಗರೀಯಸೀ ।**
**ಜರಯತ್ಯಾಶು ಯಾ ಕೋಶಂ ನಿಗೀರ್ಣಮನಲೋಯಥಾ ॥೩೩॥**

ಅನಿಮಿತ್ತಾ=ಫಲಸಂಕಲ್ಪರಹಿತವಾದ, ಭಗವತಿ ಭಕ್ತಿಃ=ಭಗವಂತನಲ್ಲಿ ಮಾಡುವ ಭಕ್ತಿಯು, ಸಿದ್ಧೇಃ ಗರಿಯಸೀ=ಅಪಕ್ವಭಕ್ತರಿಗಾಗುವ ಮುಕ್ತಿಗಿಂತಲು ಶ್ರೇಷ್ಠವಾದುದು, ಯಾ=ಯಾವಭಕ್ತಿಯು ಅನಲಃ=ಜಾಠರಾಗ್ನಿಯು ನಿಗೀರ್ಣಂ ಯಥಾ=ತಿಂದದ್ದನ್ನೆಲ್ಲ ಹೇಗೆ ಜೀರ್ಣಮಾಡುವದೋ ತಥಾ=ಹಾಗೆ, ಕೋಶಂ ಜರಯತಿ=ಲಿಂಗಶರೀರ-ವನ್ನು ನಾಶಗೊಳಿಸುವುದು ॥೩೩॥

ಸಾಧನವಾದ ಭಕ್ತಿಗೆ ಸಾಧ್ಯವಾದ ಮುಕ್ತಿಗಿಂತ ಉತ್ತಮತ್ವ ಹೇಳುವುದು ಬಾಧಿತ-ವಾದುದು, ಹೇಗೆ ? ಹೇಳಿದರು ಎಂದರೆ ಅಭಿಪ್ರಾಯ ಹೇಳುವರು-

**ಅಪೂರ್ಣಭಕ್ತೇರ್ಮುಕ್ತೌ ತು ನ ಸುಖಂ ಪೂರ್ತಿಮೇಷ್ಯತಿ ।**
**ಅತಸ್ತಾದೃಶಮುಕ್ತೇಶ್ಚ ಭಕ್ತಿಃ ಪೂರ್ಣಾ ಗರೀಯಸೀ ॥**

ಅನಿಮಿತ್ತತ್ವರೂಪವಾದ ಅಂಗ ಇಲ್ಲದಿರುವುದರಿಂದ ಅಪೂರ್ಣವಾದ ಸಕಾಮಭಕ್ತಿಯುಳ್ಳ ಮೋಕ್ಷಕಾಮನೆಯುಳ್ಳ ಅಧಿಕಾರಿಗಳಿಗೆ ಮುಕ್ತಿಯಾದರೂ ಉತ್ತಮಾಧಿಕಾರಿಗಳ ಭಕ್ತಿಯಿಂದ ಅಭಿವ್ಯಕ್ತವಾದ ಸುಖಪೂರ್ತಿಗೆ ಸಮಾನವಾದ ಪೂರ್ತಿಯನ್ನು ಹೊಂದಲಾರದು. ಆದ್ದರಿಂದ ಅಂಥ ಮುಕ್ತಿಗಿಂತಲೂ ಉತ್ತಮಾಧಿ ಕಾರಿಗಳಿಗಿರುವ ನಿಷ್ಕಾಮಭಕ್ತಿಯು ಅಂಗಸಹಿತವಾದುದರಿಂದ ಈಗಲೇ ಹೆಚ್ಚು ಸುಖಾಭಿವ್ಯಕ್ತಿ ಕಾರಣವಾದ್ದರಿಂದ ಶ್ರೇಷ್ಠವಾದುದು ಎಂದು ಭಾವ. ॥೩೩॥

ಅನಿಮಿತ್ತ ಭಕ್ತಿ ಮಾಡುವವರು ಹೇಗಿರುವರೆಂದು ತಿಳಿಸುವರು-

**ನೈಕಾತ್ಮ್ಯತಾಂ ಮೇ ಸ್ಪೃಹಯಂತಿ ಕೇಚಿನ್ಮ-**
**ತ್ಪಾದಸೇವಾಭಿರತಾ ಮದೀಹಾಃ ।**
**ಯೇऽನ್ಯೋನ್ಯತೋ ಭಾಗವತಾಃ ಪ್ರಸಜ್ಯ**
**ಸಭಾಜಯಂತೇ ಮಮ ಪೌರುಷಾಣಿ ॥೩೪॥**

ಕೇಚಿತ್=ಉತ್ತಮಾಧಿಕಾರಿಗಳು, ಮೇ=ನನ್ನಿಂದ ಭಕ್ತಿಫಲವೆಂದು ಕೊಡಲ್ಪಡುವ, ಐಕಾತ್ಮ್ಯತಾಂ=ಸಾಯುಜ್ಯವನ್ನೂಕೂಡಾ,ನಸ್ಪೃಹಯಂತಿ=ಇಚ್ಛಿಸುವುದಿಲ್ಲ (ನನ್ನ ಆಜ್ಞರೂಪವಾಗಿ ಸ್ವೀಕರಿಸುವರು), ಮತ್ಪಾದಸೇವಾಭಿರತಾಃ=ನನ್ನ ಪಾದಸೇವೆ-ಯಲ್ಲಿಯೇ ಆಸಕ್ತರಾಗಿ, ಮದೀಹಾಃ=ನನ್ನ ವಿಷಯಕವಾದ ಎಲ್ಲ ವ್ಯಾಪಾರ-ಗಳುಳ್ಳವರಾಗಿ, ಯೇ ಭಾಗವತಾಃ=ಯಾವ ಭಗವದ್ಭಕ್ತರು, ಅನ್ಯೋನ್ಯತಃ ಪ್ರಸಜ್ಯ= ಪರಸ್ಪರ ಸೇರಿಕೊಂಡು, ಮಮ ಪೌರುಷಾಣಿ=ನನ್ನ ಪರಾಕ್ರಮಗಳನ್ನು ಸಭಾಜಯಂತೇ=ಗೌರವಿಸಿ ಕೇಳುವರು ಹೇಳುವರು. (ಅವರು ಅನಿಮಿತ್ತ ಭಕ್ತರು).

ಈ ಶ್ಲೋಕದಲ್ಲಿಯ ಏಕಾತ್ಮತಾಶಬ್ದಾರ್ಥವನ್ನು ಅಪೇಕ್ಷಿತ ಅಧ್ಯಾಹಾರವನ್ನೂ ಪ್ರಮಾಣದಿಂದ ತಿಳಿಸುವರು-

**ನೇಚ್ಛಂತಿ ಸಾಯುಜ್ಯಮಪಿ ಫಲತ್ವೇನ ಹರಿರ್ಯದಿ ।**
**ದದಾತಿ ಭಕ್ತಿಸಂತುಷ್ಟ ಆಜ್ಞಾತ್ವೇನೈವ ಗೃಣ್ಹತೇ ।**
**ತಾದೃಶಾನಾಂ ಸುಖಾಧಿಕ್ಯಂ ಪುನರ್ಮುಕ್ತೌ ಭವಿಷ್ಯತಿ ॥ ಇತಿ ಚ ।**
**ಆದಾನಾದಿಕರ್ತೃತ್ವಾದಾತ್ಮಾ ।**

ಯಾವ ಏಕಾಂತಭಕ್ತರು ಭಕ್ತಿಯಿಂದ ಸಂತುಷ್ಟನಾದ ಹರಿಯ ಭಕ್ತಿಯ ಫಲವೆಂದು ಸಾಯುಜ್ಯವನ್ನೂ ಅಪೇಕ್ಷಿಸುವುದಿಲ್ಲ. ಶ್ರೀಹರಿಯ ಆಜ್ಞೆಯೆಂದು ಮಾತ್ರ ಸ್ವೀಕರಿಸುವರು. ಇಂಥವರಿಗೆ ಮುಕ್ತಿಯಲ್ಲಿ ಅಧಿಕ ಸುಖವಾಗುವುದು.

ಈ ಶ್ಲೋಕದಲ್ಲಿ ಯೇಷಾಮಹಂ ಆತ್ಮಾ ಎಂದು ಐಕ್ಯತೋರುವುದು ಕಾರಣ ಆತ್ಮಶಬ್ದಾರ್ಥ ಹೇಳಿರುವರು "ಆದಾನಾದಿಕರ್ತೃವಾದ್ದರಿಂದ ಆತ್ಮಾ" ಎನ್ನುವರು ಹೊರತು ಸ್ವರೂಪವಾದ್ದರಿಂದಲ್ಲವೆಂದು ಭಾವ. ॥೩೪॥

**ಪಶ್ಯಂತಿ ಮೇ ತೇ ರುಚಿರಾಣ್ಯೇವ ಸಂತಃ**
**ಪ್ರಸನ್ನವಕ್ತ್ರಾರುಣಲೋಚನಾನಿ ।**
**ರೂಪಾಣಿ ದೈತ್ಯಾಸುವಿನಾಶನಾನಿ**
**ಸಾಕಂ ವಾಚಂ ಸ್ಪೃಹಣೀಯಾಂ ವದಂತಿ ॥೩೫॥**

ತೇ ಸಂತಃ=ಆ ಸಜ್ಜನರು, ಮೇ=ನನ್ನ ಪ್ರಸನ್ನವಕ್ತ್ರಾರುಣಲೋಚನಾನಿ=ಸಂತುಷ್ಟವಾದ ಮುಖ, ಕೆಂಪಾದ ಕಣ್ಣುಗಳುಳ್ಳ, ದೈತ್ಯಾಸುವಿನಾಶನಾನಿ=ದೈತ್ಯರ ಪ್ರಾಣಗಳನ್ನು ತೆಗೆಯುವ, ರುಚಿರಾಣಿ=ಮನೋಹರವಾದ, ರೂಪಾಣಿ=ರೂಪಗಳನ್ನು, ಪಶ್ಯಂತಿ=ನೋಡುವರು, ಸಾಕಂ=ಆ ರೂಪಗಳ ಜೊತೆಗೆ, ಸ್ಪೃಹಣೀಯಾಂ ವಾಚಂ ವದಂತಿ=ಇಷ್ಟವಾದ ಮಾತನ್ನಾಡುವರು. ॥೩೫॥

**ತೈರ್ದರ್ಶನೀಯಾವಯವೈರುದಾರ-**
**ವಿಲಾಸಹಾಸೇಕ್ಷಿತವಾಮಸೂಕ್ತೈಃ ।**
**ಹೃತಾತ್ಮನೋ ಹೃತಪ್ರಾಣಸ್ಯ ಭಕ್ತಿ-**
**ಮನಿಚ್ಛತೋ ಗತಿಮಣ್ವೀಂ ಪ್ರಯುಂಜೇ ॥೩೬॥**

ದರ್ಶನೀಯಾವಯವೈಃ=ಮನೋಹರವಾದ ಅವಯವಗಳುಳ್ಳ, ಉದಾರ=ಉತ್ಕೃಷ್ಟವಾದ, ವಿಲಾಸ=ಹಾವಭಾವಗಳು, ಹಾಸ=ಮುಗುಳನಗು, ಇಕ್ಷಿತ=ನೋಟ, ವಾಮ=ಅನುಕೂಲವಾದ, ಸೂಕ್ತೈಃ=ಶುಭವಚನಗಳುಳ್ಳ, ತೈಃ=ನೋಡಿದ ಮಾತನಾಡಿದ ರೂಪಗಳಿಂದ, ಹೃತಾತ್ಮಾನಃ=ಅಪಹರಿಸಲ್ಪಟ್ಟ ಮನಸ್ಸುಳ್ಳ, ಹೃತಪ್ರಾಣಸ್ಯ=ಅಪಹೃತವಾದ ಇಂದ್ರಿಯವೃತ್ತಿಗಳುಳ್ಳ, ಭಕ್ತಿಂ ಅನ್ವಿಚ್ಛತಃ=ಭಕ್ತಿಯನ್ನು ಅಪೇಕ್ಷಿಸುವ ಜನರಿಗೆ ಪ್ರಸನ್ನನಾದ, ನಾನು ಅಣ್ವೀಂ=ಸೂಕ್ಷ್ಮವಾದ ಸಾಯುಜ್ಯ-ರೂಪವಾದ, ಗತಿಂ=ಮುಕ್ತಿಯನ್ನು ಪ್ರಯುಂಜೇ=ಕೊಡುವೆನು. ॥೩೬॥

**ಅಥೋ ವಿಭೂತಿಂ ಮಮ ಮಾಯಯಾ ಚಿತಾ-**
**ಮೈಶ್ವರ್ಯಮಷ್ಟಾಂಗಮನುಪ್ರವೃತ್ತಂ ।**
**ಶ್ರಿಯಂ ನ ದೇವೀಂ ಸ್ಪೃಹಯಂತಿ ಭದ್ರಾಂ**
**ಪರಸ್ಯ ಮೇ ತೇಽಶ್ನುವತೇ ಹಿ ಲೋಕೇ ॥೩೭॥**

ಅಥೋ=ಮುಕ್ತಿಯನಂತರ, ಯೇ=ಯಾರು, ವಿಭೂತಿಂ=ಛತ್ರಚಾಮರಾದಿ-ಗಳನ್ನು ಮಮ=ನನ್ನ ಮಾಯಯಾ=ಇಚ್ಛೆಯಿಂದ, ಚಿತಾಂ=ನಿರ್ಮಿತವಾದ, ಅಷ್ಟಾಂಗಂ ಐಶ್ವರ್ಯಂ=ಅಣಿಮಾದಿ ಅಷ್ಟೈಶ್ವರ್ಯವನ್ನು, ಅನುಪ್ರವೃತ್ತಂ=ಭಕ್ತಿಯ ಫಲವಾಗಿ ನೀಡುವ, ಭದ್ರಾಂ=ಸರ್ವಾಂಗಸುಂದವಾದ ಶ್ರಿಯಂ=ಸಂಪತ್ತನ್ನು ದೇವೀಂ=ಪ್ರಕಾಶಮಾನವಾದ ಶರೀರಶೋಭೆಯನ್ನು ನಸ್ಪೃಹಯಂತಿ=ಅಪೇಕ್ಷಿಸುವುದಿಲ್ಲ ಪರಸ್ಯ=ಸರ್ವೋತ್ತಮನಾದ (ಮೇ=ನನ್ನಿಂದ) ಮೇ=ನನ್ನ ಲೋಕದಲ್ಲಿ ಅಶ್ನುವತೇ=ನನ್ನ ಆಜ್ಞೆಯಿಂದ (ಅನುಲ್ಲಂಘ್ಯವಾದ್ದರಿಂದ) ಅನುಭವಿಸುವರು. ಛತ್ರಚಾಮರಾದಿಗಳನ್ನು ಭಕ್ತಿಯ ಫಲವೆಂದು ಭೋಗ-ಮಾಡುವುದಿಲ್ಲ, ಕಿಂತು ಭಗವಂತನ ಆಜ್ಞೆಯೆಂದು ಭೋಗಮಾಡುವರು. ॥೩೭॥

**ನ ಕರ್ಹಿಚಿನ್ಮತ್ಪರಾಃ ಶಾಂತರೂಪಾ**
**ನಙ್ಕ್ಷ್ಯಂತಿ ಮೇ ನೋಽನಿಮಿಷೋ ಲೇಢಿ ಹೇತಿಃ ।**
**ಯೇಷಾಮಹಂ ಪ್ರಿಯ ಆತ್ಮಾ ಸುತಶ್ಚ**
**ಸಖಾ ಗುರುಃ ಸುಹೃದೋ ದೈವಮಿಷ್ಟಂ ॥೩೮॥**

ಯೇಷಾಂ=ಯಾವ ನನ್ನ ಭಕ್ತರಿಗೆ, ಅಹಂ=ನಾನು, ಪ್ರಿಯಃ=ಪ್ರಿಯನು, ಆತ್ಮಾ=ಆದಾನಾದಿಕರ್ತೃವು, ಸುತಃ=ಮಗನಂತೆ ಸ್ನೇಹವಿಷಯನು, (ಜ್ಞಾನವಂತರಿಗೆ ಅಭಿವ್ಯಕ್ತನಾದುದರಿಂದ ಮಗನು) ಸಖಾ=ವಿಶ್ವಸನೀಯನು, ಗುರುಃ=ಉಪದೇಶ-ಕನು, ಸುಹೃದಃ=ಹಿತಕಾರಿಯು, ದೈವಂ=ಪೂಜ್ಯನು, ಇಷ್ಟಂ=ಇಷ್ಟನು, ಅಂತಹ, ಮತ್ಪರಾಃ=ನಾನೇ ಸರ್ವೋತ್ತಮನೆಂದು ತಿಳಿದವರು, ಶಾಂತರೂಪಾಃ=ಸುಖ-ಪೂರ್ಣಸ್ವರೂಪರು, ನ ನಙ್ಕ್ಷ್ಯಂತಿ=ಯಾವ ಕಾರಣದಿಂದಲೂ ಭೋಗಹೀನ-ರಾಗುವುದಿಲ್ಲ, ಮೇ=ನನ್ನ ಹೇತಿಃ ಆಯುಧವಾದ, ಅನಿಮಿಷಃ=ಕಾಲಚಕ್ರವು ನ ಲೇಢಿ=ಭಕ್ತರನ್ನು ನುಂಗಲಾರದು, ನಾಶಮಾಡಲಾರದೆಂದರ್ಥ. ॥೩೮॥

**ಇಮಂ ಲೋಕಂ ತಥೇವಾಮುಮಾತ್ಮಾನಮುಭಯಾಯಿನಮ್ ।**
**ಆತ್ಮಾನಮನು ಯೇ ಚೇಮೇ ಯೇ ರಾಯಃ ಪಶವೋ ಗೃಹಾಃ ॥೩೯॥**

ಇಮಂ ಲೋಕಂ=ಈ ಲೋಕವನ್ನು, ತಥಾ=ಅದರಂತೇ ಅಮುಂಲೋಕಂ=ಪಾರತ್ರಿಕಲೋಕವನ್ನು, ಉಭಯಾಯಿನಂ=ಲೋಕದ್ವಯಸಂಚಾರಿಯಾದ, ಆತ್ಮಾನಂ =ತನ್ನನ್ನು, ಅನು=ಅನುಸರಿಸಿರುವ, ಯೇ ಚೆ ಮೇ=ಯಾವ ಮಕ್ಕಳು ಹೆಂಡತಿ ಮೊದಲಾದವರು ರಾಯಃ=ಧನವನ್ನು ಪಶವಃ=ಪಶುಗಳನ್ನು, ಗೃಹಾಃ=ಮನೆಗಳನ್ನು ॥೩೯॥

**ವಿಸೃಜ್ಯ ಸರ್ವಾನನ್ಯಾಂಶ್ಚ ಮಾಮೇವಂ ವಿಶ್ವತೋಮುಖಂ ।**
**ಭಜಂತ್ಯನನ್ಯಯಾ ಭಕ್ತ್ಯಾ ತಾನ್ ಮೃತ್ಯೋರತಿಪಾರಯೇ ॥೪೦॥**

ಅನ್ಯಾಂಶ್ಚ=ಇನ್ನಿತರವನ್ನೆಲ್ಲ, ವಿಸೃಜ್ಯ=ತ್ಯಜಿಸಿ, ವಿಶ್ವತೋಮುಖಂ=ಮಾಂ ವಿಶ್ವತೋಮುಖನಾದ ನನ್ನನ್ನು, ಏವಂ=ಈ ರೀತಿಯಾಗಿ, ಅನನ್ಯಯಾ ಭಕ್ತ್ಯಾ ಸರ್ವೋತ್ತಮತ್ವಜ್ಞಾನಪೂರ್ವಕ ಭಕ್ತಿಯಿಂದ, ಭಜಂತಿ=ಭಜಿಸುವರೋ, ತಾನ್=ಅವರನ್ನು, ಮೃತ್ಯೋಃ ಅತಿಪಾರಯೇ=ಸಂಸಾರದಿಂದ ಮೋಚನ ಮಾಡುವೆನು. ॥೪೦॥

**ನಾನ್ಯತ್ರ ಮದ್ ಭಗವತಃ ಪ್ರಧಾನಪುರುಷೇಶ್ವರಾತ್ ।**
**ಆತ್ಮನಃ ಸರ್ವಭೂತಾನಾಂ ಭಯಂ ತೀವ್ರಂ ನಿವರ್ತತೇ ॥೪೧॥**

ಪ್ರಧಾನಪುರುಷೇಶ್ವರಾತ್=ಪ್ರಕೃತಿ(ಲಕ್ಷ್ಮೀ)ಹಿರಣ್ಯಗರ್ಭರಿಗಿಂತ ಉತ್ತಮನಾದ, ಭಗವತಃ=ಐಶ್ವರ್ಯವಂತನಾದ, ಮದನ್ಯತ್ರ=ನನ್ನನ್ನು ಬಿಟ್ಟು ಬೇರೆಯವರಿಂದ, ಸರ್ವಭೂತಾನಾಂ=ಅಧಿಕಾರಿಗಳ, ತೀವ್ರಂ=ಭಯಂ ಸಂಸಾರಭಯವು ನ ನಿವರ್ತತೇ=ಹೋಗಲಾರದು. ॥೪೧॥

**ಮದ್ಭಯಾತ್ ವಾತಿವಾತೋಽಯಂ ಸೂರ್ಯಸ್ತಪತಿ ಮದ್ಭಯಾತ್ ।**
**ವರ್ಷತೀಂದ್ರೋ ದಹತ್ಯಗ್ನಿರ್ಮೃತ್ಯುಶ್ಚರತಿ ಮದ್ಭಯಾತ್ ॥೪೨॥**

ಅಯಂ ವಾತಃ=ಪ್ರಸಿದ್ಧವಾದ ಗಾಳಿಯು, (ವಾಯುದೇವನು) ಮದ್ಭಯಾತ್ =ನನ್ನ ಹೆದರಿಕೆಯಿಂದ, ವಾತಿ ಬೀಸುವ(ನು)ದು. ಮದ್ಭಯಾತ್=ನನ್ನ ಭಯದಿಂದಲೇ ಸೂರ್ಯಃ=ಸೂರ್ಯನು, ತಪತಿ=ಬೆಳಗುವನು. ಬೇಯಿಸುವನು. ಇಂದ್ರಃ= ಇಂದ್ರನು, ವರ್ಷತಿ=ಮಳೆಗೈಯುವನು. ಅಗ್ನಿಃ=ಅಗ್ನಿಯು, ದಹತಿ=ಸುಡುವನು. ಮೃತ್ಯುಃ=ಯಮನು, ಮದ್ಭಯಾತ್ ಚರತಿ=ನನ್ನ ಭಯದಿಂದಲೇ ಸಂಚರಿಸುವನು. ಹೀಗೆ ನಾನೇ ಸರ್ವದೇವನಿಯಾಮಕನಾದ್ದರಿಂದ ಅನ್ಯರಿಂದ ಮುಕ್ತಿಯಾಗಲಾರದು ಎಂದು ಭಾವ.

**ಜ್ಞಾನವೈರಾಗ್ಯಯುಕ್ತೇನ ಭಕ್ತಿಯೋಗೇನ ಯೋಗಿನಃ ।**
**ಕ್ಷೇಮಾಯ ಪಾದಮೂಲಂ ಮೇ ಪ್ರವಿಶಂತ್ಯಕುತೋಭಯಮ್ ॥೪೩॥**

ಯೋಗಿನಃ=ಯೋಗಿಗಳು, ಜ್ಞಾನವೈರಾಗ್ಯಯುಕ್ತೇನ=ಜ್ಞಾನ ಮತ್ತು ವೈರಾಗ್ಯ ಸಹಿತವಾದ, ಭಕ್ತಿಯೋಗೇನ=ಭಕ್ತಿರೂಪ ಉಪಾಯದಿಂದ, ಅಕುತೋಭಯಂ= ಯಾರಭಯವೂ ಇಲ್ಲದ, ಮೇ=ನನ್ನ, ಪಾದಮೂಲಂ ಪಾದದಡಿಯನ್ನು, ಕ್ಷೇಮಾಯ=ಮುಕ್ತಿಗಾಗಿ, ಪ್ರವಿಶಂತಿ=ಪ್ರವೇಶಿಸುವರು. ॥೪೩॥

**ಏತಾವಾನೇವ ಲೋಕೇಽಸ್ಮಿನ್ ಪುಂಸಾಂ ನಿಃಶ್ರೇಯಸೋದಯಃ ।**
**ತೀವ್ರೇಣ ಭಕ್ತಿಯೋಗೇನ ಮನೋ ಮಯ್ಯರ್ಪಿತಂ ಸ್ಥಿತಮ್ ॥೪೪॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಷಡ್ವಿಂಶೋಽಧ್ಯಾಯಃ ॥*

ತೀವ್ರೇಣ ಭಕ್ತಿಯೋಗೇನ=ದೃಢವಾದ ಭಕ್ತಿರೂಪ ಉಪಾಯದಿಂದ, ಮಯಿ= ನನ್ನಲ್ಲಿ, ಅರ್ಪಿತಂ ಮನಃ=ಅರ್ಪಿಸಿದ ಮನಸ್ಸು, ಸ್ಥಿತಂ ಭವತಿ, ಸ್ಥಿರವಾಗುವುದೇನಿ- ದೆಯೋ, ಏತಾವಾನೇವ=ಇದೇ, ಅಸ್ಮಿನ್ ಲೋಕೇ=ಈ ಪ್ರಪಂಚದಲ್ಲಿ, ಪುಂಸಾಂ= ಅಧಿಕಾರಿಗಳಿಗೆ, ನಿಃಶ್ರೇಯಸೋದಯಃ=ಮೋಕ್ಷಸಾಧನವು. ॥೪೪॥

*ಇಲ್ಲಿಗೆ ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು.*

# ಇಪ್ಪತ್ತಾರನೆಯ ಅಧ್ಯಾಯದ ತಾತ್ಪರ್ಯ

ಪರೀಕ್ಷಿದ್ರಾಜರು - ಸಾಕ್ಷಾತ್ ಶ್ರೀಹರಿಯೇ ಸಜ್ಜನರಿಗೆ ಆತ್ಮವಿದ್ಯೆಯನ್ನು ತಿಳಿಸುವುದಕ್ಕಾಗಿ ತನ್ನ ಇಚ್ಛೆಯಿಂದ ಕಪಿಲಾವತಾರಮಾಡಿ ತತ್ವ ಸಂಖ್ಯಾನವನ್ನು ಪ್ರವರ್ತಿಸುವನೆಂದು ತಾವು ಹೇಳಿದಿರಲ್ಲವೇ ! ಧರ್ಮವೇ ಸ್ವರೂಪವಾಗಿಉಳ್ಳ ಮುಕ್ತಿಯೋಗ್ಯ ಜೀವರು ಇವನನ್ನು ಸೇವಿಸುವರು. ಸನಕ ಮೊದಲಾದ ಯೋಗಿಗಳಿಗೆ ಇವನು ಮುಖ್ಯ ಗುರುವು. ವೇದಪ್ರತಿಪಾದ್ಯನಾದ ಇವನ ವಿಶೇಷ ಚರಿತ್ರೆಯನ್ನು ಕೇಳುವುದರಲ್ಲಿ ನನ್ನ ಇಂದ್ರಿಯಗಳು ಅತ್ಯಂತ ತೃಪ್ತಿಯನ್ನು ಪಡೆಯುತ್ತವೆ. ಸ್ವತಂತ್ರಮನಸ್ಕನಾದ ಇವನು ತನ್ನ ಇಚ್ಛೆಯಿಂದ ಏನೇನು ಮಾಡಿದನೋ ಅವೆಲ್ಲವನ್ನೂ ಭಗವದ್ಭಕ್ತರು ಪ್ರತಿದಿನವೂ ಕೀರ್ತಿಸಿ ಧನ್ಯರಾಗುವರು ಈ ಕಪಿಲನು ಮಾಡಿದ ಕಾರ್ಯಗಳನ್ನು ಕೇಳಬೇಕೆಂಬ ಶ್ರದ್ಧೆಯುಳ್ಳ ನನಗಾಗಿ ಬಿತ್ತರಿಸಬೇಕು.

ಶುಕಾಚಾರ್ಯರು - ರಾಜನ್ ಆತ್ಮವಿದ್ಯೆಯನ್ನು ತಿಳಿಯಲು ನೀನು ನನ್ನನ್ನು ಪ್ರಶ್ನಿಸಿದಂತೆ ವಿದುರರೂ ಮೈತ್ರೆಯರನ್ನು ಪ್ರಶ್ನಿಸಿದರು. ಆಗ ಮೈತ್ರೇಯರು ಕೊಟ್ಟ ಉತ್ತರವನ್ನೇ ನಿನಗೆ ಹೇಳುತ್ತೇನೆ -

ತಂದೆಯೆನಿಸಿದ ಕರ್ದಮರು ಅರಣ್ಯಕ್ಕೆ ಹೋದಮೇಲೆ ತಾಯಿಯೆನಿಸಿದ ದೇವಹೂತಿಗೆ ಇಷ್ಟವಾದುದನ್ನು ಮಾಡುವ ಇಚ್ಛೆಯಿಂದ ಪೂಜ್ಯನಾದ ಕಪಿಲನು ಆ ಬಿಂದು ಸರೋವರಕ್ಷೇತ್ರದಲ್ಲಿಯೇ ವಾಸಿಸುತ್ತಿದ್ದನು. ತತ್ವವಿದ್ಯೆಯನ್ನು ಚೆನ್ನಾಗಿ ಬಲ್ಲ ಇವನು ಯಾವ ಚೇಷ್ಟೆಯೂ ಇಲ್ಲದೆ ಸುಮ್ಮನೆ ಕುಳಿತಿದ್ದನು. ಬ್ರಹ್ಮದೇವನ ಮಾತನ್ನು ಸ್ಮರಿಸಿಕೊಂಡ ದೇವಹೂತಿದೇವಿಯು ತನ್ನ ಮಗನಾಗಿ ಅವತರಿಸಿರುವ ಇವನನ್ನು ಕುರಿತು 'ನೀನು ಸ್ವಯಂಪರಿಪೂರ್ಣನು. ಸರ್ವಸ್ವಾಮಿಯು, ನಾನು ಈ ದುಷ್ಟ ಇಂದ್ರಿಯಗಳನ್ನು ತೃಪ್ತಪಡಿಸುವುದರಲ್ಲಿಯೇ ಆಸಕ್ತಳಾಗಿ ತತ್ವಜ್ಞಾನ-ಶೂನ್ಯಳಾಗಿದ್ದೇನೆ. ಈಗ ನನಗೆ ಅತ್ಯಂತ ವೈರಾಗ್ಯ ಉಂಟಾಗಿದೆ. ನನ್ನ ಈ ಅಜ್ಞಾನದ ದಡವನ್ನು ಮುಟ್ಟುವುದು ದುಸ್ತರವಾಗಿದೆ. ನೀನು ಅದರ ದಡವನ್ನು ಸೇರಿಸುವ ಸಮೀಚೀನವಾದ ಕಣ್ಣಾಗಿರುವೆ. ನೀನು ದೊರಕಿರುವುದು ನನ್ನ ಬಹುಜನ್ಮಗಳ ಪುಣ್ಯದ ಫಲವೇ ಹೊರತು ಬೇರೆಯಲ್ಲ. ಅದೂ ನಿನ್ನ ಅನುಗ್ರಹವೇ. ಬ್ರಹ್ಮಾದಿ ದೇವತೆಗಳಿಗೆ ಮೊದಲಿಗನಾದ ನೀನು ಸರ್ವೇಶ್ವರನು. ಕತ್ತಲೆಯಿಂದ ಕುರುಡು

ಜನರಿಗೆ ಸೂರ್ಯನು ಉದಯಿಸಿದಂತೆ ತತ್ತ್ವಜ್ಞಾನ ಶೂನ್ಯರಾದ ಜನರ ಕಣ್ಣಿಗೆ ನೀನು ವ್ಯಕ್ತನಾಗಿರುವೆ. ಹೇ ದೇವ ! ಈ ದೇಹ ಗೇಹ ಮೊದಲಾದವುಗಳಲ್ಲಿ ನಾನು ನನ್ನದು ಎಂಬ ದುರಭಿಮಾನವನ್ನು ಹೊಂದುವಂತೆ ನೀನೇ ಮಾಡಿರುವೆ. ಈ ಸಮ್ಮೋಹವನ್ನು ಜ್ಞಾನೋಪದೇಶದಿಂದ ಹೋಗಲಾಡಿಸಲು ನೀನೇ ಅರ್ಹನು. ನೀನೇ ಸಾಧು ಶರಣ್ಯನು. ನಿನ್ನ ಭಕ್ತರ ಸಂಸಾರವೃಕ್ಷವನ್ನು ಕತ್ತರಿಸುವುದರಲ್ಲಿ ಕೊಡಲಿಯಂತಿರುವನು ನೀನು. ನಿವೃತ್ತಿ ಧರ್ಮವನ್ನು ಬಲ್ಲವಲರಲ್ಲಿ ನೀನೇ ಬಲ್ಲಿದನು. ನಿನಗೆ ನಮಸ್ಕಾರ. ನಿನ್ನನ್ನೇ ಶರಣುಹೊಂದಿರುವೆನು. ನಾರಾಯಣನೇ ಮೊದಲಾಗಿ ಎಲ್ಲ ಪುರುಷ ಶಬ್ದ ವಾಚ್ಯವಸ್ತುಗಳ ಮತ್ತು ಲಕ್ಷ್ಮೀ ಮೊದಲಾದ ಎಲ್ಲ ಸ್ತ್ರೀ ತತ್ತ್ವಗಳ ಮತ್ತು ಜಡಗಳ ವಿಶೇಷ ಜ್ಞಾನವನ್ನು ನನಗೆ ತಿಳಿಸು' ಎಂದು ಕೇಳಿಕೊಂಡಳು.

ತಾಯಿಯ ತಿಳಿಯಲಪೇಕ್ಷಿಸಿದುದು ನಿರ್ದೋಷವಾದುದು. ಮುಮುಕ್ಷು ಜೀವಿಗಳ ಮೋಕ್ಷಕ್ಕೆ ಸೂಚಕವಾದುದು. ಇದನ್ನು ಕೇಳಿದ ಕಪಿಲನು ಮನಸ್ಸಿನಲ್ಲಿಯೇ ಮೆಚ್ಚಿದನು. ಆತ್ಮಜ್ಞಾನಿಗಳಾದ ಸಜ್ಜನರಿಗೆ ಇವನೇ ಆಶ್ರಯನು. ಇವನ ಮುಖದಲ್ಲಿ ಮುಗುಳುನಗೆ ಮಿಂಚಿತು, ಕೇಲವೇ ಮಾತುಗಳಿಂದ ಉತ್ತರಿಸಲಾರಂಭಿಸಿದನು.

ಕಪಿಲ – ಪ್ರತಿಯೊಬ್ಬ ದೇಹಿಗಳ ದೇಹಗವಾದ ಪರಮಾತ್ಮ ಮೊದಲಾದ ತತ್ತ್ವಗಳ ಯಥಾರ್ಥ ಜ್ಞಾನವೇ ಮುಮುಕ್ಷುಗಳ ಮುಕ್ತಿಗೆ ಸಾಧನವಾಗಿ ನಿರೂಪಿತವಾಗಿರು-ವುದು. ಈ ಮೋಕ್ಷಾವಸ್ಥೆಯಲ್ಲಿ ಅಂತಃಕರಣ ಪರಿಣಾಮರೂಪವಾದ ಸುಖವಾಗಲೀ ದುಃಖವಾಗಲಿ ಇರುವುದಿಲ್ಲ. ಆದರೆ ಸ್ವರೂಪಾನಂದರೂಪವಾದ ಸುಖವು ಅನುಭವಕ್ಕೆ ಇದ್ದೇ ಇರುವುದು. ಹಿಂದೆ ಬ್ರಹ್ಮ ಮೊದಲಾದ ಜ್ಞಾನಿಗಳಿಗೆ ಹೇಳಿದ್ದ ಮೋಕ್ಷೋಪಾಯವನ್ನೇ ಮತ್ತೆ ನಿನಗಾಗಿ ಹೇಳುತ್ತೇನೆ. ಜೀವನು ಸಂಸಾರದಲ್ಲಿ ಬದ್ಧನಾಗಿರುವುದಕ್ಕೂ ಅದರಿಂದ ಮುಕ್ತನಾಗುವುದಕ್ಕೂ ಮನಸ್ಸೇ ಕಾರಣ. ಶಬ್ದ ಮೊದಲಾದ ಪ್ರಾಕೃತ ವಿಷಯಗಳಲ್ಲಿ ಆಸಕ್ತವಾದ ಮನಸ್ಸು ಬಂಧಕ್ಕೆ ಕಾರಣವಾಗುವುದು. ಪ್ರಾಕೃತಸ್ವರೂಪಿಯಾದ ಶ್ರೀಹರಿಯಲ್ಲಿ ಅನುರಕ್ತವಾದರೆ ಮುಕ್ತಿಗೆ ಕಾರಣವಾಗುವುದು. ಜೀವನು ಹೊಂದಿರುವ ನಾನು ನನ್ನದು ಎಂಬ ಅಭಿಮಾನವು ನಿಷಿದ್ಧಕಾಮ ಮತ್ತು ವಿಷಯಲೋಭ ಮೊದಲಾದವುಗಳಿಗೆ ಎಡೆಗೊಡುವುದು. ಇದೇ ಮನಸ್ಸಿನ ಕಲ್ಮಷವು. ಇದಿಲ್ಲದೆ ಶುದ್ಧವಾಗಿರುವುದು ಚಿದಾನಂದಾತ್ಮಕವಾದ ಮನಸ್ಸು. ಈ ಮನಸ್ಸಿನಿಂದ ಶ್ರೀಹರಿಯನ್ನೇ ಧ್ಯಾನಿಸುವುದರಿಂದ ಪ್ರಾಕೃತ ವಿಷಯಸುಖಗಳ ಇಚ್ಛೆಯೂ ಬರುವುದಿಲ್ಲ. ಇಲ್ಲಿ ದುಃಖಕ್ಕೆ ಕಾರಣವಿಲ್ಲ. ವಿಕ್ಷೇಪಕ್ಕೆ ಕಾರಣವಿಲ್ಲದ ಈ ಮನಸ್ಸಿನಲ್ಲಿ ಭಕ್ತಿಯೇ ತುಂಬಿ

ನಿತ್ಯಾನಂದವು ಅನುಭವಕ್ಕೆ ಬರುವುದು. ಆಗಲೇ ಈ ಮನಸ್ಸಿನಿಂದ ಬಿಂಬರೂಪಿ-ಯಾದ ಶ್ರೀಹರಿಯನ್ನು ಚೇತನನು ಕಾಣುವನು. ಹರಿಯ ಗುಣಗಳಿಗೂ ದೇಹಕ್ಕೂ ಇಂದ್ರಿಯಗಳಿಗೂ ಪರಸ್ಪರ ಭೇದವಿಲ್ಲ. ಅವನ ಅವತಾರ ರೂಪಗಳಲ್ಲಿ ಭೇದವಿಲ್ಲ. ಅವನು ಸ್ವಪ್ರಕಾಶನಾಗಿ ಅತ್ಯಂತ ಸೂಕ್ಷ್ಮವಾಗಿ ಅಂತರ್ಯಾಮಿಯಾಗಿ ಬಿಂಬರೂಪಿ-ಯಾಗಿರುವನು. ಪರಿಪೂರ್ಣನಾದ ಅವನು ಜಡಪ್ರಕೃತಿಗಭಿಮಾನಿಯಾದ ಚಿತ್ಪ್ರಕೃತಿಗಿಂತ ಉತ್ತಮನು. ಆ ಬಿಂಬರೂಪಿ ಶ್ರೀಹರಿಯನ್ನು ಕಾಣಬೇಕಾದರೆ ಅವನ ಪರಿವಾರರಾದ ಪ್ರಾಣದೇವರೇ ಮೊದಲಾದ ದೇವತೆಗಳ ಅಪರೋಕ್ಷವಾಗಿ ಅವರ ಅನುಗ್ರಹವಾಗಬೇಕು. ಆಗ ಪ್ರಕೃತಿಯ ಶಕ್ತಿಯು ಕುಗ್ಗಿಹೋಗುವುದು. ಇದಕ್ಕೆಲ್ಲ ಜ್ಞಾನ,ವೈರಾಗ್ಯಗಳಿಂದ ಕೂಡಿದ ಭಕ್ತಿಯೋಗವು ಮುಖ್ಯಸಾದನ. ಸರ್ವಸ್ವಾಮಿಯಾದ ಶ್ರೀಹರಿಯಲ್ಲಿ ಮಾಡುವ ಭಕ್ತಿ ನಿರತಿಶಯವಾಗಿರಬೇಕು. ಈ ಭಕ್ತಿಯೇ ಮೋಕ್ಷಕ್ಕೆ ಮಾರ್ಗವು. ಇದರಿಂದಲೇ ಪರಿಪೂರ್ಣನಾದ ಶ್ರೀಹರಿಯನ್ನು ಹೊಂದಲು ಸಾಧ್ಯ. ಇದಕ್ಕೆ ಸಮಾನವಾದ ಮುಕ್ತಿಮಾರ್ಗವು ಮತ್ತೊಂದಿಲ್ಲ.

ಹರಿಭಕ್ತರಲ್ಲದ ಸ್ತ್ರೀಪುತ್ರಾದಿಗಳಲ್ಲಿ ಅತ್ಯಂತ ಸ್ನೇಹವನ್ನಿಡಬಾರದು. ಈ ಅತಿ ಸ್ನೇಹವೇ ಸುದೃಢವಾದ ಬಂಧಕವಾಗಿ ಶ್ರೀಹರಿಯ ಅಪರೋಕ್ಷಕ್ಕೆ ಪ್ರತಿಬಂಧಕವಾಗಿರು-ವುದು. ಇದೇ ಅತಿ ಸ್ನೇಹವನ್ನು ಭಗವದ್ಭಕ್ತರಲ್ಲಿ ಮಾಡಬೇಕು. ಆಗ ಮೋಕ್ಷವು ಅನಾಯಾಸವಾಗಿ ಸಿದ್ಧಿಸುವುದು. ಶ್ರೀಹರಿಯ ಭಕ್ತರು ಯಾವಾಗಲೂ ದ್ವಂದ್ವಸಹಿಷ್ಣುಗಳು, ನಿರ್ನಿಮಿತ್ತವಾಗಿ ಕರುಣಾವಂತರು, ಎಲ್ಲ ಪ್ರಾಣಿಗಳಿಗೂ ಸ್ನೇಹಿತರು, ಶರೀರದೊಂದಿಗೆ ಹುಟ್ಟಿಬರುವ ಕಾಮಕ್ರೋಧಾದಿದೋಷಗಳನ್ನು ಗೆದ್ದವರು, ಹರಿಯಲ್ಲಿಯೇ ನಿಷ್ಠಾವಂತರು, ಇದನ್ನೇ ಸ್ವಭಾವವಾಗಿಉಳ್ಳವರು, ಯಥೋಚಿತ ಹರಿಭಕ್ತಿಯೇ ಭೂಷಣವಾಗಿ ಉಳ್ಳವರು. ಲಕ್ಷ್ಮೀಬ್ರಹ್ಮಾದಿಗಳಲ್ಲಿ ಮಾಡುವ ಭಕ್ತಿಗಿಂತ ಶ್ರೀಹರಿಯಲ್ಲಿಯೇ ಹೆಚ್ಚುಭಕ್ತಿ ಮಾಡುವರು, ಎಂತಹ ವಿಪತ್ತು ಬಂದರೂ ಚಲಿಸದಿರುವ ಭಕ್ತಿಯುಳ್ಳವರು, ಮಾಡುವ ಕರ್ಮಗಳನ್ನೆಲ್ಲ ಶ್ರೀಹರಿಯ ಕಥೆಯನ್ನೇ ಹೇಳಿ ಕೇಳುವರು. ಶ್ರೀಹರಿಯೇ ಸರ್ವೋತ್ತಮನೆಂಬ ದೃಢತರಜ್ಞಾನವುಳ್ಳವರು ಶಾಸ್ತ್ರಾಧ್ಯಯನ ಮಾಡುವರು. ದುಷ್ಟಸಹವಾಸದಿಂದ ದೂರವಿರುವವರು. ಮತ್ತು ತಮ್ಮ ಸಹವಾಸದಿಂದ ಇತರರಿಗೆ ದುಷ್ಟಸಂಗದೋಷವನ್ನು ಹೋಗಲಾಡಿಸುವರು. ನೀನು ಅವರ ಸಹವಾಸವನ್ನು ಪ್ರಾರ್ಥಿಸು. ಇಂತಹ ಸಜ್ಜನರ ಸಹವಾಸದಿಂದ ಯಾವಾಗಲೂ ಮನಃಕರ್ಣಗಳಿಗೆ ಆನಂದವನ್ನುಂಟುಮಾಡುವ ನನ್ನ ಪರಾಕ್ರಮಪೂರಿತ ಕಥೆಗಳೇ ಕೇಳಿಬರುವುವು. ಆ ಕಥಾಶ್ರವಣದಿಂದ ಆಸ್ತಿಕ್ಯಬುದ್ಧಿ ಹುಟ್ಟಿ ನನ್ನಲ್ಲಿ ಜಾಗ್ರತೆಯಾಗಿ ಭಕ್ತಿಯು ಹುಟ್ಟಿ ಕ್ರಮವಾಗಿ ಅಭಿವೃದ್ಧಿ

ಹೊಂದುವುದು. ಆ ಭಕ್ತಿಯಿಂದ ಜಗತ್ತು ಅಸಾರವೆಂಬ ಜ್ಞಾನ ಹುಟ್ಟುವುದು. ಅನಂತರ ಸರ್ವಸಾರನೂ ನಿರ್ದುಃಖನೂ ಆದ ಶ್ರೀಹರಿಯಲ್ಲಿ ಜ್ಞಾನಪೂರ್ವಕವಾದ ಸ್ನೇಹವು ಮತ್ತಷ್ಟು ಬೆಳೆಯುವುದು. ಅತ್ಯುತ್ತಮಾಧಿಕಾರಿಗಳು ಕಂಡ, ಅದಕ್ಕಿಂತ ಅಧಮಾಧಿಕಾರಿಗಳು ಕೇಳಿ, ತಿಳಿದ ಶ್ರೀಹರಿಯನ್ನೇ ನಿರಂತರ ಧ್ಯಾನಮಾಡುತ್ತ ಅತಿಚಂಚಲವಾದ ಮನಸ್ಸನ್ನೂ ನಿಗ್ರಹಿಸಲು ಮುಮುಕ್ಷುಗಳು ಪ್ರಯತ್ನಿಸುವರು. ಆಗ ಅವರು ಹೆಚ್ಚು ಕಷ್ಟವಿಲ್ಲದ ಯೋಗಮಾರ್ಗಗಳಿಂದ ಕೂಡಿದ ಮೋಕ್ಷಸಾಧನಗಳಿಂದ ಸ್ವೋತ್ತಮಸಂಗವನ್ನು ಹೊಂದುವರು. ಮತ್ತು ಶ್ರೀಹರಿಯ ಅಪರೋಕ್ಷಕ್ಕಾಗಿ ಮತ್ತಷ್ಟು ದೃಢತರಪ್ರಯತ್ನ ಮಾಡುವರು. ಆಗ ಅವರು ಸರ್ವಥಾ ಪ್ರಾಕೃತಗುಣಗಳ ಸೇವೆಯನ್ನು ಬಿಡುವರು. ದೃಢತರ ವೈರಾಗ್ಯವು ನೆಲೆಗೊಂಡು ದೇಹದಿಂದ ಹಿಡಿದು ಸರ್ವತ್ರ ಇರುವ ಪರಮಾತ್ಮನೇ ಮೊದಲಾದ ಎಲ್ಲ ತತ್ವಗಳ ತಾರತಮ್ಯ ಜ್ಞಾನವು ಸುವಿಶದವಾಗಿ ಅವರಲ್ಲಿ ಮೂಡುವುದು. ಇದರಿಂದ ಉಂಟಾದ ಸರ್ವೋತ್ತಮಭಕ್ತಿಯಿಂದ ಎಲ್ಲವನ್ನೂ ಶ್ರೀಹರಿಗೆ ಅರ್ಪಿಸಿ ಅವನಲ್ಲಿಯೇ ಲೀನವಾದ ಮನಸ್ಸುಳ್ಳವರಾಗುವರು. ಆಗ ಅವರು ಜೀವಾಂತರ್ಯಾಮಿಯಾಗಿ ಬಿಂಬರೂಪಿಯಾಗಿರುವ ನನ್ನನ್ನು ಪ್ರಾರಬ್ಧಕರ್ಮಪ್ರತಿಬಂಧಕವಿಲ್ಲದಿದ್ದಲ್ಲಿ ಇದೇ ಜನ್ಮದಲ್ಲಿಯೇ ಕಾಣುವರು. ಅವರ ಆ ಭಕ್ತಿಗೆ ವಶನಾಗಿ ನಾನು ಅವರಲ್ಲಿಯೇ ವಶೀಕೃತನಂತೆ ಇದ್ದುಬಿಡುವೆನು.

ದೇವಹೂತಿ – ದೇವದೇವ, ಸುಖಸ್ವರೂಪಿಯಾದ ನಿನ್ನನ್ನು ಹೊಂದಬೇಕಾದರೆ ನಾನು ನಿನ್ನಲ್ಲಿ ಎಂತಹ ಸಂತತ ಭಕ್ತಿಯನ್ನು ಮಾಡಬೇಕು ? ನನಗೆ ಶಕ್ಯವಾದ ಭಕ್ತಿಯಾವುದು ? ತತ್ವಗಳ ಯಥಾರ್ಥಜ್ಞಾನವನ್ನುಂಟುಮಾಡುವ ನೀನು ತಿಳಿಸಿದ ಯೋಗಮಾರ್ಗವಾವುದು ? ಅದರ ಅಂಗಗಳೆಷ್ಟು ? ನನ್ನ ಬುದ್ಧಿಯು ಬಹಳ ಮಂದವಾದುದು. ಹೆಂಗುಸಾದ ನನಗೆ ಹೆಚ್ಚು ಶಾಸ್ತ್ರಜ್ಞಾನವಿಲ್ಲ. ಸಾಮಾನ್ಯರಿಂದ ತಿಳಿಯಲಸಾಧ್ಯವಾದ ಯೋಗ-ಭಕ್ತಿ ಲಕ್ಷಣವನ್ನು ಸುಖವಾಗಿ ನಾನು ತಿಳಿಯುವಂತೆ ವಿಶದವಾಗಿ ತಿಳಿಯಹೇಳು.

ಶ್ರೀಹರಿಯು ತನ್ನ ಸಚ್ಚಿದಾನಂದರೂಪದಿಂದಲೇ ದೇವಹೂತಿಯಿಂದ ಕಪಿಲನಾಗಿ ಅಭಿವ್ಯಕ್ತನಾಗಿದ್ದನು. ಈ ದೃಷ್ಟಿಯಿಂದ ತಾಯಿಯೆನಿಸಿದ್ದ ಆ ಭಕ್ತಳ ಉತ್ಸಾಹವನ್ನು ಆತನು ಮನಗಂಡನು. ಭಗವಂತನಲ್ಲಿ ಮಾಡುವ ಭಕ್ತಿಯ ಲಕ್ಷಣಗಳನ್ನು ತಿಳಿಯಬಯಸಿದ ಆಕೆಗೆ ಭಕ್ತಿಯೋಗವನ್ನು ವಿಸ್ತರಿಸುವ ಸಾಂಖ್ಯವೆನಿಸಿದ ತತ್ತ್ವಶಾಸ್ತ್ರವನ್ನೇ ವಿಸ್ತರಿಸಿ ಹೇಳತೊಡಗಿದನು.

ಕಪಿಲ - ಸರ್ವಗುಣ ಪರಿಪೂರ್ಣನಾದ ಶ್ರೀಹರಿಯಲ್ಲಿ ಏಕಾಗ್ರವೂ ಸ್ವಾಭಾವಿಕವೂ ಗಂಗಾ ಪ್ರವಾಹದಂತೆ ಸಂತತವೂ ಆದ ಮನೋವ್ಯಾಪಾರವೇ ಭಕ್ತಿ ಎನಿಸುವುದು. ಇಂದ್ರಿಯಾಭಿಮಾನಿಗಳು ಪ್ರತಿಯೊಬ್ಬನಲ್ಲಿಯೂ ಇದ್ದುಕೊಂಡು ಅವನ ಶಬ್ದ ಮೊದಲಾದ ಗುಣಗಳನ್ನು ತಿಳಿಸುವರು. ಅವನಿಂದ ವೇದೋಕ್ತ ಕರ್ಮಗಳನ್ನು ಮಾಡಿಸುವರು. ಇವರು ಶ್ರೀಹರಿಯಲ್ಲಿ ಸ್ವಾಭಾವಿಕವಾಗಿ ಮೇಲೆ ಹೇಳಿದ ಭಕ್ತಿಯನ್ನು ಮಾಡುವರು. ಏಕಾಂತ ಭಕ್ತರಾದ ಇವರು ಯಾವ ಫಲವನ್ನೂ ಅಪೇಕ್ಷಿಸುವುದಿಲ್ಲ. ಇವರ ಭಕ್ತಿಯು ಸಾಮಾನ್ಯರ ಮುಕ್ತಿಗಿಂತಲೂ ಉತ್ತಮವಾದುದು. ಶ್ರೀಹರಿಯಲ್ಲಿ ಮಾಡುವ ಭಕ್ತಿಯು ಲಿಂಗಶರೀರವನ್ನು ಅಸಮರ್ಥವನ್ನಾಗಿ ಮಾಡುವುದು. ಜಠರಾಗ್ನಿಯು ಪ್ರಾಣಿಯು ತಿಂದ ಆಹಾರವನ್ನು ಜೀರ್ಣಗೊಳಿಸು-ವಂತೆ ಇದು ಲಿಂಗಶರೀರವನ್ನು ಜೀರ್ಣಗೊಳಿಸುವುದು. ತತ್ವಾಭಿಮಾನಿದೇವತಾ ಭಕ್ತಿಗಿಂತ ದೇವತಾಸಾಮಾನ್ಯರ ಭಕ್ತಿಯು ತಾರತಮ್ಯದಲ್ಲಿ ಕಡಿಮೆಯಾದುದು. ಅದಕ್ಕಿಂತ ವೇದೋಕ್ತ ಕರ್ಮಾನುಷ್ಠಾನಮಾಡಿಕೊಂಡಿರುವ ಮುಕ್ತಿಯೋಗ್ಯರು ಮಾಡುವ ಭಕ್ತಿಯು ಇನ್ನೂ ಕಡಿಮೆಯಾದುದು. ಆದರೆ ಇವೆಲ್ಲವೂ ಸಂತತವಾಗಿದ್ದು ಫಲಾಪೇಕ್ಷೆಯಿಲ್ಲದೆ ಇರುವುವು. ಈ ಕೊನೆಯ ಅಧಮಾಧಿಕಾರಿಗಳ (ಸಾಮಾನ್ಯರ) ಭಕ್ತಿಯು ಅವರ ಮುಕ್ತಿಗೆ ಮುಖ್ಯಸಾಧನ. ಮಧ್ಯಮ ಮತ್ತು ಉತ್ತಮಾಧಿಕಾರಿಗಳ ಭಕ್ತಿಯು ಮುಕ್ತಿಗೆ ಮುಕ್ತಿಸಾಧನವಷ್ಟೇ ಅಲ್ಲ, ಅಧಮಾಧಿ ಕಾರಿಗಳ ಮುಕ್ತಿಗಿಂತಲೂ ಉತ್ತಮವೂ ಅಹುದು. ಉತ್ತಮಾಧಿಕಾರಿಗಳು ಪರಸ್ಪರ ಸೇರಿ ಶ್ರೀಹರಿಯ ಪರಾಕ್ರಮಗಳನ್ನು ಭಕ್ತಿಗೌರವಗಳಿಂದ ಹೇಳುವರು ಮತ್ತು ಕೇಳುವರು. ಅವರಿಗೆ ಶ್ರೀಹರಿಯನ್ನು ಸೇವಿಸುವುದರಲ್ಲಿಯೇ ಆಸಕ್ತಿ. ಅವರಿಗೆ ಶ್ರೀಹರಿಯು ವಿನಹ ಮತ್ತೊಂದು ಪದಾರ್ಥದ ಅಪೇಕ್ಷೆಯಿಲ್ಲ. ಅವರಿಗೆ ಶ್ರೀಹರಿಯು ಸಾಯುಜ್ಯ ಮೋಕ್ಷವನ್ನು ಕೊಡುವನು. ಅದನ್ನೂ ಅವರು ಶ್ರೀಹರಿಯ ಆಜ್ಞೆಯೆಂದೇ ಅಂಗೀಕರಿಸುವರು. ಹೀಗಿರುವುದರಿಂದಲೇ ಅವರಿಗೆ ಮುಕ್ತಿಯಲ್ಲಿ ಆನಂದವು ಅಧಿಕವಾಗಿರುವುದು. ಅವರು ಶ್ರೀಹರಿಯ ಅಪ್ರಾಕೃತರೂಪಗಳನ್ನು ಕಂಡು ಸುಖಿಸುವರು. ಶ್ರೀಹರಿಯ ಪ್ರಸನ್ನವಾದ ಮುಖ, ಕೆಂಪಗಿರುವ ಕಣ್ಣುಗಳು, ಭಕ್ತರನ್ನು ಆಕರ್ಷಿಸುವ ಸೌಂದರ್ಯ ಇವುಗಳನ್ನು ನೋಡುವುದೇ ಅಲ್ಲದೆ ಅವನೊಂದಿಗೆ ಸಲ್ಲಾಪಮಾಡುವರು. ಆ ನನ್ನ ರೂಪಗಳಲ್ಲಿನ ವಿಲಾಸ, ನಗು, ನೋಟ ಮತ್ತು ಮಾತುಗಳಿಂದ ಅವರ ಮನಸ್ಸೇ ಅಪಹೃತವಾಗುವುದು. ಹೀಗೆ ಎಲ್ಲ ಇಂದ್ರಿಯಗಳಿಂದಲೂ ನನ್ನನ್ನೇ ವಿಷಯೀಕರಿಸುವ ಅವರು ನನ್ನಲ್ಲಿ ಭಕ್ತಿಯನ್ನು ಅಪೇಕ್ಷಿಸುವರೇ ವಿನಹ ಮತ್ತೊಂದನ್ನು ಅಪೇಕ್ಷಿಸುವುದಿಲ್ಲ. ಅವರ ಆ ಸಂತತಭಕ್ತಿಗೆ ಪ್ರಸನ್ನನಾದ ನಾನು ಅವರಿಗೆ

ಸಾಯುಜ್ಯರೂಪವಾದ ಮೋಕ್ಷವನ್ನೇ ಅನುಗ್ರಹಿಸುತ್ತೇನೆ. ಅವರು ನನ್ನಿಂದಲೇ ನಿರ್ಮಿತವಾದ ಲೌಕಿಕರಾಜ್ಯಾದಿ ಸಂಪತ್ತನ್ನಾಗಲೀ ಯೋಗಾಭ್ಯಾಸದ ಸಿದ್ಧಿಯಾಗಿ ಬಂದ ಅಣಿಮಾ ಮೊದಲಾದ ಸಿದ್ಧಿಗಳನ್ನಾಗಲೀ ನನ್ನ ಭಕ್ತರಲ್ಲದವರು ಅಪೇಕ್ಷಿಸುವ ಯಾವ ಬಗೆಯ ಸಂಪತ್ತನ್ನೇ ಆಗಲಿ ಮನಸ್ಸಿನಿಂದಲೂ ಆಶಿಸುವುದಿಲ್ಲ. ಹೀಗೆ ದೃಢವಾದ ವೈರಾಗ್ಯದಿಂದ ಕೂಡಿದ ನಿರತಿಶಯ ಭಕ್ತಿಯನ್ನು ತೋರಿದ ಅವರಿಗೆ ನನ್ನ ದೇಹವನ್ನೇ ವ್ಯಾಪಿಸಿಕೊಂಡಿರುವಂತೆ ಅನುಗ್ರಹಿಸುವೆನು. ನನ್ನ ಸಚ್ಚಿದಾನಂದಾತ್ಮಕ ದೇಹದಲ್ಲಿ ಇದ್ದುಕೊಂಡೇ ತಮ್ಮ ಸ್ವರೂಪ ಸುಖಗಳನ್ನು ಅನುಭವಿಸುವರು. ಲೋಕವಿಲಕ್ಷಣವಾದ ಮುಕ್ತಿಯಲ್ಲಿ ಇದೇನೂ ಅಸಂಭಾವಿತವಲ್ಲ. ಇದೇ ಸಾಯುಜ್ಯಮುಕ್ತಿ. ಇವರಿಗಿಂತ ಸ್ವಲ್ಪ ಕಡಿಮೆಯಧಿಕಾರಿಗಳಾದ ಮುಕ್ತಿಯೋಗ್ಯರು ಅವರ ಯೋಗ್ಯತಾನುಗುಣವಾಗಿ ವೈರಾಗ್ಯವನ್ನು ಹೊಂದಿ ಐಹಿಕ ಸಂಪತ್ತನ್ನಪೇಕ್ಷಿಸದೆ ನಶ್ವರಗಳಾದ ಸ್ವರ್ಗ ಮೊದಲಾದುವನ್ನೂ ಅಪೇಕ್ಷಿಸದೆ ಪರಮೋಪಕಾರಿಯಾದ ನನ್ನನ್ನು ಎಲ್ಲ ವಸ್ತುಗಳಿಗಿಂತ ಪ್ರಿಯನೆಂದು ಸೇವಿಸುವರು. ಇವರು ನನ್ನ ವೈಕುಂಠಲೋಕದಲ್ಲಿ ಶಾಶ್ವತ ಸುಖವನ್ನು ಅನುಭವಿಸುವರು. ಇದೇ ಸಾಲೋಕ್ಯ ಮೋಕ್ಷವು. ನನ್ನಲ್ಲಿಯೇ ಆಸಕ್ತರೂ ನನ್ನಲ್ಲಿ ಮನೋನಿಷ್ಠೆಯೇ ಸ್ವರೂಪವಾಗಿ ಉಳ್ಳವರೂ ಆದ ಈ ಮುಕ್ತರಿಗೆ ಎಂದೂ ನಾಶವಿಲ್ಲ. ಇವರಿಗೆ ನಾನು ಪ್ರಿಯನು, ಸ್ವಾಮಿಯು, ಮಗನು, ತಂದೆಯು, ಸ್ನೇಹಿತನು, ಉಪದೇಶಕನು, ಅನಿಮಿತ್ತ ಬಂಧುವು ಮತ್ತು ಇಷ್ಟದೇವತೆಯಾಗಿರುವೆನು. ಹೀಗೆ ಎಲ್ಲ ರೀತಿಯಿಂದ ನನ್ನನ್ನು ಉಪಾಸಿಸುವ ಅವರಿಗೆ ಕಾಲಚಕ್ರದಿಂದ ಭಯವಿಲ್ಲ. ಅವರು ಶಾಶ್ವತವಾಗಿ ನನ್ನ ಲೋಕದಲ್ಲಿ ಸುಖವನ್ನನುಭವಿಸುತ್ತಾ ಇದ್ದುಬಿಡುವರು.

ಹೆಚ್ಚೇನು ? ಈ ಪ್ರಪಂಚವನ್ನು ನಶ್ವರವೆಂದು ತಿಳಿದು ಜೀವನು ಕರ್ಮಾನುಗುಣವಾಗಿ ಭೂಲೋಕ ಸ್ವರ್ಗಲೋಕಾದಿಗಳನ್ನು ಚರಿಸುವನೆಂದೂ, ಈ ಲೋಕದ ಅನುಬಂಧಿಗಳಾದ ಹೆಂಡತಿ ಮಕ್ಕಳೂ ಮನೆ, ದನ, ಸಂಪತ್ತುಗಳೂ ಈ ಎಲ್ಲ ವಸ್ತುಗಳೂ ಶ್ರೀಹರಿಯ ಅನುಗ್ರಹದಿಂದ ಈ ಜನ್ಮಕ್ಕೆ ಒದಗಿಬಂದವುಗಳಾದ್ದ-ರಿಂದ ಅವನಿಗೇ ಸೇರಿದವುಗಳೆಂದೂ ಭಾವಿಸಿ ಸರ್ವೋತ್ತಮನೂ ಸರ್ವಜ್ಞನೂ ಆದ ಶ್ರೀಹರಿಯನ್ನು ಅತ್ಯುತ್ತಮಭಕ್ತಿಯಿಂದ ಸೇವಿಸುವ ಭಕ್ತರನ್ನು ನಾನು ಸಂಸಾರದಿಂದ ದಾಟಿಸಿ ನನ್ನನ್ನು ಹೊಂದಿಸುವೆನು. ಮುಕ್ತರನ್ನು ಮಾಡುವೆನು. ಚೇತನ ಪ್ರಕೃತಿ ಎನಿಸಿದ ಲಕ್ಷ್ಮಿಗೂ, ಪುರುಷನೆಂದು ಕರೆಸಿಕೊಳ್ಳುವ ಬ್ರಹ್ಮದೇವರಿಗೂ ನಿಯಾಮಕ-ನಾಗಿ ಜೀವರ ಕರ್ಮಗಳಿಗೆ ತಕ್ಕ ಫಲವನ್ನು ಕೊಡುವ ನಾನೇ ಎಲ್ಲ ಜೀವರ ಸಂಸಾರ ಭಯವನ್ನು ಹೋಗಲಾಡಿಸುವವನು. ಮತ್ತೊಬ್ಬನಿಂದ ಈ ಸಂಸಾರವು ನಿವೃತ್ತಿ-

ಯಾಗುವುದಿಲ್ಲ. ದೇವತೆಗಳು ತಮ್ಮ ತಮ್ಮ ಅಧಿಕಾರದಲ್ಲಿ ಪ್ರವೃತ್ತರಾಗಿರುವುದೂ ನನ್ನಿಂದಲೇ. ನನ್ನ ಭಯದಿಂದಲೇ ಗಾಳಿಯು ಬೀಸುವನು, ಸೂರ್ಯನು ತಪಿಸುವನು, ಇಂದ್ರನು ಮಳೆಸುರಿಸುವನು, ಬೆಂಕಿಯು ಸುಡುವನು ಮತ್ತು ಮೃತ್ಯುವು ಪ್ರಾಣಿಗಳನ್ನು ಸಂಹರಿಸುವನು. ಆದ್ದರಿಂದಲೇ ಇದನ್ನು ಬಲ್ಲ ಜ್ಞಾನಿಗಳು ಯಾರ ಭಯದಿಂದಲೂ ಪ್ರವೃತ್ತನಾಗದ ನನ್ನನ್ನೇ ಮೋಕ್ಷಕ್ಕಾಗಿ ಸೇವಿಸುವರು. ಅವರು ಜ್ಞಾನ ವೈರಾಗ್ಯಗಳಿಂದ ಕೂಡಿದ ಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುವರು. ಅಧಿಕಾರಿ ಜೀವರಿಗೆ ಮೋಕ್ಷವನ್ನು ಹೊಂದಲು ಇರುವ ಮುಖ್ಯವಾದ ಒಂದೇ ಒಂದು ಉಪಾಯವೆಂದರೆ ದೃಢತರವೂ ಸರ್ವೋತ್ತಮವೂ ಆದ ಭಕ್ತಿಯಿಂದ ನನ್ನಲ್ಲಿ ಸ್ಥಿರವಾಗಿ ಮನಸ್ಸನ್ನಿಡುವುದು.



# ಅಥ ಸಪ್ತವಿಂಶೋऽಧ್ಯಾಯಃ

ಈ ಅಧ್ಯಾಯದಲ್ಲಿ ಪ್ರತಿಜ್ಞಾತವಾದ ತತ್ವಗಳನ್ನು ಹೇಳುವೆನೆಂದು ಪ್ರತಿಜ್ಞೆ ಮಾಡುವನು.

**ಭಗವಾನುವಾಚ**

**ಅಥ ತೇ ಸಂಪ್ರವಕ್ಷ್ಯಾಮಿ ತತ್ವಾನಾಂ ಲಕ್ಷಣಂ ಪೃಥಕ್ ।**
**ಯದ್ ವಿದಿತ್ವಾ ವಿಮುಚ್ಯೇತ ಪುರುಷಃ ಪ್ರಾಕೃತೈರ್ಗುಣೈಃ ॥೧॥**

ಅಥ=ಭಕ್ತಿಯ ಅಂಶವಾದ ಸ್ನೇಹವನ್ನು ನಿರೂಪಣೆ ಮಾಡಿದನಂತರ, ತೇ=ನಿನಗೆ, ಪುರುಷಃ=ಅಧಿಕಾರಿಯು, ಯದ್ ವಿದಿತ್ವಾ=ಯಾವುದನ್ನು ತಿಳಿದು, ಪ್ರಾಕೃತೈಃ ಗುಣೈಃ=ಸತ್ವರಜಸ್ತಮೋಗುಣಗಳಿಂದ, ವಿಮುಚ್ಯೇತ=ವಿಶೇಷವಾಗಿ ಮುಕ್ತನಾಗುವನೋ ಅಂಥ, ತತ್ವಾನಾಂ=ಪರಾಪರ ತತ್ವಗಳ, ಲಕ್ಷಣಂ=ಅಸಾಧಾರಣ ಧರ್ಮವನ್ನು, ಪೃಥಕ್=ಪ್ರತ್ಯೇಕವಾಗಿ ಸಂಪ್ರವಕ್ಷ್ಯಾಮಿ=ಹೇಳುವೆನು. (ಭಕ್ತಿಯಲ್ಲಿ ಎರಡು ಅಂಶಗಳಿವೆ. ಮಹಾತ್ಮ್ಯಜ್ಞಾನ, ಸ್ನೇಹ ಎಂದು. ಹಿಂದಿನ ಅಧ್ಯಾಯದಲ್ಲಿ ಸ್ನೇಹವನ್ನು ನಿರೂಪಣೆ ಮಾಡಿ, ಈ ಅಧ್ಯಾಯದಲ್ಲಿ ಮಹಾತ್ಮ್ಯಜ್ಞಾನವನ್ನು ನಿರೂಪಣೆ ಮಾಡುತ್ತಿದ್ದಾರೆ.) ॥೧॥

**ಜ್ಞಾನಂ ನಿಃಶ್ರೇಯಸಾರ್ಥಾಯ ಪುರುಷಸ್ಯಾತ್ಮದರ್ಶನಮ್ ।**
**ಯದಾಹುರ್ವರ್ಣಯೇ ತತ್ ತೇ ಹೃದಯಗ್ರಂಥಿಭೇದನಮ್ ॥೨॥**

ಪುರುಷಸ್ಯ=ಅಧಿಕಾರಿಗೆ, ನಿಶ್ರೇಯಸಾರ್ಥಾಯ=ಮೋಕ್ಷಸಾಧನವೆಂದು, ಯದಾಹುಃ=ಯಾವುದನ್ನು ಹೇಳಿರುವರೋ, ತತ್ ಆತ್ಮದರ್ಶನಂ=ಪರಮಾತ್ಮ-ಜ್ಞಾನ ಮಾಡಿಕೊಡುವ, ಜ್ಞಾನಂ=ತತ್ವಗಳ ಜ್ಞಾನವು ಹೃದಯಗ್ರಂಥಿಭೇದನಂ=ಅಹಂಕಾರ ಮಮಕಾರ ನಿವರ್ತಕವಾದುದು, ತತ್=ಅದನ್ನು, ತೇ=ನಿನಗೆ, ವರ್ಣಯೇ=ಹೇಳುವೆನು. ತತ್ವಗಳಿಂದ ಭಿನ್ನನು, ತತ್ವಗಳ ಸೃಷ್ಟ್ಯಾದಿ ಕರ್ತೃವು ಪರಮಾತ್ಮಾ ಎಂಬ ಜ್ಞಾನವು ಮೋಕ್ಷಸಾಧನವಾಗಿದೆ. ತತ್ವಗಳ ಸ್ವರೂಪಜ್ಞಾನವೇ ಇಲ್ಲವಾದರೆ ಈ ವಿಧವಾದ ಜ್ಞಾನವಾಗಲಾರದು. ಕಾರಣ ತತ್ವಗಳ ಜ್ಞಾನವೂ ಮೋಕ್ಷಸಾಧನವೆಂದು ಹೇಳಿದೆ ಸ್ವತಂತ್ರತತ್ವ ಹೇಳಬಹುದು. ॥೨॥

**ಅನಾದಿರಾತ್ಮಾ ಪುರುಷೋ ನಿರ್ಗುಣಃ ಪ್ರಕೃತೇಃ ಪರಃ ।**
**ಪ್ರತ್ಯಗ್ಧಾಮಾ ಸ್ವಯಂಜ್ಯೋತಿರ್ವಿಶ್ವಂ ಯೇನ ಸಮನ್ವಿತಂ ॥೩॥**

ಅನಾದಿಃ=ಜನನ-ಮರಣಶೂನ್ಯನು, ಆತ್ಮಾ=ಸರ್ವಾದಾನಾದಿಕರ್ತಾ(ಸ್ವತಂತ್ರನೆಂದರ್ಥ).ಪುರುಷಃ=ಅಭೀಷ್ಟಪ್ರದನು, ನಿರ್ಗುಣಃ=ಸತ್ವಾದಿಗುಣ ವಿಕಾರವಿಲ್ಲದವನು, ಪ್ರಕೃತೇಃಪರಃ=ಚೇತನಾಚೇತನಪ್ರಕೃತಿಗಿಂತ ಉತ್ತಮನು, ಪ್ರತ್ಯಗ್ಧಾಮಾ=ಜೀವಸ್ವರೂಪವೇ ಆಶ್ರಯವಾಗಿವುಳ್ಳ, (ಸರ್ವಜೀವಾಂತರ್ಯಾಮಿ ಎಂದರ್ಥ) ಸ್ವಯಂಜ್ಯೋತಿಃ=ಅನ್ಯಾನಪೇಕ್ಷವಾಗಿ ಸರ್ವಜ್ಞನಾದವನು ವಿಶ್ವಂ=ಸರ್ವಪ್ರಪಂಚವು, ಯೇನ ಸಮನ್ವಿತಂ=ಯಾರಿಂದ ವ್ಯಾಪ್ತವಾಗಿದೆ. ಕೇವಲ ಅಂತರ್ನಿಯಾಮಕನಲ್ಲ ಹೊರಗೂ ವ್ಯಾಪ್ತನಾಗಿದ್ದಾನೆ ಎಂದು ಭಾವ. ॥೩॥

ಭಗವಂತನು ಜನನ ಮರಣಗಳಿಲ್ಲದವನು ಎಂಬ ವಿಷಯದಲ್ಲಿ ಶ್ರುತಿಯೇ ಪ್ರಮಾಣ ಎಂಬ ಅಭಿಪ್ರಾಯದಿಂದ ಶ್ರುತ್ಯರ್ಥವನ್ನು ಅನುವಾದ ಮಾಡುವರು-

**ನ ಜಾತೋ ನ ಮ್ರಿಯೇತಾತ್ಮಾ ಸ ಹಿ ದೇಹಾದ್ಯುಪಾಧಿಭಿಃ ।**
**ನಿಮಿತ್ತೈರಾತ್ತತದ್ಧರ್ಮಾ ಯಥಾ ಸ್ವಪ್ನೇ ತದೀಕ್ಷಿತಾ ॥೪॥**

ಸ್ವಪ್ನೇ=ಕನಸಿನಲ್ಲಿ ತದೀಕ್ಷಿತಾ=ಕನಸು ಕಾಣುವವನು, ಯಥಾ=ಹೇಗೆ ವಾಸನಾಮಯದೇಹಧರ್ಮಗಳಾದ ಜನನ-ಮರಣಗಳನ್ನು ತನ್ನ ದೇಹದಲ್ಲಿ ಇಲ್ಲದಿರುವುಗಳನ್ನು ತನ್ನ ದೇಹಧರ್ಮಗಳೆಂದು ತಿಳಿಯುವನೋ ತಥಾ=ಹಾಗೆ, ದೇಹಾದ್ಯುಪಾದಿಭಿಃ ನಿಮಿತ್ತೈಃ=ಅಸ್ವಾಭಾವಿಕವಾದ,ದೇಹೇಂದ್ರಿಯ ನಿಮಿತ್ತಕವಾದ ಜನನ-ಮರಣ ಪ್ರಸಕ್ತಿಯುಳ್ಳವನು ಹೊರತು ಸ್ವಾಭಾವಿಕವಲ್ಲ. ಆತ್ತತದ್ಧರ್ಮಾ=ಸ್ವೀಕೃತದೇಹಧರ್ಮವಾದ ಜನನ-ಮರಣವುಳ್ಳವನು. ಆತ್ಮಾಪಿ=ಜೀವನು ಕೂಡ ಯದಾ=ಯಾವಾಗ ಭ್ರಾಂತ್ಯಾ=ಭ್ರಾಂತಿಯಿಂದ ಜಾತಃ ಮೃತಃ=ಹುಟ್ಟಿದನು ಸತ್ತನು ಎಂದು ತೋರುವನು. ಸ್ವರೂಪತಃ ನಿತ್ಯನಾದ್ದರಿಂದ ನ ಜಾತಃ ನ ಮ್ರಿಯತೇ=ಹುಟ್ಟಿಲ್ಲ ಸಾಯುವುದಿಲ್ಲ. ಅಂದ ಮೇಲೆ ಸರ್ವಜ್ಞ ಸ್ವತಂತ್ರ ಜೀವವಿಲಕ್ಷಣನಾದ ಶ್ರೀಹರಿಗೆ ಅಸ್ವಾಭಾವಿಕ ದೇಹಸಂಬಂಧವೂ ಇಲ್ಲದಿರುವುದರಿಂದ ದೇಹ ಧರ್ಮಗಳಾದ ಜನನ-ಮರಣಗಳ ಪ್ರಸಕ್ತಿಯೇ ಇಲ್ಲ. ಕಾರಣ ಈಶ್ವರನು ಭ್ರಾಂತಿಯಿಂದಲೇ ಹುಟ್ಟುವನು ಸಾಯುವನು ಎಂದು ತೋರುವನು ಎನ್ನುವುದು ಕೈಮುತ್ಯ ಸಿದ್ಧವೆಂದು ಭಾವ.

ಆಚಾರ್ಯರು ಈ ಶ್ಲೋಕಾರ್ಥಕ್ಕೆ ಮೂಲವಾದ ಶ್ರುತಿಸ್ವರೂಪವನ್ನು ಉದಾಹರಿಸುವರು -

**'ಸ ಪರಮಃ ನ ಜಾಯತೇ ನ ಮ್ರಿಯತ' ಇತಿ ಪ್ರಸಿದ್ಧಂ ಹಿ ।**

ಪರಮಾತ್ಮನು ಹುಟ್ಟುವುದಿಲ್ಲ ಸಾಯುವುದಿಲ್ಲ ಎಂದು ಹೇಳುವ ಶ್ರುತಿಯ ಸ್ವರೂಪವು ಪ್ರಸಿದ್ಧವಾಗಿದೆ.

ಉದಾಹರಿಸಿದ ಶ್ರುತಿಯಿಂದ ಭಗವಂತನಿಗೆ ಜನನ ಮರಣಗಳಿಲ್ಲವೆಂದು ಸಿದ್ಧವಾಗಲಾರದು. ಅವತಾರಗಳಲ್ಲಿ ಜನ್ಮ ಮರಣಗಳು ಪ್ರತ್ಯಕ್ಷಕಾಣುವುವು ಎಂಬ ಶಂಕೆಗೆ ಕೈಮುತ್ಯನ್ಯಾಯಸಿದ್ಧವದು ಎಂದು ಮೂಲದಲ್ಲಿ ಹೇಳಿದ ಕೈಮುತ್ಯವನ್ನು ಜೀವೋಽಪಿ ಎಂಬ ಪದ ಅಧ್ಯಾಹಾರ ಮಾಡಿ ತೋರಿಸುವರು–

**ದೇಹಾದ್ಯುಪಾಧಿಭಿಃ ಆತ್ತಧರ್ಮಾ ಜೀವೋಪಿ ಸ್ವಪ್ನವದ್ ಭ್ರಾಂತ್ಯಾ ಜಾಯತೇ ಮ್ರಿಯತೇ ಚ । ಭ್ರಾಂತಿತ್ವಾದ್ದೇಹಾತ್ಮತ್ವಸ್ಯ । ಕಿಮು ಸರ್ವಜ್ಞತ್ವಸ್ವತಂತ್ರತ್ವಾದಿವೈಲಕ್ಷಣ್ಯ-ಯುಕ್ತ ಈಶ್ವರಃ ।**

ಅಸ್ವತಂತ್ರನಾದ ಜೀವನೂ ಸಹ ದೇಹಾದಿಸಂಬಂಧದಿಂದ ದೇಹಧರ್ಮಗಳನ್ನು ಸ್ವೀಕರಿಸಿದವನಾಗಿ ಸ್ವಪ್ನದಲ್ಲಿಯಂತೆ ಹುಟ್ಟುವನು ಸಾಯುವನು ಎಂದು ಭ್ರಾಂತಿಯಿಂದ ತೋರುವನು. ಅಂದಮೇಲೆ ಸ್ವತಂತ್ರಸರ್ವಜ್ಞನಾದ ಶ್ರೀಹರಿಯು ಜನಿಸಿದನು ಮೃತನಾದನು ಎಂದು ಭ್ರಾಂತಿಯಿಂದ ತೋರುವನೆಂದೇನು ಪ್ರತ್ಯೇಕ ಹೇಳಬೇಕಿಲ್ಲ. ಅದು ಸಿದ್ಧ. ಬುದ್ಧಿವಂತ ತನ್ನ ಅಧೀನವಾದ ಸಾಧನಗಳಿಂದ ತನ್ನನ್ನು ದುಃಖಿಯನ್ನಾಗಿ ಮಾಡಿಕೊಳ್ಳುವುದಿಲ್ಲ. ಇನ್ನು ಚಾರ್ವಾಕರು ಹೇಳುವಂತೆ ದೇಹವೇ ಆತ್ಮಾ ಎಂದು ಹೇಳುವುದು ಸರಿಯಲ್ಲ. ಅವರ ವಾದವು ಭ್ರಾಂತಿಕಲ್ಪಿತವು.

**ಪರಸ್ಯ ಜನ್ಮಮೃತ್ಯಾದ್ಯಾ ಸ್ಯುಃ ಸ್ವತಂತ್ರಸ್ಯ ಕಿಂ ಪುನಃ ।**
**ಜೀವಸ್ಯಾಪಿ ಯತೋ ಭ್ರಾಂತ್ಯಾ ಜನ್ಮಮೃತ್ಯಾದಿಸಂಗತಿಃ ॥**

**ಇತಿ ಮಹಾಕೌರ್ಮೇ ।**

ಸ್ವತಂತ್ರನಾದ ಸರ್ವೋತ್ತಮನಾದ ಶ್ರೀಹರಿಗೆ ಜನ್ಮ ಮರಣಗಳು ಭ್ರಾಂತಿಯಿಂದ ತೋರುವುವು ಎಂದು ಮತ್ತೇನು ಹೇಳುವುದು ! ಜೀವನಿಗೆ ಯಾವ ಕಾರಣ ಜನ್ಮ ಮರಣ ಸಂಬಂಧ ಭ್ರಾಂತಿಯಿಂದ ತೋರುವುದು, ಎಂದು ಮಹಾಕೂರ್ಮದಲ್ಲಿ ಹೇಳಿದೆ. ॥೪॥

**ಸ ಏವ ಪ್ರಕೃತಿಂ ಸೂಕ್ಷ್ಮಾಂ ದೇವೀಂ ಗುಣಮಯೀಂ ವಿಭುಃ ।**
**ಯದೃಚ್ಛಯೈವೋಪಗತಾಮಭ್ಯಪದ್ಯತ ಲೀಲಯಾ ॥೫॥**

ಸಃ ಏವ=ಹಿಂದೆ ಅನಾದಿ ಸ್ವತಂತ್ರನೆಂದು ಹೇಳಿದ, ವಿಭುಃ=ವ್ಯಾಪ್ತನಾದ ಸಮರ್ಥನಾದ ಶ್ರೀಹರಿಯು,ಸೂಕ್ಷ್ಮಾಂ=ಅವ್ಯಕ್ತವಾದ, ಗುಣಮಯೀಂ=ಸತ್ವಾದಿ-

ಗುಣಾತ್ಮಕವಾದ ಮತ್ತು ತದಭಿಮಾನಿಯಾದ, ದೇವೀಂ=ಪ್ರಕಾಶಮಾನವಾದ, ಯದೃಚ್ಛಯಾ ಉಪಗತಾಂ=ಶ್ರೀಹರಿಯ ಇಚ್ಛೆಯ ಪ್ರಕಾರ ಸರ್ವದಾ ತನ್ನ ಹತ್ತಿರವಿರುವ ಪ್ರಕೃತೀಂ=ಚೇತನಾಚೇತನಪ್ರಕೃತಿಯನ್ನು, ಲೀಲಯಾ=ಕ್ರೀಡಾರೂಪ-ವಾಗಿ ಅಭ್ಯಪದ್ಯತ=ಸೃಷ್ಟ್ಯಾದಿ ವ್ಯಾಪಾರಾಭಿಮುಖವನ್ನಾಗಿ ಮಾಡಿದನು ಎಂದರ್ಥ.

ಉಪಗತಾಂ ಎಂಬುದಕ್ಕೆ ಸಮೀಪಕ್ಕೆ ಬಂದ ಎಂದರ್ಥವಾಗುವುದು ಕಾರಣ ವ್ಯಾಖ್ಯಾನಿಸುವರು -

**ಉಪಗತಾಂ ಸಮೀಪಸ್ಥಾಂ ।**

ಸರ್ವದಾ ಸಮೀಪದಲ್ಲಿರುವ ಎಂದರ್ಥ ॥೫॥

ಭಗವಂತನ ಲೀಲೆಯನ್ನು ತಿಳಿಸುವರು -

**ಗುಣೈರ್ವಿಚಿತ್ರಾಃ ಸೃಜತೀಂ ಸರೂಪಾಃ ಪ್ರಕೃತಿಂ ಪ್ರಜಾಃ ।**
**ವಿಲೋಕ್ಯ ಮುಮುಹೇ ಸದ್ಯಃ ಸ ಇಹ ಜ್ಞಾನಗೂಹಯಾ ॥೬॥**

ಗುಣೈಃ=ಸತ್ವಾದಿಗುಣಗಳಿಂದ ವಿಚಿತ್ರಾಃ=ಸಾತ್ವಿಕರಾಜಸತಾಮಸವೆಂಬ ಅನೇಕ ಪ್ರಕಾರವಾದ, ಸರೂಪಾಃ=ಕರಚರಣಾದಿಗಳಿಂದ ಸಮಾನರೂಪವುಳ್ಳ ಪ್ರಜಾಃ= ಜನರನ್ನು(ಕಾರ್ಯ)ಸೃಜತೀಂ=ನಿರ್ಮಿಸುವ ಪ್ರಕೃತಿಂ ಅವಲೋಕ್ಯ=ಪ್ರಕೃತಿಯನ್ನು ನೋಡಿ (ಅವಳಿಂದಾದ ಜಗತ್ಸೃಷ್ಟಿಯನ್ನು ನೋಡಿ) ಸಃ=ಸ್ವತಂತ್ರನಾದ ಶ್ರೀಹರಿಯು, ಇಹ=ಸಂಸಾರದಲ್ಲಿ ಜ್ಞಾನಗೂಹಯಾ=ಜೀವನಸ್ವರೂಪಜ್ಞಾನಕ್ಕೆ ಆಚ್ಛಾದಕವಾದ ಪ್ರಕೃತಿಯಿಂದ ಆ ಪ್ರಕೃತಿಯುಂದುಂಟಾದ ಸ್ಥೂಲದೇಹದಿಂದ, ಎಂದರ್ಥ, ಸದ್ಯಃ= ಸ್ಥೂಲದೇಹಬಂದತಕ್ಷಣವೇ,ಮುಮುಹೇ=ಅಲ್ಲಿರುವ ಜೀವನನ್ನು ಮೋಹಗೊಳಿಸಿ-ದನು. ಕರ್ತೃತ್ವಾಭಿಮಾನ ಹುಟ್ಟಿಸಿದನೆಂದರ್ಥ.

ಈ ಶ್ಲೋಕದಲ್ಲಿ ಮುಮುಹೇ ಎಂಬ ಪದದಿಂದ ಭಗವಂತನಿಗೆ ಮೋಹವಿದೆ, ಎಂದು ತೋರುವುದು ಕಾರಣ ವ್ಯಾಖ್ಯಾನಿಸುವರು -

**ಮುಮುಹೇ ಮೋಹಯಾಮಾಸ । ತದೇತನ್ಮೇವಿಜಾನೀಹಿ । ಕೃತ್ವಾ ವಿವಾಹ-ಮಿತ್ಯಾದಿವತ್ ।**

**ಯತ್ರ ಕಾರಯಿತಾಽತೀವ ಸ್ವತಂತ್ರಸ್ತತ್ರ ಕರ್ತೃತಾ ।**
**ಪ್ರೋಚ್ಯತೇ ತು ಯಥಾ ಬ್ರಹ್ಮ ತ್ವಷ್ಟಂ ಸಂಸಾರಭಾಗಿತಿ ॥ ಇತಿ ಚ ।**

**ಲಯೇ ವಾಽಪ್ಯಥವಾ ಸೃಷ್ಟೌ ತ್ವಂತರಾಲೇಽಪಿ ನ ಕ್ವಚಿತ್ ।**
**ಪ್ರಕೃತ್ಯಾ ರಹಿತಂ ಬ್ರಹ್ಮ ಕದಾಚಿದಪಿ ತಿಷ್ಠತಿ ॥ ಇತಿ ಕಾಪಿಲೇಯೇ ।**

ಮುಮುಹೇ ಎಂದರೆ ಇಲ್ಲಿ ಮೋಹಗೊಳಿಸಿದನೆಂದರ್ಥ. ಅಂತರ್ಣೀತ ಣಿಜಂತವೆಂದು ಭಾವ.

ತದೇತನ್ಮೆ ವಿಜಾನಿಹಿ ಎಂಬುದಕ್ಕೆ ತಿಳಿ ಎಂದರ್ಥವಲ್ಲ, ನನಗೆ ತಿಳಿಸು ಎಂದರ್ಥ, ಹೇಗೋ ಅದರಂತೆ. 'ಕೃತ್ವಾ ವಿವಾಹಂ ತು ಕುರುಪ್ರವಿರಾಃ' ಎಂಬಲ್ಲಿಯೂ ಕಾರಯಿತ್ವಾ ಎಂದೇ' ಅರ್ಥ ಹೇಗೋ ಅದರಂತೆ ಇಲ್ಲಿಯೂ ಮಾಡಬೇಕು. ಪಾಂಡವರು ಅಭಿಮನ್ಯುವಿನ ಮದುವೆ ಮಾಡಿಸಿದವರೆ ಹೊರತು ಮಾಡಿಕೊಂಡವರಲ್ಲ. ಹೀಗೆ ಪ್ರಯೋಗಗಳು ಕಂಡದ್ದರಿಂದ ಇಲ್ಲಿಯೂ ಅದೇ ರೀತಿ ಅರ್ಥವೆಂದು ಹೇಳಿ ಆ ರೀತಿ ಪ್ರಯೋಗ ಮಾಡಲು ಕಾರಣವನ್ನು ಪ್ರಮಾಣದಿಂದ ತಿಳಿಸಿರುವರು - ಎಲ್ಲಿ ಪ್ರಯೋಜಕಕರ್ತೃವು ಅಂದರೆ ಮಾಡಿಸುವವನು ಬಹಳ ಸ್ವತಂತ್ರನಾಗಿರುವನೋ ಅಲ್ಲಿ ಅದನ್ನು ತಿಳಿಸಲು ಕರ್ತಾ ಎಂದೇ (ಮಾಡಿದನೆಂದು) ಹೇಳಲ್ಪಡುವನು. ಇದಕ್ಕೆ ಉದಾಹರಣೆ ಇಲ್ಲಿ ಹೇಳಿದ ಮುಮುಹೇ ಎಂಬುದೇ ಎಂಬ ಅಭಿಪ್ರಾಯದಿಂದ ಅದರ ಅರ್ಥವನ್ನೇ ಬ್ರಹ್ಮನು ಅಜ್ಞನೆಂದು ಭ್ರಾಂತನೆಂದು ಸಂಸಾರ ಉಳ್ಳವನೆಂದು ಹೇಳುವರು ಹೇಗೆ ಹಾಗೆ ಎಂದು ಭಾವ ಬೇರೆ ಸಂಸಾರಭಾಕ್ ಎಂಬುದು ಮುಂದಿನ ಶ್ಲೋಕದಲ್ಲಿ ಅಪಾತತಃ ತೋರುವ ಅರ್ಥಾನುವಾದವಾಗಲೀ, ಗ್ರಂಥದಲ್ಲಿ ಹೇಳಿದ್ದನ್ನೂ ಅನುವಾದ ಮಾಡಿರುವರು.

ಹಿಂದಿನ ಶ್ಲೋಕದಲ್ಲಿ ಉಪಗತಾ ಎಂಬುದಕ್ಕೆ ಸದಾ ಸಮೀಪಸ್ಥವಾದ ಎಂದು ಮಾಡಿದ ವ್ಯಾಖ್ಯಾನ ಸಮರ್ಥನ ಮಾಡಲು ಉದಾಹರಿಸಿದ ಪ್ರಮಾಣದ ಅರ್ಥ ಹೀಗೆ- ಪ್ರಲಯದಲ್ಲಾಗಲಿ ಸೃಷ್ಟಿಕಾಲದಲ್ಲಾಗಲೀ ಮಧ್ಯದಲ್ಲಿಯೇ ಆಗಲಿ ಪ್ರಕೃತಿ ಇಲ್ಲದೆ ಬ್ರಹ್ಮನು ಯಾವ ಕಾಲದಲ್ಲಿಯೂ ಇರಲಾರನು ಎಂದು ಕಾಪಿಲೇಯದಲ್ಲಿ ಹೇಳಿದೆ. ॥೬॥

ಇದನ್ನೇ ವಿಸ್ತಾರಪಡಿಸುವರು -

**ಏವಂ ಪರಾಭಿಧ್ಯಾನೇನ ಕರ್ತೃತ್ವಂ ಪ್ರಕೃತೇಃ ಪುಮಾನ್ ।**
**ಕರ್ಮಸು ಕ್ರಿಯಮಾಣೇಷು ಗುಣೈರಾತ್ಮನಿ ಮನ್ಯತೇ ॥೭॥**

ಏವಂ=ಈರೀತಿಯಾಗಿ ಪರಾಭಿಧ್ಯಾನೇನ=ಭಗವಂತನ ಇಚ್ಛೆಯಿಂದ ಮೋಹಿತನಾದ್ದರಿಂದ ಪ್ರಕೃತೇಃ ಗುಣೈಃ=ಪ್ರಕೃತಿಯ ಗುಣಗಳಾದ ಸತ್ವಾದಿಗಳಿಂದ ಕರ್ಮಸು ಕ್ರಿಯಮಾಣೇಷು=ಕಾರ್ಯಗಳನ್ನು ಮಾಡಿದಾಗ ಪುಮಾನ್=ಜೀವನು ಪ್ರಕೃತೇಃ ಕರ್ತೃತ್ವಂ=ಪ್ರಕೃತಿಗೆ ಇರುವ ಕರ್ತೃತ್ವವನ್ನು ಆತ್ಮನಿ=ತನ್ನಲ್ಲಿ ಮನ್ಯತೇ= ತಿಳಿಯುವನು.

ಇಲ್ಲಿ ಪರಾಭಿಧ್ಯಾನೇನ ಎಂಬುದಕ್ಕೆ ಪರಮಾತ್ಮನ ಧ್ಯಾನದಿಂದ ಎಂದರ್ಥ ತೋರುವುದು. ಅದನ್ನು ನಿವಾರಿಸಲು ಅದರ ಅರ್ಥ ಹೇಳುತ್ತ ಶ್ಲೋಕವನ್ನು ಯೋಜಿಸುವರು -

**ಏವಂ ಪರಾಭಿಧ್ಯಾನೇನ ಪರಮಾತ್ಮೇಚ್ಛಯಾ । ಪ್ರಕೃತೇಃ ಕರ್ತೃತ್ವಂ ಜೀವಃ ಆತ್ಮನಿ ಮನ್ಯತೇ ॥**

ಪರಾಭಿಧ್ಯಾನೇನ ಎಂದರೆ ಪರಮಾತ್ಮನ ಇಚ್ಛೆಯಿಂದ ಎಂದರ್ಥ. ಪ್ರಕೃತಿಯ ಕರ್ತೃತ್ವವನ್ನು ತನ್ನಲ್ಲಿ ತಿಳಿಯುವನು ಎಂದರ್ಥ. ॥೭॥

**ತದಸ್ಯ ಸಂಸೃತಿರ್ಬಂಧಃ ಪಾರತಂತ್ರ್ಯಂ ಚ ತತ್ಕೃತಮ್ ।**
**ಭವತ್ಯಕರ್ತುರೀಶಸ್ಯ ಸಾಕ್ಷಿಣೋ ನಿರ್ವೃತಾತ್ಮನಃ ॥೮॥**

ತತ್=ಇಲ್ಲದಿರುವ ಕರ್ತೃತ್ವಾಭಿಮಾನದಿಂದ ಅಸ್ಯ=ಜೀವನಿಗೆ ಸಂಸೃತಿಃ= ಸಂಸಾರವು ಜನ್ಮಮರಣ ಪ್ರವಾಹವು ಬಂಧಃ=ಸುಖದುಃಖಾನುಭವವು ಚ=ಮತ್ತು ತತ್ಕೃತಂ=ಅಭಿಮಾನನಿಮಿತ್ತವಾಗಿಯೇ ಪಾರತಂತ್ರ್ಯಂ=ತನಗಿಂತ ಕಡಿಮೆಯಾದ-ವರ ಅಧೀನತೆಯು ಅಕರ್ತುಃ=ಕ್ಲೇಶವಿಲ್ಲದೆ ಕಾರ್ಯ ಮಾಡುವುದರಿಂದಲೂ ಕರ್ತ್ರಂತರದಿಂದ ಕ್ರಿಯಮಾಣನಲ್ಲದ್ದರಿಂದಲೂ ಅಕರ್ತಾ ಎನಿಸುವ ನಿರ್ವೃತಾತ್ಮನಃ =ಸ್ವತಃ ಆನಂದಪೂರ್ಣನಾದ ಈಶಸ್ಯ (ಸಕಾಶಾತ್)=ಶ್ರೀಹರಿಯಿಂದ ಭವತಿ= ಆಗುವುದು.

ಈ ಶ್ಲೋಕದಲ್ಲಿ ಜೀವನಿಗೆ ಪರಾಧೀನತೆಯು ಸ್ವಾಭಾವಿಕವಲ್ಲ ಸಂಸಾರ ಬಂಧಗಳಂತೆ ಅಭಿಮಾನನಿಮಿತ್ತಕವಾದುದು ಎಂದು ತೋರುವುದು. ಅದು ಸರಿಯಲ್ಲ ಜೀವನಿಗೆ ಗುರು ದೇವತೆಗಳ ಅಧೀನತೆ ಸ್ವಾಭಾವಿಕವೇ ಆಗಿದೆ. ಆದ ಕಾರಣ ಇಲ್ಲಿ ವಿವಕ್ಷಿತ ಪಾರತಂತ್ರ್ಯವನ್ನು ಪ್ರಮಾಣದಿಂದ ತಿಳಿಸುವರು–

**ವಿಷ್ಣೋಃ ಸುರಾಣಾಂ ಗುರೂಣಾಂ ನಿತ್ಯಾ ಜೀವಸ್ಯ ತಂತ್ರತಾ ।**
**ಯತ್ತು ತಸ್ಯಾನ್ಯತಂತ್ರತ್ವಂ ತತ್ ಜ್ಞಾನಾದ್ವಿನಿವರ್ತತೇ ॥ ಇತಿ ಚ ।**
**ಅಕರ್ತುಃ ಈಶಸ್ಯ ಸಕಾಶಾತ್ ।**
**ಅಕ್ಲಿಷ್ಟತ್ವಾದಕರ್ತಾಸೌ ಅಕಾರ್ಯತ್ವಾದಥಾಪಿ ವಾ ॥ ಇತಿ ಚ ।**
**ಏಷ ಕರ್ತಾ ನ ಕ್ರಿಯತೇ ಕಾರಣಂ ಚ ಜಗತ್ಪ್ರಭುಃ ॥ ಇತಿ ಭಾರತೇ ।**

ಶ್ರೀಹರಿಯ ಮತ್ತು ದೇವತೆಗಳ ಗುರುಗಳ ಅಧೀನತೆಯು ಜೀವನಿಗೆ ನಿತ್ಯವಾದುದು, ಅಂದರೆ ಸ್ವಾಭಾವಿಕವು. ಇನ್ನು ಜೀವನಿಗೆ ಮೇಲೆ ಹೇಳಿದವರನ್ನು ಬಿಟ್ಟು ಬೇರೆಯವರ ಅಧೀನತೆಯೇನಿದೆಯೋ (ಅಂದರೆ ತನಗಿಂತ ನೀಚರಾದವರ

ಅಧೀನತೆಯು) ಅದು ಭಗವಂತನ ಜ್ಞಾನದಿಂದ ವಿಶೇಷವಾಗಿ ಹೊರಟು ಹೋಗುವುದು ಅಸ್ವಾಭಾವಿಕವಾದುದು. ಇದೇ ಇಲ್ಲಿ ಅಭಿಮಾನನಿಮಿತ್ತಕವಾಗಿ ಬಂದುದ್ದು ಎಂದು ಭಾವ.

''ಅಕರ್ತುಃ'' ಎಂಬುದು ಜೀವನಿಗೆ ವಿಶೇಷಣವಲ್ಲ, ಶ್ರೀಹರಿಗೆ ವಿಶೇಷಣ. ಕಾರ್ಯ ಮಾಡುವಾಗ ಕ್ಲೇಶವಿಲ್ಲದಿರುವುದರಿಂದ ಮತ್ತೊಬ್ಬ ಕರ್ತೃವು ಇವನಿಗೆ ಇಲ್ಲದಿರುವುದರಿಂದಲೂ ಅಕರ್ತಾ ಎನಿಸುವನು. ಇವನು ಜಗದೊಡೆಯನು ಕರ್ತೃವು ಆಗಿದ್ದಾನೆ ಇನ್ನೊಬ್ಬರಿಂದ ಮಾಡಲ್ಪಡುವವನಲ್ಲ ಇವನೇ ಎಲ್ಲಕ್ಕೂ ಕಾರಣನು ಎಂದು ಭಾರತದಲ್ಲಿ ಇದೆ. ||೮||

ಪ್ರಕೃತಿ ಪುರುಷರಿಬ್ಬರೂ ಜೀವ ಬಂಧಕರಾದಮೇಲೇ ಪುರುಷನಿಗೆ ಪ್ರಕೃತಿಪರತ್ವವೇಕೆ? ಎಂದರೆ ಪುರುಷನಿಗೆ ಜೀವಬಂಧಕತ್ವದಲ್ಲಿ ವಿಶೇಷ ಉಂಟು ಆದ್ದರಿಂದ ಪ್ರಕೃತಿಪರನೆಂದು ಹೇಳುವರು –

**ಕಾರ್ಯಕಾರಣಕರ್ತೃತ್ವೇ ಕಾರಣಂ ಪ್ರಕೃತಿಂ ವಿದುಃ ।**
**ಭೋಕ್ತೃತ್ವೇ ಸುಖದುಃಖಾನಾಂ ಪುರುಷಃ ಪ್ರಕೃತೇಃ ಪರಃ ॥೯॥**

ಕಾರ್ಯಕಾರಣಕರ್ತೃತ್ವೇ=ಕಾರ್ಯವಾದ ಶರೀರ ಕಾರಣವೆಂದರೆ ಇಂದ್ರಿಯ ಇವುಗಳ ಬ್ರಹ್ಮಾದಿಜೀವರಲ್ಲಿರುವ ಕರ್ತೃತ್ವವಿಷಯದಲ್ಲಿ ಪ್ರಕೃತಿಂ=ಲಕ್ಷ್ಮೀದೇವಿ-ಯನ್ನು ಕಾರಣಂ ವಿದುಃ=ಕಾರಣವೆಂದು ಜ್ಞಾನಿಗಳು ತಿಳಿಯುವರು. ಬ್ರಹ್ಮಾದಿ-ಜೀವಗತಕರ್ತತ್ವರೂಪಬಂಧಕ್ಕೆ ಲಕ್ಷ್ಮೀದೇವಿಯು ಶ್ರೀಹರಿಯ ಅಧೀನಳಾಗಿ ಕಾರಣಳು ಆದ್ದರಿಂದ ಅವನು ಉತ್ತಮ. ಸುಖದುಃಖಾನಾಂ ಭೋಕ್ತೃತ್ವೇ=ಜೀವರ ಸುಖದುಃಖ ಬೋಕ್ತೃತ್ವಕ್ಕೆ ಪ್ರಕೃತೇಃ ಪರಃ=ಲಕ್ಷ್ಮಿಗಿಂತ ಉತ್ತಮನಾದ ಪುರುಷಃ= ಶ್ರೀಹರಿಯು ಕಾರಣಂ ವಿದುಃ=ಕಾರಣನೆಂದು ತಿಳಿಯುವರು.

ಈ ಶ್ಲೋಕದ ಅರ್ಥವಾಗದಿರುವುದು ವಿಪರೀತ ಅರ್ಥವಾಗುವುದನ್ನು ತಪ್ಪಿಸಲು ತಾತ್ಪರ್ಯ ಹೇಳುವರು –

ಬ್ರಹ್ಮಾದಿಭಿಃ ಸರ್ಗಕರೀ ಶ್ರೀರ್ವಿಷ್ಣುಬಲಸಂಶ್ರಯಾತ್ ।
ಸುಖದುಃಖಪ್ರದೋ ವಿಷ್ಣುಃ ಸ್ವಯಮೇವ ಸನಾತನಃ ॥
ಕರ್ತೃತ್ವಂ ಸುಖದುಃಖಾನಾಮನ್ಯೇಷಾಂ ಚ ತದಾಜ್ಞಯಾ ।
ಭೋಕ್ತೃತ್ವಂ ಸುಖದುಃಖಾನಾಂ ಕರೋತ್ಯೇಕೋ ಹರಿಃ ಸ್ವಯಂ ।
ಭೋಕ್ತೃತ್ವಮಾತ್ರಹೇತುತ್ವಂ ಜೀವೇ ನಾನ್ಯತ್ರ ಕುತ್ರಚಿತ್ ॥

ಇತಿ ಭವಿಷ್ಯತ್ಪರ್ವಣಿ ।

**'ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ' ಇತಿ ಚ ।**

ತನ್ನಿಂದಲೇ ಕೊಡಲ್ಪಟ್ಟ ಕರ್ತೃತ್ವವುಳ್ಳ ಬ್ರಹ್ಮಾದಿಗಳಿಂದ ಶ್ರೀಹರಿಯ ಬಲವನ್ನಾಶ್ರಯಿಸಿ ಲಕ್ಷ್ಮೀದೇವಿಯು ಸೃಷ್ಟಿಯನ್ನು ಮಾಡುವಳು. ಸನಾತನನಾದ ಶ್ರೀವಿಷ್ಣುವೇ ಕೇವಲ ತಾನೊಬ್ಬನೇ ಸುಖದುಃಖಪ್ರದನು. ಸ್ವತಂತ್ರವಾಗಿ ಇತರ ಜೀವಗತ ಸುಖದುಃಖಗಳಿಗೆ ಶ್ರೀಹರಿಯ ಆಜ್ಞೆಯಿಂದ ಬ್ರಹ್ಮಾದಿಗಳು ಕಾರಣರು. ಆದರೂ ಎಲ್ಲ ಜೀವರಲ್ಲಿರುವ ಸುಖದುಃಖ ಭೋಕ್ತೃತ್ವವನ್ನು ಕೊಡುವವನು ಶ್ರೀಹರಿಯೊಬ್ಬನೆ. ಬೇರೆ ಯಾವ ಜೀವನಿಗೂ ಸರ್ವಸುಖದುಃಖಭೋಕ್ತೃವು ಇಲ್ಲ. ತನ್ನ ತನ್ನ ಸುಖದುಃಖ ಅನುಭವಿಸುವನಷ್ಟೇ.

ಗೀತಾಭಾಷ್ಯದಲ್ಲಿ ಹೇಳಿದಂತೆ ಪ್ರಕೃತಿಗೆ ಭೋಕ್ತೃತ್ವ ಕೊಡುವಲ್ಲಿ ಅಲ್ಪಪ್ರವೃತ್ತಿ ಇದ್ದರೂ ಕರ್ತೃತ್ವ ಕೊಡುವಲ್ಲಿರುವಂತೆ ಅಧಿಕ ಪ್ರವೃತ್ತಿ ಇಲ್ಲ ಆದ ಕಾರಣ ಇದು ಪ್ರಕೃತಿಗಿಂತ ಪುರುಷ ಉತ್ತಮ ಎನ್ನಲು ಕಾರಣವಾಗುವುದು. ಇದನ್ನೇ ಗೀತೆಯಲ್ಲಿ ''ಪ್ರಕೃತಿಂ ಪುರುಷಂ ಚೈವ ವಿಧ್ಯನಾದೀ ಉಭಾವಪಿ'' ಕಾರ್ಯ ಕಾರಣಕರ್ತತ್ವೇ ಹೇತುಃ ಪ್ರಕೃತಿರುಚ್ಯತೇ । ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ'' ಎಂದು ಹೇಳಿದೆ. ದೇಹೇಂದ್ರಿಯಕರ್ತೃತ್ವಕ್ಕೆ ಪ್ರಕೃತಿಪರನು ಪುರುಷನೆನಿಸುವ ಶ್ರೀಹರಿಯು. ॥೯॥

**ದೇವಹೂತಿರುವಾಚ**

**ಪ್ರಕೃತೇಃ ಪುರುಷಸ್ಯಾಪಿ ಲಕ್ಷಣಂ ಪುರೂಷೋತ್ತಮ ।**
**ಬ್ರೂಹಿ ಕಾರಣಯೋರಸ್ಯ ಸದಸಚ್ಚ ಯದಾತ್ಮಕಂ ॥೧೦॥**

(ಪ್ರಕೃತಿಪುರುಷರಿಗೆ ಕಾರಣತ್ವದಲ್ಲಿ ವಿಶೇಷವಿದೆ ಎಂದು ಕೇಳಿದ ದೇವಹೂತಿಯು ವಿವೇಕವನ್ನು ತಿಳಿಯಲು ಪ್ರಶ್ನಿಸುವಳು) ಹೇ ಪುರುಷೋತ್ತಮ= ಕಪಿಲನಾಮಕ ಪರಮಾತ್ಮನೇ ಅಸ್ಯ=ಜಗತ್ತಿನ ಕಾರಣಯೋಃ=ಕಾರಣರಾದ ಪ್ರಕೃತೇಃ=ಪ್ರಕೃತಿಯ ಪುರುಷಸ್ಯ ಅಪಿ=ಪುರುಷನ ಲಕ್ಷಣಂ=ಸ್ವರೂಪವನ್ನು ಅಸಾಧಾರಣಧರ್ಮವನ್ನು ಮತ್ತು ಸದಸಚ್ಚ=ವ್ಯಕ್ತಾವ್ಯಕ್ತವಾದ ಸ್ಥೂಲಸೂಕ್ಷ್ಮವಾದ ಜಗತ್ತು ಯದಾತ್ಮಕಂ=ಯಾರಿಂದ ವ್ಯಾಪ್ತವಾಗಿದೆ ಬ್ರೂಹಿ=ಹೇಳು. ಪ್ರಕೃತಿ ಪುರುಷರಿಗೆ ಜಗತ್ತಿನಲ್ಲಿ ವ್ಯಾಪ್ತಿ ಇದೆ ಎಂಬುದು ಶ್ರುತ್ಯಾದಿಗಳಲ್ಲಿ ಹೇಳಿದೆ. ನೀನು ಸೂಚಿಸಿದ್ದಿ. ಇಬ್ಬರಿಗೂ ವ್ಯಾಪ್ತಿಯು ಆಕಾಶದಂತೆಯೋ ಬೇರೆ ರೀತಿಯದೋ, ಕಾರಣತ್ವವು ಇಬ್ಬರಿಗೂ ಒಂದೇ ರೀತಿಯದೋ ಬೇರೇ ಬೇರೆ ವಿಧವೋ ಎಂದು ಪ್ರಶ್ನೆಯ ಅಭಿಪ್ರಾಯ. ॥೧೦॥

ಕಪಿಲನಾಮಕ ಭಗವಂತನು ಶ್ರೀಹರಿಯು ಅನಂತನಾದ್ದರಿಂದ ಅವನ ಸ್ವರೂಪ ಮೊದಲಿಗೆ ತಿಳಿಯಲಾರದು. ಕಾರಣ ಪ್ರಕೃತಿಯ ಲಕ್ಷಣಜ್ಞಾನದಿಂದ ಅವನ ಲಕ್ಷಣವು ತಿಳಿದಂತಾಗುವುದು ಎಂದು ಪ್ರಕೃತಿಲಕ್ಷಣ ಹೇಳುವನು –

**ಭಗವಾನುವಾಚ**

**ಯತ್‌ತತ್ ತ್ರಿಗುಣಮವ್ಯಕ್ತಂ ನಿತ್ಯಂ ಸದಸದಾತ್ಮಕಮ್ ।**
**ಪ್ರಧಾನಂ ಪ್ರಕೃತಿಂ ಪ್ರಾಹುರವಿಶೇಷಂ ವಿಶೇಷವತ್ ॥೧೧॥**

ದೇವಹೂತಿಯ ಪ್ರಶ್ನೆಗೆ ಪ್ರಕೃತಿಯು ಉಪಾದಾನಕಾರಣವು, ಪುರುಷನು ನಿಮಿತ್ತಕಾರಣನು, ಎಂದು ಉತ್ತರಿಸಲು ಪ್ರಕೃತಿಯ ಸ್ವರೂಪವನ್ನು ಹೇಳುವನು ಈ ಶ್ಲೋಕದಲ್ಲಿ. ಮತ್ತು ವ್ಯಾಪ್ತಿಯೂ ಕೂಡ ಪ್ರಕೃತಿ ತನ್ನ ಕಾರ್ಯಗಳಲ್ಲಿ ಉಪಾದಾನವಾಗಿಯೇ (ಪರಿಣಾಮರೂಪವಾಗಿ) ವಿವಕ್ಷಿತವು. ಪುರುಷನಿಗೆ ನಿಯಾಮಕನಾಗಿ ವ್ಯಾಪ್ತಿಯು ವಿವಕ್ಷಿತವಾಗಿದೆ. ಇಲ್ಲಿ ಶ್ರೀನಾಮಕಳಾದ ಚೇತನ-ಪ್ರಕೃತಿಯೂ ಅಚೇತನಪ್ರಕೃತಿಗೆ ಅಭಿಮಾನಿನಿಯೂ ಪ್ರತಿಪಾದ್ಯಗಳಾಗಿದ್ದಾಳೆ. ಇಲ್ಲಿ ಪ್ರಕೃತಿ ಮೂರುವಿಧವೆಂದು ಹೇಳುವರು. ಶ್ಲೋಕಾರ್ಥ ಯತ್ ತತ್ವಂ=ಯಾವ ತತ್ವವು ತ್ರಿಗುಣಂ=ಸತ್ವರಜಸ್ತಮೋಗುಣಾತ್ಮಕವು ಅವ್ಯಕ್ತಂ=ಸೂಕ್ಷ್ಮವು ಸದಸದಾತ್ಮಕಂ= ವ್ಯಕ್ತಾವ್ಯಕ್ತವು ನಿತ್ಯಂ=ನಾಶರಹಿತವಾದುದು ವಿಶೇಷವತ್=ಕಾರ್ಯಾತ್ಮಕವು ಅವಿಶೇಷಂ=ಅಕಾರ್ಯವು ತತ್ ತತ್ವಂ=ಆ ತತ್ವವನ್ನು ಪ್ರಧಾನಂ=ಕಾರ್ಯಕ್ಕಿಂತ ಮುಖ್ಯವಾದ್ದರಿಂದ ಪ್ರಧಾನವೆಂದು ಪ್ರಕೃತಿಂ ಪ್ರಾಹುಃ=ಪ್ರಕೃತಿ ಎಂದು ಕರೆಯುವರು. ತ್ರಿಗುಣಾತ್ಮಕಂ ಎಂಬ ವಿಶೇಷಣ ಇತರ ವ್ಯಾವರ್ತಕವಾದುದು ಮಿಕ್ಕದ್ದೆಲ್ಲ ಸ್ವರೂಪಕಥನವೆಂದು ತಿಳಿಯಬೇಕು.

ಅವ್ಯಕ್ತತ್ವ, ವ್ಯಕ್ತಾವ್ಯಕ್ತತ್ವ, ವ್ಯಕ್ತತ್ವ ಈ ಮೂರು ಧರ್ಮಗಳು ಚೇತನಾಚೇತನ ಪ್ರಕೃತಿಗೆ ಸಾಧಾರಣವೆಂದು ತಿಳಿಸಲು ಪ್ರಮಾಣ ಹೇಳುವರು–

**ವ್ಯಕ್ತಾವ್ಯಕ್ತಾತ್ಮಕಂ ಯತ್ತದ್ವಿದ್ಯಾತ್ ಸದಸದಾತ್ಮಕಂ ।**
**ಅಸರ್ಗಾ ಕೇವಲಾ ವ್ಯಕ್ತಾ ಸಿಸೃಕ್ಷುರುಭಯಾತ್ಮಿಕಾ ॥**
**ವ್ಯಕ್ತೈವ ಕಾರ್ಯರೂಪಾ ತು ಪ್ರಕೃತಿಸ್ತ್ರಿವಿಧಾ ಮತಾ ।**
**ಕಾರ್ಯತಃ ಸಾ ಪ್ರಧಾನತ್ವಾತ್ ಪ್ರಧಾನಮಿತಿ ಕೀರ್ತ್ಯತೇ ॥**
**ಅವಿಶೇಷಾ ಹ್ಯಕಾರ್ಯತ್ವಾತ್ ಸಾ ಚ ಶ್ರೀರ್ವಿಷ್ಣುಸಂಶ್ರಯಾ ।**

**ಇತಿ ಹರಿವಂಶೇಷು ।**

**ವಿಶೇಷಃ ಕಾರ್ಯಮುದ್ದಿಷ್ಟಂ ವಿಶೇಷಾದ್ದೃಶ್ಯತೇ ಯತಃ । ಇತಿ ಪಾದ್ಮೇ ।**

ಸದಸದಾತ್ಮಕವೆಂದರೆ ಪ್ರಲಯಕಾಲ ಸೃಷ್ಟಿಕಾಲಗಳ ಮಧ್ಯಕಾಲದಲ್ಲಿ ಸೃಷ್ಟ್ಯುನ್ಮುಖವಾದ ಪ್ರಧಾನವೇ ವ್ಯಕ್ತಾವ್ಯಕ್ತಾತ್ಮಕವೆಂದು ತಿಳಿಯಬೇಕು. ಸೃಷ್ಟಿರಹಿತ-ವಾದ ಕಾರ್ಯರಹಿತವಾದ ಪ್ರಲಯಕಾಲೀನವಾದ ಎರಡು ವಿಧ ಪ್ರಕೃತಿಯೂ ಅವ್ಯಕ್ತವೆನಿಸುವುದು. ಸೃಷ್ಟಿ ಮಾಡುವ ಇಚ್ಛೆಯಿಂದ ಕೂಡಿದ ಚೇತನಪ್ರಕೃತಿಯು ಉಭಯಾತ್ಮಕ ಅಂದರೆ ವ್ಯಕ್ತಾವ್ಯಕ್ತಾತ್ಮಳೆನಿಸುವಳು. ಸ್ವಿಸ್ವಕ್ಷೆಯು ಪ್ರಲಯಕಾಲೀನ-ಳಾದ ಅವ್ಯಕ್ತಳಲ್ಲಾಗಲಿ, ಸೃಷ್ಟಿಕಾಲದಲ್ಲಿರುವ ವ್ಯಕ್ತಳಿಗಾಗಲಿ ಇರುವುದಿಲ್ಲ.

ಕಾರ್ಯರೂಪವನ್ನು ತಾಳಿದ ಜಡಪ್ರಕೃತಿಯು ವ್ಯಕ್ತವೆನಿಸುವುದು. ಚೇತನ ಪ್ರಕೃತಿಗೆ 'ಕಾರ್ಯಂ ರೂಪ್ಯತೇ ಅನಯಾ ಇತಿ ಕಾರ್ಯರೂಪಾ' ಎಂಬ ವ್ಯುತ್ಪತ್ತಿಯಿಂದ ಕಾರ್ಯನಿಯಾಮಕಳಾದವಳು ವ್ಯಕ್ತಳೆಂದು ತಿಳಿಯಬೇಕು. ಈ ರೀತಿಯಾಗಿ ಎರಡುವಿಧ ಪ್ರಕೃತಿಯೂ ಮೂರು ವಿಧವೆಂದು ಸಮ್ಮತವು. ಕಾರ್ಯಕ್ಕಿಂತ ಪ್ರಧಾನವಾದುದರಿಂದ ಪ್ರಧಾನವೆಂದು ಕರೆಯಲ್ಪಡುವುದು. ಕಾರ್ಯವಲ್ಲದ್ದರಿಂದ ಅವಿಶೇಷವೆನಿಸುವುದು. ಆ ಪ್ರಕೃತಿಯು ಶ್ರೀಹರಿಯನ್ನು ಆಶ್ರಯಿಸಿದೆ ಎಂದು ಹರಿವಂಶದಲ್ಲಿ ಹೇಳಿದೆ. ವಿಶೇಷವಾಗಿ ಕಾಣಿಸುವುದರಿಂದ ಕಾರ್ಯಕ್ಕೆ ವಿಶೇಷವೆನ್ನುವರು ಎಂದು ಪಾದ್ಮದಲ್ಲಿದೆ. ವಿಷ್ಣುಸಂಶ್ರಯಾ ಎಂದದ್ದರಿಂದ ೧೮ನೇ ಶ್ಲೋಕದಲ್ಲಿ 'ಪ್ರಕೃತೇಃ ಚೇಷ್ಟಾ ಯತಃ ಸ ಭಗವಾನ್' ಎಂದು ಹೇಳಿದ್ದನ್ನು ವ್ಯಾಖ್ಯಾನಿಸಿದಂತಾಯಿತು. ಸತ್ವಾದಿಗುಣವುಳ್ಳ ಜಡಕ್ಕೆ ಜಗದುಪಾದನವಾದ್ದರಿಂದ ಪ್ರಕೃತಿಶಬ್ದವಾಚ್ಯತ್ವವಾದರೆ ಅಭಿಮಾನಿನೀಯಾದ ಶ್ರೀ, ಭೂದುರ್ಗಾ ಎನಿಸುವ ಲಕ್ಷ್ಮೀದೇವಿಗೆ ಸತ್ವಾದಿಗುಣಪ್ರವರ್ತಕಳಾದ್ದರಿಂದ ಜಗದ್ಗುರುಗಳಾದ ಮಹದಾದಿಶರೀರವುಳ್ಳ ಬ್ರಹ್ಮಾದಿಗಳಿಗೆ ಜನನಿಯಾದ್ದರಿಂದ ಮುಖ್ಯವಾಗಿ ಪ್ರಕೃತಿ ಶಬ್ದವಾಚ್ಯತ್ವವಿದೆ ಎಂದು ತಿಳಿಯಬೇಕು. ॥೧೧॥

ವಿಶೇಷವತ್ ಎಂದು ಹೇಳಿದ ವಿಶೇಷಗಳನ್ನು ತಿಳಿಸುವರು –

**ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ।**
**ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ ॥೧೨॥**

ಪಂಚಭಿಃ=ಪಂಚಮಹಾಭೂತಗಳಿಂದ ಪಂಚಭಿಃ=ಐದು ಮಾತ್ರಾಗಳಿಂದ ದಶಭಿಃ=ಹತ್ತು ಇಂದ್ರಿಯಗಳಿಂದ ಚತುರ್ಭಿಃ=ಮನಸ್ಸು ಬುದ್ಧಿ ಅಹಂಕಾರ ಚಿತ್ತವೆಂಬ ನಾಲ್ಕುಗಳಿಂದ ಬ್ರಹ್ಮ=ಪೂರಿತವಾದ ಏತತ್ ಚತುರ್ವಿಂಶತಿಕಂ ಗಣಂ= ಇಪ್ಪತ್ನಾಲ್ಕು ತತ್ವಗಳ ಸಮೂಹವನ್ನು ಪ್ರಾಧಾನಿಕಂ ವಿದುಃ=ಪ್ರಧಾನಕಾರ್ಯವೆಂದು ತಿಳಿಯುವರು. ॥೧೨॥

ಇಪ್ಪತ್ನಾಲ್ಕು ತತ್ತ್ವಗಳನ್ನು ತಾವೇ ತಿಳಿಸುವರು –

**ಮಹಾಭೂತಾನಿ ಪಂಚೈವ ಭೂರಾಪೋಽಗ್ನಿರ್ಮರುನ್ನಭಃ ।**
**ತನ್ಮಾತ್ರಾಣಿ ಚ ತಾವಂತಿ ಗಂಧಾದೀನಿ ಮತಾನಿ ಮೇ ॥೧೩॥**

ಭೂಃ=ಪೃಥಿವೀ ಆಪಃ=ನೀರು ಅಗ್ನಿಃ=ಬೆಂಕಿಯು ಮರುತ್=ವಾಯು (ಗಾಳಿ) ನಭಃ=ಆಕಾಶ ಹೀಗೆ ಭೂತಾನಿ=ಭೂತಗಳು ಪಂಚೈವ=ಐದೇ ತನ್ಮಾತ್ರಣಿ ಗಂಧಾದೀನಿ ತಾವಂತಿ ಮೇ ಮತಾನಿ=ಪಂಚಭೂತಸೂಕ್ಷ್ಮಗಳಿಗೆ ಉಪಚಾಯಕಗಳಾದ ಗಂಧ, ರಸ, ರೂಪ, ಸ್ಪರ್ಶ, ಶಬ್ದವೆಂದು ಕರೆಸಿಕೊಳ್ಳುವ ತನ್ಮಾಮಾತ್ರಾಗಳು (ದ್ರವ್ಯರೂಪ-ವಾದವು) ಐದು ಎಂದು ನನಗೆ ಸಮ್ಮತವು ॥೧೩॥

**ಇಂದ್ರಿಯಾಣಿ ದಶ ಶ್ರೋತ್ರಂ ತ್ವಗ್ ದೃಗ್ ರಸನ ನಾಸಿಕಮ್ ।**
**ವಾಕ್ ಕರೌ ಚರಣೌ ಮೇಢ್ರಂ ಪಾಯುರ್ದಶಮ ಉಚ್ಯತೇ ॥೧೪॥**

ಶ್ರೋತ್ರಂ=ಶ್ರವಣ (ಕಿವಿ) ತ್ವಕ್=ಸ್ಪರ್ಶನೇಂದ್ರಿಯ ದೃಕ್=ಚಕ್ಷು (ಕಣ್ಣು) ರಸನ=ನಾಲಿಗೆ ನಾಸಿಕ=ಘ್ರಾಣೇಂದ್ರಿಯ (ಮೂಗು) ವಾಕ್=ವಾಗೀಂದ್ರಿಯ (ಬಾಯಿ) ಕರೌ=ಕೈಗಳು ಚರಣೌ=ಕಾಲುಗಳು ಮೇಢ್ರಂ=ಶಿಶ್ನ (ಜನನೇಂದ್ರಿಯ) ಪಾಯುಃ=ಗುದವು (ಮಲವಿಸರ್ಜಕ) ಹೀಗೆ ಇಂದ್ರಿಯಾಣಿ ದಶ=ಇಂದ್ರಿಯಗಳು ಹತ್ತು. (ದಶಮಃ=ಹತ್ತನೆಯದು)॥೧೪॥

**ಮನೋ ಬುದ್ಧಿರಹಂಕಾರಶ್ಚಿತ್ತಮಿತ್ಯಂತರಾತ್ಮನಃ ।**
**ಚತುರ್ಧಾ ಲಕ್ಷ್ಯತೇ ಭೇದೋ ವೃತ್ತ್ಯಾ ಲಕ್ಷಣರೂಪಯಾ ॥೧೫॥**

ಅಂತರಾತ್ಮನಃ=ಅಂತಃಕರಣದ ಲಕ್ಷಣರೂಪಯಾ ವೃತ್ತ್ಯಾ=ಜ್ಞಾಪಕವಾದ ವೃತ್ತಿಗಳಿಂದ ಮನಃ=ಮನಸ್ಸು ಬುದ್ಧಿಃ ಅಹಂಕಾರಃ ಚಿತ್ತಂ ಇತಿ=ಹೀಗೆ ಚತುರ್ಧಾ= ನಾಲ್ಕು ರೀತಿಯೇ ಭೇಧಃ=ಪ್ರಭೇದವು ಲಕ್ಶ್ಯತೇ= ತಿಳಿಯುವುದು.

ಯಾವ ವೃತ್ತಿಯು ಯಾವ ಅಂತಃಕರಣಪ್ರಭೇದ ಜ್ಞಾಪಕವೆಂದು ತಿಳಿಸುವರು

**ಬುದ್ಧಿರಧ್ಯವಸಾನಾಯ ಸಂಶಯಂ ಕುರುತೇ ಮನಃ ।**
**ಅಭಿಮಾನೋ ಹ್ಯಹಂಕಾರಶ್ಚಿತ್ತಂ ಸ್ಮರಣಕಾರಣಂ ॥ ಇತಿ ಸ್ಕಾಂದೇ ।**

ನಿಶ್ಚಯಕ್ಕೆ ಕಾರಣವಾದುದು ಬುದ್ಧಿಯು. ಮನಸ್ಸು ಸಂಶಯ ಮಾಡುವುದು. ಅಭಿಮಾನಕ್ಕೆ ಕಾರಣವಾದುದು ಅಹಂಕಾರವು. ಚಿತ್ತವು ಸ್ಮರಣಕ್ಕೆ ಕಾರಣವು ಎಂದು ಸ್ಕಂದಪುರಾಣದಲ್ಲಿದೆ. ॥೧೫॥

ಸಾಕ್ಷಾತ್ ಪ್ರಕೃತಿಕಾರ್ಯಗಳಲ್ಲಿ ಇದಕ್ಕೂ ಹೆಚ್ಚಿನ ಸಂಖ್ಯೆಯು ಜ್ಞಾನಿಗಳಿಗೆ ಸಮ್ಮತವಲ್ಲವೆಂದು ಹೇಳುವರು -

**ಏತಾವಾನೇವ ಸಂಖ್ಯಾತೋ ಬ್ರಹ್ಮಣಃ ಸಗುಣಸ್ಯ ಹಿ ।**
**ಸನ್ನಿವೇಶೋ ಮಯಾ ಪ್ರೋಕ್ತೋ ಯಃ ಕಾಲಃ ಪಂಚವಿಂಶಕಃ ॥೧೬॥**

ಸಗುಣಸ್ಯ ಬ್ರಹ್ಮಣಃ=ಜಡಪ್ರಕೃತ್ಯಭಿಮಾನಿನಿಯಾದ ಶ್ರೀಮಹಾಲಕ್ಷ್ಮೀದೇವಿಯ ಸನ್ನಿವೇಶಃ=ವಿಸ್ತಾರವು ಯಾವಾನ್ ಮಯಾಪ್ರೋಕ್ತಃ ಏತಾವಾನೇವ=ನಾನೆಷ್ಟು ಹೇಳಿದೆನೋ ಅಷ್ಟೇ ಸಂಖ್ಯಾತಃ=ತತ್ತ್ವಜ್ಞರಿಂದ ಪರಿಗಣಿಸಲ್ಪಟ್ಟಿದೆ. ಯಃ ಕಾಲಃ= ಕಾಲನಾಮಕಪರಮಾತ್ಮನು ಸಃ=ಅವನು ಪಂಚವಿಂಶಕಃ=ಇಪ್ಪತ್ತೈದನೆಯವನು ಅಂದರೆ ಅಸ್ವತಂತ್ರ ತತ್ತ್ವಗಳು ಇಪ್ಪತ್ತುನಾಲ್ಕೇ ಹೊರತು ತತ್ತ್ವಸಾಮಾನ್ಯವಲ್ಲ, ಕಾರಣ ತತ್ತ್ವಗಣನೆಯಲ್ಲಿ ಏನೂ ನ್ಯೂನತೆ ಇಲ್ಲ ಎಂದು ಭಾವ.

ಇಲ್ಲಿ ಸಗುಣಬ್ರಹ್ಮಪದದಿಂದ ಪ್ರಧಾನವೇ ವಿವಕ್ಷಿತವೆಂಬ ಅಭಿಪ್ರಾಯದಿಂದ ಆ ವಿಷಯದಲ್ಲಿ ಪ್ರಮಾಣ ಉದಾಹರಣೆ ಮಾಡುವರು-

**ಹರಿಸ್ತು ನಿರ್ಗುಣಂ ಬ್ರಹ್ಮ ಶ್ರೀರ್ಬ್ರಹ್ಮ ಸಗುಣಂ ಸ್ಮೃತಾ ।**
**ತದಂಗಜಾನಿ ತತ್ತ್ವಾನಿ ತಸ್ಮಾತ್ತದ್ರೂಪಮುಚ್ಯತೇ ॥ ಇತಿ ಹರಿವಂಶೇಷು ।**

ಶ್ರೀಹರಿಯು ನಿರ್ಗುಣಬ್ರಹ್ಮನು. ಸತ್ತ್ವಾದಿಗುಣಾತ್ಮಕಪ್ರಕೃತ್ಯಭಿಮಾನಿನೀಯಾದ ಲಕ್ಷ್ಮೀದೇವಿಯು ಸಗುಣಬ್ರಹ್ಮ ಎನಿಸುವಳು. ಪ್ರಕೃತ್ಯಂಶಗಳಿಂದ ಹುಟ್ಟಿದರಿಂದ ತತ್ತ್ವರೂಪವೆನಿಸುವನು ಸಗುಣಬ್ರಹ್ಮ. ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಪ್ರಕೃತಿಸೂಕ್ಷ್ಮಭಾಗೋಪಾದನಕವಾದ ತತ್ತ್ವಗಳಿಗೆ ಪ್ರಕೃತ್ಯಾತ್ಮಕ ಸಗುಣಬ್ರಹ್ಮಸನ್ನಿವೇಶ ವೆಂದು ಕರೆಯುವುದು ಯುಕ್ತವೇ. ॥೧೬॥

ಇಷ್ಟಾದರೂ ಪುರುಷನನ್ನು ಸಂಗ್ರಹಿಸಿದಂತಾಗಲಿಲ್ಲವೆಂಬ ಶಂಕೆಗೆ ಕಾಲ ಎಂಬುದು ಪುರುಷನ ರೂಪಾಂತರವೇ ಎಂದು ಉತ್ತರ ಹೇಳುವರು-

**ಪ್ರಭಾವಃ ಪೌರುಷಂ ಪ್ರಾಹುಃ ಕಾಲಮೇಕೇ ಯತೋ ಭಯಂ ।**
**ಅಹಂಕಾರವಿಮೂಢಸ್ಯ ಕರ್ತುಃ ಪ್ರಕೃತಿಮೀಯುಷಃ ॥೧೭॥**

ಯಃ=ಯಾವ ಕಾಲಃ=ಕಾಲವು ಪಂಚವಿಂಶತಿಕಃ=ಇಪ್ಪತ್ತೈದನೇಯವನೋ ತಂ =ಅವನನ್ನು ಪೌರುಷಂ=ಹೃದಯದಲ್ಲಿರುವ ಪರಮಾತ್ಮನ ಪ್ರಭಾವಂ= (ಪ್ರಕರ್ಷೇಣ ಭವತೀತಿ) ಸರ್ವದೇಶಸಂಬಂಧವಾದ ವ್ಯಾಪ್ತರೂಪವೆಂದು ಪ್ರಾಹುಃ =ಜ್ಞಾನಿಗಳು ಹೇಳುವರು. ಏಕೇ=ಮತ್ತೆ ಕೆಲವು ಜ್ಞಾನಿಗಳು ಪ್ರಕೃತಿಂ ಈಯುಷಃ=

ಪ್ರಕೃತಿನಿಮಿತ್ತಿಕ ಅಜ್ಞಾನಬದ್ಧನಾದ ಆದ್ದರಿಂದಲೇ ಅಹಂಕಾರವಿವಮೂಢಸ್ಯ ಕರ್ತುಃ =ಕರ್ತೃತ್ವಾಭಿಮಾನವುಳ್ಳ ಜೀವನಿಗೆ ಯತಃ ಭಯಂ=ಯಾವ ರುದ್ರಾಂತರ್ಗತನಿಂದ ಸಂಸಾರವಿಚ್ಛೇದರೂಪಭಯವಾಗುವುದೋ ತಂ=ಅವನನ್ನು ಕಾಲನೆಂದು ಹೇಳುವರು.

ಈ ಶ್ಲೋಕದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು –

**ಪುರುಷೋ ಹೃದಿಸ್ಥಃ ಪರಮಃ ಕಾಲಃ ಸರ್ವಗತೋ ಹರಿಃ ।**
**ಅಥವಾ ರುದ್ರದೇಹಸ್ಥೋ ಹರಿಃ ಕಾಲ ಇತೀರಿತಃ ॥ ಇತಿ ಬ್ರಾಹ್ಮೇ ।**

**ಪೌರುಷಂ ಪ್ರಭಾವಂ । ಪುರುಷಸ್ಯ ಪ್ರಕರ್ಷೇಣ ಭಾವಂ ವ್ಯಾಪ್ತಂ ರೂಪಂ । ಏಕೇ ಸಮ್ಯಗ್‌ಜ್ಞಾನಿನಃ ಅಪ್ರಾಕೃತಾಃ ।**

ಪುರುಷನ ಹೃದಯದಲ್ಲಿರುವ ವಿಷ್ಣುವಿನ ವ್ಯಾಪ್ತವಾದ ರೂಪವೇ ಕಾಲನೆಂದು ಜ್ಞಾನಿಗಳು ಹೇಳುವರು. ಅಥವಾ ರುದ್ರದೇಹದಲ್ಲಿರುವ ಹರಿಗೆ ಕಾಲನೆಂದು ಕರೆಯುವರು. ಪೌರುಷಃ ಪ್ರಭಾವಂ=ಪುರುಷನಲ್ಲಿರುವ ವಾಪ್ತರೂಪವು ಕಾಲನಾಮಕವೆಂದು ಸಮ್ಯಗ್‌ಜ್ಞಾನಿಗಳು ಹೇಳುವರು. ಅವರು ಪ್ರಕೃತಿಸಂಬಂಧ ಕಳೆದುಕೊಂಡವರು. ಇಲ್ಲವಾದರೆ ಅಹಂಕಾರವಿಮೂಢನಿಗೆ ಯಾವನಿಂದ ಭಯವೋ ಅವನು ಕಾಲನೆಂಬ ಜ್ಞಾನ ಇರಲಾರದು ಎಂದು ಭಾವ. ॥೧೭॥

ಹಾಗಾದರೆ ನಿನ್ನ ಅಭಿಪ್ರಾಯದಲ್ಲಿ ಕಾಲ ಯಾರು ಎಂದರೆ ಹೇಳುವನು–

**ಪ್ರಕೃತೇರ್ಗುಣಸಾಮ್ಯಸ್ಯ ನಿರ್ವಿಶೇಷಸ್ಯ ಮಾನವಿ ।**
**ಚೇಷ್ಟಾ ಯತಃ ಸ ಭಗವಾನ್ ಕಾಲ ಇತ್ಯುಪಲಕ್ಷಿತಃ ॥೧೮॥**

ಮಾನವಿ=ಮನುಪುತ್ರಿಯೇ ಗುಣಸಾಮ್ಯಸ್ಯ=ಪ್ರಲಯಕಾಲದ ನಿರ್ವಿಶೇಷಸ್ಯ= ಕಾರ್ಯದಲ್ಲಿ ಉದಾಸೀನವಾದ ಪ್ರಕೃತೇಃ=ಚೇತನಾಚೇತನಪ್ರಕೃತಿಗೆ ಯತಃ= ಯಾವನಿಂದ ಚೇಷ್ಟಾ=ಜಗತ್ತಿನ ಸೃಷ್ಟಿಗೆ ಅನುಕೂಲವಾದ ಕ್ರಿಯೆಯು ಆಗುವುದೋ ಸಃ ಭಗವಾನ್=ಆ ಪರಮಾತ್ಮನೇ ಕಾಲಃ ಇತಿ=ಕಾಲನೆಂದು ಉಪಲಕ್ಷಿತಃ ನಮ್ಮಿಂದ ತಿಳಿಯಲ್ಪಟ್ಟಿರುವನು. ಪ್ರಲಯಕಾಲದಲ್ಲಿ ಪ್ರಕೃತಿಪ್ರವರ್ತಕನಾದ ನಿರವಧಿಕ ವ್ಯಾಪ್ತಿಯುಳ್ಳ ಶೂನ್ಯನಾಮಕ ವಿಷ್ಣುವೇ ಕಾಲನೆಂಬುದು ನನಗೂ ಸಮ್ಮತವೆಂದು ಭಾವ. ॥೧೮॥

ಈ ವ್ಯಾಪ್ತನಾದ ಕಾಲನಾಮಕ ಭಗವಂತನು ಹೃದಿಸ್ಥಪುರುಷರೂಪದಿಂದ ಭಿನ್ನನೆಂದರೆ ತತ್ವಗಳು ಇಪ್ಪತ್ತೈದು ಎನ್ನುವುದು ಸಾಧ್ಯವಿಲ್ಲ. ಅಭಿನ್ನನೆಂದರೆ ಒಬ್ಬನಿಗೆ ಅಪರಿಚ್ಛಿನ್ನಪರಿಚ್ಛಿನ್ನಪರಿಮಾಣಗಳು ಎರಡೂ ಅಸಂಭಾವಿತ, ಎಂಬ ಶಂಕೆಗೆ ಅಘಟಿತ ಐಶ್ವರ್ಯದಿಂದ ಸಂಭವವೆಂದು ಹೇಳುವರು –

**ಅಂತಃ ಪುರುಷರೂಪೇಣ ಕಾಲರೂಪೇಣ ಯೋ ಬಹಿಃ ।**
**ಸಮನ್ವೇತ್ಯೇಷ ಸತ್ವಾನಾಂ ಭಗವಾನಾತ್ಮಮಾಯಯಾ ॥೧೯॥**

ಆತ್ಮಮಾಯಯಾ=ತನ್ನ ಇಚ್ಛೆಯಿಂದ ಯಃ ಭಗವಾನ್=ಯಾವ ಶ್ರೀಹರಿಯು ಸತ್ವಾನಾಂ ಪ್ರಾಣಿಗಳನ್ನು ಅಂತಃ=ಒಳಗೆ ಪುರುಷರೂಪೇಣ= ಪುರುಷರೂಪದಿಂದ ಬಹಿಃ=ಹೊರಗೆ ಕಾಲರೂಪೇಣ=ಕಾಲರೂಪದಿಂದ ಸಮನ್ವೇತಿ=ವ್ಯಾಪಿಸುವನು ಆದ್ದರಿಂದ ಏಷಃ=ಇವನು ಏಕ ಏವ=ಒಬ್ಬನೇ, ಭೇದವಿಲ್ಲ. ॥೧೯॥

ಇಲ್ಲಿವರೆಗೆ ಪುರುಷನಿಗೆ ಪ್ರಕೃತಿಯ ವ್ಯಾಪ್ತಿಗಿಂತ ವಿಲಕ್ಷಣ ವ್ಯಾಪ್ತಿಯನ್ನು ಹೇಳಿ ಈಗ ಪ್ರಕೃತಿಗೆ ಇರುವ ಕಾರಣತ್ವವಿಲಕ್ಷಣವಾದ ಕರ್ತೃತ್ವರೂಪಕಾರಣತ್ವವನ್ನು ತಿಳಿಸುತ್ತ ತತ್ವಗಳ ಉತ್ಪತ್ತಿ ಮತ್ತು ಲಕ್ಷಣಗಳನ್ನು ಹೇಳುವರು-

**ದೈವಾತ್ ಕ್ಷುಭಿತಧರ್ಮಿಣ್ಯಾಂ ಸ್ವಸ್ಯಾಂ ಯೋನೌ ಪರಃ ಪುಮಾನ್ ।**
**ಆಧತ್ತ ವೀರ್ಯಂ ಸಾಽಸೂತ ಮಹತ್ತತ್ವಂ ಹಿರಣ್ಮಯಮ್ ॥೨೦॥**

ದೈವಾತ್=ಪ್ರಕೃತಿಗೆ ಕ್ಷೋಭಕವಾದ ನಾರಾಯಣನಿಂದ ಕ್ಷುಭಿತಧರ್ಮಿಣ್ಯಾಂ= ಸೃಷ್ಟಿಮಾಡಬೇಕೆಂಬ ಇಚ್ಛೆಯನ್ನು ಹೊಂದಿದ ಸ್ವಸ್ಯಾಂ ಯೋನೌ=ತನ್ನ ಪತ್ನಿಯಾದ ಲಕ್ಷ್ಮಿಯಿಂದ ಅಭಿವ್ಯಕ್ತವಾದ ಶ್ರೀದೇವಿಯಲ್ಲಿ ಪರಃ ಪುಮಾನ್=ಮೂಲರೂಪ-ದಿಂದ ಅಭಿವ್ಯಕ್ತನಾದ ಪರಮಪುರುಷನು ವೀರ್ಯಂ ಆಧತ್ತ=ರೇತಸ್ಸನ್ನು ಆಧಾನ ಮಾಡಿದನು. ಸಾ=ಶ್ರೀದೇವಿಯು ಹಿರಣ್ಮಯಂ=ಬಂಗಾರಮಯವಾದ ಮಹತ್ತತ್ವಂ =ಮಹತ್ತತ್ವವನ್ನು ಅಸೂತ=ಪ್ರಸವಿಸಿದಳು.

ಈ ಶ್ಲೋಕದಲ್ಲಿ ವಾಸುದೇವ, ಸಂಕರ್ಷಣ, ಅನಿರುದ್ಧರನ್ನು ಮಾತ್ರ ಮಹದಹಂಕಾರ, ಮನೋನಿಯಾಮಕರೆಂದು ಹೇಳುವರು. ಪ್ರದ್ಯುಮ್ನನನ್ನು ಹೇಳುವುದಿಲ್ಲ ಮತ್ತು ಮಹದಾದಿಶಬ್ದಗಳು ಕೇವಲ ಜಡಪರವಾಗಿ ತೋರುವವು. ಕಾರಣ ಈ ಪ್ರಕರಣದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು –

ಪ್ರಕೃತೇಃ ಕ್ಷೋಭಕಂ ರೂಪಂ ದೈವಂ ನಾರಾಯಣಾತ್ಮಕಂ ।
ಪ್ರಕೃತೌ ಮಹತಃ (ಜಗತಃ) ಸ್ರಷ್ಟಾ ಪರಮಃ ಪುರುಷೋ ಮತಃ ॥
ತದೇವ ವಾಸುದೇವಾಖ್ಯಂ ಮಹತ್ತತ್ವನಿಯಾಮಕಂ ।
ಸಂಕರ್ಷಣಾಖ್ಯಸ್ತು ಹರಿಃ ಸೂಕ್ಷ್ಮಾಹಂಕಾರಯಾಮಕಃ ॥
ಸ್ಥೂಲಾಹಂಕರಾನಿಯಮೀ ವಿಷ್ಣುಃ ಪ್ರದ್ಯುಮ್ನನಾಮಕಃ ।
ಅನಿರುದ್ಧೋ ಮನಸ್ತತ್ವನಿಯಂತಾ ಭಗವಾನ್ ಹರಿಃ ॥

**ಮಹತ್ತತ್ತ್ವಾದಿಜೀವಾಸ್ತು ಬ್ರಹ್ಮಶೇಷಾಂಗಜಾಸ್ತಥಾ ।**
**ಸೂಕ್ಷ್ಮಸ್ಥೂಲವಿಭೇದೇನ ಕಾಮಜಶ್ಚಾನಿರುದ್ಧಕಃ ॥ ಇತಿ ಕಾಪಿಲೇಯೇ ।**

ಪ್ರಲಯಜಲಶಾಯಿಯಾದ ದೈವವೆಂದು ಕರೆಸಿಕೊಳ್ಳುವ ನಾರಾಯಣರೂಪವು ಜಡಪ್ರಕೃತಿಗೆ ಜಗದಾತ್ಮನಾ ಪರಿಣಾಮೋನ್ಮುಖಕಾರಕವು, ಚೇತನಪ್ರಕೃತಿಗೆ ಸಿಸೃಕ್ಷೆಯನ್ನುಂಟುಮಾಡುವುದು. ಲಕ್ಷ್ಮೀದೇವಿಯಲ್ಲಿ ಮಹತ್ತತ್ತ್ವವನ್ನು ಸೃಷ್ಟಿಸು-ವವನು ಪರಮಪುರುಷನು, ಅವನೇ ವಾಸುದೇವನು. ಮಹತ್ತತ್ತ್ವನಿಯಾಮಕನು, ಸಂಕರ್ಷಣನೆಂಬ ಶ್ರೀಹರಿಯು. ಸೂಕ್ಷ್ಮ ಅಹಂಕಾರ ನಿಯಾಮಕನು. ಪ್ರದ್ಯುಮ್ನ-ನಾಮಕ ಶ್ರೀವಿಷ್ಣುವು ಸ್ಥೂಲಾಹಂಕಾರ ನಿಯಾಮಕನು. ಅನಿರುದ್ಧನಾಮಕನಾದ ಶ್ರೀಹರಿಯು ಮನಸ್ತತ್ತ್ವ ನಿಯಾಮಕನು. ಮಹತ್ತತ್ತ್ವ ಅಹಂಕಾರತತ್ತ್ವ ಮನಸ್ತತ್ತ್ವಗಳಿಗೆ ಕ್ರಮವಾಗಿ ಬ್ರಹ್ಮದೇವರು ಶೇಷದೇವರು ಮತ್ತು ಕಾಮರು ಅಭಿಮಾನಿಗಳು. ಅಹಂಕಾರದಲ್ಲಿ ಸ್ಥೂಲ, ಸೂಕ್ಷ್ಮವೆಂದು ಬೇದವಿರುವುದರಿಂದ ಸೂಕ್ಷ್ಮಾಹಂಕಾರಾ-ಭಿಮಾನೀ ಶೇಷ ಸ್ಥೂಲಾಹಂಕಾರಾಭಿಮಾನಿ ಕಾಮ. ಸ್ಥೂಲಮನಸ್ತತ್ತ್ವಕ್ಕೆ ಕಾಮಪುತ್ರ ಅನಿರುದ್ಧನು ಅಭಿಮಾನಿ ಎಂದು ತಿಳಿಯಬೇಕು ಎಂದು ಕಾಪಿಲೇಯದಲ್ಲಿದೆ. ॥೨೦॥

ತನ್ನಿಂದ ಸೃಷ್ಟವಾದ ತತ್ತ್ವಗಳು ಕಾಣದಂತೆ ಪ್ರಲಯಕಾಲದಲ್ಲಿ ಕತ್ತಲೆ ಆವರಿಸಿರುವಾಗ ಜಗತ್ತಿನ ಸೃಷ್ಟಿ ಹೇಗೆ ಸಾಧ್ಯ ? ಎಂಬ ಶಂಕೆಗೆ ಆ ಸ್ಥಳದಲ್ಲಿರುವ ತಮಸ್ಸನ್ನು ಭಗವಂತನು ಪಾನ ಮಾಡಿದನೆಂದು ಹೇಳುವರು-

**ವಿಶ್ವಮಾತ್ಮಗತಂ ವ್ಯಂಜನ್ ಕೂಟಸ್ಥೋ ಜಗದಂಕುರಃ ।**
**ಸ್ವತೇಜಸಾಽಪಿಬತ್ ತೀವ್ರಮಾತ್ಮಪ್ರಸ್ವಾಪನಂ ತಮಃ ॥೨೧॥**

ಜಗದಂಕುರಃ=ಜಗತ್ತನ್ನು ತನ್ನ ತೊಡೆಯ ಮೇಲೆ ಸಂತೋಷಗೊಳಿಸುವ ಕೂಟಸ್ಥಃ=ನಿರ್ವಿಕಾರನಾದ ಆ ಪರಮಪುರುಷನು ಆತ್ಮಗತಂ=ತನ್ನಲ್ಲಿರುವ ವಿಶ್ವಂ= ಮುಂದೆ ಹುಟ್ಟುವ ಮಹದಾದಿತತ್ತ್ವಗಳನ್ನು ವ್ಯಂಜಯನ್=ಬೇರೆಯವರಿಗೂ ಪ್ರತ್ಯಕ್ಷವಾಗುವಂತೆ ಮಾಡುವವನಾಗಿ ಸ್ವತೇಜಸಾ=ತನ್ನ ಸ್ವರೂಪಕಾಂತಿಯಿಂದ ತೀವ್ರಂ=ನಿಬಿಡವಾದ ಆತ್ಮಪ್ರಸ್ವಾಪನಂ=(ತನ್ನ ಯೋಗನಿದ್ರೆಗೆ ಕಾರಣವಾದ) ಬ್ರಹ್ಮಾದಿಗಳಿಗೆ ಮೋಹಕವಾದ(ಸಾಕ್ಷಾತ್ಕಾರಪ್ರತಿಬಂಧಕವಾದ) ತಮಃ=ಕತ್ತಲೆಯನ್ನು ಅಪಿಬತ್=ಪಾನಮಾಡಿದನು ; ನುಂಗಿದನು ; ನಿರಾಕರಿಸಿದನೆಂದು ಭಾವ.

(ತಮಃಪಾನವೆಂದರೆ)ಅಪರಿಚ್ಛಿನ್ನಪ್ರಕೃತಿಯೇ ತಮೋರೂಪದಿಂದಿರುವುದರಿಂದ, ಅದರ ಆವರಣ ಶಕ್ತಿಯನ್ನು ಪ್ರತಿಬಂಧಿಸುವುದು ಎಂದು ತಿಳಿಯಬೇಕು.

ಇಲ್ಲಿ ಜಗತಃ ಅಂಕುರಃ ಜಗದಂಕುರಃ ಎಂದು ವಿಗ್ರಹಮಾಡಿ ಜಗತ್ತಿನ ವಿಕಾರ ಹರಿಯು ಎಂದಾಗಲಿ, ಅಥವಾ ಜಗತ್ತಿನ ಅಂಕುರದಂತಿರುವ ಮಹತ್ತತ್ವವೇ ತಮಃಪಾನ ಮಾಡಿತು ಎಂದು ಅರ್ಥ ಮಾಡಿದರೆ ಕೂಟಸ್ಥಃ ಎಂಬ ವಿಶೇಷಣ ಹೊಂದಲಾರದು. ಕಾರಣ ಈ ಶಬ್ದವು ಯೌಗಿಕವಾದುದು. ಮಹತ್ತತ್ವಜನಕನಾಗಿ ಪ್ರಸಕ್ತನಾದ ಶ್ರೀಹರಿವಾಚಕವು ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು –

**ಅಂಕೇ ರಮಯತೇ ಯಸ್ಮಾತ್ ಕೇಶವೋ ಜಗದಂಕುರಃ ।**
**ಮಹಾಂತಂ ಯೋಽಸೃಜಜ್ಜೀವಮೋಹಕಂ ಚ ತಮೋಽಗ್ರಸತ್ ॥ಇತಿ ಚ**

ಜಗತ್ತನ್ನು ತನ್ನ ತೊಡೆಯಮೇಲೆ ಇಟ್ಟುಕೊಂಡು ಸಂತೋಷಪಡಿಸುವುದರಿಂದ ಜಗದಂಕುರನೆನಿಸುವನು. ಯಾವನು ಮಹತ್ತತ್ವವನ್ನು ಸೃಷ್ಟಿಸಿದನು, ಜೀವರ ಸಾಕ್ಷಾತ್ಕಾರಪ್ರತಿಬಂಧಕ ತಮಸ್ಸನ್ನು ನಿರಾಕರಿಸಿದನು, ಎಂದೂ ಕಾಪಿಲೇಯದಲ್ಲಿ ಇದೆ. ಇದರಿಂದ ಪರಮಾತ್ಮನಿಗೆ ಪೂರ್ವಪ್ರಕೃತತ್ವ ಸೂಚಿತವಾಗುವುದು. ॥೨೦॥

ಇಲ್ಲಿ ಪ್ರಾಸಂಗಿಕವಾಗಿ ಮಹತ್ತತ್ವದಲ್ಲಿರುವ ವಾಸುದೇವನಿಗೆ ದೇಹದಲ್ಲಿ ಮಹತ್ತತ್ವಾತ್ಮಕವಾದ ಚಿತ್ತಜನಕತ್ವವೂ ಇದೇ ಎಂದು ಹೇಳುವರು –

**ಯತ್ ತತ್ ಸತ್ವಗುಣಂ ಸ್ವಚ್ಛಂ ಶಾಂತಂ ಭಗವತಃ ಪದಂ ।**
**ಯದಾಹುರ್ವಾಸುದೇವಾಖ್ಯಂ ಚಿತ್ತಂ ತನ್ಮಹದಾತ್ಮಕಂ ॥೨೧॥**

ಯತ್=ಯಾವುದು ತತ್=ವೇದಪ್ರಸಿದ್ಧವಾದ ಸತ್ವಗುಣಂ=ಪೂರ್ಣಾ-ನಂದಾದಿಗುಣವುಳ್ಳ ಸ್ವಚ್ಛಂ=ಧವಲವಾದ ಶಾಂತಂ=ಪ್ರಸನ್ನವಾದ ಯತ್=ಯಾವ ವಾಸುದೇವಾಖ್ಯಂ ಭಗವತಃ ಪದಂ=ವಾಸುದೇವನೆಂಬ ಪರಮಾತ್ಮನ ಸ್ವರೂಪ-ವಿದೆಯೋ ತತ್=ಅದರಿಂದ ಮಹದಾತ್ಮಕಂ=ಮಹತ್ತತ್ವೋಪಾದಾನಕವಾದ ಚಿತ್ತಂ= ಅಂತಃಕರಣ ಪ್ರಭೇದವು ಜಾಯತೇ=ಹುಟ್ಟುವುದು.

ಈ ಶ್ಲೋಕದಲ್ಲಿ ಯಾವನು ವಾಸುದೇವನೋ ಅವನೇ ಚಿತ್ತ ಎಂದು ಅಭೇದ ತೋರುವುದು, ಕಾರಣ ಅಧ್ಯಾಹಾರ ಮಾಡಿ ಯೋಜನೆ ತೋರಿಸುವರು –

**ಯದ್ವಾಸುದೇವಾಖ್ಯಂ ಭಗವದ್ರೂಪಂ ತತೋ ಮಹದಾತ್ಮಕಂ ಚಿತ್ತಂ ಜಾಯತೇ ।**

ವಾಸುದೇವನೆಂಬ ಭಗವದ್ರೂಪದಿಂದ ಮಹತತ್ವೋಪಾದಾನಕ ಚಿತ್ತವು ಜನಿಸುವುದು ಎಂದರ್ಥ.

ಸತ್ವಗುಣಂ ಎಂಬುದಕ್ಕೆ ಬಹಳಸತ್ವಗುಣವುಳ್ಳ ಎಂಬರ್ಥ ಕಾಣುವುದು. ಕಾರಣ ಪ್ರಮಾಣದಿಂದ ಸತ್ವಶಬ್ದಾರ್ಥವನ್ನು ಹೇಳುವರು–

**ಸತ್ವಶಬ್ದೇನ ಚೋಚ್ಯಂತೇ ಪೂರ್ಣಾನಂದಾದಯೋ ಗುಣಾಃ । ಇತಿ ಚ ।**

ಶ್ರೀಹರಿಯ ಪ್ರಕರಣದಲ್ಲಿ ಹೇಳಿದ ಸತ್ವಶಬ್ದದಿಂದ ಪೂರ್ಣಾನಂದಾದಿ-ಗುಣಗಳು ಹೇಳಲ್ಪಡುವವು ಎಂದೂ ಹೇಳಿದೆ.

ಇದೇ ರೀತಿ ಯೋಜಿಸಬೇಕು ಎನ್ನಲು ಜ್ಞಾಪಕವಾದ ಸಮಾಖ್ಯಾಪ್ರಮಾಣ ಹೇಳುವರು –

**ಮಹತ್ತತ್ವಗತೋ ಯೋಽಸೌ ವಾಸುದೇವಾಭಿಧೊ ಹರಿಃ ।**
**ಸ ಚಿತ್ತಜನಕಃ ಪ್ರೋಕ್ತಃ ಪ್ರಾಣಿನಾಂ ಚ ಪೃಥಕ್ ಪೃಥಕ್ ॥ ಇತಿ ಚ ।**

ಮಹತ್ತತ್ವದಲ್ಲಿರುವ ವಾಸುದೇವನೆಂಬ ಹರಿಯು ಜನರ ಪ್ರತ್ಯೇಕ ಚಿತ್ತಕ್ಕೆ ಜನಕನು ಎಂದು ಭಾವ. ॥೨೨॥

ಚಿತ್ತದ ಸ್ವಾಭಾವಿಕ ಲಕ್ಷಣಗಳನ್ನು ಹೇಳುವರು –

**ಸ್ವಚ್ಛತ್ವಮವಿಕಾರಿತ್ವಂ ಶಾಂತತ್ವಮಿತಿ ಚೇತಸಃ ।**
**ವೃತ್ತಿಭಿರ್ಲಕ್ಷಣಂ ಪ್ರೋಕ್ತಂ ಯಥಾಽಪಾಂ ಪ್ರಕೃತಿಃ ಪರಾ ॥೨೩॥**

ಸ್ವಚ್ಛತ್ವಂ=ನಿರ್ಮಲತೆಯು ಅವಿಕಾರಿತ್ವಂ=ಬಹಳವಿಕಾರವಾಗದಿರುವುದು ಶಾಂತತ್ವಂ=ನಿಶ್ಚಲತೆಯು ಚೇತಸಃ=ಸಜ್ಜನರ ಚಿತ್ತದ ವೃತ್ತಿಭಿಃ=ಸ್ವಭಾವಗಳಿಂದ ಲಕ್ಷಣಂ=ಲಕ್ಷಣವು ಪ್ರೋಕ್ತಂ=ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಯಥಾ=ಹೇಗೆ ಅಪಾಂ= ನೀರಿನ ಪ್ರಕೃತಿಃ=ಸ್ವಭಾವವು ಪರಾ=ಅನಂತರ ಕಾಣುವುದೋ ತಥಾ=ಅದರಂತೆ ಎಂದರ್ಥ. ಅಂದರೆ ಹೇಗೆ ಮಳೆಗಾಲದಲ್ಲಿ ನೀರಿನಲ್ಲಿ ಮಣ್ಣು ಮುಂತಾದ ಕೊಳೆಯು ನೊರೆ ತೆರೆಗಳು ಮುಂತಾದ ವಿಕಾರವು ಚಾಂಚಲ್ಯವು ಕಾಣುವುದು. ನಂತರ ಶರತ್‌ಕಾಲದಲ್ಲಿ ನಿರ್ಮಲತೆಯು, ನೊರೆ ತೆರೆಗಳು ಮುಂತಾದ ವಿಕಾರವಿಲ್ಲದಿರುವುದು, ಸರೋವರಾದಿಗಳಲ್ಲಿ ನಿಶ್ಚಲತೆಯು ಸ್ವಾಭಾವಿಕವಾದುದು ಕಾಣುವುದು ಅದರಂತೆ. ಶ್ರವಣಾದಿಗಳು ಇಲ್ಲದಿರುವಾಗ ಸ್ವಚ್ಛತೆ ಮುಂತಾದವು ಕಾಣದಿದ್ದರೂ ಶ್ರವಣಾದಿಗಳನ್ನು ಮಾಡಿದ ಮೇಲೆ ಕಂಡು ಬರುವುವು, ಕಾರಣ ಅಸಂಭವವಿಲ್ಲವೆಂದು ಭಾವ.

ಹಿಂದಿನ ಶ್ಲೋಕದಲ್ಲಿ ಸ್ವಚ್ಛತ್ವಾದಿಗಳು ವಾಸುದೇವನ ಗುಣಗಳೆಂದು ಹೇಳಿದೆ. ಅವುಗಳೇ ಚಿತ್ತ ಗುಣಗಳೆಂದು ಇಲ್ಲಿ ಹೇಳುವರು ಹೇಗೆ ಸಮಂಜಸವಾಗುವುದು ಎಂಬ ಶಂಕೆಗೆ ಶಬ್ದ ಒಂದೇ ಆಗಿದ್ದರೂ ಅರ್ಥ ಬೇರೆ ಇದೆ ಎಂದು ಸಮಾಧಾನ ಹೇಳುವರು ಆಚಾರ್ಯರು –

**ಚಿತ್ತಸ್ಯ ಸ್ವಚ್ಛತ್ವಾದಯಃ ಪೃಥಗ್ಗುಣಾ ಉಚ್ಯಂತೇ ಸ್ವಚ್ಛತ್ವಮಿತ್ಯಾದಿ ।**

ವಾಸುದೇವನ ಗುಣಗಳಾದ ಸ್ವಚ್ಛತ್ವಾದಿಗುಣಗಳಿಂದ ಭಿನ್ನಗಳಾದ ಗುಣಗಳನ್ನು ಸ್ವಚ್ಛತ್ವಮವಿಕಾರಿತ್ವಂ ಮುಂತಾಗಿ ಹೇಳುವರು ಎಂದರ್ಥ.

ಇಲ್ಲಿ ಹೇಳಿದ ಅವಿಕಾರಿತ್ವವು ಅಸಂಭಾವಿತವು. ಚಿತ್ತಕ್ಕೆ ವಿಕಾರಗಳಿವೆ ಎಂದರೆ ಅದರ ತಾತ್ಪರ್ಯ ಹೇಳುವರು ಪ್ರಮಾಣದಿಂದಲೇ –

**ಸ್ತಿಮಿತೋದಕಚಿತ್ತಾದೇರವಿಕಾರೋಽಲ್ಪವಿಕ್ರಿಯಾ । ಇತಿ ತತ್ವವಿವೇಕೇ ।**

ಪುರಾಣಾದಿಗಳಲ್ಲಿ ನೀರು ಚಿತ್ತ ವಾಯು ಮುಂತಾದ ನಿಶ್ಚಲ, ಸ್ತಿಮಿತ ಅವಿಕಾರ ಎಂದು ಹೇಳಿದರೆ ಅಲ್ಲಿ ಅಲ್ಪವಿಕಾರವೆಂದು (ಬಹಳ ವಿಕಾರವಿಲ್ಲ) ಎಂದು ತಿಳಿಯಬೇಕು ಎಂದು ತತ್ವವಿವೇಕದಲ್ಲಿದೆ.

ಸ್ವಚ್ಛತ್ವಾದಿಗಳು ಚಿತ್ತದ ವೃತ್ತಿಗಳಲ್ಲ (ಪರಿಣಾಮದಲ್ಲಿ) ಕಾರಣ ''ವೃತ್ತಿಭಿಃ ಲಕ್ಷಣ'' ಎಂದು ಹೇಗೆ ? ಎಂದರೆ ಇಲ್ಲಿ ವಿವಕ್ಷಿತ ವೃತ್ತಿಶಬ್ದಾರ್ಥವನ್ನು ಪ್ರಮಾಣದಿಂದ ಹೇಳುವರು –

**ವೃತ್ತಿಃ ಸ್ವಭಾವೋ ವೃತ್ತಂ ಚ ಸ್ಥಿತಿರಿತ್ಯಭಿಧೀಯತೇ । ಇತಿ ಶಬ್ದನಿರ್ಣಯೇ ।**
**ವೃತ್ತಿಭಿಃ ಲಕ್ಷಣಂ ಪ್ರೋಕ್ತಮಿತಿ ಸ್ವಾಭಾವಿಕಂ ಲಕ್ಷಣಂ ಇತ್ಯರ್ಥಃ ।**

ವೃತ್ತಿ ಎಂದರೆ ಸ್ವಭಾವ ಇರುವಿಕೆ ಮುಂತಾದವು ಹೇಳಲ್ಪಡುವವು ಎಂದು ಶಬ್ದನಿರ್ಣಯ ಇರುವುದರಿಂದ ವೃತ್ತಿಭಿಃ ಲಕ್ಷಣಂ ಪ್ರೋಕ್ತಂ ಎಂದರೆ ಸ್ವಾಭಾವಿಕ ಲಕ್ಷಣ ಹೇಳಿರುವರೆಂದರ್ಥ. ॥೨೩॥

ಅಹಂಕಾರದ ಉತ್ಪತ್ತಿ ಮತ್ತು ವಿಭಾಗಾದಿಗಳನ್ನು ಹೇಳುವರು –

**ಮಹತ್ತತ್ವಾದ್ ವಿಕುರ್ವಾಣಾದ್ ಭಗವದ್ವೀರ್ಯಸಂಭವಾತ್ ।**
**ಕ್ರಿಯಾಶಕ್ತಿರಹಂಕಾರಸ್ತ್ರಿವಿಧಃ ಸಮಪದ್ಯತ ॥೨೪॥**

ಭಗವದ್ವೀರ್ಯಸಂಭವಾತ್=ಭಗವಂತನ ವೀರ್ಯದಿಂದ ಉಂಟಾದ ಮಹತ್ತತ್ವಾತ್ ವಿಕುರ್ವಾಣಾತ್=ಮಹತ್ತತ್ವದ ವಿಕಾರವಾಗಿ (ವಿಕಾರ ಹೊಂದುವ ಮಹತ್ತತ್ವದಿಂದ) ಕ್ರಿಯಾಶಕ್ತಿಃ=ತನ್ನ ವಿಹಿತವಾದ ಕ್ರಿಯಾಶಕ್ತಿಯುಳ್ಳ ತ್ರಿವಿಧಃ= ಮೂರು ವಿಧವಾದ ಅಹಂಕಾರಃ=ಅಹಂಕಾರತತ್ವವು ಸಮಪದ್ಯತ=ಜನಿಸಿತು.

ಮಹತ್ತತ್ವದಲ್ಲಿ ಕ್ರಿಯಾ ಇಲ್ಲ, ಅಹಂಕಾರದಲ್ಲಿ ಜ್ಞಾನವಿಲ್ಲ ಎಂದಾಯಿತಲ್ಲ ಎಂದರೆ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು –

**ಜ್ಞಾನಪ್ರಧಾನಸ್ತು ಮಹಾನಹಂಕಾರಃ ಕ್ರಿಯಾಧಿಕಃ ।**
**ಇತರಾಪೇಕ್ಷಯಾ ಸೋಽಪಿ ಜ್ಞಾನಾಧಿಕ ಇತೀರಿತಃ ॥ ಇತಿ ಚ ।**

ಮಹತತ್ವಾಭಿಮಾನಿ ಬ್ರಹ್ಮದೇವರು ತನ್ನಲ್ಲಿರುವ ಕ್ರಿಯೆಗಿಂತಲು ಹೆಚ್ಚಾದ ಜ್ಞಾನವುಳ್ಳವರು. ತನ್ನಲ್ಲಿರುವ ಜ್ಞಾನಕ್ಕಿಂತ ಅಲ್ಪಕ್ರಿಯವುಳ್ಳವರು. ಅಹಂಕಾರಾಭಿಮಾನಿ ರುದ್ರದೇವರು ತನ್ನಲ್ಲಿರುವ ಜ್ಞಾನದಕ್ಕಿಂತ ತಮಗೆ ವಿಹಿತ ಕ್ರಿಯಾಶಕ್ತಿ ಹೆಚ್ಚಾಗಿ ಉಳ್ಳವರು ಎಂದೇ ಅರ್ಥ. ಏಕೆಂದರೆ ಉಮಾದಿಗಳಿಗಿಂತ ರುದ್ರದೇವರು ಸಹ ಜ್ಞಾನಾಧಿಕರೆಂದು ವೇದದಲ್ಲಿ ಹೇಳಿದೆ ಎಂದು ಭಾವ. ಅಂತು ಉಮಾದಿಗಳಿಗಿಂತ ಅಧಿಕ ಜ್ಞಾನ ಇದ್ದು ತನ್ನಲ್ಲಿರುವ ಜ್ಞಾನದಕ್ಕಿಂತ ಹೆಚ್ಚು ಕ್ರಿಯಾ ಇರುವುದು ಅಂಹಕಾರದ ಲಕ್ಷಣವೆಂದು ಹೇಳಿದಂತಾಯಿತು.

ಅವ್ಯಕ್ತತತ್ವದಿಂದ ಸಾಕ್ಷಾತ್ ಮಹತ್ತತ್ವವು ಮತ್ತು ಭಗವಂತನ ವೀರ್ಯಾತ್ಮನಾ ಪರಿಣತವಾದುದುರಿಂದ ಬ್ರಹ್ಮದೇವರ ದೇಹವು ಜನಿಸಿತು. ಹಾಗೆ ಅಂಹಕಾರ ಮತ್ತು ರುದ್ರದೇವರ ದೇಹ ಜನಿಸಿದವು. ತತ್ವ, ಅಭಿಮಾನಿ ಎರಡರ ದೃಷ್ಟಿಯಿಂದ ವಾಕ್ಯಗಳು ಪ್ರವೃತ್ತವಾದ್ದರಿಂದ ಜ್ಞಾನ ಕ್ರಿಯೆಗಳನ್ನು ಹೇಳುವುದು ಉಚಿತ. ॥೨೪॥

**ವೈಕಾರಿಕಸ್ತೈಜಸಶ್ಚ ತಾಮಸಶ್ಚ ಯತೋ ಭವಃ ।**
**ಮನಸಶ್ಚೇಂದ್ರಿಯಾಣಾಂ ಚ ಭೂತಾನಾಂ ಮಹತಾಮಪಿ ॥೨೫॥**

ಯತಃ=ಯಾವುದರಿಂದ ಮನಸಃ=ಮನಸ್ಸಿನ ಭವಃ=ಉತ್ಪತ್ತಿಯಾಗುವದೋ ಸಃ=ಅದು ವೈಕಾರಿಕಃ=ವೈಕಾರಿಕವು. ಯತಃ=ಯಾವುದರಿಂದ ಇಂದ್ರಿಯಾಣಾಂ ಭವಃ=ಇಂದ್ರಿಯಗಳ ಉತ್ಪತ್ತಿಯಾಗುವುದೋ ಸಃ ತೈಜಸಃ=ತೈಜಸವು. ಯತಃ= ಯಾವುದರಿಂದ ಮಹತಾಂ ಭೂತಾನಾಂ ಭವಃ=ಪಂಚಮಹಾಭೂತಗಳ ಉತ್ಪತ್ತಿ-ಯಾಗುವುದೋ ಸಃ=ಅದು ತಾಮಸಃ=ತಾಮಸ ಅಹಂಕಾರವು. ಹೀಗೆ ಅಹಂಕಾರವು ಮೂರು ವಿಧ ॥೨೫॥

ಅಹಂಕಾರಗಳ ಇತರ ಕಾರ್ಯಗಳನ್ನು ಹೇಳುವರು –

**ವೈಕಾರಿಕೋಽಧಿದೈವಂ ತು ಬುದ್ಧಿಃ ಪ್ರಾಣಶ್ಚ ತೈಜಸಃ ।**
**ತಾಮಸಸ್ತ್ವರ್ಥಮಾತ್ರಂ ಚ ಗುಣವ್ಯತಿಕರಸ್ತ್ರಿವೃತ್ ॥೨೬॥**

ವೈಕಾರಿಕಃ=ವೈಕಾರಿಕ ಅಹಂಕಾರದಿಂದ ಅಧಿದೈವಂ ತು=ಇಂದ್ರಿಯಾಭಿಮಾನಿ ದೇವತೆಗಳ ದೇಹಸಮೂಹವು ಬುದ್ಧಿಃ=ಬುದ್ಧಿತತ್ವವು ಅದಕ್ಕೆ ಅಭಿಮಾನಿಯಾದ ಉಮಾದೇವಿಯು, ಪ್ರಾಣಃ=ಅಹಂಕಾರಿಕಪ್ರಾಣನು ತೈಜಸಃ=ತೈಜಸಅಹಂಕಾರ-

ದಿಂದ ಜನಿಸಿದರು. ಅರ್ಥಮಾತ್ರಂ=ಶಬ್ದಾದಿವಿಷಯಗಳು ತಾಮಸಃ=ತಾಮಸ ಅಹಂಕಾರದಿಂದ ಜನಿಸಿದವು. ಯತಃ=ಯಾವಕಾರಣ ಗುಣವ್ಯತಿಕರಃ=ಸತ್ವಾದಿ ಗುಣಗಳ ವ್ಯತ್ಯಾಸವುಳ್ಳದ್ದಾಗಿದೆಯೋ ಅತಃ=ಆದ್ದರಿಂದ ತ್ರಿವೃತ್=ಮೇಲೆ ಹೇಳಿದ ಪ್ರಕಾರ ಮೂರು ಕಾರ್ಯಗಳನ್ನು ಮಾಡುವುದು. (ತ್ರೀಣಿ ಕಾರ್ಯಾಣಿ ವೃಣುತೇ ಇತಿ ತ್ರಿವೃತ್। ಗುಣಾನಾಂ ವ್ಯತಿಕರಃ ಯಸ್ಮಿನ್ ಸಃ) ತನ್ನಲ್ಲಿ ಪ್ರವಿಷ್ಟವಾದ ಸತ್ವಾದಿ ಗುಣಗಳಿಗೆ ಅನುಗುಣವಾಗಿ ಮೂರು ಕಾರ್ಯಗಳನ್ನು ಅಹಂಕಾರವು ಹುಟ್ಟಿಸಿರುವುದು ಎಂದು ಅಭಿಪ್ರಾಯ.

ಇಲ್ಲಿ ಅಧಿದೈವಂ ಎಂಬುದಕ್ಕೆ ಪ್ರಕೃತಸಂಗತ ಅರ್ಥ ಹೇಳುವರು –

**ದೇವತಾಧಿಕೃತಂ ಯತ್ತದಧಿದೈವಮಿತಿ ಸ್ಮೃತಂ । ಇತಿ ಚ ।**

ಇಂದ್ರಿಯಾಬಿಮಾನಿ ದೇವತೆಗಳಿಂದ ಅಧಿಷ್ಠಿತವಾದ ಶರೀರ ಸಮೂಹವು ಇಲ್ಲಿ ಅಧಿದೈವ ಶಬ್ದದಿಂದ ಕರೆಯಲ್ಪಡುವುದು.

ಹಾಗಾದರೆ ಪ್ರಥಮಾವಿಭಕ್ತಿ ಪ್ರಯೋಗ ಹೇಗೆ ಉಪಪನ್ನ ಎಂದು ಹೇಳುವರು –

**ವೈಕಾರಿಕೋಽಧಿದೈವಮಿತ್ಯಾದಿ ಪಂಚಮ್ಯರ್ಥೇ ।**

ವೈಕಾರಿಕೋಽಧಿದೈವಂ ಮುಂತಾದ ವಾಕ್ಯಗಳಲ್ಲಿ ಇರುವ ಪ್ರಥಮಾ ವಿಭಕ್ತಿಗಳು ಪಂಚಮಿ ಅರ್ಥದಲ್ಲಿವೆ.

ಈ ರೀತಿ ಉಪಯೋಗಿಸಲು ನಿಯಾಮಕ ಪ್ರಮಾಣ ಹೇಳುವರು –

**ಸಪ್ತಸು ಪ್ರಥಮಾ ಯತ್ರ ಸ್ವಾತಂತ್ರ್ಯಂ ಯದ್ವಿವಕ್ಷಿತಂ । ಇತಿ ಶಬ್ದನಿರ್ಣಯೇ**

ಎಲ್ಲಿ ಕಾರಣಗಳಿಗೆ ಸ್ವಾತಂತ್ರ್ಯ ತಿಳಿಸುವ ಉದ್ದೇಶವಿರುವುದೋ ಆ ಕಾರಣಗಳನ್ನು ತಿಳಿಸುವ ಪದಗಳಿಗೆ ಏಳೂ ವಿಭಕ್ತಿಯ ಸ್ಥಳದಲ್ಲಿ ಪ್ರಥಮಾ ಒಂದೇ ಆಗುವುದು. ಪ್ರಕೃತದಲ್ಲಿ ವೈಕಾರಿಕಾದಿಕಾರಣಗಳಿಗೆ ಸ್ವಾತಂತ್ರ್ಯ ತಿಳಿಸಲು ಪ್ರಥಮಾ ಪ್ರಯೋಗವೆಂದು ತಿಳಿಯಬೇಕು. ॥೨೬॥

ಅಹಂಕಾರಾಭಿಮಾನಿ ದೇವತೆಯನ್ನು ತನ್ನಿಯಾಮಕ ಭಗವದ್ರೂಪವನ್ನೂ ಹೇಳುವರು –

**ಸಹಸ್ರಶಿರಸಂ ಸಾಕ್ಷಾದ್ ಯಮನಂತಂ ಪ್ರಚಕ್ಷತೇ ।**
**ಸಂಕರ್ಷಣಾಖ್ಯಂ ಪುರುಷಂ ಭೂತೇಂದ್ರಿಯಮನೋಮಯಂ ॥೨೭॥**

ಯಂ=ಯಾವ ಸೂಕ್ಷ್ಮಾಹಂಕಾರವನ್ನು ಅನಂತಂ=ಶೇಷಾಭಿಮನ್ಯಮಾನವೆಂದು ಪ್ರಚಕ್ಷತೇ=ಜ್ಞಾನಿಗಳು ಹೇಳುವರು. ಸಹಸ್ರಶಿರಸಂ=ಸಾವಿರತಲೆಗಳುಳ್ಳ ಸಾಕ್ಷಾತ್ ಸಂಕರ್ಷಣಾಖ್ಯಂ ಪುರುಷಂ=ಸಂಕರ್ಷಣನೆಂಬ ಭಗವಂತನನ್ನು ಭೂತೇಂದ್ರಿಯ-ಮನೋಮಯಂ=ಪಂಚಮಹಾಭೂತಗಳು ಇಂದ್ರಿಯಗಳು, ಮನಸ್ಸು ಏತದಾತ್ಮಕ ಸೂಕ್ಷ್ಮಾಹಂಕಾರ ನಿಯಾಮಕನೆಂದು ಹೇಳುವರು. ಇದರಂತೆ ಸ್ಥೂಲಾಹಂಕಾರಾಭಿ-ಮಾನಿಯು ಕಾಮನು. ನಿಯಾಮಕನು ಪ್ರದ್ಯುಮ್ನನಾಮಕ ಭಗವಂತನೆಂದೂ ತಿಳಿಯಬೇಕು. ॥೨೭॥

ಅಹಂಕಾರದ ಲಕ್ಷಣಗಳನ್ನು ಹೇಳುವರು –

**ಕರ್ತೃತ್ವಂ ಕರಣತ್ವಂ ಚ ಕಾರ್ಯತ್ವಂ ಚೇತಿ ಲಕ್ಷಣಂ ।**
**ಶಾಂತಘೋರವಿಮೂಢತ್ವಮಿತಿ ವಾ ಸ್ಯಾದಹಂಕೃತೇಃ ॥೨೮॥**

ಅಹಂಕೃತೇಃ=ತ್ರಿವಿಧ ಅಹಂಕಾರಕ್ಕೆ ಕರ್ತೃತ್ವ, ಕರಣತ್ವ, ಕಾರ್ಯತ್ವಗಳು ಕ್ರಮವಾಗಿ ಒಂದೊಂದಕ್ಕೆ ಒಂದೊಂದು ಲಕ್ಷಣವು, ಅಂದರೆ ವೈಕಾರಿಕ ಅಹಂಕಾರವು ಮನೋರೂಪವಾಗಿ (ಉಪಚಾಯಕವಾಗಿ) ಪರಿಣಮಿಸಿ ದೇಹಾದಿಗಳಲ್ಲಿ ನಾನು ಮಾಡುವೆನು ನನ್ನದು ಎಂಬ ಕರ್ತೃತ್ವಾಭಿಮಾನ ಸ್ವಾಮಿತ್ವಾಭಿಮಾನ ಜನಕವಾದ್ದ-ರಿಂದ ಕರ್ತೃತ್ವವು ವೈಕಾರಿಕ ಅಹಂಕಾರದಲಕ್ಷಣವು. ತೈಜಸ ಅಹಂಕಾರವು ಇಂದ್ರಿಗಳ ರೂಪವನ್ನು ತಾಳಿ (ಇಂದ್ರಿಯಗಳಿಗೆ ಉಪಚಾಯಕವಾಗಿ) ಜ್ಞಾನಸಾಧನವಾಗು-ವುದರಿಂದ ತೈಜಸ ಅಹಂಕಾರಕ್ಕೆ ಕಾರಣತ್ವವು ಲಕ್ಷಣವು. ಅದರಂತೆ ತಾಮಸ ಅಹಂಕಾರವು ತನ್ನ ಕಾರ್ಯವಾದ ದೇಹರೂಪದಿಂದ ಪುನಃ ಪುನಃ ಜನಿಸುವುದ-ರಿಂದ ಅದಕ್ಕೆ ಕಾರ್ಯತ್ವವು ಲಕ್ಷಣವು ಎಂದು ತಿಳಿಯಬೇಕು. ಇದರಂತೆ ವೈಕಾರಿಕ ಅಹಂಕಾರವು, ಶಾಂತವಾದ ದೇವತೆಗಳ ದೇಹಕ್ಕೆ ಜನಕವಾದುದರಿಂದ ಶಾಂತತ್ವವು ತೈಜಸ ಅಹಂಕಾರವು ಘೋರಸಂಸಾರಜನಕ ಇಂದ್ರಿಯ ಜನಕವಾದ್ದರಿಂದ ಘೋರತ್ವವು, ತಾಮಸ ಅಹಂಕಾರವು, ತನ್ನ ಕಾರ್ಯವಾದ ಭೂತಾಭಿಮಾನಿ ಶೇಷನಿಗೆ ಜ್ಞಾನಪ್ರಕಟಮಾಡದಿರುವುದರಿಂದ ಮೂಢತ್ವವೂ ಅಹಂಕಾರದಲಕ್ಷಣ ವೆಂದು ತಿಳಿಯಬೇಕು.

ಮೇಲಿನ ಶ್ಲೋಕದಲ್ಲಿ ಒಂದೇ ಅಹಂಕಾರಕ್ಕೆ ವಿರುದ್ಧವಾದ ಮೂರು ಕರ್ತೃತ್ವ, ಕರಣತ್ವ, ಕಾರ್ಯತ್ವಗಳು ಲಕ್ಷಣವಾಗುವುವು ಎಂಬ ಶಂಕೆಗೆ ಪ್ರಮಾಣದಿಂದ ಅವುಗಳ ಘಟನೆಯನ್ನು ತಿಳಿಸುವರು –

ಮನೋರೂಪೇಣ ಕರ್ತೃತ್ವಂ ದೇಹರೂಪೇಣ ಕಾರ್ಯತಾ ।
ಇಂದ್ರಿಯಾತ್ಮತಯಾ ಚೈವ ಕರಣತ್ವಮಹಂಕೃತೇಃ ॥
ಯತೋ ಮನಸ್ಯಹಂಭಾವಃ ತಸ್ಮಾತ್ ಕರ್ತೃ ಮನಃ ಸ್ಮೃತಮ್ ।
ಸ್ವಭಾವಕರ್ತುರ್ಜೀವಸ್ಯ ತ್ವಾಪನ್ನೋಪಾಧಿ ತದ್ಯತಃ ॥
ಕರ್ಮಜ್ಞಾನೇ ಕಾರಣತಾ ಯತಃ ಕರಣಮಿಂದ್ರಿಯಂ ।
ಕಾರ್ಯಂ ದೇಹಃ ಸಮುದ್ದಿಷ್ಟ ಉತ್ಪಾದ್ಯತ್ವಾತ್ ಪುನಃ ಪುನಃ ॥

ಇತಿ ತತ್ವವಿವೇಕೇ ।

ಶಾಂತರೂಪೋ ದೇವಪಿತಾ ಘೋರಃ ಕರಣಸೃಙ್ಮತಃ ।
ತಾವತ್‌ಜ್ಞಾನಸ್ಯಾಪ್ರಕಾಶಾನ್ಮೂಢೋ ಭೂತಪಿತಾ ಸ್ಮೃತಃ ।
ತ್ರಿರೂಪೋಽಯಮಹಂಕಾರಃ ಶೇಷ ಇತ್ಯೇವ ತಂ ವಿದುಃ ॥

ಇತಿ ತತ್ವವಿವೇಕೇ ।

ವೈಕಾರಿಕಅಹಂಕಾರಕಾರ್ಯವಾದ ಮನೋರೂಪದಿಂದ ಕರ್ತೃತ್ವವು, ತಾಮಸ ಅಹಂಕಾರಕಾರ್ಯವಾದ ಭೌತಿಕದೇಹರೂಪದಿಂದ ಕಾರ್ಯತ್ವವು, ತೈಜಸಅಹಂಕಾರ ಕಾರ್ಯವಾದ ಇಂದ್ರಿಯಗಳರೂಪದಿಂದ ಕರಣತ್ವವೂ ಅಹಂಕಾರದ ಲಕ್ಷಣ-ಗಳಾಗುವುವು. ಮನಸ್ಸಿದ್ದಾಗಲೇ (ಇದ್ದರೆ ಮಾತ್ರ) ನಾನು ಕರ್ತಾ ಎಂಬ ಅಭಿಮಾನ ಹುಟ್ಟುವುದರಿಂದ ಕರ್ತೃತ್ವಾಭಿಮಾನ ಜನಕವಾದ್ದರಿಂದ ಮನಸ್ಸು ಕರ್ತೃವೆನಿಸುವುದು. ಯದ್ಯಪಿ ಜೀವನಿಗೆ ಕರ್ತೃತ್ವವು ಅದರ ಅನುಭವವೂ ಸ್ವಾಭಾವಿಕವಾಗಿ ಸಾಕ್ಷಿರೂಪವಾದುದು ನಿತ್ಯವಾಗಿದೆ. ಆದರೂ ದೇಹಾದಿಗಳಲ್ಲಿ ನಾನು ನನ್ನದೆಂಬ ಅಭಿಮಾನರೂಪವಾದ ಜ್ಞಾನವು ಬಾಹ್ಯ ಉಪಾಧಿ ಇಲ್ಲದೆ ಹುಟ್ಟಲಾರದು, ಕಾರಣ ಮನಸ್ಸು ಸ್ಥೂಲದೇಹಕ್ಕಿಂತ ಸನ್ನಿಹಿತವಾದ ಉಪಾಧಿಯಾದುದರಿಂದ ಕರ್ತೃವೆನಿಸು-ವುದು ಎಂದು ಭಾವ.

ಕರ್ಮೇಂದ್ರಿಯ ಸಾಧ್ಯವಾದ ಕ್ರಿಯೆಗಳಿಗೆ ಜ್ಞಾನೇಂದ್ರಿಯ ಸಾಧ್ಯಜ್ಞಾನಗಳಿಗೆ ಇಂದ್ರಿಯಗಳು ಕರಣವಾದ್ದರಿಂದ ತಜ್ಜನಕ ತೈಜಸಅಹಂಕಾರವು ಕಾರಣವೆನಿಸುವುದು.

ಯದ್ಯಪಿ ಇಂದ್ರಿಯಾದಿಗಳು ಕಾರ್ಯವಾಗಿವೆ. ಆದರೂ ಹನ್ನೊಂದು ಇಂದ್ರಿಯಗಳು ಲಿಂಗಶರೀರಾತ್ಮಾನಾ ಅನಾದಿಕಾಲದಿಂದ ಸಂಬಂಧ್ದವಾಗಿದ್ದು ಮತ್ತೆ ಮತ್ತೆ ಉಪಚಯ ಹೊಂದುವುವು. ದೇಹವಾದರೂ ಕರ್ಮಾನುಸಾರ ಹಿಂದೆ ಇಲ್ಲದಿರುವುದೇ ಹೊಸದಾಗಿ ಮತ್ತೆ ಮತ್ತೆ ಹುಟ್ಟುವುದು ಆದ್ದರಿಂದ ದೇಹಕ್ಕೆ ಕಾರ್ಯರೂಪತ್ವ ಹೇಳಿದೆ ಎಂದು ತತ್ವವಿವೇಕದಲ್ಲಿದೆ.

ಶಾಂತವಾದ ದೇವತೆಗಳ ದೇಹಕ್ಕೆ ಕಾರಣವಾದ ವೈಕಾರಿಕಅಹಂಕಾರವು ಶಾಂತರೂಪವು. ಕರಣಗಳಾದ ಇಂದ್ರಿಯಜನಕ ತೈಜಸಾಹಂಕಾರವು ಘೋರಸಂಸಾರ ಕಾರಣವಾದ್ದರಿಂದ ಘೋರವೆನಿಸುವುದು. ಇಂದ್ರಿಯಾಭಿಮಾನಿಗಳಿಗೆ ಇರುವಷ್ಟು ಜ್ಞಾನವು ಭೂತಾಭಿಮಾನಿಗಳಾದಾಗ ಪ್ರಕಟವಾಗಿ ಇರುವುದಿಲ್ಲವಾದುದರಿಂದ ಭೂತಜನಕ ತಾಮಸಅಹಂಕಾರವು ಮೂಢವೆನಿಸುವುದು. ಈ ರೀತಿ ಮೂರೂವಿಧ ಅಹಂಕಾರವೂ ಶೇಷಾಭಿಮನ್ಯಮಾನವೇ ಎಂದು ಜ್ಞಾನಿಗಳು ತಿಳಿಯುವರು, ಎಂದು ತತ್ವವಿವೇಕದಲ್ಲಿದೆ. ॥೨೮॥

ವೈಕಾರಿಕ ಅಹಂಕಾರಾದಿಗಳಿಂದ ಮನಸ್ಸು ಮೊದಲಾದವುಗಳ ಉತ್ಪತ್ತಿ ಹೇಳಿದ್ದನ್ನು ವಿವರಿಸುವರು–

**ವೈಕಾರಿಕಾದ್ ವಿಕುರ್ವಾಣಾನ್ಮನಸ್ತತ್ವಮಜಾಯತ ।**
**ಯತ್ಸಂಕಲ್ಪವಿಕಲ್ಪಾಭ್ಯಾಂ ವರ್ತತೇ ಕಾಮಸಂಭವಃ ॥೨೯॥**

ಯತ್=ಯಾವುದರಿಂದ ಸಂಕಲ್ಪವಿಕಲ್ಪಾಭ್ಯಾಂ=ಸಂಕಲ್ಪವಿಕಲ್ಪ ಎಂಬ ವಿಶೇಷವೃತ್ತಿಗಳಿಂದ ಕಾಮಸಂಭವಃ ವರ್ತತೇ=ಕಾಮೋತ್ಪತ್ತಿಯಾಗುವುದೋ ತತ್= ಅಂತಹ ಮನಸ್ತತ್ವಂ=ಮನಸ್ಸೆಂಬ ತತ್ವವು ವಿಕುರ್ವಾಣಾತ್=ವಿಕಾರಹೊಂದುವ ವೈಕಾರಿಕಾತ್=ವೈಕಾರಿಕ ಅಹಂಕಾರದಿಂದ ಅಜಾಯತ=ಉತ್ಪನ್ನವಾಯಿತು. ಸಂಕಲ್ಪಗಳ ದ್ವಾರಾ ಅನೇಕರೀತಿಯ ಕಾಮನೆಗಳನ್ನು ಹುಟ್ಟಿಸುವುದು ಮನಸ್ಸು ಎಂದು ಹೇಳಿದಂತಾಯಿತು. ॥೨೯॥

ಮನಸ್ತತ್ವದ ಅಭಿಮಾನಿ ದೇವತೆಯನ್ನು ನಿಯಾಮಕ ಶ್ರೀಹರಿಯ ರೂಪವನ್ನೂ ಹೇಳುವರು –

**ಯದ್ವಿದುರ್ಹ್ಯನಿರುದ್ಧಾಖ್ಯಂ ಹೃಷೀಕಾಣಾಮಧೀಶ್ವರಮ್ ।**
**ಶಾರದೇಂದೀವರಶ್ಯಾಮಂ ಸಂರಾಧ್ಯಂ ಯೋಗಿಭಿಃ ಶನೈಃ ॥೩೦॥**

ಹೃಷೀಕಾಣಾಂ ಅಧೀಶ್ವರಂ=ಇಂದ್ರಿಯಗಳಿಗೆ ನಿಯಾಮಕವಾದ ಯತ್=ಯಾವ ಮನಸ್ಸಿದೆಯೋ ತತ್=ಅದನ್ನು ಅನಿರುದ್ಧಾಖ್ಯಂ=ಅನಿರುದ್ಧನೆಂಬ ಕಾಮಪುತ್ರನಿಂದ ಅಭಿಮನ್ಯಮಾನವೆಂದು ಅನಿರುದ್ಧನೆಂಬ ಭಗವದ್ರೂಪದಿಂದ ನಿಯಮ್ಯವೆಂದೂ ವಿದುಃ=ತಿಳಿಯುವರು. ಶಾರದೇಂದೀವರಶ್ಯಾಮಂ=ಶರತ್‌ಕಾಲೀನ ಕಮಲದಂತೆ (ನೀಲೋತ್ಪಲದಂತೆ) ನೀಲವರ್ಣದಿಂದ ಕೂಡಿದ ಯೋಗಿಭಿಃ=ಯೋಗಿಗಳಿಂದ ಸಂರಾಧ್ಯಂ=ಮನೋಜಯಕ್ಕಾಗಿ ಆರಾಧಿಸಲ್ಪಡುವ ಅನಿರುದ್ಧನೆಂದರ್ಥ ಶನೈಃ=

ನಿಧಾನವಾಗಿ ಯೋಗವದ್ಭಿಃ=ಪ್ರತ್ಯಾಹಾರಾದಿರೂಪ ಉಪಾಯ ಉಳ್ಳವರಿಂದ ಸಂರಾಧ್ಯಂ=ವಶೀಕರಿಸಲು ಯೋಗ್ಯವಾದದ್ದು ಮನಸ್ಸು ಎಂದು ಭಾವ. ॥೩೦॥

**ತೈಜಸಾತ್ತು ವಿಕುರ್ವಾಣಾದ್ ಬುದ್ಧಿತತ್ವಮಭೂತ್ ಸತಿ ।**
**ದ್ರವ್ಯಸ್ಫುರಣವಿಜ್ಞಾನಮಿಂದ್ರಿಯಾಣಾಮನುಗ್ರಹಾತ್ ॥೩೧॥**

ಹೇ ಸತಿ=ಸಾಧ್ವಿಯಾದ ದೇವಹೂತಿಯೇ ಇಂದ್ರಿಯಾಣಾಂ ಅನುಗ್ರಹಾತ್= ಚಕ್ಷುರಾದಿ ಇಂದ್ರಿಯಗಳಲ್ಲಿ ಪ್ರವೇಶ ಮಾಡುವುದರಿಂದ ದ್ರವ್ಯಸ್ಫುರಣವಿಜ್ಞಾನಂ= ಸಾಮಾನ್ಯವಾದ ಜ್ಞಾನ ಮನಸ್ಸಿನಿಂದ ಆದಾಗ ವಿಶೇಷಜ್ಞಾನಜನಕವಾದ ಬುದ್ಧಿತತ್ವಂ =ಬುದ್ಧಿತತ್ವವು ವಿಕುರ್ವಾಣಾತ್ ತೈಜಸಾತ್=ವಿಕಾರವಾಗುವ ತೈಜಸ ಅಹಂಕಾರ-ದಿಂದ ಅಭೂತ್=ಜನಿಸಿತು.

**ದ್ರವ್ಯಸ್ಫುರಣೇ ಯದ್ವಿಶೇಷಜ್ಞಾನಂ ।**

ಸಾಮಾನ್ಯ ಜ್ಞಾನಮನಸ್ಸಿನಿಂದ ಆದಾಗ ಬುದ್ಧಿತತ್ವ ವಿಶೇಷಜ್ಞಾನ ಉಂಟು ಮಾಡುವುದು ಎಂದು ಭಾವ. ॥೩೧॥

ಬೇರೆ ಲಕ್ಷಣ ಹೇಳುವರು –

**ಸಂಶಯೋಽಥ ವಿಪರ್ಯಾಸೋ ನಿಶ್ಚಯಃ ಸ್ಮೃತಿರೇವ ಚ ।**
**ಸ್ವಾಪ ಇತ್ಯುಚ್ಯತೇ ಬುದ್ಧೇರ್ಲಕ್ಷಣಂ ವೃತ್ತಿಭಿಃ ಪೃಥಕ್ ॥೩೨॥**

ಬುದ್ಧೇಃ=ಬುದ್ಧಿತತ್ವಕ್ಕೆ ಸಂಶಯಃ=ವಿಶೇಷದರ್ಶನದಿಂದ ಅನಿವರ್ತ್ಯವಾದ ಸಂಶಯವು ಅಥ=ಮತ್ತು ವಿಪರ್ಯಾಸಃ=ವಿಶೇಷದರ್ಶನ ಅನಿವರ್ತ್ಯವಾದ ವಿಪರೀತನಿಶ್ಚಯವು, ನಿಶ್ಚಯಃ=ನಿರ್ಣಯವು (ಇದು ಹೀಗೆಯೇ ಎಂಬ ಪ್ರಮಾಣಜನ್ಯವಾದುದು) ಸ್ಮೃತಿಃ=ವಿಮರ್ಶದಿಂದ ಬಾಧ್ಯವಾದ (ಚಂಚಲ) ಸ್ಮರಣ ಸ್ವಾಪಃ=ನಿದ್ರೆಯು ಈ ರೀತಿಯಾದ ವೃತ್ತಿಭಿಃ=ಕಾರ್ಯಗಳಿಂದ ಪೃಥಕ್= ಸ್ವರೂಪಾನಂತರ್ಗತ ಲಕ್ಷಣಂ ಉಚ್ಯತೇ=ಲಕ್ಷಣವು ಹೇಳಲ್ಪಡುವುದು.

ಮನಸ್ಸಿನಿಂದ ದ್ರವ್ಯಜ್ಞಾನವಾದಾಗ ಬುದ್ಧಿಯಿಂದ ವಿಶೇಷ ಜ್ಞಾನವಾಗುವುದು ಎಂಬುದನ್ನು ಸಂಶಯಾದಿಜನಕತ್ವ ಮನಸ್ಸಿಗೂ. ಉಂಟು ಸ್ಮೃತಿಜನಕತ್ವವು ಚಿತ್ತಕ್ಕೆ ಉಂಟು ಕಾರಣ ಅತಿವ್ಯಾಪ್ತವು ಲಕ್ಷಣ ಎಂಬ ಶಂಕಾಪರಿಹಾರ ಮಾಡಲು ಬುದ್ಧಿಯಿಂದ ಬರುವ ಸಂಶಯಾದಿಗಳನ್ನು ತಿಳಿಸಲು ಪ್ರಮಾಣ ಹೇಳುವರು –

**ಸಾಮಾನ್ಯಂ ಮನಸಾ(ಜ್ಞಾನಂ)ಜಾತಂ ವಿಶೇಷಾದ್ಬುದ್ಧಿಜಂ ಭವೇತ್ ।**
**ಅಚಲಃ ಸಂಶಯೋ ಬುದ್ಧೇಶ್ಚಂಚಲೋ ಮಾನಸ ಉಚ್ಯತೇ ।**

**ಚಂಚಲಾ ತು ಸ್ಮೃತಿರ್ಬುದ್ಧೇಶ್ಚಿತ್ತಜೈವ ಸ್ಥಿರಾ ಸ್ಮೃತಿಃ ॥ ಇತಿಚ ।**
**ಯೇನ ಯಜ್ ಜ್ಞಾಯತೇ ವಸ್ತು ತತ್ತಲ್ಲಕ್ಷಣಮುಚ್ಯತೇ ।**
**ತತ್ಸ್ವರೂಪಂ ಪೃಥಕ್ಚೇತಿ ದ್ವಿವಿಧಂ ಕವಯೋ ವಿದುಃ ॥ಇತಿ ಚ ಕಾಪಿಲೇಯೇ**

ಸಾಮಾನ್ಯಾಕಾರವಿಷಯಕ ಜ್ಞಾನವು ಮನಸ್ಸಿನಿಂದಾಗುವುದು. ವಿಶೇಷಾಕಾ-ರಾವಗಾಹಿಜ್ಞಾನವು ಬುದ್ಧಿಯಿಂದಾಗುವುದು. ವಿಶೇಷದರ್ಶನದಿಂದ ಅನಿವರ್ತ್ಯ-ವಾದ (ಅಚಲವಾದ) ಸಂಶಯವು, ಬುದ್ಧಿಯಿಂದ ವಿಶೇಷದರ್ಶನ ನಿವರ್ತ್ಯವಾದ (ಚಲ)ಸಂಶಯವು ಮನಸ್ಸಿನಿಂದಲೂ ಉಂಟಾಗುವುವು. ಚಂಚಲವಾದ ವಿಮರ್ಶದಿಂದ ಭಾಧ್ಯವಾದ ಸ್ಮೃತಿಯು ಬುದ್ಧಿಯಿಂದ, ಸ್ಥಿರವಾದ ಸ್ಮರಣವು ಚಿತ್ತದಿಂದ ಹುಟ್ಟುವುವು.

ಬುದ್ಧಿಕಾರ್ಯವಾದ ಸಂಶಯಾದಿಗಳು ಬುದ್ಧಿಯ ಲಕ್ಷಣ ಹೇಗಾಗುವುವು ? ಎಂಬ ಶಂಕೆಗೆ ಉತ್ತರಿಸಲು ಪೃಥಕ್ ಲಕ್ಷಣಂ ಎಂದಿರುವರು. ಲಕ್ಷ್ಯರೂಪವಲ್ಲದ ಲಕ್ಷಣವೆಂದರ್ಥ. ಇಂತಹದು ಲಕ್ಷಣ ಹೇಗೆ ಎಂಬುದನ್ನು ಪ್ರಮಾಣದಿಂದ ಉಪಪಾದಿಸುವರು. (ಯೇನ ಎಂದು) ಯಾವುದರಿಂದ ಯಾವ ವಸ್ತುವು ಇತರ ವ್ಯಾವೃತ್ತವಾಗಿ ತಿಳಿಯುವುದೋ ಅದು ಅದಕ್ಕೆ ಲಕ್ಷಣವೆನಿಸುವುದು. ಅದು ಸ್ವರೂಪಲಕ್ಷಣ ಭಿನ್ನಲಕ್ಷಣವೆಂದು ಎರಡು ವಿಧವೆಂದು ಜ್ಞಾನಿಗಳು ತಿಳಿಯುವರು ಎಂದು ಕಾಪಿಲದಲ್ಲಿದೆ.

ಭಿನ್ನಲಕ್ಷಣವೂ ಇತರ ಭಿನ್ನತಯಾ ಲಕ್ಷ್ಯಜ್ಞಾನಜನಕವಾದ್ದರಿಂದ ಲಕ್ಷಣವಾಗುವು-ದೆಂದು ಭಾವ. ॥೩೨॥

**ತೈಜಸಾನೀಂದ್ರಿಯಾಣ್ಯೇವ ಕ್ರಿಯಾಜ್ಞಾನವಿಭಾಗಶಃ ।**
**ಪ್ರಾಣಸ್ಯ ಹಿ ಕ್ರಿಯಾಶಕ್ತಿರ್ಬುದ್ಧೇರ್ವಿಜ್ಞಾನಶಕ್ತಿತಾ ॥೩೩॥**

ಕ್ರಿಯಾಜ್ಞಾನವಿಭಾಗಶಃ=ಕರ್ಮ ಮತ್ತು ಜ್ಞಾನರೂಪಕಾರ್ಯಭೇದದಿಂದ ಭಿನ್ನವಾದ ಇಂದ್ರಿಯಾಣಿ ಏವ=ಇಂದ್ರಿಯಗಳೇ ತೈಜಸಾನಿ=ತೈಜಸ ಅಹಂಕಾರದಿಂದ ಉತ್ಪನ್ನವಾದವುಗಳು ಹೊರತು ಇಂದ್ರಿಯಾಭಿಮಾನಿದೇವತೆಗಳ ದೇಹವು ತೈಜಸವಲ್ಲ. ಹಿಂದೆ ಬುದ್ಧಿಃ ಪ್ರಾಣಶ್ಚ ತೈಜಸಃ ಎಂದು ಬುದ್ಧಿಪ್ರಾಣಗಳಿಗೆ ತೈಜಸತ್ವ ಹೇಳಿದೆ ಆದ್ದರಿಂದ ಅವುಗಳೂ ಇಂದ್ರಿಯಗಳೇ ಎಂದರೆ ಅಲ್ಲ. ಇಂದ್ರಿಯಾ-ಭಿಮಾನಿತ್ವಮಾತ್ರ ಎಂದು ಉತ್ತರಾರ್ಧದಲ್ಲಿ ಹೇಳುವರು - ಪ್ರಾಣಸ್ಯ=ಪ್ರವಹ-ವಾಯುವಿಗೆ ಕ್ರಿಯಾಶಕ್ತಿಃ=ಕರ್ಮೇಂದ್ರಿಯ ಪ್ರೇರಕವಾದ್ದರಿಂದ ಕ್ರಿಯಾಜನನ ಶಕ್ತಿಯು ಬುದ್ಧೇಃ=ಉಮಾದೇವಿಗೆ ವಿಜ್ಞಾನಶಕ್ತಿಃ=ಜ್ಞಾನೇಂದ್ರಿಯ ಪ್ರೇರಕವಾದ್ದ-ರಿಂದ ವಿಜ್ಞಾನಜನನಶಕ್ತಿಯು ಇದೆ ಎಂದು ಭಾವ.

ಹಿಂದೆ ೨೬ನೇ ಶ್ಲೋಕದಲ್ಲಿ ಬುದ್ಧಿಃ ಪ್ರಾಣಶ್ಚ ತೈಜಸಂ ಎಂದು ಬುದ್ಧಿ ಪ್ರಾಣಗಳಿಗೆ ತೈಜಸತ್ವ ಹೇಳಿದೆ. ಹಾಗಾದರೆ ಅವರಿಗೂ ಇಂದ್ರಿಯತ್ವವಿದೆಯೇ ಎಂದರೆ ಇಲ್ಲ. ಆದರೆ ತೈಜಸ ಇಂದ್ರಿಯಾಭಿಮಾನಿತ್ವವಿದೆ ಆದ್ದರಿಂದ ತೈಜಸತ್ವ ಹೇಳಿದೆ ಎಂದು ತಿಳಿಯಬೇಕು.

ಇಲ್ಲಿ ಪ್ರಾಣಶಬ್ದದಿಂದ ಮುಖ್ಯಪ್ರಾಣನನ್ನು ಸ್ವೀಕರಿಸಬಾರದು. ಅವನು ಹಿಂದೆಯೇ ಹುಟ್ಟಿದ್ದಾನೆ ಬೇರೆಯವನನ್ನೇ ಸ್ವೀಕರಿಸಬೇಕು ಎಂದು ಪ್ರಮಾಣದಿಂದ ತಿಳಿಸುವರು –

**ಪ್ರಧಾನವಾಯುಃ ಸೂತ್ರಾತ್ಮಾ ಮಹತಾ ಸಹ ಜಾಯತೇ ।**
**ತೈಜಸಶ್ಚ ಖಜಃ ಸ್ಪರ್ಶ ಇತ್ಯಾದ್ಯಾಸ್ತತ್ಸುತಾಃ ಸ್ಮೃತಾಃ ।**
**ತದಾವಿಷ್ಟಾ ಅನ್ಯಜೀವಾಸ್ತದಾಧಾರಾಶ್ಚ ತದ್ಬಲಾಃ ॥ ಇತಿ ಚ ।**

ಪ್ರಧಾನವಾಯು ಅಂದರೆ ಮುಖ್ಯಪ್ರಾಣನು ಸೂತ್ರನಾಮಕನಾಗಿ ಮಹತ್ತತ್ವದೊಡನೆ ಜನಿಸುವನು ಕಾರಣ ಇಲ್ಲಿ ಅವನಲ್ಲ. ತೈಜಸಅಹಂಕಾರ ಕಾರ್ಯನಾದವನು ಆಕಾಶದಿಂದ ಜನಿಸಿದ ಭೂತಾಭಿಮಾನಿಯಾದ ಪ್ರವಹ ವಾಯುವೇ ವಿವಕ್ಷಿತನು. ತ್ವಗಿಂದ್ರಾಯಾಭಿಮಾನಿ ಪ್ರಾಣ ಮುಂತಾದವರು ಪ್ರಧಾನವಾಯುಪುತ್ರರು ಉಳಿದ ಜೀವರು ಅವನಿಂದ ಆವಿಷ್ಟರು. ಅವನೇ ಆಧಾರವಾಗಿವುಳ್ಳವರು ಅವನೇ ಬಲವಾಗಿ ಉಳ್ಳವರು. ॥೩೩॥

**ತಾಮಸಾಚ್ಚ ವಿಕುರ್ವಾಣಾದ್ ಭಗವದ್ವೀರ್ಯಚೋದಿತಾತ್ ।**
**ಶಬ್ದಮಾತ್ರಮಭೂತ್ ತಸ್ಮಾನ್ನಭಃ ಶ್ರೋತ್ರಂ ತು ಶಬ್ದಗಂ ॥೩೪॥**

ಭಗವದ್ವೀರ್ಯಚೋದಿತಾತ್=ಶ್ರೀಹರಿಯ ಸಾಮರ್ಥ್ಯದಿಂದ ಪ್ರೇರಿತವಾದ ವಿಕುರ್ವಾಣಾತ್=ಪರಿಣಾಮಹೊಂದುವ ತಾಮಸಾತ್=ತಾಮಸ ಅಹಂಕಾರದಿಂದ ಶಬ್ದಮಾತ್ರಂ=ಕೇವಲ ಶಬ್ದವೆಂಬುವ ಗುಣವು( ಅಂದರೆ ಆಕಾಶವೆಂಬ ಭೂತಸೂಕ್ಷ್ಮಕ್ಕೆ ಉಪಚಾಯಕವಾದ ವಸ್ತುತಃ ದ್ರವಣಪ್ರಾಪ್ಯತ್ವವೆಂಬ ದ್ರವ್ಯಲಕ್ಷಣವಿರುವುದರಿಂದ ದ್ರವ್ಯವಾದ ಸತ್ವಾದಿಗಳಂತೆ ಗುಣವೆಂದು ಕರೆಸಿಕೊಳ್ಳುವ ಶಬ್ದವೆಂಬ ಮಾತ್ರಾ ಎಂದರ್ಥ) ಜನಿಸಿತು. ತಸ್ಮಾತ್=ಶಬ್ದಮಾತ್ರಾದಿಂದ ನಭಃ=ಭೂತಸೂಕ್ಷ್ಮವು ಉಪಚಿತವಾಗಿ ಭೂತಾಕಾಶವು ಜನಿಸಿತು ಶಬ್ದಗಂ=ಶಬ್ದವನ್ನು ತಿಳಿಸಿಕೊಡುವ ಶ್ರೋತ್ರಂ=ಶ್ರೋತ್ರೇಂದ್ರಿಯವು ತಸ್ಮಾತ್=ಆಕಾಶದಿಂದ ಅಭೂತ್=ಉತ್ಪನ್ನವಾಯಿತು. ಹಿಂದೆ ಪ್ರಕೃತ್ಯಂಶದಿಂದ ಉತ್ಪನ್ನವಾಗಿದ್ದರೂ ಭೂತಾಕಾಶದಿಂದ ಮತ್ತೆ ಉಪಚಿತವಾಗುವುದು ಎಂದರ್ಥ. ॥೩೪॥

ಶಬ್ದಲಕ್ಷಣ ಹೇಳುವರು -

**ಅರ್ಥಾಶ್ರಯತ್ವಂ ಶಬ್ದಸ್ಯ ದ್ರಷ್ಟುರ್ಲಿಂಗತ್ವಮೇವ ಚ ।**
**ತನ್ಮಾತ್ರತ್ವಂ ಚ ನಭಸೋ ಲಕ್ಷಣಂ ಕವಯೋ ವಿದುಃ ॥೩೫॥**

ಅರ್ಥಾಶ್ರಯತ್ವಂ=ಅರ್ಥಪ್ರತಿಪಾದಕತ್ವವು (ಅರ್ಥಃ ಆಶ್ರಯಃ ವಿಷಯಃ ಯಸ್ಯ ಸಃ) ಚ ಮತ್ತು ದ್ರಷ್ಟುಃ=ಸರ್ವಜ್ಞನಾದ ಶ್ರೀಹರಿಯ ಲಿಂಗತ್ವಂ= ಜ್ಞಾಪಕತ್ವವು ನಭಸಃ=ಆಕಾಶದ ತನ್ಮಾತ್ರತ್ವಂ=ಅಂದರೆ ಭೂತಸೂಕ್ಷ್ಮಕ್ಕೆ ಉಪಚಾಯಕ ದ್ರವ್ಯತ್ವವು ಹೀಗೆ ಮೂರು ಲಕ್ಷಣಂ=ಲಕ್ಷಣವು ಎಂದು ಕವಯಃ=ಜ್ಞಾನಿಗಳು ವಿದುಃ=ತಿಳಿಯುವರು. ಅಥವಾ ತನ್ಮಾತ್ರಾತ್ವಂ=ಎಂಬಲ್ಲಿ ಮಾತ್ರಾ ಎಂದರೆ ಸ್ವಾಭಾವಿಕ ಇತರಗುಣಾಭಾವಸಮಾನಾಧಿಕಣಗುಣವೆಂದರ್ಥ. ಅಂದರೆ ಆಕಾಶದಲ್ಲಿ ಸ್ವಾಭಾವಿಕವಾದ ಅಸಾಧಾರಣ ಗುಣವು ಶಬ್ದವೆಂದರ್ಥ.

ಇಲ್ಲಿ ಕೆಲವರು ದ್ರಷ್ಟುಃ ಲಿಂಗತ್ವಂ ಎಂಬುದಕ್ಕೆ ಗೋಡೆಯ ಹೊರಗೆ ನಿಂತು ಮಾತಾಡುವ (ಶಬ್ದ ಮಾಡುವ) ವ್ಯಕ್ತಿಯ ಅನುಮಾಪಕವೆಂದರ್ಥ ಮಾಡುವರು. ಅದು ಸರಿಯಲ್ಲ ಎಂಬ ಅಭಿಪ್ರಾಯದಿಂದ ಅರ್ಥಾಶ್ರಯತ್ವಂ ಎಂಬುದರ ಅರ್ಥವನ್ನು ಹೇಳಿ ದ್ರಷ್ಟುಃ ಲಿಂಗತ್ವಂ ಎಂಬಲ್ಲಿ ಪ್ರಮಾಣ ನೀಡುವರು -

**ಅರ್ಥಾಶ್ರಯತ್ವಂ ಅರ್ಥವಿಷಯತ್ವಂ ।**
**ಶಬ್ದೇನೈವ ಯತೋ ಜ್ಞೇಯೋ ಹರಿರ್ಲಿಂಗಂ ತು ತಸ್ಯ ತತ್ ।**

ಶಬ್ದಕ್ಕೆ ತನ್ಮಾತ್ರತ್ವವನ್ನು ಉಪಪಾದಿಸುವರು.

**ಸ್ಪರ್ಶಾದ್ಯಭಾವಾತ್ತನ್ಮಾತ್ರಾ ನಭಸಶ್ಚೇತಿ ಕೀರ್ತ್ಯತೇ ।**
**ಸ್ಪರ್ಶಾದಯಶ್ಚತನ್ಮಾತ್ರಾ ಇತರೇ ಪೂರ್ವಸಂಸ್ಥಿತೇಃ ।**
**ತಿಷ್ಠತ್ಯೇಕೋ ಗುಣೋ ಭೂತೇ ಪ್ರತ್ಯೇಕಂ ಪಂಚಸು ಸ್ಥಿತಃ ।**
**ಶಬ್ದೋ ವರ್ಣಾತ್ಮಕೋ ನಿತ್ಯೋ ಧ್ವನಿರಾಕಾಶಸಂಭವಃ ॥**
**ಆಕಾಶ ಏವ ಸೂಕ್ಷ್ಮಸ್ತು ಧ್ವನಿರಿತ್ಯೇವ ಶಬ್ದ್ಯತೇ ।**
**ಸ ಏವ ವ್ಯಜ್ಯಮಾನಸ್ತು ಭವೇತ್ಕರ್ಣೈಕಗೋಚರಃ ॥ ಇತಿ ಚ ।**

ಶ್ರೀಹರಿಯು ಯಾವ ಕಾರಣ ಶಬ್ದದಿಂದಲೇ ತಿಳಿಯಲ್ಪಡುವನೋ, ಕಾರಣ ಶಬ್ದವು ಶ್ರೀಹರಿಗೆ ಜ್ಞಾಪಕವು. ಕೇವಲ ಹರಿಜ್ಞಾಪಕವಷ್ಟೇ ಅಲ್ಲ ಆಕಾಶದತನ್ಮಾತ್ರವೂ ಆಗಿದೆ. ಆಕಾಶದಲ್ಲಿ ಸ್ಪರ್ಶಾದಿಗಳಿಲ್ಲದಿರುವುದರಿಂದ ಶಬ್ದವು ಆಕಾಶದ ಸ್ವಾಭಾವಿಕ ಅಸಾಧರಣಗುಣವೆನಿಸುವುದು.

ಇದರಂತೆ ವಾಯುವಿಗೆ ಸ್ಪರ್ಶ, ಅಗ್ನಿಗೆ ರೂಪ, ನೀರಿಗೆ ರಸ, ಪೃಥಿವಿಗೆ ಗಂಧವು ತಾನ್ಮಾತ್ರಗಳೆನಿಸುವುವು. ಎಲ್ಲ ಭೂತಗಳಲ್ಲಿ ಒಂದೊಂದು ಗುಣವು ಸ್ವಾಭಾವಿಕ-ವಾಗಿರುವುದು. ಉಳಿದ ಗುಣಗಳು ಕಾರಣಭೂತವು ಕಾರ್ಯದಲ್ಲಿರುವುದರಿಂದ ಇತರ ಗುಣಗಳಲ್ಲಿ ಬರುವುವು. ಕಾರಣ ಸ್ವಾಭಾವಿಕ ಇತರ ಗುಣಾಭಾವಸಮಾನಾ-ಧಿಕರಣಗುಣ ಎಂದರೆ ಸ್ಪರ್ಶಾದಿಗಳಾಗುವುವು. ವರ್ಣಾತ್ಮಕಶಬ್ದವು ನಿತ್ಯವು. ಧ್ವನಿಸೂಕ್ಷ್ಮವು ಆಕಾಶವಾಗಿ ವಿಕೃತವಾಗಿರುವುದು. ಅದು ತಾಮಸ ಅಹಂಕಾರಕಾರ್ಯವು. ಸ್ಥೂಲವಾಗಿ ನಗಾರಿ ಬಾರಿಸುವುದರಿಂದ ವ್ಯಕ್ತವಾಗುವ ಧ್ವನಿಯು ಆಕಾಶದಿಂದ ಹುಟ್ಟಿದುದು ಕಿವಿಗೆ ಕೇಳಿಸುವುದು ಎಂದು ತಿಳಿಯಬೇಕು. ಇದರಿಂದ ಶಬ್ದಕ್ಕೆ ಅಹಂಕಾರಕಾರ್ಯತ್ವ ಹೇಳಿದೆ. ಅದು ವರ್ಣಾತ್ಮಕಶಬ್ದಕ್ಕೊ ಧ್ವನ್ಯಾತ್ಮಕಕ್ಕೊ. ವರ್ಣಾತ್ಮಕಶಬ್ದ ನಿತ್ಯವಾದ್ದರಿಂದ ಕಾರ್ಯತ್ವ ಅನುಪಪನ್ನ. ಧ್ವನಿಗೆ ಎಂದರೆ ಅದು ಆಕಾಶಜನ್ಯವಾದ್ದರಿಂದ ತಾಮಸ ಅಹಂಕಾರಕಾರ್ಯತ್ವ ಮತ್ತು ಆಕಾಶೋಪಾದನತ್ವಗಳು ಅಸಂಭಾವಿತ ಎಂಬ ಶಂಕೆ ಪರಿಹೃತವಾಯಿತು. ಯದ್ಯಪಿ ಶಬ್ದ ವರ್ಣಾತ್ಮಕ ಧ್ವನ್ಯಾತ್ಮಕ ಎಂದು ಎರಡು ವಿಧ. ಆದರೂ ವರ್ಣಾತ್ಮಕ ನಿತ್ಯವಾದ್ದರಿಂದ ಅದು ಅಹಂಕಾರಕಾರ್ಯವಲ್ಲ. ಧ್ವನಿಯಲ್ಲಿಯೂ ಎರಡು ವಿಧ. ಆಕಾಶಸೂಕ್ಷ್ಮಕ್ಕೆ ಉಪಚಾಯಕವಾದ ಅವ್ಯಕ್ತವಾದ ಸೂಕ್ಷ್ಮವಾದ ಧ್ವನಿ ಇದೆ. ತಾಮಸ ಅಹಂಕಾರ ಕಾರ್ಯ ಈ ಸೂಕ್ಷ್ಮಧ್ವನಿ ಅಂದರೆ ಉಪಚಿತ. ಇನ್ನು ಸ್ಥೂಲವಾಗಿ ಭೂತಾಕಾಶದಿಂದ ಉತ್ಪನ್ನವಾದ ಧ್ವನಿ ಸ್ಥೂಲಧ್ವನಿಯು. ಇದು ವರ್ಣಗಳಿಗೆ ವ್ಯಂಜಕವೂ ನಮ್ಮ ಕಿವಿಗಳಿಗೆ ಕೇಳಿಸುವುದು. ಆಕಾಶದ ಅಸಾಧಾರಣಗುಣವು ಆಗಿದೆ. ಹೀಗೆ ಮುಂದೆಯೂ ಸ್ಪರ್ಶಾದಿಗಳ ವಿಷಯದಲ್ಲಿ ತಿಳಿಯಬೇಕು. ॥೩೫॥

ಆಕಾಶದ ಲಕ್ಷಣ ಹೇಳುವರು –

**ಭೂತಾನಾಂ ಛಿದ್ರದಾತೃತ್ವಂ ಬಹಿರಂತರಮೇವ ಚ ।**
**ಪ್ರಾಣೇಂದ್ರಿಯಾತ್ಮಧಿಷ್ಣ್ಯತ್ವಂ ನಭಸೋ ವೃತ್ತಿಲಕ್ಷಣಂ ॥೩೬॥**

ಬಹಿಃ=ದೇಹದ ಹೊರಗೆ ಭೂತಾನಾಂ=ಪ್ರಾಣಿಗಳಿಗೆ ಛಿದ್ರದಾತೃತ್ವಂ=ಅವಕಾಶ ಕೊಡುವುದು(ಸಂಚರಿಸಲು) ಅಂತರಂ=ದೇಹದೊಳಗೆ ಪ್ರಾಣೇಂದ್ರಿಯಾತ್ಮಧಿಷ್ಣ್ಯತ್ವಂ= ಪ್ರಾಣಾಪಾನಾದಿಗಳಿಗೆ ಇಂದ್ರಿಯಗಳಿಗೆ ಮನಸ್ಸಿಗೆ ನಾಡಿ ಮುಂತಾದ ಛಿದ್ರದ್ವಾರಾ ಆಶ್ರಯವಾಗುವುದು ನಭಸಃ=ಆಕಾಶದ ವೃತ್ತಿಲಕ್ಷಣಂ=ಸ್ವಭಾವ ಲಕ್ಷಣವು. ಬಹಿಃ ಅಂತಃ ಇತಿ ವ್ಯವಹಾರಾಸ್ಪದತ್ವ ಲಕ್ಷಣಂ=ಹೊರಗೆ ಒಳಗೆ ಎಂದು ವ್ಯವಹರಿಸಲ್ಪಡುವುದೂ ಮತ್ತೊಂದು ಲಕ್ಷಣವೆಂದೂ ಹೇಳುವರು. ॥೩೬॥

ಶಬ್ದಲಕ್ಷಣ ಹೇಳುವರು -

**ಅರ್ಥಾಶ್ರಯತ್ವಂ ಶಬ್ದಸ್ಯ ದ್ರಷ್ಟುರ್ಲಿಂಗತ್ವಮೇವ ಚ ।**
**ತನ್ಮಾತ್ರತ್ವಂ ಚ ನಭಸೋ ಲಕ್ಷಣಂ ಕವಯೋ ವಿದುಃ ॥೩೫॥**

ಅರ್ಥಾಶ್ರಯತ್ವಂ=ಅರ್ಥಪ್ರತಿಪಾದಕತ್ವವು (ಅರ್ಥಃ ಆಶ್ರಯಃ ವಿಷಯಃ ಯಸ್ಯ ಸಃ) ಚ ಮತ್ತು ದ್ರಷ್ಟುಃ=ಸರ್ವಜ್ಞನಾದ ಶ್ರೀಹರಿಯ ಲಿಂಗತ್ವಂ= ಜ್ಞಾಪಕತ್ವವು ನಭಸಃ=ಆಕಾಶದ ತನ್ಮಾತ್ರತ್ವಂ=ಅಂದರೆ ಭೂತಸೂಕ್ಷ್ಮಕ್ಕೆ ಉಪಚಾಯಕ ದ್ರವ್ಯತ್ವವು ಹೀಗೆ ಮೂರು ಲಕ್ಷಣಂ=ಲಕ್ಷಣವು ಎಂದು ಕವಯಃ=ಜ್ಞಾನಿಗಳು ವಿದುಃ=ತಿಳಿಯುವರು. ಅಥವಾ ತನ್ಮಾತ್ರಾತ್ವಂ=ಎಂಬಲ್ಲಿ ಮಾತ್ರಾ ಎಂದರೆ ಸ್ವಾಭಾವಿಕ ಇತರಗುಣಾಭಾವಸಮಾನಾಧಿಕಣಗುಣವೆಂದರ್ಥ. ಅಂದರೆ ಆಕಾಶದಲ್ಲಿ ಸ್ವಾಭಾವಿಕವಾದ ಅಸಾಧಾರಣ ಗುಣವು ಶಬ್ದವೆಂದರ್ಥ.

ಇಲ್ಲಿ ಕೆಲವರು ದ್ರಷ್ಟುಃ ಲಿಂಗತ್ವಂ ಎಂಬುದಕ್ಕೆ ಗೋಡೆಯ ಹೊರಗೆ ನಿಂತು ಮಾತಾಡುವ (ಶಬ್ದ ಮಾಡುವ) ವ್ಯಕ್ತಿಯ ಅನುಮಾಪಕವೆಂದರ್ಥ ಮಾಡುವರು. ಅದು ಸರಿಯಲ್ಲ ಎಂಬ ಅಭಿಪ್ರಾಯದಿಂದ ಅರ್ಥಾಶ್ರಯತ್ವಂ ಎಂಬುದರ ಅರ್ಥವನ್ನು ಹೇಳಿ ದ್ರಷ್ಟುಃ ಲಿಂಗತ್ವಂ ಎಂಬಲ್ಲಿ ಪ್ರಮಾಣ ನೀಡುವರು -

**ಅರ್ಥಾಶ್ರಯತ್ವಂ ಅರ್ಥವಿಷಯತ್ವಂ ।**
**ಶಬ್ದೇನೈವ ಯತೋ ಜ್ಞೇಯೋ ಹರಿರ್ಲಿಂಗಂ ತು ತಸ್ಯ ತತ್ ।**

ಶಬ್ದಕ್ಕೆ ತನ್ಮಾತ್ರತ್ವವನ್ನು ಉಪಪಾದಿಸುವರು.

**ಸ್ಪರ್ಶಾದ್ಯಭಾವಾತ್ತನ್ಮಾತ್ರಾ ನಭಸಶ್ಚೇತಿ ಕೀರ್ತ್ಯತೇ ।**
**ಸ್ಪರ್ಶಾದಯಶ್ಚತನ್ಮಾತ್ರಾ ಇತರೇ ಪೂರ್ವಸಂಸ್ಥಿತೇಃ ।**
**ತಿಷ್ಠತ್ಯೇಕೋ ಗುಣೋ ಭೂತೇ ಪ್ರತ್ಯೇಕಂ ಪಂಚಸು ಸ್ಥಿತಃ ।**
**ಶಬ್ದೋ ವರ್ಣಾತ್ಮಕೋ ನಿತ್ಯೋ ಧ್ವನಿರಾಕಾಶಸಂಭವಃ ॥**
**ಆಕಾಶ ಏವ ಸೂಕ್ಷ್ಮಸ್ತು ಧ್ವನಿರಿತ್ಯೇವ ಶಬ್ದ್ಯತೇ ।**
**ಸ ಏವ ವ್ಯಜ್ಯಮಾನಸ್ತು ಭವೇತ್ಕರ್ಣೈಕಗೋಚರಃ ॥ ಇತಿ ಚ ।**

ಶ್ರೀಹರಿಯು ಯಾವ ಕಾರಣ ಶಬ್ದದಿಂದಲೇ ತಿಳಿಯಲ್ಪಡುವನೋ, ಕಾರಣ ಶಬ್ದವು ಶ್ರೀಹರಿಗೆ ಜ್ಞಾಪಕವು. ಕೇವಲ ಹರಿಜ್ಞಾಪಕವಷ್ಟೇ ಅಲ್ಲ ಆಕಾಶದತನ್ಮಾತ್ರವೂ ಆಗಿದೆ. ಆಕಾಶದಲ್ಲಿ ಸ್ಪರ್ಶಾದಿಗಳಿಲ್ಲದಿರುವುದರಿಂದ ಶಬ್ದವು ಆಕಾಶದ ಸ್ವಾಭಾವಿಕ ಅಸಾಧರಣಗುಣವೆನಿಸುವುದು.

ಇದರಂತೆ ವಾಯುವಿಗೆ ಸ್ಪರ್ಶ, ಅಗ್ನಿಗೆ ರೂಪ, ನೀರಿಗೆ ರಸ, ಪೃಥಿವಿಗೆ ಗಂಧವು ತಾನ್ಮಾತ್ರಾಗಳೆನಿಸುವುವು. ಎಲ್ಲ ಭೂತಗಳಲ್ಲಿ ಒಂದೊಂದು ಗುಣವು ಸ್ವಾಭಾವಿಕ-ವಾಗಿರುವುದು. ಉಳಿದ ಗುಣಗಳು ಕಾರಣಭೂತವು ಕಾರ್ಯದಲ್ಲಿರುವುದರಿಂದ ಇತರ ಗುಣಗಳಲ್ಲಿ ಬರುವುವು. ಕಾರಣ ಸ್ವಾಭಾವಿಕ ಇತರ ಗುಣಾಭಾವಸಮಾನಾ-ಧಿಕರಣಗುಣ ಎಂದರೆ ಸ್ಪರ್ಶಾದಿಗಳಾಗುವುವು. ವರ್ಣಾತ್ಮಕಶಬ್ದವು ನಿತ್ಯವು. ಧ್ವನಿಸೂಕ್ಷ್ಮವು ಆಕಾಶವಾಗಿ ವಿಕೃತವಾಗಿರುವುದು. ಅದು ತಾಮಸ ಅಹಂಕಾರಕಾರ್ಯವು. ಸ್ಥೂಲವಾಗಿ ನಗಾರಿ ಬಾರಿಸುವುದರಿಂದ ವ್ಯಕ್ತವಾಗುವ ಧ್ವನಿಯು ಆಕಾಶದಿಂದ ಹುಟ್ಟಿದುದು ಕಿವಿಗೆ ಕೇಳಿಸುವುದು ಎಂದು ತಿಳಿಯಬೇಕು. ಇದರಿಂದ ಶಬ್ದಕ್ಕೆ ಅಹಂಕಾರಕಾರ್ಯತ್ವ ಹೇಳಿದೆ. ಅದು ವರ್ಣಾತ್ಮಕಶಬ್ದಕ್ಕೋ ಧ್ವನ್ಯಾತ್ಮಕಕ್ಕೋ. ವರ್ಣಾತ್ಮಕಶಬ್ದ ನಿತ್ಯವಾದ್ದರಿಂದ ಕಾರ್ಯತ್ವ ಅನುಪಪನ್ನ. ಧ್ವನಿಗೆ ಎಂದರೆ ಅದು ಆಕಾಶಜನ್ಯವಾದ್ದರಿಂದ ತಾಮಸ ಅಹಂಕಾರಕಾರ್ಯತ್ವ ಮತ್ತು ಆಕಾಶೋಪಾದನತ್ವಗಳು ಅಸಂಭಾವಿತ ಎಂಬ ಶಂಕೆ ಪರಿಹೃತವಾಯಿತು. ಯದ್ಯಪಿ ಶಬ್ದ ವರ್ಣಾತ್ಮಕ ಧ್ವನ್ಯಾತ್ಮಕ ಎಂದು ಎರಡು ವಿಧ. ಆದರೂ ವರ್ಣಾತ್ಮಕ ನಿತ್ಯವಾದ್ದರಿಂದ ಅದು ಅಹಂಕಾರಕಾರ್ಯವಲ್ಲ. ಧ್ವನಿಯಲ್ಲಿಯೂ ಎರಡು ವಿಧ. ಆಕಾಶಸೂಕ್ಷ್ಮಕ್ಕೆ ಉಪಚಾಯಕವಾದ ಅವ್ಯಕ್ತವಾದ ಸೂಕ್ಷ್ಮವಾದ ಧ್ವನಿ ಇದೆ. ತಾಮಸ ಅಹಂಕಾರ ಕಾರ್ಯ ಈ ಸೂಕ್ಷ್ಮಧ್ವನಿ ಅಂದರೆ ಉಪಚಿತ. ಇನ್ನು ಸ್ಥೂಲವಾಗಿ ಭೂತಾಕಾಶದಿಂದ ಉತ್ಪನ್ನವಾದ ಧ್ವನಿ ಸ್ಥೂಲಧ್ವನಿಯು. ಇದು ವರ್ಣಗಳಿಗೆ ವ್ಯಂಜಕವೂ ನಮ್ಮ ಕಿವಿಗಳಿಗೆ ಕೇಳಿಸುವುದು. ಆಕಾಶದ ಅಸಾಧಾರಣಗುಣವು ಆಗಿದೆ. ಹೀಗೆ ಮುಂದೆಯೂ ಸ್ಪರ್ಶಾದಿಗಳ ವಿಷಯದಲ್ಲಿ ತಿಳಿಯಬೇಕು. ॥೩೫॥

ಆಕಾಶದ ಲಕ್ಷಣ ಹೇಳುವರು –

**ಭೂತಾನಾಂ ಛಿದ್ರದಾತೃತ್ವಂ ಬಹಿರಂತರಮೇವ ಚ ।**
**ಪ್ರಾಣೇಂದ್ರಿಯಾತ್ಮಧಿಷ್ಣ್ಯತ್ವಂ ನಭಸೋ ವೃತ್ತಿಲಕ್ಷಣಂ ॥೩೬॥**

ಬಹಿಃ=ದೇಹದ ಹೊರಗೆ ಭೂತಾನಾಂ=ಪ್ರಾಣಿಗಳಿಗೆ ಛಿದ್ರದಾತೃತ್ವಂ=ಅವಕಾಶ ಕೊಡುವುದು(ಸಂಚರಿಸಲು) ಅಂತರಂ=ದೇಹದೊಳಗೆ ಪ್ರಾಣೇಂದ್ರಿಯಾತ್ಮಧಿಷ್ಣ್ಯತ್ವಂ= ಪ್ರಾಣಾಪಾನಾದಿಗಳಿಗೆ ಇಂದ್ರಿಯಗಳಿಗೆ ಮನಸ್ಸಿಗೆ ನಾಡಿ ಮುಂತಾದ ಛಿದ್ರದ್ವಾರಾ ಆಶ್ರಯವಾಗುವುದು ನಭಸಃ=ಆಕಾಶದ ವೃತ್ತಿಲಕ್ಷಣಂ=ಸ್ವಭಾವ ಲಕ್ಷಣವು. ಬಹಿಃ ಅಂತಃ ಇತಿ ವ್ಯವಹಾರಾಸ್ಪದತ್ವಲಕ್ಷಣಂ=ಹೊರಗೆ ಒಳಗೆ ಎಂದು ವ್ಯವಹರಿಸಲ್ಪಡುವುದೂ ಮತ್ತೊಂದು ಲಕ್ಷಣವೆಂದೂ ಹೇಳುವರು. ॥೩೬॥

ಆಕಾಶದಿಂದ ಸ್ಪರ್ಶದ ದ್ವಾರಾ ವಾಯುವಿನ ಉತ್ಪತ್ತಿಯನ್ನು ಹೇಳುವರು-

**ನಭಸಃ ಶಬ್ದತನ್ಮಾತ್ರಾತ್ ಕಾಲಗತ್ಯಾ ವಿಕುರ್ವತಃ ।**
**ಸ್ಪರ್ಶೋಽಭವತ್ ತತೋ ವಾಯುಸ್ತ್ವಕ್ ಸ್ಪರ್ಶಸ್ಯಚ ಸಂಗ್ರಹಃ ॥**

ಶಬ್ದತನ್ಮಾತ್ರಾತ್=ಶಬ್ದವೇ ಅಸಾಧಾರಣ ಗುಣವಾಗಿವುಳ್ಳ ನಭಸಃ=ಆಕಾಶದಿಂದ ಕಾಲಗತ್ಯಾ ವಿಕುರ್ವತಃ=ಕಾಲಕ್ರಮದಿಂದ ವಿಕಾರವಾಗುವಾಗ ಸ್ಪರ್ಶಃ ಅಭವತ್=ವಾಯುಸೂಕ್ಷ್ಮಕ್ಕೆ ಉಪಚಾಯಕವಾದ ಸ್ಪರ್ಶವೆಂಬ ಮಾತ್ರಾದ್ರವ್ಯವು ಜನಿಸಿತು. ತತಃ=ಸ್ಪರ್ಶತನ್ಮಾತ್ರಾದಿಂದ ವಾಯುಃ=ವಾಯುಸೂಕ್ಷ್ಮವು ಉಪಚಯವಾಗಿ ವಾಯು ಎಂಬ ಭೂತವು ಜನಿಸಿತು ತತಃ=ವಾಯುವಿನಿಂದ ತ್ವಕ್=ತ್ವಗಿಂದ್ರಿಯವು ಅಭವತ್=ಜನಿಸಿತು. ಆದರಿಂದ ಸ್ಪರ್ಶಸ್ಯ ಸಂಗ್ರಹಃ=ವಾಯುಗುಣವಾದ ಸ್ಪರ್ಶದ ಸರಿಯಾದ ಜ್ಞಾನವಾಗುವುದು. ಆಕಾಶದಿಂದ ಉತ್ಪನ್ನವಾದ ವಾಯುವಿನಲ್ಲಿ ಧ್ವನಿಯು ಇದೆ ಎಂದು ತಿಳಿಸಲು ಶಬ್ದತನ್ಮಾತ್ರಾತ್ ಎಂಬ ವಿಶೇಷಣವಿತ್ತಿರುವರು. ಇದರಂತೆ ಆಕಾಶಕ್ಕೆ ಸ್ಪರ್ಶಮಾತ್ರಾತ್ ಎಂಬುದಕ್ಕೆ ಅರ್ಥ ಮತ್ತು ವಿಶೇಷಣ ಸಾರ್ಥಕ್ಯವನ್ನು ತಿಳಿಯಬೇಕು.

ಶಬ್ದತನ್ಮಾತ್ರಾತ್ ಎಂಬ ಪದಕ್ಕೆ ಆಕಾಶೋಪಚಾಯಕವಾದ ಶಬ್ದಸೂಕ್ಷ್ಮ ಎಂಬ ಅರ್ಥವಲ್ಲವೆಂದು ತಿಳಿಸಲು ವಿವಕ್ಷಿತ ಅರ್ಥ ಹೇಳುವರು.

**ನಭಸಃ ಶಬ್ದತನ್ಮಾತ್ರಾತ್ ಶಬ್ದತನ್ಮಾತ್ರಗುಣಾತ್ ।**

ಅಂದರೆ ಆಕಾಶದಿಂದ ಎಂದರ್ಥ.

ಸ್ಪರ್ಶಾದಿಗಳು ವಾಯುಗುಣಗಳು ವಾಯು ಮುಂತಾದವಕ್ಕೆ ಜನಕ ಹೇಗಾಗುವುದು ಎಂದರೆ ಹೇಳುವರು-

**ಸ್ಪರ್ಶಾದಯೋಽಪಿ ವಾಯ್ವಾದೇಃ ಸೂಕ್ಷ್ಮರೂಪಾಃ ಪ್ರಕೀರ್ತಿತಾಃ । ಇತಿ ಚ**

ಅಂದರೆ ಇಲ್ಲಿ ವಾಯ್ವಾದಿಗಳಿಗೆ ಜನಕವೆಂದು ಹೇಳುವ ಸ್ಪರ್ಶಾದಿಗಳು ವಾಯುಕಾರ್ಯಗುಣಗಳಲ್ಲ ಕಿಂತು ವಾಯು ಮುಂತಾದವುಗಳಿಗೆ ಉಪಚಾಯ-ಕವಾದ ಸ್ಪರ್ಶಾದಿಗಳು ಬೇರೇನೆ ಕಾರಣ ವಿರೋಧವಿಲ್ಲ.

ತೈಜಸ ಅಹಂಕಾರಕಾರ್ಯವಾದ ಇಂದ್ರಿಯಗಳಿಗೆ 'ಶ್ರೋತ್ರಂ ತು ಶಬ್ದಗಂ' 'ತ್ವಕ್‌ಸ್ಪರ್ಶಸಂಗ್ರಹಃ' 'ಚಕ್ಷುಃ ರೂಪೋಪಲಂಭನಂ' ಮುಂತಾಗಿ ಮತ್ತೆ ಭೂತಗಳಿಂದ ಉತ್ಪತ್ತಿ ಹೇಳುವುದು ಹೇಗೆ ಸಮಂಜಸವಾದೀತು. ಒಮ್ಮೆ ಹುಟ್ಟಿದ್ದು ಪುನಃ ಹುಟ್ಟುವುದು ಹೇಗೆ ಎಂಬ ಶಂಕೆಗೆ ಪ್ರಮಾಣದಿಂದ ಉತ್ತರಿಸುವರು-

**ಸೂಕ್ಷ್ಮೇಂದ್ರಿಯಾಣಿ ಸಂತ್ಯೇವ ಸ್ಯುಃ ಸ್ಥೂಲಾನ್ಯಪ್ಯಹಂಕೃತೇಃ ।**
**ಭೂತೇಭ್ಯಶ್ಚೋಪಚೀಯಂತೇ ಪುನರ್ಬ್ರಹ್ಮಶರೀರತಃ ॥ ಇತಿ ಚ ।**

ಅನಾದಿಕಾಲದಿಂದ ಸೂಕ್ಷ್ಮವಾದ ಇಂದ್ರಿಯಗಳು ಇದ್ದೇ ಇವೆ. ಅವುಗಳು ಸೃಷ್ಟಿಕಾಲದಲ್ಲಿ ಅಹಂಕಾರದಿಂದ ಉಪಚಯೊಗೊಂಡು ಸ್ಥೂಲವಾಗುವುವು. ಮತ್ತೆ ಬ್ರಹ್ಮಾಂಡದ ಒಳಗೆ ಬ್ರಹ್ಮದೇವರ ವಿರಾಟ್ ಶರೀರದಿಂದ ಭೂತಗಳಿಂದಲೂ ಉಪಚಯ ಹೊಂದುವುವು ಎಂದರ್ಥ, ಹೊರತು ಹುಟ್ಟದಿರುವವೆ ಹುಟ್ಟಿದವು ಎಂದಲ್ಲ. ತೈಜಸ ಅಹಂಕಾರದಿಂದ ಉಪಚಿತವಾದವುಗಳೇ ಮತ್ತೆ ಭೂತಗಳಿಂದ ಉಪಚಿತವಾಗಿ ಮತ್ತಷ್ಟು ಸ್ಥೂಲವಾಗುವುವು ಎಂದು ಭಾವ ತಿಳಿಯಬೇಕು. ॥೩೭॥

ಸ್ಪರ್ಶದ ಲಕ್ಷಣ ಹೇಳುವರು –

**ಮೃದುತ್ವಂ ಕಠಿಣತ್ವಂ ಚ ಶೈತ್ಯಮುಷ್ಣತ್ವಮೇವ ಚ ।**
**ಏತತ್ ಸ್ಪರ್ಶಸ್ಯ ಸ್ಪರ್ಶತ್ವಂ ತನ್ಮಾತ್ರತ್ವಂ ನಭಸ್ವತಃ ॥೩೮॥**

ಮೃದುತ್ವಂ=ಮೆತ್ತಗಿರುವುದು ಕಠಿಣತ್ವಂ=ಬಿರುಸು ಶೈತ್ಯಂ=ತಣ್ಣಗಿರುವುದು ಉಷ್ಣತ್ವಂ=ಬಿಸಿಯಾಗಿರುವುದು ಏತತ್=ಇವುಗಳಲ್ಲೊಂದು ಸ್ಪರ್ಶಸ್ಯ=ಸ್ಪರ್ಶಕ್ಕೆ ಸ್ಪರ್ಶತ್ವಂ=ಸ್ಪರ್ಶಶಬ್ದದಿಂದ ಕರೆಯಲು ನಿಮಿತ್ತವೆಂದರ್ಥ. ನಭಸ್ವತಃ=ವಾಯುವಿನ ತನ್ಮಾತ್ರತ್ವಂ=ಸ್ವಾಭಾವಿಕ ಇತರಗುಣಾಭಾವಸಮಾನಾಧಿಕರಣಗುಣತ್ವಂ ಸ್ಪರ್ಶತ್ವಂ ಅಂದರೆ ವಾಯುವಿನ ಸ್ವಾಭಾವಿಕ ಅಸಾಧಾರಣಗುಣವೆ ಸ್ಪರ್ಶವೆಂದರ್ಥ. ॥೩೮॥

ವಾಯುವಿನ ಲಕ್ಷಣ ಹೇಳುವರು ಇಲ್ಲಿ, ಜಡವಾಯು, ಪ್ರವಹವಾಯು, ಮತ್ತು ಅವರಲ್ಲಿರುವ ಪ್ರಧಾನವಾಯು ಮೂರನ್ನು ಉದ್ದೇಶಿಸಿ ಲಕ್ಷಣ ಹೇಳುವರೆಂದು ತಿಳಿಯಬೇಕು.

**ಚಾಲನಂ ವ್ಯೂಹನಂ ಪ್ರಾಪ್ತಿರ್ನೇತೃತ್ವಂ ದ್ರವ್ಯಶಬ್ದಯೋಃ ।**
**ಸರ್ವೇಂದ್ರಿಯಾಣಾಮಾತ್ಮತ್ವಂ ವಾಯೋಃ ಕರ್ಮಾಭಿಲಕ್ಷಣಂ ॥೩೯॥**

ಚಾಲನಂ=ಗಿಡದ ಟೊಂಗೆ ಮುಂತಾದುವನ್ನು ಅಲ್ಲಾಡಿಸುವುದು (ಚಲಿಸುವಂತೆ ಮಾಡುವುದು) ವ್ಯೂಹನಂ=ಅಲ್ಲಲ್ಲಿ ಬಿದ್ದಿರುವ ಹುಲ್ಲು ಮುಂತಾದ್ದನ್ನು ಒಟ್ಟಗೂಡಿಸುವುದು ಪ್ರಾಪ್ತಿಃ=ಸಾರ್ವಜ್ಞ ಮುಂತಾದ ಶುಭವನ್ನು ಪಡೆಯುವುದು ದ್ರವ್ಯಶಬ್ದಯೋಃ ನೇತೃತ್ವಂ=ಗಂಧವುಳ್ಳದ್ರವ್ಯವನ್ನು ಮೂಗಿನ ಹತ್ತಿರ ಒಯ್ಯುವುದು ಶೈತ್ಯವುಳ್ಳದ್ರವ್ಯವನ್ನು ತ್ವಗಿಂದ್ರಿಯಕ್ಕೆ ತಲುಪಿಸುವುದು, ಶಬ್ದವನ್ನು ಕಿವಿಗೆ ತಲುಪಿಸುವುದು ಸರ್ವೇಂದ್ರಿಯಾಣಾಂ ಆತ್ಮತ್ವಂ=ಎಲ್ಲ ಇಂದ್ರಿಯಗಳ ನಿಯಾಮಕತ್ವವು ವಾಯೋಃ=ವಾಯುವಿನ ಕರ್ಮಾಭಿಲಕ್ಷಣಂ=ಸ್ವರೂಪ ಲಕ್ಷಣವೆಂದರ್ಥ.

ಜಡವಾಯುವಿಗೆ ಸರ್ವಶುಭಪ್ರಾಪ್ತಿ ಮುಂತಾದುವನ್ನು ಹೇಗೆ ಹೇಳುವರೆಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು ಶ್ರೀಮದಾಚಾರ್ಯರು -

**ಪ್ರಾಪ್ನೋತಿ ವಾಯುಃ ಸರ್ವಂ ತು ಸ್ವತಃ ಏವ ಹರೇಸ್ತಥಾ ।**
**ಅತಃ ಪ್ರಾಪ್ತಿರಿತಿ ಪ್ರಾಹುರ್ವಾಯುಂ ಭೂತಪತಿಂ ಪ್ರಭುಂ ॥**
**ಪ್ರಧಾನವಾಯುರನ್ಯೇಷು ನಿತ್ಯಾವಿಷ್ಟೋ ಯತಸ್ತತಃ ।**
**ತದ್ಗುಣಾಸ್ತೇಷು ಚೋಚ್ಯಂತೇ ನೀಚತಾ ನಾಸ್ಯ ತತ್ಕೃತಾ ॥**

**ಇತಿ ಬ್ರಹ್ಮವೈವರ್ತೇ**

**ಸ್ವರೂಪಮಪಿ ಕರ್ಮೇತಿ ವಿಷಯತ್ವಾದುದೀರ್ಯತೇ ।**

**ಇತಿ ಶಬ್ದನಿರ್ಣಯೇ ।**

ಶ್ರೀಹರಿಯ ಅನುಗ್ರಹದಿಂದ ತನ್ನ ಯೋಗ್ಯತೆಯ ಬಲದಿಂದಲೂ ಭೂತಾಭಿಮಾನಿ ಪ್ರವಹವಾಯುವು ಎಲ್ಲ ಶುಭಧರ್ಮಗಳನ್ನು ಹೊಂದುವನು ಕಾರಣ ಪ್ರಾಪ್ತಿಯೆನಿಸುವನು. ಮುಖ್ಯಪ್ರಾಣದೇವರು ಅಮುಖ್ಯರಾದ ಅಭಿಮಾನಿ ವಾಯುಗಳಲ್ಲಿರುವುದರಿಂದ ಅವರ ಧರ್ಮವಾದ ಸರ್ವೇಂದ್ರಿಯನಿಯಾಮ ಕತ್ವವು ಉಳಿದವರಲ್ಲಿ ಹೇಳಲ್ಪಡುವುದು. ನಿಯಾಮಕನಾಗಿರುವುದರಿಂದ ನೀಚರಲ್ಲಿ ಪ್ರವೇಶ ಮಾಡುವದರಿಂದ ನೀಚತೆ ಪ್ರಧಾನ ವಾಯುವಿಗೆ ಇಲ್ಲ ಎಂದು ಬ್ರಹ್ಮವೈವರ್ತದಲ್ಲಿದೆ. ಸ್ವರೂಪವೂ ಕೂಡ ವಿಷಯವಾದ್ದರಿಂದ ಕರ್ಮವೆನಿಸು- ವುದು ಎಂದು ಶಬ್ದನಿರ್ಣಯದಲ್ಲಿದೆ. ಹೀಗೆ ಮೂರು ಅರ್ಥವಿವಕ್ಷೆ ಇರುವುದರಿಂದ ಯಾರಿಗೆ ಯಾವ ಧರ್ಮ ಅನ್ವಯಿಸುವುದೋ ಅದನ್ನು ಅವರಲ್ಲಿ ಮುಖ್ಯವಾಗಿ ತಿಳಿಯಬೇಕು ಎಂದು ಭಾವ. ॥೩೯॥

**ವಾಯೋಶ್ಚ ಸ್ಪರ್ಶತನ್ಮಾತ್ರಾದ್ ರೂಪಂ ದೈವೇರಿತಾದಭೂತ್ ।**
**ಸಮುತ್ಥಿತಂ ತತಸ್ತೇಜಶ್ಚಕ್ಷೂ ರೂಪೋಪಲಂಭನಂ ॥೪೦॥**

ದೈವೇರಿತಾತ್=ಶ್ರೀಹರಿಯಿಂದ ಪ್ರೇರಿತವಾದ ಸ್ಪರ್ಶತನ್ಮಾತ್ರಾದ್=ಸ್ಪರ್ಶವೆಂಬ ಗುಣವುಳ್ಳ ವಾಯೋಃ=ವಾಯುವಿನಿಂದ ರೂಪಂ ತೇಜಃ=ಸೂಕ್ಷ್ಮಕ್ಕೆ ಉಪಚಾಯಕ- ವಾದ ರೂಪವೆಂಬ ತನ್ಮಾತ್ರಾದ್ರವ್ಯವು ಜನಿಸಿತು. ತತಃ=ರೂಪದಿಂದ ತೇಜಃ ಸಮುತ್ಥಿತಂ=ಅಗ್ನಿಯ ಸೂಕ್ಷ್ಮಗಳು ಉಪಚಯ ಹೊಂದಿ ಅಗ್ನಿಯಾದವು. ತತಃ= ಅಗ್ನಿಯಿಂದ ರೂಪೋಪಲಂಭನಂ=ರೂಪಜ್ಞಾನಕ್ಕೆ ಸಾಧನವಾದ ಚಕ್ಷುಃ=ಕಣ್ಣು ಎಂಬ ಇಂದ್ರಿಯ ಜನಿಸಿತು. ॥೪೦॥

ರೂಪದ ಲಕ್ಷಣ ಹೇಳುವರು-

**ದ್ರವ್ಯಾಕೃತಿತ್ವಂ ಗುಣತಾ ವ್ಯಕ್ತಿಸಂಸ್ಥಾತ್ವಮೇವ ಚ ।**
**ತೇಜಸ್ತ್ವಂ ತೇಜಸಃ ಸಾಧ್ವಿ ರೂಪಮಾತ್ರಸ್ಯ ವೃತ್ತಯಃ ॥೪೧॥**

ದ್ರವ್ಯಾಕೃತಿತ್ವಂ=ದ್ರವ್ಯದ ಆಕಾರವುಳ್ಳದ್ದಾಗಿಯೇ ತೋರುವುದು ಗುಣತಾ= ಶುಕ್ಲಭಾಸ್ವರವೆಂಬ ಪ್ರಕಾಶರೂಪತೆಯು ವ್ಯಕ್ತಿಸಂಸ್ಥಾತ್ವಂ=ಬೇರೆ ಬೆಳಕಿನ ಅಪೇಕ್ಷೆ ಇಲ್ಲದೆ ಕಣ್ಣಿಗೆ ಕಾಣುವಂತೆ ಇರುವುದು (ತೇಜಿಸ್ಸಿನ ರೂಪಕ್ಕೆ ಪ್ರಭೆಯೆನ್ನುವರು) ಮತ್ತು ತೇಜಸಃ=ತೇಜಸ್ಸಿಗೆ ತೇಜಸ್ತ್ವಂ ಉಗ್ರತೆಯನ್ನು ಕೊಡುವುದು (ಉಗ್ರತೆ ಎಂದರೆ ಚೆನ್ನಾಗಿ ನೋಡಲಾಗದಿರುವುದು) ರೂಪಮಾತ್ರಸ್ಯ=ತೇಜಸ್ಸಿನ ಗುಣವಾದ ರೂಪದ ವೃತ್ತಯಃ=ಸ್ವಭಾವಲಕ್ಷಣವು.

ಈ ಶ್ಲೋಕದಲ್ಲಿ ವ್ಯಕ್ತಿಸಂಸ್ಥಾತ್ವಂ ಎಂಬ ಶಬ್ದದ ಅರ್ಥ ಹೇಳುವರು-

**ವ್ಯಕ್ತಿಸಂಸ್ಥಾತ್ವಂ ವ್ಯಕ್ತತ್ವೇನ ಸ್ಥಿತಿಃ ।**

ಅಂದರೆ ಬೆಳಕಿನ ಸಹಾಯವಿಲ್ಲದೆ ಕಣ್ಣಿಗೆ ಕಾಣುವಂತೆ ಇರುವುದು ಎಂದರ್ಥ. (ತ್ವಪ್ರತ್ಯಯ ಸ್ವಾರ್ಥದಲ್ಲಿ) ಜಾತಿ ಎಂದಲ್ಲ. ತೇಜಸ್ಸಿನ ರೂಪವಾದ ಪ್ರಭೆಯನ್ನು ಕಾಣಲು ಬೇರೆ ಬೆಳಕು ಬೇಕಿಲ್ಲವಷ್ಟೇ.

ಈ ರೀತಿಯ ಸ್ಥಿತಿ ಏಕೆ ಎಂದರೆ ಗುಣತೆಯಿರುವುದರಿಂದ ಎಂಬ ಅಭಿಪ್ರಾಯ-ದಿಂದ ವ್ಯಾಖ್ಯಾನಿಸಿವರು -

**ಗುಣತಾ ಪ್ರಕಾಶತ್ವಂ ।**

ಶುಕ್ಲಭಾಸ್ವರವೆಂಬ ಪ್ರಭಾರೂಪವಾಗಿದೆ ಎಂದು ಭಾವ.

ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ಆಲೋಕೋ ಗುಣ ಇತ್ಯೇವ ಪ್ರಕಾಶಶ್ಚೇತಿ ಕಥ್ಯತೇ । ಇತ್ಯಭಿಧಾನಮ್ ।**

ಆಲೋಕ ಗುಣ ಎಂಬ ಶಬ್ದಗಳಿಂದ ಪ್ರಕಾಶವೂ ಹೇಳಲ್ಪಡುವುದು.

ಹಾಗಾದರೆ ತೇಜಸ್ತ್ವಂ ಎಂಬುದರ ಅರ್ಥವೇನು ಅಂದರೆ ಹೇಳುವರು-

**ತೇಜಸ್ತ್ವಮಥ ಚೋಗ್ರತ್ವಂ ಕ್ರೌರ್ಯಮಿತ್ಯಪಿ ಚೋಚ್ಯತೇ ।ಇತ್ಯಭಿಧಾನಂ ।**

ಉಗ್ರತೆ ಕ್ರೌರ್ಯ ಎಂಬುದೆ ತೇಜಸ್ತ್ವ ಎಂದರ್ಥ.

ತೇಜಸ್ಸಿನ ರೂಪಲಕ್ಷಣವಿದು. ಈ ರೂಪವು ಸ್ವಯಂ ಪ್ರಕಾಶರೂಪವಾದ್ದರಿಂದ ಇದನ್ನು ತಿಳಿಯಲು ಬೇರೆ ಪ್ರಕಾಶಬೇಕಿಲ್ಲ. ಇದು ಕ್ರೂರ ಉಗ್ರ ಆದ್ದರಿಂದಲೇ ಸೂರ್ಯ ಮುಂತಾದ ತೇಜಸ್ಸನ್ನು ದಿಟ್ಟಿಸಿ ನೋಡಲಾಗುವುದಿಲ್ಲ. ತೇಜೋರೂಪ-ದ್ರವ್ಯಾಕಾರವಾಗಿಯೇ ಈ ರೂಪವಿರುವುದು ಎಂದು ಭಾವ. ॥೪೧॥

ತೇಜಸ್ಸಿನ ಲಕ್ಷಣ ಹೇಳುವರು -

**ದ್ಯೋತನಂ ಪಚನಂ ಪಾನಮದನಂ ಹಿಮಮರ್ದನಮ್ ।**
**ತೇಜಸೋ ವೃತ್ತಯಸ್ತ್ವೇತಾಃ ಶೋಷಣಂ ಕ್ಷುತ್ತೃಡುದ್ಭವಃ ॥೪೨॥**

ದ್ಯೋತನಂ=ಪ್ರಕಾಶಗೊಳಿಸುವುದು(ಸೂರ್ಯ ಚಂದ್ರರಲ್ಲಿ ಕಂಡಿದೆ) ಪಚನಂ= ಅಕ್ಕಿ ಮುಂತಾದುವನ್ನು ಬೇಯಿಸುವುದು (ಅಗ್ನಿಯಲ್ಲಿ) ಪಾನಂ=ರಸವನ್ನು ಸ್ವೀಕರಿಸುವುದು. ಅದನಂ=ತನಗೆ ಸಂಬದ್ಧವಾದುದನ್ನೆಲ್ಲ ತಿನ್ನುವುದು ಹಿಮ-ಮರ್ದನಂ=ಶೀತ ನಿವಾರಿಸುವುದು ಶೋಷಣಂ=ಒಣಗಿಸುವುದು ಕ್ಷುತ್ತೃಡುದ್ಭವಃ= ಹಸಿವೆ ನೀರಡಿಕೆಗಳನ್ನುಂಟುಮಾಡುವುದು ಏತಾಃ=ಇವುಗಳು ವೃತ್ತಯಃ=ತೇಜಸ್ಸಿನ ಸ್ವಭಾವ ಲಕ್ಷಣಗಳು. ॥೪೨॥

**ರೂಪಮಾತ್ರಾದ್ ವಿಕುರ್ವಾಣಾದ್ ತೇಜಸೋ ದೈವಚೋದಿತಾತ್ ।**
**ರಸಮಾತ್ರಮಭೂತ್ ತಸ್ಮಾದಂಭೋ ಜಿಹ್ವಾ ರಸಗ್ರಹಃ ॥೪೩॥**

ರೂಪಮಾತ್ರಾತ್=ರೂಪವೆಂಬ ಗುಣದಿಂದ ಕೂಡಿದ ದೇವಚೋದಿತಾತ್= ಭಗವಂತನಿಂದ ಪ್ರೇರಿತವಾದ ವಿಕುರ್ವಾಣಾತ್=ವಿಕಾರಹೊಂದುವ ತೇಜಸಃ= ಅಗ್ನಿಯಿಂದ ರಸಮಾತ್ರಂ=ಅಪ್‌ಸೂಕ್ಷ್ಮಗಳಿಗೆ ಉಪಚಾಯಕವಾದ ರಸವೆಂಬ ಮಾತ್ರಾದ್ರವ್ಯವು (ರಸಸೂಕ್ಷ್ಮ ಉಪಚಯವಾಗಿ) ಅಭೂತ್=ಉತ್ಪನ್ನವಾಯಿತು. ತಸ್ಮಾತ್=ರಸದಿಂದ ಉಪಚಯವಾಗಿ ಅಂಭಃ=ನೀರಿನಸೂಕ್ಷ್ಮಗಳು ನೀರಾಗಿ ಜನಿಸಿದವು. ತಸ್ಮಾತ್=ನೀರಿನಿಂದ ಜಿಹ್ವಾ=ನಾಲಿಗೆಯು (ರಸನೇಂದ್ರಿಯವು) ಅಭೂತ್=ಉಂಟಾಯಿತು. ತಯಾ ರಸಗ್ರಹಃ ಭವತಿ=ಅದರಿಂದ ರಸಜ್ಞಾನ-ವಾಗುವುದು. ॥೪೨॥

**ಕಷಾಯೋ ಮಧುರಸ್ತಿಕ್ತಃ ಕಟ್ವಾಮ್ಲ ಇತಿ ನೈಕಧಾ ।**
**ಭೌತಿಕಾನಾಂ ವಿಕಾರೇಣ ರಸ ಏಕೋ ವಿಭಿದ್ಯತೇ ॥೪೪॥**

ಏಕಃ ರಸಃ=ಒಂದೇ ರಸವು ಭೌತಿಕಾನಾಂ ವಿಕಾರೇಣ=ಬೇರೆ ಬೇರೆ ಭೌತಿಕ ಪದಾರ್ಥಗಳ ಸಂಬಂಧದಿಂದ ಕಷಾಯಃ=ಒಗರು, ಮಧುರಃ=ಸಿಹಿ, ತಿಕ್ತಃ=ಕಹಿ,

ಕಟು=ಖಾರ, ಆಮ್ಲ=ಹುಳಿ, ಲವಣಂ=ಉಪ್ಪು ಎಂದು ಆರು ವಿಧವಾಗಿ ವಿಭಾಗವನ್ನು ಪಡೆಯುವುದು. ಜಲದ ಸ್ವಾಭಾವಿಕರಸ ಮಧುರರಸವೆಂದು ಭಾವ. ॥೪೩॥

ನೀರಿನ ಲಕ್ಷಣ ಹೇಳುವರು–

**ಕ್ಲೇದನಂ ಪಿಂಡನಂ ತೃಪ್ತಿಃ ಪ್ರಾಣನಾಪ್ಯಾಯನೋಂದನಮ್ ।**
**ತಾಪಾಪನೋದೋ ಭೂಯಸ್ತ್ವಮಂಭಸೋ ವೃತ್ತಯಸ್ತ್ವಿಮಾಃ ॥**

ಕ್ಲೇದನಂ=ತೋಯಿಸಿವುದು (ಆರ್ದ್ರೀಕರಣ) ಪಿಂಡನಂ=ಮಣ್ಣು ಹಿಟ್ಟು ಮುಂತಾದವುಗಳು ಉಂಡಿಯಾಗುವಂತೆ ಮಾಡುವುದು ಪ್ರಾಣನಂ=ಬದುಕಿಸು-ವುದು ಒಳ್ಳೆ ಚೇಷ್ಟೆಗಳನ್ನುಂಟುಮಾಡುವುದು ಆಪ್ಯಾಯನಂ=ನೀರಡಿಕೆಯನ್ನು ಕಳೆಯುವುದು ಉಂದನಂ=ಬಿಂದುಗಳಾಗುವುದು ತಾಪಾಪನೋದಃ=ತಾಪವನ್ನು ಕಳೆಯುವುದು ಭೂಯಸ್ತ್ವಂ=ಪಾರ್ಥಿವಾದಿ ದೇಹಗಳಲ್ಲಿ ಪೃಥಿವೀ ಅಗ್ನಿಗಿಂತ ಹೆಚ್ಚು ಪ್ರಮಾಣದಲ್ಲಿರುವುದು ತೃಪ್ತಿಃ=ತೃಪ್ತಿಯನ್ನುಂಟುಮಾಡುವುದು. ಇಮಾಃ= ಇವುಗಳು ಅಂಭಸಃ=ನೀರೀನ ವೃತ್ತಯಃ=ಸ್ವಭಾವಲಕ್ಷಣಗಳು.

ಉಂದನ ಶಬ್ದಾರ್ಥವನ್ನು ಪ್ರಮಾಣದಿಂದ ತಿಳಿಸುವರು –

**ಉಂದನಂ ಬಿಂದುಭಾವಃ ಸ್ಯಾತ್ ಸ್ಯಂದನಂ ಸ್ರವಣಂ ಸ್ಮೃತಮ್ ।**
**ಇತ್ಯಭಿಧಾನಮ್ ।**

ಉಂದನ ಎಂದರೆ ಬಿಂದುಗಳಾಗುವಿಕೆ, ಸ್ಯಂದನ ಎಂದರೆ ಹರಿಯುವುದು ಎಂದು ಅಭಿಧಾನವಿದೆ.

ಭೂಯಸ್ತ್ವಂ ಎಂಬುದಕ್ಕೆ ಬಾಯಿಂದ ನೀರು ತೆಗೆದು ಹಾಗೆಲ್ಲ ಬರುತ್ತಲೆ ಇರುವುದು ಎಂಬ ವ್ಯಾಖ್ಯಾನವು ಅಸಾಂಪ್ರದಾಯಿಕ ಎಂಬ ಅಭಿಪ್ರಾಯದಿಂದ ಸ್ವಯಂವ್ಯಾಖ್ಯಾನ ಮಾಡುವರು –

**ಪೃಥಿವ್ಯಗ್ನ್ಯಪೇಕ್ಷಯಾ ಭೂಯಸ್ತ್ವಂ ದೇಹೇ ।**

ಪಾರ್ಥಿವಾದಿದೇಹಗಳಲ್ಲಿ ಪೃಥಿವಿ ಅಗ್ನಿಗಿಂತ ಹೆಚ್ಚಾಗಿರುವದೇ ಭೂಯಸ್ತ್ವ ಎಂಬುದರ ಅರ್ಥ.

ಈ ವಿಷಯ ಸೂತ್ರಭಾಷ್ಯದಲ್ಲಿ ಹೀಗೆ ಬಂದಿದೆ –

ಪಾರ್ಥಿವಾನಾಂ ಶರೀರಾಣಾಂ ಅರ್ಧೇನ ಪೃಥಿವೀ ಸ್ಮೃತಾ ।
ಇತರೇಽರ್ಧೇ ತ್ರಿಭಾಗಿನ್ಯಃ ಆಪಸ್ತೇಜಸ್ತು ಭಾಗತಃ ॥

ಪಾರ್ಥಿವಶರೀರೇಷು ಅರ್ಧಂ ಪೃಥಿವೀ, ಇತರಾರ್ಧೇ ತ್ರಿಭಾಗಿನ್ಯಃ ಆಪಃ, ಭಾಗೇನ ತೇಜಃ । ತೈಜಸ ಶರೀರೇಷು ಅರ್ಧಂ ತೇಜಃ, ಇತರಾರ್ಧೇ ತ್ರಿಭಾಗಿನ್ಯ ಅಪಃ, ಭಾಗೇನ ಪೃಥಿವೀ । ಆಪ್ಯಶರೀರೇಷು ಅರ್ಧಂ ಆಪಃ, ಇತರಾರ್ಧೇ ತ್ರಯೋ ಭಾಗಾಃ ತೈಜಸಃ, ಏಕಃ ಪೃಥಿವ್ಯಾಃ ಭಾಗಃ ॥

ಅಂದರೆ ಪ್ರತಿಯೊಂದು ಶರೀರದಲ್ಲಿ ಎಂಟು ಭಾಗವೆಂದು ಇಟ್ಟಕೊಂಡಾಗ ಪಾರ್ಥಿವಶರೀರದಲ್ಲಿ ನಾಲ್ಕು ಭಾಗ ಪೃಥಿವಿ. ಉಳಿದ ನಾಲ್ಕುರಲ್ಲಿ ಮೂರು ಭಾಗ ನೀರು. ಒಂದು ಭಾಗ ತೇಜಸ್ಸು.

ತೈಜಸ ಶರೀರದಲ್ಲಿ ನಾಲ್ಕು ಭಾಗ ತೇಜಸ್ಸು ಮೂರು ಭಾಗ ನೀರು ಒಂದು ಭಾಗ ಪೃಥಿವಿ, ಜಲೀಯಶರೀರದಲ್ಲಿ ನಾಲ್ಕು ನೀರು ಮೂರು ಭಾಗ ತೇಜಸ್ಸು ಒಂದು ಭಾಗ ಪೃಥಿವಿ.

ಹೀಗೆ ಒಟ್ಟು ಮೂರು ಶರೀರ ಸೇರಿ ನೀರಿನ ಭಾಗ ೧೦ ಆಗುವುದು, ತೇಜಸ್ಸು ೮ ಪೃಥಿವಿ ೬. ಆಗುವುದು ಇದೆ ಭೂಯಸ್ತ್ವಶಬ್ದಾರ್ಥ. ॥೪೫॥

**ರಸಮಾತ್ರಾದ್ ವಿಕುರ್ವಾಣಾದಂಭಸೋ ದೈವಚೋದಿತಾತ್ ।**
**ಗಂಧಮಾತ್ರಮಭೂತ್ ತಸ್ಮಾತ್ ಪೃಥ್ವೀ ಘ್ರಾಣಸ್ತು ಗಂಧಗಃ ॥೪೬॥**

ದೈವಚೋದಿತಾತ್=ಶ್ರೀಹರಿಯಿಂದ ಪ್ರೇರಿತವಾದ ವಿಕುರ್ವಾಣಾತ್=ವಿಕಾರವನ್ನು ತಾಳುವ ರಸಮಾತ್ರಾತ್=ರಸವೆಂಬಗುಣವುಳ್ಳ ಅಂಭಸಃ=ನೀರಿನಿಂದ ಗಂಧಮಾತ್ರಂ ಅಭೂತ್=ಗಂಧಸೂಕ್ಷ್ಮಗಳು ಉಪಚಯವಾಗಿ ಗಂಧವೆಂಬ ತನ್ಮಾತ್ರಾ ದ್ರವ್ಯವು ಜನಿಸಿತು. ತಸ್ಮಾತ್=ಆಗಂಧದಿಂದ ಉಪಚಿತವಾಗಿ ಪೃಥವೀಸೂಕ್ಷ್ಮಗಳು ಪೃಥ್ವೀ ಅಭೂತ್=ಪೃಥ್ವೀ ಎಂದಾದವು. ತಸ್ಮಾತ್ ಪೃಥ್ವೀಯಿಂದ ಗಂಧಗಃ= ಗಂಧವನ್ನು ತಿಳಿಸುವ ಘ್ರಾಣಃ=ಮೂಗು ಅಭೂತ್=ಜನಿಸಿತು.

(ಇಂದ್ರಿಯ ಗ್ರಾಹ್ಯಗುಣಗಳು ಆ ಆ ಭೂತಸೂಕ್ಷ್ಮದಲ್ಲಿ ಸ್ವಾಭಾವಿಕವಾಗಿ ಇರುವುವು. ಭೂತಗಳು ಸ್ಥೂಲವಾಗಿ ವ್ಯಕ್ತವಾಗುವುವು ಎಂದು ಭಾವ.) ॥೪೬॥

ಇಲ್ಲಿಯೂ ಪೃಥಿವಿಗಂಧಕ್ಕೆ ಸೌರಭ್ಯವೇ ಸ್ವಭಾವಸಿದ್ಧ ಲಕ್ಷಣವಾದ್ದರಿಂದ ಅದನ್ನು ಹೇಳದೆ ನೈಮಿತ್ತಿಕ ವಿಭಾಗ ಹೇಳುವರು –

**ಕರಂಭಪೂತಿಸೌರಭ್ಯಶಾಂತೋ ಗ್ರಾಮ್ಲಾದಿಭಿಃ ಪೃಥಕ್ ।**
**ದ್ರವ್ಯಾವಯವವೈಷಮ್ಯಾದ್ ಗಂಧ ಏಕೋ ವಿಭಿದ್ಯತೇ ॥೪೭॥**

ಕರಂಭ=ಸುಟ್ಟ ಪದಾರ್ಥದಲ್ಲಿ ತಿಳಿಯುವ ದುರ್ಗಂಧ, ಪೂತಿ=ಹಸಿಯಾದ ಗಾಯದ ದುರ್ವಾಸನೆ ಸೌರಭ್ಯ=ಕರ್ಪೂರ ಮುಂತಾದ ಅತಿಶಯ ಸುವಾಸನೆ ಶಾಂತ=ಒಂದು ತರಹದ ಸುಗಂಧ ಕಮಲಮುಂತಾದವುಗಳಲ್ಲಿರುವುದು. ಉಗ್ರ= ತೀಕ್ಷ್ಣವಾದ ಕಳ್ಳಿಗಿಡ ಮುಂತಾದವುಗಳಲ್ಲಿ ಕಂಡುಬರುವ ಗಂಧ ಆಮ್ಲ= ಅಂಬಲಿಯಲ್ಲಿ ಕಾಣಿಸುವ ವಾಸನೆ ಆದಿಭಿಃ=ಇವೇ ಮುಂತಾದ ರೀತಿಯಿಂದ ಪೃಥಕ್=ಬೇರೆ ಬೇರೆ ದ್ರವ್ಯಾವಯವವೈಷಮ್ಯಾತ್=ಪೃಥಿವಿಸಂಬಂಧವಾದ ನಾನಾವಿಧ ದ್ರವ್ಯಗಳ ಅಂಶಗಳ ವೈಚಿತ್ರ್ಯದಿಂದ ಏಕಃ ಗಂಧಃ=ಒಂದೇ ಗಂಧವು ವಿಭಿದ್ಯತೇ=ಬೇರೆ ಬೇರೆಯಾಗುವುದು. ॥೪೭॥

ಪೃಥಿವೀಲಕ್ಷಣ ಹೇಳುವರು –

**ಭಾವನಂ ಬ್ರಹ್ಮಣಃ ಸ್ಥಾನಂ ಧಾರಣಂ ಸದ್ವಿಶೇಷಣಮ್ ।**
**ಸರ್ವಸತ್ವಗುಣೋದ್ಭೇದಃ ಪೃಥಿವೀವೃತ್ತಿಲಕ್ಷಣಮ್ ॥೪೮॥**

ಭಾವನಂ=ಸಸ್ಯಗಳನ್ನು ಹುಟ್ಟಿಸುವುದು ಬ್ರಹ್ಮಣಃ ಸ್ಥಾನಂ=ಪ್ರಾಥಮಿಕ ಬ್ರಹ್ಮಜ್ಞಾನವು ಪಾರ್ಥಿವ ಶರೀರದಲ್ಲಿ ಆಗುವುದರಿಂದ ಪೃಥಿವೀ ಬ್ರಹ್ಮಸ್ಥಾನವೆಂದು ಕರೆಸಿಕೊಳ್ಳುವುದು. ಧಾರಣಂ=ಭಾರವಾದ ಪದಾರ್ಥಗಳನ್ನು ಧರಿಸುವುದು ಸದ್ವಿಶೇಷಣಂ=ವಿಶೇಷವಾಗಿ ವ್ಯಕ್ತವಾಗುವುದು ಸರ್ವಸತ್ವಗುಣೋದ್ಭೇದಃ= ಸಂಸಾರಾವಸ್ಥೆಯಲ್ಲಿ ಜ್ಞಾನಭಕ್ತ್ಯಾದಿ ಎಲ್ಲ ಗುಣಗಳ ಅಭಿವ್ಯಕ್ತಿಗೆ ಸ್ಥಾನವಾಗುವುದು ಪೃಥಿವೀ ವೃತ್ತಿಲಕ್ಷಣಂ=ಪೃಥಿವಿಯ ಸ್ವಭಾವ ಲಕ್ಷಣವು.

ಇಲ್ಲಿಯ ಭಾವನಂ ಎಂಬ ಶಬ್ದಕ್ಕೆ ಅತಿಪ್ರಸಕ್ತಿಯು ಬರದಂತೆ ಅರ್ಥ ಹೇಳುವರು –

**ಭಾವನಂ ಉತ್ಪಾದಕತ್ವಂ ।**

ಬ್ರಹ್ಮಣಃ ಸ್ಥಾನಂ ಎಂಬುದಕ್ಕೂ ಅಸಾಧಾರಣತೆ ಬರುವಂತೆ ಅರ್ಥ ಹೇಳುವರು

**ಬ್ರಹ್ಮಸ್ಥಾನಂ ತು ಪೃಥಿವೀ ಶರೀರೇ ಬ್ರಹ್ಮದರ್ಶನಾತ್ ।**

ಅದರಂತೆ ಸದ್ವಿಶೇಷಣಂ ಎಂಬುದರ ಅರ್ಥ ಹೇಳುವರು

**ವಿಶೇಷೇಣ ವ್ಯಕ್ತತ್ವಂ ಸದ್ವಿಶೇಷಣಂ ।**

ಅಂದರೆ ಇಲ್ಲಿ ವಿಶೇಷಣ ಶಬ್ದವು, ವಿಶೇಷಣ ವಾಚಕವು. ಭಾವಪ್ರಧಾನವು. ತೃತೀಯಾತತ್ಪುರುಷ ಮಾಡಿ ವಿಶೇಷಣಶಬ್ದಕ್ಕೆ ಪರನಿಪಾತವಾಗಿದೆ ಎಂದಿಟ್ಟು-

ಕೊಂಡು ಅದರ ಭಾವಾರ್ಥ ವಿಶೇಷೇಣ ವ್ಯಕ್ತತ್ವ ಎಂಬುದು. ಪಂಚಭೂತಗಳಲ್ಲಿ ಆಕಾಶವು ಶಬ್ದ ಎಂಬ ಒಂದೇ ಗುಣದಿಂದ, ವಾಯುವು ಶಬ್ದ ಸ್ಪರ್ಶ ಎರಡು ಗುಣದಿಂದ, ತೇಜಸ್ಸು ಶಬ್ದಸ್ಪರ್ಶರೂಪ ಮೂರುಗುಣಗಳಿಂದ, ನೀರುಶಬ್ದಸ್ಪರ್ಶ ರೂಪರಸಗಳಿಂದ ವ್ಯಕ್ತ, ಪೃಥಿವೀಮಾತ್ರ ಶಬ್ದರೂಪರಸಗಂಧಸ್ಪರ್ಶ ಐದು ಗುಣಗಳಿಂದ ವ್ಯಕ್ತವಾಗುವುದರಿಂದ ವಿಶೇಷೇಣ ವ್ಯಕ್ತವೆನಿಸುವುದು ಎಂದು ಭಾವ.

ಸಚ್ಛಬ್ದವು ವ್ಯಕ್ತವಾಚಿ ಎನ್ನಲು ಪ್ರಮಾಣ ಹೇಳುವರು –

**ಅಸದವ್ಯಕ್ತನಾಮ ಸ್ಯಾದ್ ವ್ಯಕ್ತಂ ಸದಿತಿ ಚೋಚ್ಯತೇ । ಇತಿ ಬ್ರಾಹ್ಮೇ ।**

ಸರ್ವ ಶಬ್ದಗುಣೋದ್ಭೇಧಃ ಎಂಬುದನ್ನು ಪೃಥವಿಯಲ್ಲಿ ತೋರಿಸುತ್ತ ವ್ಯಾಖ್ಯಾನಿಸುವರು –

**ಸರ್ವಸತ್ವಗುಣೋದ್ಭೇದಃ ಶರೀರೇ ಹಿ ಸರ್ವಪ್ರಾಣಿನಾಂ ಗುಣಾಃ ।ವ್ಯಜ್ಯಂತೇ ಸಂಸಾರಾವಸ್ಥಾಯಾಂ ಇತಿ ಬ್ರಹ್ಮಸ್ಥಾನತ್ವಂ ।**

ಸರ್ವಗುಣೋದ್ಭೇದ ಶರೀರದಲ್ಲಿ ತಿಳಿಸಲಾಯಿತು. ಪೃಥಿವೀಲಕ್ಷಣ ಹೇಗೆ ಎಂದರೆ ಶರೀರಕ್ಕೆ ಪಾರ್ಥಿವತ್ವ ಹೇಳುವ ಪ್ರಮಾಣ ಹೇಳುವರು–

**ಶರೀರಂ ಪಾರ್ಥಿವಂ ಜ್ಞೇಯಮಿಂದ್ರಿಯಾಣ್ಯೌದಕಾನಿ ತು ।**
**ತೈಜಸಃ ಕೋಷ್ಠಗೋ ವನ್ಹಿಶ್ಛಿದ್ರಮಾಕಾಶಸಂಭವಂ ।**
**ಪ್ರಾಣಾ ವಾಯುಮಯಾಃ ಸರ್ವೇ ಪ್ರತ್ಯೇಕಂ ಪಂಚಧಾ ಪುನಃ ॥**

**ಇತಿ ಕಾಪಿಲೇಯೇ ।**

ಶರೀರವು ಪಾರ್ಥಿವವಾದ್ದರಿಂದ ಪೃಥಿವಿಲಕ್ಷಣವಾಗಬಹುದು. ಶರೀರ ಪಾಂಚಭೌತಿಕ ಎನ್ನುವರಲ್ಲ ಎಂದರೆ ಉತ್ತರ ಇಂದ್ರಿಯಗಳು ಜಲೀಯವಾದವು. ಜಾಠರಾಗ್ನಿ ತೈಜಸ, ದ್ವಾರಗಳು, ಆಕಾಶ, ಪ್ರಾಣಾಪಾನಾದಿಗಳು, ಐದು ವಾಯು, ಎಲ್ಲ ಸೇರಿ ಪಂಚಭೂತಾತ್ಮಕತ್ವ ಕೇವಲ ಶರೀರಕ್ಕೆ ಮಾತ್ರವಲ್ಲ. ಅಂಗಾಂಗಿಗಳೆರಡು ಪಂಚಭೂತಾತ್ಮಕವಾಗಿವೆಯಲ್ಲ ? ಎಂಬ ಶಂಕೆಗೆ ಉತ್ತರ – ನಿಜ ! ಪ್ರತ್ಯೇಕವಾಗಿ ಪಂಚವಿಧವೆ ಆಗಿವೆ. ಆದರೂ ಅಂಗಿಯಾದ ಪಾರ್ಥಿವಶರೀರದಲ್ಲಿ ಪೃಥಿವೀ ಭಾಗ ಬಹಳವಾಗಿರುವುದರಿಂದ ಅಂಗಗಳಾದ ಇಂದ್ರಿಯಾದಿಗಳಲ್ಲಿ ನೀರು ತೇಜಸ್ಸಿನ ಭಾಗ ಹೆಚ್ಚಿರುವುದರಿಂದ ಹೇಳಿದ ವ್ಯವಸ್ಥೆ ಉಪಪನ್ನವಾಗುವುದು ಎಂದು ಭಾವ. ॥೪೮॥

ಇಂದ್ರಿಯಗಳ ಲಕ್ಷಣ ಹೇಳುವರು –

**ನಭೋಗುಣವಿಶೇಷೋಽರ್ಥೋ ಯಸ್ಯ ತಚ್ಛ್ರೋತ್ರಮುಚ್ಯತೇ ।**
**ವಾಯೋರ್ಗುಣವಿಶೇಷೋಽರ್ಥೋ ಯಸ್ಯ ತತ್ ಸ್ಪರ್ಶನಂ ವಿದುಃ ॥**

ಯಸ್ಯ=ಯಾವುದಕ್ಕೆ ನಭೋಗುಣಃ=ಭೂತಾಕಾಶದ ಗುಣವಾದ ಶಬ್ದವು ವಿಶೇಷಃ ಅರ್ಥಃ=ಅಸಾಧಾರಣವಿಷಯವಾಗಿದೆಯೋ ತತ್=ಅದು ಶ್ರೋತ್ರಂ ಉಚ್ಯತೇ=ಶ್ರವಣೇಂದ್ರಿಯವೆನಿಸುವುದು.(ಕಿವಿ) ಯಸ್ಯ=ಯಾವುದಕ್ಕೆ ವಾಯೋಃ= ಗುಣಃ=ವಾಯುವಿನ ಗುಣವಾದ ಸ್ಪರ್ಶವು ವಿಶೇಷಾರ್ಥಃ=ಅಸಾಧಾರಣ ವಿಷಯ-ವಾಗಿದೆಯೋ ತತ್=ಅದು ಸ್ಪರ್ಶನಂ ವಿದುಃ=ತ್ವಗಿಂದ್ರಿಯವೆಂದು ತಿಳಿದಿರುವರು. ॥೪೯॥

**ತೇಜೋಗುಣವಿಶೇಷೋಽರ್ಥೋ ಯಸ್ಯ ತಚ್ಚಕ್ಷುರುಚ್ಯತೇ ।**
**ಅಂಭೋಗುಣವಿಶೇಷೋಽರ್ಥೋ ಯಸ್ಯ ತದ್ರಸನಂ ವಿದುಃ ॥**

ತೇಜೋಗುಣಃ=ತೇಜಸ್ಸಿನ ಗುಣವಾದ ರೂಪವು ಯಸ್ಯ=ಯಾವುದಕ್ಕೆ ವಿಶೇಷಃ ಅರ್ಥಃ=ಅಸಾಧಾರಣವಿಷಯವಾಗಿದೆಯೋ ತತ್=ಅದು ಚಕ್ಷುಃ ಉಚ್ಯತೇ= ಕಣ್ಣೆಂದು ಕರೆಯಲ್ಪಡುವುದು. ಅಂಭೋಗುಣಃ=ನೀರಿನ ಗುಣವಾದ ರಸವು ಯಸ್ಯ=ಯಾವ ಇಂದ್ರಿಯಕ್ಕೆ ವಿಶೇಷಃ ಅರ್ಥಃ=ಅಸಾಧಾರಣ ವಿಷಯವಾಗಿ-ದೆಯೋ ತತ್=ಅದನ್ನು ರಸನಂ ವಿದುಃ=ರಸನೇಂದ್ರಿಯವೆಂದು ತಿಳಿಯುವರು ನಾಲಿಗೆ ॥೫೦॥

**ಭೂಮೇರ್ಗುಣವಿಶೇಷೋಽರ್ಥೋ ಯಸ್ಯ ಸ ಘ್ರಾಣ ಉಚ್ಯತೇ ।**
**ಪರಸ್ಯ ದೃಶ್ಯತೇ ಧರ್ಮೋ ಹ್ಯಪರಸ್ಮಿನ್ ಸಮನ್ವಯಾತ್ ॥೫೧॥**

ಭೂಮೇಃ ಗುಣಃ=ಪೃಥಿವಿಯ ಧರ್ಮವಾದ ಗಂಧವು ಯಸ್ಯ=ಯಾವುದಕ್ಕೆ ವಿಶೇಷಃ ಅರ್ಥಃ=ಅಸಾಧಾರಣ ವಿಷಯವಾಗಿದೆಯೋ ಸಃ=ಅದು ಘ್ರಾಣಃ ಉಚ್ಯತೇ=ಘ್ರಾಣೇಂದ್ರಿಯ(ಮೂಗು)ವೆಂದು ಕರೆಯಲ್ಪಡುವುದು. ಪರಸ್ಯ ಧರ್ಮಃ =ಕಾರಣದ ಧರ್ಮವಾದ ಶಬ್ದಾದಿಗಳು ಅಪರಸ್ಮಿನ್=ಕಾರ್ಯವಾದ ವಾಯು-ಮುಂತಾದವುಗಳಲ್ಲಿ ಸಮನ್ವಯಾತ್=ಕಾರಣದ ಸಂಬಂಧದಿಂದ ದೃಶ್ಯತೇ= ಕಂಡುಬರುವುವು. ॥೫೧॥

**ಅತೋ ವಿಶೇಷೋ ಭಾವಾನಾಂ ಭೂಮಾವೇವೋಪಲಕ್ಷ್ಯತೇ ।**
**ಏತಾನ್ಯಸಂಹತ್ಯ ಯದಾ ಮಹದಾದೀನಿ ಸಪ್ತ ವೈ ॥೫೨॥**

ಅತಃ=ಕಾರಣಗುಣಗಳು ಕಾರ್ಯದಲ್ಲಿ ಬರುವುದರಿಂದ ಭಾವಾನಾಂ= ಆಕಾಶಾದಿಗಳ ವಿಶೇಷಃ=ಗುಣವು ಎಲ್ಲವೂ ಭೂಮಾವೇವ=ಪೃಥಿವಿಯಲ್ಲಿಯೇ ಉಪಲಕ್ಷ್ಯತೇ=ಕಂಡು ಬರುವುದು. ಕಾರಣ ೪೮ನೇ ಶ್ಲೋಕದಲ್ಲಿ ಪೃಥ್ವಿಗೆ ಹೇಳಿದ ಸದ್ವಿಶೇಷಣ ಎಂಬ ಶಬ್ದಾದಿಗುಣಪಂಚಕವತ್ತಯಾ ವ್ಯಕ್ತತ್ವರೂಪವಾದ ವಿಶೇಷ

ವ್ಯಕ್ತತ್ವವು ಸಿದ್ಧವಾಯಿತು. ಏತಾನಿ=ಈ ಮಹದಾದೀನಿ=ಮಹತ್ತತ್ವ ಮೊದಲಾದ ಸಪ್ತ=ಏಳು ತತ್ವಗಳು ಅಸಂಹತ್ಯ=ಮೇಲನ ಮಾಡುವವರಿಲ್ಲದ್ದರಿಂದ ಮಿಲಿತವಾಗದೇ ಯದಾ=ಯಾವಾಗ ॥೫೨॥

**ನ ಶೇಕುಃ ಪುರುಷಂ ಸ್ರಷ್ಟುಂ ಭೋಗಾಯತನಮಂಜಸಾ ।**
**ಕಾಲಕರ್ಮಗುಣೋಪೇತೋ ಜಗದಾದಿರುಪಾವಿಶತ್ ॥೫೩॥**

ಭೋಗಾಯತನಂ=ಬ್ರಹ್ಮಾಂಡ ಮತ್ತು ಪುರುಷಂ=ಅದರಲ್ಲಿರುವ ಬ್ರಹ್ಮನ ಶರೀರವನ್ನು ಸ್ರಷ್ಟುಂ=ಉತ್ಪಾದಿಸಲು ನ ಶೇಕುಃ=ಸಮರ್ಥವಾಗಲಿಲ್ಲವೋ ತದಾ= ಆವಾಗ ಜಗದಾದಿಃ=ಜಗತ್ತಿನ ನಿಮಿತ್ತ ಕಾರಣನಾದ ಶ್ರೀಮನ್ನಾರಾಯಣನು ಅಂಜಸಾ=ಕಾರ್ಯಜನನಶಕ್ತಿ ಉದ್ಬೋಧಕರೂಪದಿಂದ ಕಾಲಕರ್ಮಗುಣೋಪೇತಃ =ಕಾಲ, ಕರ್ಮ, ಗುಣಗಳಿಂದ ಸಹಿತನಾಗಿ ಮಹದಾದೀನಿ ಸಪ್ತ ಇಂದ್ರಿಯಾದೀನಿ ಉಪಾವಿಶತ್=ಮಹದಾದಿ ತತ್ವಗಳನ್ನೂ ಇಂದ್ರಿಯಗಳನ್ನೂ ಪ್ರವೇಶಿಸಿದನು. ॥೫೩॥

**ತತಸ್ತೇನಾನುವಿದ್ಧೇಭ್ಯೋ(ಸ್ತತ್ವೇ) ಯುಕ್ತೇಭ್ಯೋऽಂಡಮಚೇತನಂ ।**
**ಉತ್ಥಿತಂ ಪುರುಷೋ ಯಸ್ಮಾದುದತಿಷ್ಠದಸೌ ವಿರಾಟ್ ॥೫೪॥**

ತತಃ=ಶ್ರೀಹರಿಯ ಪ್ರವೇಶವಾದ ನಂತರ ತೇನ=ಶ್ರೀಹರಿಯಿಂದ ಅನುವಿದ್ಧೇಭ್ಯಃ =ಪ್ರೇರಿತಗಳಾದ ತತ್ವೇಭ್ಯಃ=ತತ್ವಗಳಿಂದ ಯುಕ್ತೇಭ್ಯಃ=ಅಂಶಗಳಿಂದ ಮಿಲಿತ-ವಾದವುಗಳಿಂದ ಅಂದರೆ ಭಗವಂತನ ರೇತೋರೂಪದಿಂದ ಪರಿಣತಗಳಾದವು-ಗಳಿಂದ ಅಚೇತನಂ ಅಂಡಂ=ಜಡವಾದ ಬ್ರಹ್ಮಾಂಡವು ಉತ್ಥಿತಂ=ಉತ್ಪನ್ನವಾಯಿತು. ಯಸ್ಮಾತ್=ಯಾವ ಬ್ರಹ್ಮಾಂಡದಿಂದ ಅಸೌ=ಈ ವಿರಾಟ್ ವಿಶೇಷವಾಗಿ ಪ್ರಕಾಶಮಾನನಾದ ಪುರುಷಃ=ಹಿರಣ್ಯಗರ್ಭನು ಉದತಿಷ್ಠತ್=ಉತ್ಪನ್ನನಾದನು. ವಿರಾಣ್ಣಾಮಕ ಬ್ರಹ್ಮಶರೀರ ಕಾರಣವಾದುದರಿಂದ ಇದಕ್ಕೆ ಬ್ರಹ್ಮಾಂಡವೆನ್ನುವರು ಎಂದು ಭಾವ.

ಇಲ್ಲಿ ವಿರಾಟ್‌ಪುರುಷನು ಬ್ರಹ್ಮನೆ ಎನ್ನುವುದಕ್ಕೆ ಪ್ರಮಾಣ ಹೇಳುವರು-

**ಅಚೇತನಾದ್ಯತಸ್ತ್ವಂಡಾದ್ ಬ್ರಹ್ಮಾ ಸಮಜನಿ ಸ್ಫುಟಂ ।**
**ಅತೋ ಬ್ರಹ್ಮಾಂಡಮಿತ್ಯಾಹುರ್ವಿರಾಡ್ ಬ್ರಹ್ಮಾ ಪ್ರಕಾಶನಾತ್ ॥ ಇತಿ ಚ ।**

ಯಾವ ಕಾರಣ ಅಚೇತನವಾದ ಯಾವುದರಿಂದ ಬ್ರಹ್ಮದೇವರು ಸ್ಪಷ್ಟವಾಗಿ ಉತ್ಪನ್ನರಾದರೋ ಆದ್ದರಿಂದಲೇ ಬ್ರಹ್ಮಾಂಡವೆನ್ನುವರು. ವಿಶೇಷವಾಗಿ ಪ್ರಕಾಶ-ಮಾನನಾದುದರಿಂದ ಬ್ರಹ್ಮನು ವಿರಾಟ್ ಎನಿಸುವನು ಎಂದು ಭಾವ. ॥೫೪॥

ಉತ್ಪನ್ನವಾದ ಈ ಬ್ರಹ್ಮಾಂಡವು ಒಳ ಹೊರಗಿನ ಪದಾರ್ಥಗಳಿಂದ ಸಹಿತವಾಗಿ ಭಗವಂತನ ಪ್ರತಿಮೆ ಎಂದು ತಿಳಿಯಬೇಕೆಂದು ಹೇಳುವರು. ಮತ್ತು ಪೃಥಿವೀ ಅಂಶ ಬಹಳವಿರುವುದರಿಂದ ವಿಶೇಷವೆಂದೂ ಇದಕ್ಕೆ ಹೆಸರು ಎಂದೂ ಹೇಳುವರು.

**ಏತದಂಡಂ ವಿಶೇಷಾಖ್ಯಂ ಕ್ರಮವೃದ್ಧೈರ್ದಶೋತ್ತರೈಃ ।**
**ತೋಯಾದಿಭಿಃ ಪರಿವೃತಂ ಪ್ರಧಾನೇನಾವೃತಂ ಬಹಿಃ ॥**
**ಯತ್ರ ಲೋಕವಿತಾನೋಽಯಂ ರೂಪಂ ಭಗವತೋ ಹರೇಃ ॥೫೫॥**

ಏತತ್ ಅಂಡಂ ವಿಶೇಷಾಖ್ಯಂ=ಪೃಥ್ವಿಯು ಅಂಡಖರ್ಪರದವರೆಗೆ ಸಂಬಂದ್ಧವಾದ್ದರಿಂದ ಪೃಥಿವೀ ಎಂದೂ ಬ್ರಹ್ಮಾಂಡಕ್ಕೆ ಹೆಸರು ಬಂದಿದೆ. ಕ್ರಮವೃದ್ಧೈಃ= ಕ್ರಮವಾಗಿ ಅಭಿವೃದ್ಧಗಳಾದ ದಶೋತ್ತರೈಃ=ಒಂದಕ್ಕಿಂತ ಒಂದು ಹತ್ತು ಪಟ್ಟು ಹೆಚ್ಚಾದ ತೋಯಾದಿಭಿಃ=ಜಲಮೊದಲಾದ ತತ್ವಗಳಿಂದ ಪರಿವೃತಂ=ಸುತ್ತುವರಿದಿದೆ. ಮತ್ತು ಪ್ರಧಾನೇನ=ಗುಣತ್ರಯಗಳಿಂದ ಅಥವಾ ಪ್ರಕೃತಿಯಿಂದ ಬಹಿಃ=ಹೊರಗೆ ಆವೃತಂ=ಆವರಿಸಲ್ಪಟ್ಟಿದೆ. ಯತ್ರ=ಯಾವ ಬ್ರಹ್ಮಾಂಡದ ಒಳಗೆ ಅಯಂ ಲೋಕವಿತಾನಃ =ಈ ಹದಿನಾಲ್ಕು ಲೋಕಗಳ ವಿಸ್ತಾರವಿರುವುದೋ ಇದು ಭಗವತಃ ಹರೇಃ ರೂಪಂ=ಶ್ರೀಹರಿಯ ಪ್ರತಿಮೆ ಎಂದು ತಿಳಿಯಬೇಕು. ॥೫೫॥

೫೪ನೇ ಶ್ಲೋಕದಲ್ಲಿ ಯಸ್ಮಾದುದತಿಷ್ಠದಸೌ ವಿರಾಟ್ ಎಂದು ಹೇಳಿದ್ದನ್ನು ವಿವರಿಸುವರು –

**ಹಿರಣ್ಮಯಾದಾಂಡಕೋಶಾದುತ್ಥಾಯ ಸಲೀಲೇ ಶಯಾತ್ ।**
**ತಮಾವಿಶ್ಯ ಮಹಾದೇವೋ ಬಹುಧಾ ನಿರ್ಬಿಭೇದ ಖಂ ॥೫೬॥**

ಸಲೀಲೇ ಶಯಾತ್=ಬಹಿರಾವರಣ ನೀರಿನಲ್ಲಿರುವ ಹಿರಣ್ಮಯಾತ್ ಆಂಡಕೋಶಾತ್=(ಲ್ಯಬ್ ಲೋಪನಿಮಿತ್ತಾಪಂಚಮೀ) ಚಿನ್ನದ ಬ್ರಹ್ಮಾಂಡವನ್ನು ಪ್ರವೇಶಿಸಿ ಅದರಲ್ಲಿರುವ ಗರ್ಭೋದಕದಲ್ಲಿ ಸಾವಿರವರ್ಷ ಯೋಗನಿದ್ರೆಯನ್ನು ಮಾಡಿ ನಂತರ ಉತ್ಥಾಯ=(ಎದ್ದು) ಮೇಲೆದ್ದು ತನ್ನ ವೀರ್ಯದಿಂದ ಬ್ರಹ್ಮದೇಹವನ್ನು ಸೃಷ್ಟಿಸಿ, ಅಂಡದಂತಿರುವ ತಂ=ಆ ಶರೀರವನ್ನು ಆವಿಶ್ಯ=ಪ್ರವೇಶಿಸಿ ಮಹಾದೇವಃ= ದೇವೋತ್ತಮನಾದ ಶ್ರೀಹರಿಯು ತಸ್ಯ=ಅದಕ್ಕೆ ಖಂ=ಛಿದ್ರಗಳನ್ನು ಬಹುಧಾ ನಿರ್ಬಿಭೇದ=ಒಂಭತ್ತು ಛಿದ್ರಗಳನ್ನು ಮಾಡಿದನು ಎಂದರ್ಥ. ॥೫೬॥

ದೇಹದಲ್ಲಿ ಗೋಲಕ ಇಂದ್ರಿಯಗಳು ಮತ್ತು ಅಭಿಮಾನಿ ದೇವತೆಗಳ ಉತ್ಪತ್ತಿ ಹೇಳುವರು –

**ನಿರಭಿದ್ಯತಾಸ್ಯ ಪ್ರಥಮಂ ಮುಖಂ ವಾಣೀ ತತೋಽಭವತ್ ।**
**ವಾಣ್ಯಾ ವಹ್ನಿರಥೋ ನಾಸೇ ಘ್ರಾಣೋಽತಃ ಪ್ರಾಣ ಏತಯೋಃ ॥**

ಅಸ್ಯ=ಈ ಬ್ರಹ್ಮದೇಹಕ್ಕೆ ಪ್ರಥಮಂ=ಮೊದಲಿಗೆ ಮುಖಂ=ಮುಖವೆಂಬ ಗೋಲಕವು ನಿರಭಿದ್ಯತ=ವ್ಯಕ್ತವಾಯಿತು. ತತಃ=ಮುಖದಿಂದ ವಾಣೀ=ವಾಗೀಂದ್ರಿಯವು ಅಭವತ್=ಉಂಟಾಯಿತು. ವಾಣ್ಯಾ=ವಾಗಿಂದ್ರಿಯದಿಂದ ವಹ್ನಿಃ= ವಾಗಿಂದ್ರಿಯಾಭಿಮಾನಿಯಾದ ಅಗ್ನಿಯು ಅಭೂತ್=ಜನಿಸಿದನು. ಅಥ=ನಂತರ ಘ್ರಾಂಣೇಂದ್ರಿಯವೂ ಏತಯೋಃ=ನಾಸಾಪುಟಗಳಲ್ಲಿ ಪ್ರಾಣಃ=ಘ್ರಾಣೇಂದ್ರಿಯ ಅಭಿಮಾನಿಯಾದ ನಾಸಿಕ್ಯ ವಾಯುವು ಜನಿಸಿದನು. ॥೫೭॥

**ಪ್ರಾಣಾದ್ ವಾಯುರಭಿದ್ಯೇತಾಮಕ್ಷಿಣೀ ಚಕ್ಷುರೇತಯೋಃ ।**
**ತಸ್ಮಾತ್ ಸೂರ್ಯೋಽನ್ವಭಿದ್ಯೇತಾಂ ಕರ್ಣೌ ಶ್ರೋತ್ರಂ ತತೋ ದಿಶಃ ॥**

ಅಧ್ಯಾತ್ಮ ಅಧಿದೈವ, ಭೇದದಿಂದ ಒಬ್ಬನಿಗೇನೇ ಪ್ರಾಣ, ವಾಯು ಎಂದು ಹೆಸರು. ಪ್ರಾಣಾತ್=ಪ್ರಾಣನಿಂದ ವಾಯುಃ=ದೇವತೆಗಳಲ್ಲಿ ವಾಯುವು ಜನಿಸಿದನು. ಅಕ್ಷಿಣೀ ಅಭಿದ್ಯೇತಾಂ=ಕಣ್ಣಿನ ಗೋಲಕಗಳು ಜನಿಸಿದವು. ಏತಯೋಃ=ಅವುಗಳಲ್ಲಿ ಚಕ್ಷುಃ=ಚಕ್ಷರಿಂದ್ರಿಯವು ಜನಿಸಿತು. ತಸ್ಮಾತ್=ಚಕ್ಷುರಿಂದ್ರಿಯದಿಂದ ಅದೆ ಹೆಸರಿನ ಅದರ ಅಭಿಮಾನಿಯಾದ ಸೂರ್ಯಃ=ಸೂರ್ಯನು ಜನಿಸಿದನು. ಕರ್ಣೌ ಅನ್ವಭಿದ್ಯೇತಾಂ=ಕಿವಿಯಗೋಲಕಗಳು ವ್ಯಕ್ತವಾದವು. ದಿಶಃ=ಶ್ರೋತ್ರೇಂದ್ರಿಯಾಭಿಮಾನಿಗಳಾದ ದಿಙ್‌ನಾಮಕ ದೇವತೆಗಳು ಜನಿಸಿದರು. ॥೫೮॥

**ನಿರ್ಬಿಭೇದ ವಿರಾಜಸ್ತ್ವಗ್ ರೋಮಶ್ಮಶ್ರ್ವಾದಯಸ್ತತಃ ।**
**ತತಶ್ಚೌಷಧಯಃ ಪಶ್ಚಾಚ್ಛಿಶ್ನಂ ನಿರ್ಬಿಭಿದೇ ತತಃ ॥೫೯॥**

ವಿರಾಜಃ=ಬ್ರಹ್ಮದೇವರ ದೇಹಕ್ಕೆ ತ್ವಕ್=ಚರ್ಮವೆಂಬ ಗೋಲಕವು ನಿರ್ಬಿಭೇದ =ವ್ಯಕ್ತವಾಯಿತು. ತತಃ=ನಂತರ ರೋಮಶ್ಮಶ್ರ್ವಾದಯಃ=ರೋಮ, ಶ್ಮಶ್ರು, ಎಂಬ ತ್ವಗಿಂದ್ರಿಯವು ಜನಿಸಿತು ತತಃ=ಅದರಿಂದ ಓಷಧಯಃ=ದೇವತೆಗಳಲ್ಲಿ ಔಷಧಿ ಎಂಬ ಹೆಸರಿನ ದೇವತೆಗಳು ಜನಿಸಿದರು. ತತಃ=ಬ್ರಹ್ಮ ದೇಹದಿಂದ ಶಿಶ್ನಂ ನಿರ್ಬಿಭಿದೇ =ಲಿಂಗವೆಂಬ ಗೋಲಕವು ಪಶ್ಚಾತ್=ನಂತರ ಇಂದ್ರಿಯವೂ ವ್ಯಕ್ತವಾದವು. ॥೫೯॥

**ರೇತಸ್ತಸ್ಮಾದಾಪ ಆಸನ್ ನಿರಭಿದ್ಯತ ವೈ ಗುದಂ ।**
**ಗುದಾದಪಾನೋಽಪಾನಾಚ್ಚ ಮೃತ್ಯುರ್ಲೋಕಭಯಂಕರಃ ॥೬೦॥**

**ಹಸ್ತೌ ಚ ನಿರಭಿದ್ಯೇತಾಂ ಬಲಂ ತಾಭ್ಯಾಂ ತತಃ ಸ್ವರಾಟ್ ।**
**ಪಾದೌ ಚ ನಿರಭಿಧ್ಯೇತಾಂ ಗತಿಸ್ತಾಭ್ಯಾಂ ತತೋ ಹರಿಃ ॥೬೧॥**

ತತಃ=ಶಿಶ್ನದಿಂದ ರೇತಃ=ವೀರ್ಯವು ಜನಿಸಿತು. ತಸ್ಮಾತ್=ರೇತಸ್ಸಿನಿಂದ (ಶಿಶ್ನದಿಂದ) ಆಪಃ=ಗುಹ್ಯೇಂದ್ರಿಯಾಭಿಮಾನಿಗಳಾದ ಆಪ ಎಂಬ ಹೆಸರಿನ ದೇವತೆಗಳು ಜನಿಸಿದರು. ಗುದಂ ನಿರಭಿದ್ಯತ=ಗುದವೆಂಬಗೋಲಕ ಪಾಯು ಎಂಬ ಇಂದ್ರಿಯ ಜನಿಸಿತು. ಗುದಾತ್ ಅಪಾನಃ=ವಾಯ್ವಭಿಮಾನಿಯಾದ ಅಪಾನನು ದೇವತೆಗಳಲ್ಲಿ ಅವನೇ ಲೋಕಭಯಂಕರನಾದ ಮೃತ್ಯುವು ಜನಿಸಿದನು. ಹಸ್ತೌ ನಿರಭಿಧ್ಯೇತಾಂ=ಕೈಗಳೆಂಬ ಗೋಲಕಗಳು ಜನಿಸಿದವು ತಾಬ್ಯಾಂ=ಅವುಗಳಿಂದ ಬಲಂ=ಹಸ್ತೇಂದ್ರಿಯ ಜನಿಸಿತು. ತತಃ=ಅದರ ಅಭಿಮಾನಿಯಾದವನು ದೇವತೆ-ಗಳಲ್ಲಿ ಸ್ವರಾಟ್=ಇಂದ್ರನು ಜನಿಸಿದನು. ಪಾದೌ=ಕಾಲುಗಳೆಂಬ ಗೋಲಕಗಳು ನಿರಭಿದ್ಯೇತಾಂ ಜನಿಸಿದವು. ತಾಭ್ಯಾಂ=ಅವುಗಳಿಂದ ಗತಿಃ=ಪಾದವೆಂಬ ಇಂದ್ರಿಯವು ಜನಿಸಿತು. ತತಃ=ಇಂದ್ರಿಯದಿಂದ ಹರಿಃ=ದೇವತೆಗಳಲ್ಲಿ ಉಪೇಂದ್ರನೆನಿಸಿದ ಹರಿ ವ್ಯಕ್ತನಾದನು.

ಇಲ್ಲಿ ಶ್ರೀಹರಿಗೆ ಪಾದವೆಂಬ ಇಂದ್ರಿಯಾಭಿಮಾನಿತ್ವ ಹೇಳಿದುದು ಹೇಗೆ ಯುಕ್ತವಾಗುವುದು. ಅಭಿಮಾನಿತ್ವವೆಂದರೆ ಇನ್ನೊಬ್ಬರು ಇತ್ತ ಸ್ವಾಮಿತ್ವವು. ಇದು ಶ್ರೀಹರಿಯಲ್ಲಿ ಶ್ರುತಿಬಾಧಿತವು, ಕಾರಣ ತಾತ್ಪರ್ಯ ಹೇಳುವರು -

**ಯಜ್ಞನಾಮಾ ತು ದೇವೋಽನ್ಯೋ ವಿಜ್ಞೇಯಃ ಪಾದದೇವತಾ ।**
**ತದಾವಿಷ್ಟೋ ಹರಿರ್ನಿತ್ಯಂ ತಮಾಹುಃ ಪಾದದೈವತಮ್ ।**
**ತಸ್ಯೇಂದ್ರಿಯಾಭಿಮಾನಿತ್ವಂ ಕುತಃ ಪೂರ್ಣಾಮಲಾತ್ಮನಃ ॥ ಇತಿ ಚ ।**

ಇಲ್ಲಿ ಪಾದಾಭಿಮಾನಿಯು ಯಜ್ಞನಾಮಕ ಪರಮಾತ್ಮನಿಂದ ಭಿನ್ನನಾದ ಯಜ್ಞನೆಂಬ ಹೆಸರಿನ ದೇವತೆಯು ಎಂದು ತಿಳಿಯಬೇಕು. ಅವನಲ್ಲಿ ಸರ್ವದಾ ಆವಿಷ್ಟನಾದವನು ಉಪೇಂದ್ರನೆಂಬ ಹರಿಯು ಎಂಬ ಅಭಿಪ್ರಾಯದಿಂದ ಋಷಿಗಳು ಪಾದಾಭಿಮಾನಿ ಎಂದಿದ್ದಾರೆ. ಸ್ವತಃ ನಿರವಧಿಕಸ್ವಾಮಿತ್ವಪೂರ್ಣನಾದ ಅಭಿಮಾನ-ಕೃತವಿಕಾರಶೂನ್ಯನಾದ ಶ್ರೀಹರಿಗೆ ಅನ್ಯದತ್ತಸ್ವಾಮಿತ್ವರೂಪ ಅಭಿಮಾನಿತ್ವ ಹೇಗೆ ಬಂದಿತು ! ಬರಲಾರದು ಎಂದು ಭಾವ. ॥೬೦-೬೧॥

**ನಾಡ್ಯೋಽಸ್ಯ ನಿರಭಿದ್ಯಂತ ತಾಭ್ಯೋ ಲೋಹಿತಮಾಹೃತಮ್ ।**
**ನದ್ಯಸ್ತತಃ ಸಮಭವನ್ನುದರಂ ನಿರಭಿದ್ಯತ ॥೬೨॥**

ಅಸ್ಯ=ಬ್ರಹ್ಮದೇಹಕ್ಕೆ ನಾಡ್ಯಃ ನಿರಭಿದ್ಯಂತ=ನಾಡಿಗಳು ಗೋಲಕ ಸ್ಥಾನದಲ್ಲಿ ಜನಿಸಿದವು. ತಾಭ್ಯಾಂ=ಅವುಗಳಿಂದ ಲೋಹಿತಂ=ಇಂದ್ರಿಯಸ್ಥಾನದಲ್ಲಿ ರಕ್ತವು ಆಹೃತಂ=ಉತ್ಪನ್ನವಾಯಿತು. ತತಃ=ರಕ್ತದಿಂದ ನದ್ಯಃ=ದೇವತೆಗಳಲ್ಲಿ ''ನದಿ'' ಎಂಬ ಹೆಸರಿನ ದೇವತೆಗಳು ಜನಿಸಿದರು. ತತಃ=ನಂತರ ಉದರಂ=ಹೊಟ್ಟೆಯು ಗೋಲಕದಂತೆ ಉಂಟಾಯಿತು. ॥೬೨॥

**ಕ್ಷುತ್ಪಿಪಾಸೇ ತತಃ ಸ್ಯಾತಾಂ ಸಮುದ್ರಸ್ತುತ ಯೋರಭೂತ್ ।**
**ಅಥಾಸ್ಯ ಹೃದಯಂ ಭಿನ್ನಂ ಹೃದಯಾನ್ಮನ ಉತ್ಥಿತಂ ॥೬೩॥**

ತತಃ=ಉದರದಿಂದ ಕ್ಷುತ್‌ಪಿಪಾಸೇ=ಹಸಿವೆ, ನೀರಡಿಕೆಗಳು ಸ್ಯಾತಾಂ= ಉಂಟಾದವು ತಯೋಃ=ಹಸಿವೆ ನೀರಡಿಕೆಗಳಿಂದ ಸಮುದ್ರಃ ಅಭೂತ್=ಇಂದ್ರಿಯ ಸ್ಥಾನದಲ್ಲಿ ಸಮುದ್ರವು ಜನಿಸಿತು. ದೇವತೆಗಳಲ್ಲಿ ಸಮುದ್ರ ಎಂಬ ದೇವತೆ ಜನಿಸಿದನು. ಅಥ=ಉದರವು ಜನಿಸಿದ ನಂತರ ಹೃದಯಂ ಭಿನ್ನಂ=ಹೃದಯವೆಂಬ ಗೋಲಕ ಜನಿಸಿತು. ಹೃದಯಾತ್=ಹೃದಯದಿಂದ ಮನಃ ಉತ್ಥಿತಂ=ಮನಸ್ಸೆಂಬ ಇಂದ್ರಿಯವು ಜನಿಸಿತು. ॥೬೩॥

**ಮನಸಶ್ಚಂದ್ರಮಾ ಜಾತೋ ಬುದ್ಧಿರ್ಬುದ್ಧೇರ್ಗಿರಾಂ ಪತಿಃ ।**
**ಅಹಂಕಾರಸ್ತತೋ ರುದ್ರಶ್ಚಿತ್ತಂ ಚೈತ್ಯಸ್ತತೋಽಭವತ್ ॥೬೪॥**

ಮನಸಃ=ಮನಸ್ಸಿನಿಂದ ಚಂದ್ರಮಾಃ ಜಾತಃ=ಅಭಿಮಾನಿಯಾದ ಚಂದ್ರನು ದೇವತೆಗಳಲ್ಲಿ ಜನಿಸಿದನು. ತತಃ=ಹೃದಯದಿಂದ ಬುದ್ಧಿಃ=ಮನೋಭೇದ-ರೂಪವಾದ ಬುದ್ಧಿಯು ಉಂಟಾಯಿತು ಬುದ್ಧೇಃ=ಬುದ್ಧಿಯಿಂದ ಗಿರಾಂ ಪತಿಃ= ಬೃಹಸ್ಪತಿಯು ದೇವತೆಗಳಲ್ಲಿ ಜನಿಸಿದನು. ತತಃ=ಹೃದಯದಿಂದಲೇ ಅಹಂಕಾರಃ= ಮನೋಭೇದವಾದ ಅಹಂಕಾರವು ಜನಿಸಿತು. ಮತ್ತು ರುದ್ರಃ=ಅದಕ್ಕೆ ಅಭಿಮಾನಿ-ಯಾದ ರುದ್ರನು ಜನಿಸಿದನು. ತತಃ=ಹೃದಯದಿಂದಲೇ ಚಿತ್ತಂ=ಮನೋವಿಶೇಷ-ವಾದ ಚಿತ್ತವು ಜನಿಸಿತು. ತತಃ=ಚಿತ್ತದಿಂದ ಚೈತ್ಯಂ=ಚಿತ್ತಾಭಿಮಾನಿವಿರಿಂಚನು ರೂಪಾಂತರದಿಂದ ಜನಿಸಿದನು. ಅವನ ಅಂತರ್ಗತನಾಗಿ ವಿಷ್ಣುವೂ ವ್ಯಕ್ತನಾದ್ದರಿಂದ ಅವನೂ ಚಿತ್ತಜನಾದ ಚೈತ್ಯನೆನಿಸುವನು ಎಂದು ತಿಳಿಯಬೇಕು.

ಈ ವಿಷಯದಲ್ಲಿ ಪ್ರಮಾಣ ಹೇಳುವರು ಶ್ರೀಮದಾಚಾರ್ಯರು –

**ಚೈತ್ಯೋಽಪಿ ಭಗವಾನ್ವಿಷ್ಣುರಂತರ್ಯಾಮೀ ಚತುರ್ಮುಖಾತ್ ।**
**ಸ್ವೇಚ್ಛಯಾ ವ್ಯಕ್ತಿಮಗಮತ್ತತೋಽಸೌ ಬ್ರಹ್ಮಜ ಸ್ಮೃತಃ ॥ ಇತಿ ಚ ।**

ಐಶ್ವರ್ಯ ಸಂಪನ್ನನಾದ ವಿಷ್ಣುವು ತನ್ನ ಇಚ್ಛೆಯಿಂದ ಚತುರ್ಮುಖನಿಂದ ವ್ಯಕ್ತನಾದನು. ಆದ್ದರಿಂದ ಬ್ರಹ್ಮಜ, ಚಿತ್ತಜನಾದ್ದರಿಂದ ಚೈತ್ಯನೂ ಚಿತ್ತಾಂತರ್ಯಾಮಿ ಎನಿಸುವನು ಎಂದು ಭಾವ.

ವಹ್ನಿ ಮುಂತಾದವುಗಳಿಗೆ ಇದ್ದಂತೆ ವಿರಿಂಚನಿಗೆ ಇನ್ನೊಬ್ಬ ದೇವತೆ ಇಲ್ಲದ್ದರಿಂದ ಆ ಸ್ಥಾನದಲ್ಲಿ ಬ್ರಹ್ಮಾ ಚಿತ್ತಗಳಿಗೆ ಹೃದಯವೆ ಗೋಲಕವೆಂದು ತಿಳಿಯಬೇಕು ಹೃದಯವೆಂದರೆ ಅಲ್ಲಿರುವ ನಾಡಿಗಳೆಂದರ್ಥ ಎಂದು ತಿಳಿಯಬೇಕು. ॥ ೬೪॥

ಬ್ರಹ್ಮವಾಯುಗಳಿಗೆ ಸರ್ವದೇವೋತ್ತಮತ್ವವನ್ನು ತಿಳಿಯುತ್ತ ಶ್ರೀಹರಿಗೆ ಸರ್ವದೇವೋತ್ತಮತ್ವವನ್ನು ತಿಳಿಸಲು ಇತರ ದೇವತೆಗಳಿಗೆ ಬ್ರಹ್ಮದೇಹವನ್ನು ಎಬ್ಬಿಸಿ ಅಶಕ್ತಿಯನ್ನು ಬ್ರಹ್ಮವಾಯುಗಳಿಗೆ ಶಕ್ತಿಯನ್ನೂ ಹೇಳಲು ಉಪೋದ್ಘಾತ ಹೇಳುವರು.

**ಏತೇ ಹ್ಯಭ್ಯುತ್ಥಿತಾ ದೇವಾ ನೈವಾಸ್ಯೋತ್ಥಾಪನೇಽಶಕನ್ ।**
**ಪುನರಾವಿವಿಶುಃ ಖಾನಿ ತಮುತ್ಥಾಪಯಿತುಂ ಕ್ರಮಾತ್ ॥೬೫॥**

ಅಭ್ಯುತ್ಥಿತಾಃ ಏತೇ ದೇವಾಃ=ಹೊರಗೆ ಬಂದ ಈ ದೇವತೆಗಳು ಅಸ್ಯ= ಬ್ರಹ್ಮಶರೀರದಉತ್ಥಾಪನೇ=(ಬ್ರಹ್ಮನನ್ನು ಹೊರಗೆ ಹಾಕಲು) ಎಬ್ಬಿಸಲು ನೈವ-ಅಶಕನ್=ಸಮರ್ಥರಾಗಲಿಲ್ಲ. ತಂ=ದೇಹಾಂತರ್ಗತ ವಿರಿಂಚನನ್ನು ಚೇಷ್ಟಾಯುಕ್ತ-ನನ್ನಾಗಿ ಮಾಡಲು ಉತ್ಥಾಪಯಿತುಂ=ಮೇಲೆಬ್ಬಿಸಿಲು ಪುನಃ=ಮತ್ತೆ ಖಾನಿ= ಗೋಲಕಗಳನ್ನು ಕ್ರಮಾತ್=ಒಬ್ಬೊಬ್ಬರಾಗಿ ಆವಿವಿಶುಃ=ಪ್ರವೇಶ ಮಾಡಿದರು. ಹಿ='ಅಹಮುಕ್ಥಮಸ್ಮಿ' ಮುಂತಾದ ಉಪನಿಷತ್ ಪ್ರಸಿದ್ಧವು. ॥೬೫॥

**ವಹ್ನಿರ್ವಾಚಾ ಮುಖಂ ಭೇಜೆ ನೋದತಿಷ್ಠತ್ ತತೋ ವಿರಾಟ್ ।**
**ಘ್ರಾಣೇನ ನಾಸಿಕೋ ವಾಯುಃ ನೋದತಿಷ್ಠತ್ ತತೋ ವಿರಾಟ್ ॥**

ವಹ್ನಿಃ=ಅಗ್ನಿದೇವತೆಯು ವಾಚಾ=ವಾಕ್ ಎಂಬ ಹೆಸರಿನ ತನ್ನ ಅಂಶದಿಂದ ಮತ್ತು ವಾಗಿಂದ್ರಿಯದಿಂದ ಸಹಿತನಾಗಿ ಮುಖಂ=ಮುಖವೆಂಬ ಗೋಲಕವನ್ನು ತತಃ ಭೇಜೇ=ಅದರಿಂದ ಪ್ರವೇಶಿಸಿದನು (ಹೊಂದಿದನು) ವಿರಾಟ್‌ನ ಉದತಿಷ್ಠತ್ =ಬ್ರಹ್ಮದೇಹವು ಮೇಲೇಳಲಿಲ್ಲ. ನಾಸಿಕೋ ವಾಯುಃ=ನಾಶಿಕ್ಯವಾಯುವು ಘ್ರಾಣೇನ =ಘ್ರಾಣೇಂದ್ರಿಯದೊಡನೆ ನಾಸಾಪುಟಗಳೆಂಬ ಗೊಲಕಪ್ರವೇಶಿಸಿದನು. ತತಃ= ಅದರಿಂದ ನ ಉದತಿಷ್ಠತ್=ವಿರಾಟ್ ಬ್ರಹ್ಮದೇಹವು ಏಳಲಿಲ್ಲ. ॥೬೬॥

**ಅಕ್ಷಿಣೀ ಚಕ್ಷುಷಾದಿತ್ಯೋ ನೋದತಿಷ್ಠತ್ ತತೋ ವಿರಾಟ್ ।**
**ಶ್ರೋತ್ರೇಣ ಕರ್ಣೌ ಚ ದಿಶೋ ನೋದತಿಷ್ಠತ್ ತತೋ ವಿರಾಟ್ ॥**

ಅಕ್ಷಿಣೀ=ಕಣ್ಣೆಂಬ ಗೋಲಕದಲ್ಲಿ ಆದಿತ್ಯಃ=ಸೂರ್ಯನು ಚಕ್ಷುಷಾ=ಚಕ್ಷುರಿಂದ್ರಿಯ ಸಹಿತನಾಗಿ ಭೇಜೇ=ಪ್ರವೇಶಿಸಿದ ನೋದತಿಷ್ಠತ್ ತತೋ ವಿರಾಟ್=ಬ್ರಹ್ಮದೇಹವು ಮೇಲೇಳಲಿಲ್ಲ. ದಿಶಃ=ದಿಕ್‌ನಾಮಕ ದೇವತೆಗಳು ಶ್ರೋತ್ರೇಣ=ಶ್ರೋತ್ರೇಂದ್ರಿಯ ಸಹಿತರಾಗಿ ಕರ್ಣೌ=ಕಿವಿಯಲ್ಲಿ ಪ್ರವೇಶಿಸಿದರು. ತತಃ=ಅದರಿಂದ ವಿರಾಟ್=ಬ್ರಹ್ಮದೇಹವು ನ ಉದತಿಷ್ಠತ್=ಮೇಲೇಳಲಿಲ್ಲ. ॥೬೭॥

**ತ್ವಚಂ ರೋಮಭಿರೋಷಧ್ಯೋ ನೋದತಿಷ್ಠತ್ ತತೋ ವಿರಾಟ್ ।**
**ರೇತಸಾ ಶಿಶ್ನಮಾಪಸ್ತು ನೋದತಿಷ್ಠತ್ತತೋ ವಿರಾಟ್ ॥೬೮॥**

ಓಷಧ್ಯಃ=ಔಷದಿನಾಮಕ ದೇವತೆಗಳು ರೋಮಭಿಃ=ರೋಮವೆಂಬ ಇಂದ್ರಿಯ ಸಹಿತರಾಗಿ ತ್ವಚಂ=ಚರ್ಮವೆಂಬ ಗೋಲಕ ಪ್ರವೇಶಿಸಿದರು. ತತೋ ವಿರಾಟ್ ನೋದತಿಷ್ಟತ್=ಅದರಿಂದ ಬ್ರಹ್ಮದೇಹವೇಳಲಿಲ್ಲ. ಆಪಃ=ಅಪ್ ಎಂಬ ದೇವತೆಗಳು ರೇತಸಾ=ರೇತಸ್ಸೆಂಬ ಇಂದ್ರಿಯದಿಂದ ಶಿಶ್ನಂ=ಎಂಬ ಗೋಲಕವನ್ನು ಪ್ರವೇಶಿಸಿದರು ಅದರಿಂದಲೂ ಬ್ರಹ್ಮದೇಹವೇಳಲಿಲ್ಲ. ॥೬೮॥

**ಗುದಂ ಮೃತ್ಯುರಪಾನೇನ ನೋದತಿಷ್ಠತ್ ತತೋ ವಿರಾಟ್ ।**
**ಹಸ್ತಾವಿಂದ್ರೋ ಬಲೇನೈವ ನೋದತಿಷ್ಠತ್ ತತೋ ವಿರಾಟ್ ॥೬೯॥**

ಗುದಂ=ಆ ಹೆಸರಿನ ಗೋಲಕವನ್ನು ಅಪಾನೇನ=ವಾಯುವೆಂಬ ಇಂದ್ರಿಯ ಸಹಿತನಾಗಿ ಮೃತ್ಯುಃ=ಮೃತ್ಯುಎಂಬ ದೇವತೆಯು ಪ್ರವೇಶಿಸಿದನು. ಆಗಲೂ ದೇಹ ಮೇಲೆಳಲಿಲ್ಲ. ಹಸ್ತೌ=ಕೈಗಳೆಂಬ ಗೋಲಕದಲ್ಲಿ ಇಂದ್ರಃ= ಇಂದ್ರನೆಂಬ ದೇವತೆಯು ಬಲೇನ=ಬಲ ಎಂಬ ಇಂದ್ರಿಯ ಸಹಿತನಾಗಿ ಪ್ರವೇಶಿಸಿದನು. ತತಃ ನ ಉದತಿಷ್ಠತ್ ವಿರಾಟ್=ಆಗಲೂ ಬ್ರಹ್ಮದೇಹವೇಳಲಿಲ್ಲ. ॥೬೯॥

**ವಿಷ್ಣುರ್ಗತ್ಯೈವ ಚರಣೌ ನೋದತಿಷ್ಠತ್ ತತೋ ವಿರಾಟ್ ।**
**ನಾಡೀರ್ನದ್ಯೋ ಲೋಹಿತೇನ ನೋದತಿಷ್ಠತ್ ತತೋ ವಿರಾಟ್ ॥**

ವಿಷ್ಣುಃ=ಯಜ್ಞನೆಂಬ ಪಾದಾಭಿಮಾನಿಯಲ್ಲಿರುವ ಶ್ರೀಹರಿಯು ಗತ್ಯಾ=ಪಾದವೆಂಬ ಇಂದ್ರಿಯದಿಂದ ಸಹಿತನಾಗಿ ಚರಣೌ=ಕಾಲುಗಳೆಂಬ ಗೋಲಕವನ್ನು ಪ್ರವೇಶಿಸಿದನು. ನೋದತಿಷ್ಠತ್ ತತೋ ವಿರಾಟ್=ಆದರೂ ದೇಹವು ಏಳಲಿಲ್ಲ. ನದ್ಯಃ=ನದಿ ಎಂಬ ಹೆಸರಿನ ದೇವತೆಗಳು ಲೋಹಿತೇನ=ರಕ್ತವೆಂಬ ಇಂದ್ರಿಯಸ್ಥಾನೀಯ ಸಹಿತರಾಗಿ ನಾಡೀಃ=ನಾಡಿ ಎಂಬ ಗೋಲಕದಲ್ಲಿ ಪ್ರವೇಶಿಸಿದರು ಆದರೂ ದೇಹವೇಳಲಿಲ್ಲ.

ಇಲ್ಲಿ ವಿಷ್ಣುವಿಗೆ ಅಶಕ್ತಿ ಹೇಳಿದಂತೆ ಕಾಣುವುದು ಕಾರಣ ತಾತ್ಪರ್ಯ ಹೇಳುವರು –

**ಯಜ್ಞಾಂತಸ್ಥಃ ಸ್ವಯಂ ಪಾದೌ ವಿಶನ್ನೋತ್ಥಾಪಯದ್ಧರಿಃ ।**
**ಶಕ್ತೋಽಪಿ ಬ್ರಹ್ಮವಾಯ್ವೋಸ್ತು ಬಲಜ್ಞಪ್ತ್ಯೈ ಜನಾರ್ದನಃ ।**
**ತಸ್ಥ ಉತ್ಥಾಪಯಾಮಾಸ ಬ್ರಹ್ಮದೇಹಂ ವಿಶನ್ ಪ್ರಭುಃ ॥ ಇತಿ ಚ ।**

ಸಮರ್ಥನಾಗಿದ್ದರೂ ಶ್ರೀಹರಿಯು ಯಜ್ಞನೆಂಬ ಅಭಿಮಾನಿಯಲ್ಲಿ ಇದ್ದು ಬ್ರಹ್ಮದೇಹ ಪ್ರವೇಶ ಮಾಡಿದಾಗ ದೇಹವನ್ನು ಎಬ್ಬಿಸಲಿಲ್ಲ. ಬ್ರಹ್ಮವಾಯುಗಳಿಗೆ ಬಲವನ್ನು ಪ್ರದರ್ಶನ ಮಾಡುವುದಕ್ಕಾಗಿಯೇ ಬ್ರಹ್ಮವಾಯುಗಳಲ್ಲಿದ್ದು ಪ್ರವೇಶ ಮಾಡಿದಾಗ ದೇಹವನ್ನು ಮೇಲೆಬ್ಬಿಸಿದನು. ॥೭೦॥

**ಕ್ಷುತ್ತೃಟ್‌ಭ್ಯಾಮುದರಂ ಸಿಂಧುರ್ನೋದತಿಷ್ಠತ್ ತತೋ ವಿರಾಟ್ ।**
**ಹೃದಯಂ ಮನಸಾ ಚಂದ್ರೋ ನೋದತಿಷ್ಠತ್ ತತೋ ವಿರಾಟ್ ॥**

ಉದರಂ=ಹೊಟ್ಟೆ ಎಂಬ ಗೋಲಕವನ್ನು ಕ್ಷುತ್‌ತೃಡ್‌ಭ್ಯಾಂ=ಹಸಿವೆ ನೀರಡಿಕೆ ಸಹಿತವಾದ(ಇಂದ್ರಿಯ ಸ್ಥಾನೀಯವಾದ)ಸಿಂಧುಃ=ಸಮುದ್ರನಾಮಕ ದೇವತೆಯು ಪ್ರವೇಶಿಸಿದನು ಅದರಿಂದ ವಿರಾಟ್‌ದೇಹವು ಮೇಲೇಳಲಿಲ್ಲ. ಹೃದಯಂ= ಹೃದಯ ಎಂಬ ಗೋಲಕವನ್ನು ಮನಸಾ=ಮನಸೆಂಬ ಇಂದ್ರಿಯ ಸಹಿತನಾಗಿ ಚಂದ್ರಃ=ಚಂದ್ರನು ಪ್ರವೇಶಿಸಿದನು. ಅದರೂ ನೋದತಿಷ್ಠತ್ ತತೋ ವಿರಾಟ್= ಅದರಿಂದ ದೇಹವು ಮೇಲೇಳಲಿಲ್ಲ. ॥೭೧॥

**ಬುಧ್ಯಾ ಬ್ರಹ್ಮಾಽಪಿ ಹೃದಯಂ ನೋದತಿಷ್ಠತ್ ತತೋ ವಿರಾಟ್ ।**
**ರುದ್ರೋಽಭಿಮತ್ಯಾ ಹೃದಯಂ ನೋದತಿಷ್ಠತ್ ತತೋ ವಿರಾಟ್॥**

ಹೃದಯಂ=ಗೋಲಕವನ್ನು ಬ್ರಹ್ಮಾಪಿ=ಬೃಹಸ್ಪತಿಯು ಪ್ರವೇಶಿಸಿದನು ಆದರೂ ಬ್ರಹ್ಮದೇಹವು ಮೇಲೇಳಲಿಲ್ಲ. ರುದ್ರಃ ರುದ್ರದೇವರು ಅಹಂಕಾರ ಸಹಿತವಾಗಿ ಹೃದಯಂ=ಹೃದಯವನ್ನು ಪ್ರವೇಶಿಸಿದರು ಆಗಲು ದೇಹವೇಳಲಿಲ್ಲ.

ಇಲ್ಲಿ ಬ್ರಹ್ಮಶಬ್ದವು ವಿರಾಟ್‌ನಾಮಕ ಬ್ರಹ್ಮಪರವಲ್ಲ. ಬೃಹಸ್ಪತಿ ಪರವೆಂದು ಹೇಳಿ ಆ ವಿಷಯದಲ್ಲಿ ಶ್ರೌತಪ್ರಯೋಗ ತಿಳಿಸುವರು –

ಬ್ರಹ್ಮಾ ಬೃಹಸ್ಪತಿಃ ।
'ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ' ಇತಿ ಶ್ರುತಿಃ ।
ಬೃಹಸ್ಪತಿಃ ಪುರೋಧಾಶ್ಚ ಬ್ರಹ್ಮಾ ಚ ಬ್ರಹ್ಮಣಸ್ಪತಿಃ । ಇತ್ಯಭಿಧಾನಮ್ ।

ಇದರ ಹಿಂದಿನ ವಾಕ್ಯ "ತಸ್ಮೈ ವಿಶಃ ಸ್ವಯಮೇವಾನಮಂತೇ" ಎಂಬುದು. ಯಸ್ಮಿನ್ ರಾಜನಿ=ಯಾವ ಇಂದ್ರನು ಹೊರಹೊಟಾಗ ಬ್ರಹ್ಮಾಪೂರ್ವ ಏತೆ=ಬ್ರಹ್ಮನು ಮುಂದೆ ಹೋಗುವನೋ ತಸ್ಮೈ=ಅಂಥ ರಾಜನಿಗೆ ವಿಶಃ=ಪ್ರಜರು ಸ್ವಯಮೇವ ಆನಮಂತಿ ತಾವಾಗಿಯೇ ನಮಸ್ಕರಿಸುವರು ಎಂದು ಹೇಳುವುದು. ಅರ್ಥಾತ್ ಇಂದ್ರನ ಮುಂದೆ ಹೋಗುವವನು ಎಂದು ಹೇಳಿದ್ದರಿಂದ ಬ್ರಹ್ಮ ಶಬ್ದವು ಇಲ್ಲಿ ಬೃಹಸ್ಪತಿ ಪರವೆಂದು ನಿರ್ಣೀತವಾಗಿದೆ. ಬೃಹಸ್ಪತಿ, ಪುರೋಧಾ, ಬ್ರಹ್ಮಾ ಬ್ರಹ್ಮಣಸ್ಪತಿ ಎಲ್ಲವೂ ಒಂದೇ ಎಂದು ಅಭಿಧಾನವೂ ಇದೆ. ॥೭೨॥

**ಚಿತ್ತೇನ ಹೃದಯಂ ಚೈತ್ಯಃ ಕ್ಷೇತ್ರಜ್ಞಃ ಪ್ರಾವಿಶದ್ ಯದಾ ।**
**ವಿರಾಟ್ ತದೈವ ಪುರುಷಃ ಸಲಿಲಾದುದತಿಷ್ಠತ ॥೭೩॥**

ಚೈತ್ಯಃ=ಚೈತ್ಯನೆಂಬ ಕ್ಷೇತ್ರಜ್ಞಃ=ಬ್ರಹ್ಮಾಂತರ್ಯಾಮಿಯಾದ ವಿಷ್ಣುವು ಚಿತ್ತೇನ= ಚಿತ್ತನೆಂಬ ಬ್ರಹ್ಮನ ಜೊತೆಗೆ ಯದಾ=ಯಾವಾಗ ಪ್ರಾವಿಶತ್=ಪ್ರವೇಶಿಸಿದನೋ ತದಾ ಏವ=ಆಗಲೇ ವಿರಾಟ್ ಪುರುಷಃ=ಬ್ರಹ್ಮದೇವನು ಸಲಿಲಾತ್=ನೀರಿನಿಂದ ಉದತಿಷ್ಠತ=ದೇಹಸಹಿತನಾಗಿ ಎದ್ದನು.

ಇಲ್ಲಿ ಬ್ರಹ್ಮದೇವರು ಇತರ ದೇವತೆಗಳಂತೆ ತನ್ನ ದೇಹದಿಂದ ಸಂಪೂರ್ಣ ಹೊರಗೆ ಹೋದದ್ದಾದರೆ ನೋದತಿಷ್ಠತ್ತದಾ ವಿರಾಟ್ ಎಂದು ಹಿಂದೆ ಹೇಳಿದ್ದರ ವಿರೋಧ ಬರುವುದು. ಮತ್ತು ಪ್ರಮಾಣಗಳು ದೇಹದಲ್ಲಿ ಒಂದಂಶದಿಂದ ಬ್ರಹ್ಮನಿದ್ದನೆಂದು ಹೇಳುವುವು ಕಾರಣ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು –

**ಅಂಶೇನ ಸುಪ್ತೋ ಬ್ರಹ್ಮಾಪಿ ಅಂಶೇನ ನಿರಗಾತ್ತಥಾ ।**
**ಸ್ವದೇಹಾದ್ವಾಯುಸಹಿತೋ ವಿಷ್ಣುನಾ ಚ ಜಗತ್ಪ್ರಭುಃ ॥**
**ತಮುತ್ಥಾಪಯಿತುಂ ದೇವಾಸ್ತಾನ್ಯತೇ ತ್ರೀನ್ ಮಹಾಬಲಾನ್।**
**ನಾಶಕ್ನುವುಸ್ತ್ವೇಕಸಂಸ್ಥಾಸ್ತತಸ್ತೇ ತ್ವವಿಶಂಸ್ತ್ರಯಃ ।**
**ಉದತಿಷ್ಠದ್ ಬ್ರಹ್ಮದೇಹಸ್ತದಾ ತೇಷಾಂ ಪ್ರಭಾವತಃ ।**
**ವಿಶೇಷೇಣ ಹರೇರೇವ ಪ್ರಭಾವೇನ ಶ್ರಿಯಃ ಪತೇಃ ॥**
**ಚಿತ್ತಾಭಿಮಾನೀ ಬ್ರಹ್ಮೈವ ಕ್ಷೇತ್ರಜ್ಞಸ್ತದ್ಗತೋ ಹರಿಃ ।**
**ಪ್ರಾಣೋ ವಾಯುರಿತಿ ಪ್ರೋಕ್ತಸ್ತಯೋರೀಶೋಃ ಹರಿಃ ಸ್ವಯಂ ॥ಇತಿ ಚ**

ಒಂದಂಶದಿಂದ ನಿರ್ವ್ಯಾಪಾರನಾಗಿದ್ದರೂ ಬ್ರಹ್ಮದೇವರು ವಾಯು ಮತ್ತು ವಿಷ್ಣು ಸಹಿತನಾಗಿ ತನ್ನ ದೇಹದಿಂದ ಒಂದಂಶದಿಂದ ಹೊರಗೆ ಹೋದನು.

ಮಹಾಬಲಿಷ್ಠರಾದ ಬ್ರಹ್ಮವಾಯು ವಿಷ್ಣು ಈ ಮೂವರನ್ನು ಬಿಟ್ಟು ಇತರ ದೇವತೆಗಳು ಬ್ರಹ್ಮದೇಹವನ್ನು ಎಬ್ಬಿಸಲು ಸಮರ್ಥರಾಗಲಿಲ್ಲ. (ಒಂದು ಕಡೆ ಸೇರಿದ್ದರೂ) ನಂತರ ಈ ಮೂವರು ಪ್ರವೇಶ ಮಾಡಿದರು. ಇವರ ಪ್ರಭಾವಾದಿಂದ ಬ್ರಹ್ಮದೇಹವು ಎದ್ದಿತು. ಲಕ್ಷ್ಮಿಪತಿಯಾದ ಶ್ರೀಹರಿಯ ಮುಖ್ಯವಾದ ಪ್ರಭಾವದಿಂದಲೇ ಎದ್ದದ್ದು. ಚಿತ್ತಾಭಿಮಾನಿಯು ಬ್ರಹ್ಮದೇವರು. ಕ್ಷೇತ್ರಜ್ಞನು ಶ್ರೀಹರಿಯು (ಬ್ರಹ್ಮಗತನು). ಪ್ರಾಣ ಎಂದರೆ ವಾಯುವು. ಬ್ರಹ್ಮವಾಯುಗಳಿಗೆ ನಿಯಾಮಕನು ಶ್ರೀಹರಿಯು ಎಂದು ಹೇಳಿದೆ.

ಅಂದರೆ ಮೂಲದಲ್ಲಿ ಚಿತ್ತಪದದಿಂದ ಬ್ರಹ್ಮದೇವರನ್ನು ಕ್ಷೇತ್ರಜ್ಞಪದದಿಂದ ಬ್ರಹ್ಮಾಂತರ್ಯಾಮಿ ಶ್ರೀಹರಿಯನ್ನು ಮತ್ತು ಮುಂದಿನ ಶ್ಲೋಕದಲ್ಲಿ ಪ್ರಾಣೇಂದ್ರಿಯ ಮನೋಧಿಯಃ ಎಂದು ಹೇಳಿದ ಪ್ರಾಣನನ್ನು (ತ್ರಯಃ ಆವಿಶನ್ ಎಂದು ಪ್ರಮಾಣಾನುಸಾರ) ಸ್ವೀಕರಿಸಬೇಕು. ಇಬ್ಬರಿಗೂ ನಿಯಾಮಕನಾದ್ದರಿಂದ ಶ್ರೀಹರಿಯ ಪ್ರಭಾವವೇ ಮುಖ್ಯ ಎಂದು ಭಾವ. ॥೭೩॥

**ಯಥಾ ಪ್ರಸುಪ್ತಂ ಪುರುಷಂ ಪ್ರಾಣೇಂದ್ರಿಯಮನೋಧಿಯಃ ।**
**ಪ್ರಭವಂತಿ ವಿನಾ ಯೇನ ನೋತ್ಥಾಪಯಿತುಮೋಜಸಾ ॥೭೪॥**

ಯಥಾ=ಹೇಗೆ ಪುರುಷಂ=ಜೀವನನ್ನು ಪ್ರಸುಪ್ತಂ ಕರ್ತುಂ=ಮಲಗಿಸಲು ಓಜಸಾ=ತಮ್ಮ ಸಾಮರ್ಥ್ಯದಿಂದ ಯೇನ ವಿನಾ=ಯಾವ ಶ್ರೀಹರಿಯಿಲ್ಲದೆ ಪ್ರಾಣೇಂದ್ರಿಯಮನೋಧಿಯಃ=ವಾಯುದೇವನು ಇಂದ್ರಿಯಾಭಿಮಾನಿಗಳಾದ ಬ್ರಹ್ಮಾದಿಗಳು ಚಂದ್ರಬೃಹಸ್ಪತಿಗಳು ನ ಪ್ರಭವಂತಿ=ಸಮರ್ಥರಾಗುವುದಿಲ್ಲವೋ ತಥಾ=ಅದರಂತೆ ಯೇನ ವಿನಾ ಉತ್ಥಾಪಯಿತುಂ=ಜಾಗ್ರದವಸ್ಥೆಯನ್ನು ಕೊಡಲೂ ನಪ್ರಭವಂತಿ=ಸಮರ್ಥರಾಗುವುದಿಲ್ಲ, ಆದ್ದರಿಂದ ಅಂಥ ಕ್ಷೇತ್ರಜ್ಞನಿಲ್ಲದಲೇ ಬ್ರಹ್ಮದೇಹಾಂತರ್ಗತರಾದ ಪ್ರಾಣಾದಿಗಳು ಬ್ರಹ್ಮದೇಹ ಬೀಳಲು ಏಳಲು ಕಾರಣರಾಗಲಾರರು. ॥೭೪॥

**ತಮಸ್ಮಿನ್ ಪ್ರತ್ಯಗಾತ್ಮಾನಂ ಧಿಯಾ ಯೋಗವಿಪಕ್ವಯಾ ।**
**ಭಕ್ತ್ಯಾ ವಿರಕ್ತ್ಯಾ ಜ್ಞಾನೇನ ವಿವಿಚ್ಯಾತ್ಮನಿ ಚಿಂತಯೇತ್ ॥೭೫॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಸಪ್ತವಿಂಶೋಽಧ್ಯಾಯಃ ॥*

ಅಸ್ಮಿನ್=ಈ ದೇಹದಲ್ಲಿರುವ ಪ್ರತ್ಯಗಾತ್ಮಾನಂ=ಅಂತರ್ಯಾಮಿಯಾದ ತಂ= ಎಲ್ಲ ಇಂದ್ರಿಯ ದೇವತೆಗಳಿಗಿಂತ ಉತ್ತಮನಾದ ಬ್ರಹ್ಮವಾಯುಗಳಿಗೆ ನಿಯಾಮಕನಾದ ಶ್ರೀಹರಿಯನ್ನು ಯೋಗಪಕ್ವಯಾ=ಅಷ್ಟಾಂಗಯೋಗದಿಂದ

ಕ್ರಮವಾಗಿ ವೃದ್ಧಿಯಾದ ವಿರಕ್ತ್ಯಾ=ವೈರಾಗ್ಯದಿಂದ ಭಕ್ತಿಯಿಂದ ಉಂಟಾದ ಧಿಯಾ= ಪರೋಕ್ಷಜ್ಞಾನದಿಂದ ಉಂಟಾದ ಜ್ಞಾನೇನ=ಮನನದಿಂದ ವಿವಿಚ್ಯ=ಸರ್ವೋತ್ತಮ- ನೆಂದು ನಿಶ್ಚಯಿಸಿ ಆತ್ಮನಿ=ಮನಸಿನಲ್ಲಿ ಚಿಂತಯೇತ್ ಧ್ಯಾನ ಮಾಡಬೇಕು ಎಂದು ಭಾವ. ॥೭೫॥

*ಇಲ್ಲಿಗೆ ಇಪ್ಪತ್ತೇಳನೆಯ ಅಧ್ಯಯವು ಮುಗಿಯಿತು.*

# ಇಪ್ಪತ್ತೇಳನೆಯ ಅಧ್ಯಾಯದ ತಾತ್ಪರ್ಯ

ಕಪಿಲ – ಮನು ಪುತ್ರಿ ! ಭಕ್ತಿಯ ಲಕ್ಷಣವನ್ನು ತಿಳಿದೆಯಲ್ಲವೆ ! ಈಗ ತತ್ವಗಳ ಬೇರೆ-ಬೇರೆ ಲಕ್ಷಣಗಳನ್ನು ಹೇಳುತ್ತೇನೆ. ಅವುಗಳನ್ನು ತಿಳಿದರೆ ಅಧಿಕಾರಿ ಚೇತನನು ಪ್ರಾಕೃತ ಗುಣಗಳಿಂದ ಮುಕ್ತನಾಗುವನು. ಆತ್ಮನೆನಿಸಿದ ಶ್ರೀಹರಿಯ ಜ್ಞಾನವು ಮೋಕ್ಷಕ್ಕೆ ಸಾಧನವಷ್ಟೇ ! ಸಂಸಾರ ಬಂಧವನ್ನು ಹೋಗಲಾಡಿಸುವ ಆ ಪರಮಾತ್ಮ ಜ್ಞಾನವನ್ನೇ ಈ ತತ್ವ ಲಕ್ಷಣಗಳ ಮೂಲಕ ಚೆನ್ನಾಗಿ ತಿಳುಸುತ್ತೇನೆ. ತತ್ವಗಳಿಗೆ ಮುಖ್ಯ ಕಾರಣನಾದ್ದರಿಂದ ಅವನನ್ನು ತಿಳಿಯದೆ ತತ್ವಲಕ್ಷಣಗಳನ್ನು ತಿಳಿಯಲಾರೆ. ಶ್ರೀಹರಿಯು ಆದಿ ಅಂತಗಳಿಲ್ಲದವನು, ಕಾರಣರಹಿತನು, ವಿಜ್ಞಾನ ಸ್ವರೂಪನು, ಪೂರ್ಣವಾದ ಆನಂದವನ್ನು ಕೊಡುವವನು, ಅಂತರ್ಯಾಮಿ, ಪ್ರಾಕೃತಗುಣ-ರಹಿತನು, ಚೇತನಪ್ರಕೃತಿಯೆನಿಸಿದ ಲಕ್ಷ್ಮಿಗಿಂತ ಉತ್ತಮನು, ಸರ್ವಲೋಕಾಶ್ರಯ-ವಾದ ಕಮಲವನ್ನು ಅಭಿಮುಖದಲ್ಲಿ ಉಳ್ಳವನು, ಸ್ವಪ್ರಕಾಶನು, ಈ ಸಮಸ್ತ ಪ್ರಪಂಚವನ್ನೂ ವ್ಯಾಪಿಸಿರುವನು. ಇವನಿಗೆ ಹುಟ್ಟು ಸಾವುಗಳಿಲ್ಲ. ಹೀಗೆಂದು ಶ್ರುತಿಸ್ಮೃತಿಗಳು ಸಾರುವುವು. ಜೀವನಿಗೇ ಸ್ವರೂಪತಃ ಹುಟ್ಟು ಸಾವುಗಳಿಲ್ಲ. ಹೀಗೆಂದು ಶ್ರುತಿಸ್ಮೃತಿಗಳು ಸಾರುವುವು. ಜೀವನಿಗೇ ಸ್ವರೂಪತಃ ಹುಟ್ಟು ಸಾವುಗಳಿಲ್ಲದಿರುವಾಗ ಶ್ರೀಹರಿಗೆಲ್ಲಿಯವು ! ಜೀವನು ದೇಹವು ತನಗಿಂತ ಭಿನ್ನವೆಂದು ತಿಳಿದಿದ್ದಾನೆಯಾದರೂ ಆ ದೇಹ ನಿಮಿತ್ತದಿಂದ ದೇಹಧರ್ಮಗಳಾದ ಹುಟ್ಟು ಸಾವುಗಳನ್ನು ತನ್ನವೆಂದು ಭ್ರಾಂತನಾಗಿರುವನು. ಸ್ವಪ್ನದಲ್ಲಿ ವಾಸನಾಮಯ-ವಾದ ಶರೀರಕ್ಕೊದಗಿದ ಹುಟ್ಟುಸಾವುಗಳನ್ನೇ ತನ್ನ ಸ್ಥೂಲಶರೀರದ ಹುಟ್ಟು ಸಾವುಗಳೆಂದು ಸ್ವಪ್ನದ್ರಷ್ಟಾರನು ಭ್ರಾಂತಿಯಿಂದ ತಿಳಿಯುವಂತೆ ಜೀವನು ದೇಹಧರ್ಮಗಳನ್ನು ತನ್ನ ಸ್ವರೂಪಧರ್ಮಗಳೆಂದು ಭ್ರಾಂತನಾಗಿರುವನು. ಇದು ದೇಹವೇ ಆತ್ಮವೆಂಬ ಭ್ರಾಂತಿಯಿಂದ ಬಂದುದು. ಹೀಗೆಂದಮೇಲೆ ಸರ್ವಜ್ಞನೂ ಸ್ವತಂತ್ರನೂ ಅಪ್ರಾಕೃತನೂ ಅಜ್ಞಾನಾದಿ ದೋಷರಹಿತನೂ ಆದ ಶ್ರೀಹರಿಗೆ ಜೀವರಿಂದ ಅತ್ಯಂತ ವಿಲಕ್ಷಣನಿಗೆ ಹುಟ್ಟು ಸಾವುಗಳಿಲ್ಲವೆಂದು ಬೇರೆ ಹೇಳಬೇಕೆ ?

ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ ಶ್ರೀಹರಿಯೇ ತನ್ನ ಸಮೀಪದಲ್ಲಿಯೇ ಯಾವಾಗಲೂ ಇರುವ ಅಣುವೆನಿಸಿದ ಕ್ರೀಡಾದಿ ಗುಣವಿಶಿಷ್ಟಳಾದ ಚೇತನ

ಪ್ರಕೃತಿಯಾದ ಲಕ್ಷ್ಮಿಯನ್ನು ಲೀಲೆಗಾಗಿ ಸೃಷ್ಟಿಗೆ ತೊಡಗುವಂತೆ ಪ್ರೇರಿಸುವುದರ ಮೂಲಕ ಹೊಂದಿದನು. ಹಾಗೆಯೇ ಸೂಕ್ಷ್ಮವಾದ ಜಡಪ್ರಕೃತಿಯನ್ನೂ ಅದರ ಪರಿಣಾಮ ಶಕ್ತಿಯನ್ನೂ ವ್ಯಕ್ತಪಡಿಸುವದರ ಮೂಲಕ ಸೇರಿದನು. ಈ ಚೇತನಪ್ರಕೃತಿಯೆನಿಸಿದ ಲಕ್ಷ್ಮಿಯು ಶ್ರೀಹರಿಯ ಪ್ರೇರಣೆಯಂತೆ ಸತ್ವ ರಜಸ್ಸು ಮತ್ತು ತಮಸ್ಸು ಎಂಬ ಗುಣಗಳಿಂದ (ಅವುಗಳಿಗೆ ತಾನೇ ಅಭಿಮಾನಿಯಾದ್ದರಿಂದ) ಸ್ವತಃ ಸಾತ್ವಿಕ ಮೊದಲಾಗಿ ಅನೇಕ ಬಗೆಯ ಜೀವರನ್ನು ಇಂದ್ರಿಯಾದಿಗಳನ್ನು ಹೊಂದಿ ಸಮಾನರೂಪರನ್ನು ಸೃಷ್ಟಿಸುತ್ತ ಬಂದಳು. ಅಂದರೆ, ದೇಹ ಸಂಬಂಧವನ್ನು ಉಂಟುಮಾಡಿದಳು. ಸಂಸಾರಾವಸ್ಥೆಯಲ್ಲಿ ಜೀವರ ಜ್ಞಾನವನ್ನು ಗುಪ್ತವಾಗಿ ಇಟ್ಟಿರಬೇಕೆಂಬ ಇಚ್ಛೆಯಿಂದ ಶ್ರೀಹರಿಯು ತತ್‌ಕ್ಷಣವೇ ಅವರ ಜ್ಞಾನವನ್ನು ಮುಚ್ಚಿಡುವ ಪ್ರಕೃತಿಯ ಮೂಲಕ ಜೀವರನ್ನು ಮೋಹಗೊಳಿಸಿದನು. ಹೀಗೆ ಶ್ರೀಹರಿಯ ಇಚ್ಛೆಯಿಂದ ಮೋಹಗೊಂಡ ಜೀವನು ಸತ್ವಾದಿ ಗುಣಗಳಿಂದ ಪ್ರಕೃತಿಯೇ ಕರ್ಮಗಳನ್ನು ಮಾಡುತ್ತಿದ್ದರೂ ಪ್ರಕೃತಿಯ ಕರ್ತೃತ್ವವನ್ನರಿಯದೆ ತಾನೇ ಸ್ವತಂತ್ರ ಕರ್ತೃವೆಂದು ಭ್ರಾಂತನಾಗಿರುವನು. ಹೀಗೆ ತನ್ನಲ್ಲಿ ಇಲ್ಲದಿರುವ ಸ್ವಾತಂತ್ರ್ಯವನ್ನು ತಿಳಿದಿರುವ ಜೀವನನ್ನು ಶ್ರೀಹರಿಯು ಸಂಸಾರಬದ್ಧನನ್ನಾಗಿ ಮಾಡಿರುವನು. ಶ್ರೀಹರಿಯು ಕಾರ್ಯಮಾಡುವಲ್ಲಿ ಕ್ಲೇಶಪಡುವುದಿಲ್ಲ. ತನ್ನ ಪ್ರಯೋಜನಕ್ಕಾಗಿ ಯಾವುದನ್ನೂ ಮಾಡುವುದಿಲ್ಲ. ಜೀವರ ಪುಣ್ಯಪಾಪಗಳನ್ನು ಸಾಕ್ಷಾತ್ತಾಗಿ ನೋಡುವುದರಿಂದ ಸಾಕ್ಷಿಯೆನಿಸುವನು. ಅವನು ಯಾವಾಗಲೂ ಆನಂದ ಸ್ವರೂಪಿಯು. ನಿಯಾಮಕನಾದ ಅವನು ಜೀವರನ್ನು ಸಂಸಾರಬದ್ಧರನ್ನಾಗಿ ಮಾಡಿ ಅವರಿಗಿಂತ ನೀಚರಾದವರ ಅಧೀನದಲ್ಲಿ ಇರುವಂತೆ ಮಾಡುವನು. ಇದಕ್ಕೇ ಪಾರತಂತ್ರ್ಯವೆಂದು ಹೆಸರು. ಇದೇ ದುಃಖಕ್ಕೆ ಕಾರಣ. (ಸ್ವೋತ್ತಮರ ಅಧೀನತೆಯು ಜೀವನ ಸ್ವರೂಪಭೂತವಾದ್ದರಿಂದ ನಿತ್ಯವಾದುದುದ ಮತ್ತು ದುಃಖಜನಕವಲ್ಲ) ಕಾರ್ಯವೆನಿಸುವ ದೇಹ, ಕಾರಣವೆನಿಸುವ ಇಂದ್ರಿಯ ಮತ್ತು ಕರ್ತೃವೆನಿಸುವ ಮನಸ್ಸು ಇವುಗಳಿಗೆ ಜಡಪ್ರಕೃತಿಗಭಿಮಾನಿಯಾದ ಲಕ್ಷ್ಮಿಯೇ ಕಾರಣಳು. ಅಂದರೆ ಇವುಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿಚೇತನರು ಲಕ್ಷ್ಮಿಯ ಅನುಗ್ರಹದಿಂದಲೇ ಜಗತ್ತಿನ ಸೃಷ್ಟಿಗೆ ಕಾರಣರಾಗಿರುವರು. ಆ ಲಕ್ಷ್ಮಿಯೂ ಸಹ ಶ್ರೀಹರಿಯ ಅನುಗ್ರಹ-ದಿಂದ ಇಂತಹ ಸಾಮರ್ಥ್ಯವನ್ನು ಹೊಂದಿರುವಳು. ಶ್ರೀಹರಿಯ ಆಜ್ಞೆಯಂತೆ ಲಕ್ಷ್ಮ್ಯಾದಿ ಚೇತನರು ಸುಖಾದಿಗಳನ್ನು ಕೊಡುವರು. ಆದರೆ ಅವುಗಳ ಅನುಭವವನ್ನು ಜೀವರಿಗೆ ತಂದು ಕೊಡುವವನು ಶ್ರೀಹರಿಯೇ. ಹೀಗೆ ಪ್ರಕೃತಿಪುರುಷರಿಬ್ಬರೂ ಜಗತ್ತಿಗೆ ಕಾರಣರಾಗಿರುವರು.

ದೇವಹೂತಿ - ಪುರುಷೋತ್ತಮ ! ಈ ಜಗತ್ತಿಗೆ ಕಾರಣರೂ ಸ್ಥೂಲ ಸೂಕ್ಷ್ಮರೂಪವಾದ ಈ ಜಗತ್ತನ್ನು ವ್ಯಾಪಿಸಿಕೊಂಡಿರುವವರೂ ಆದ ಪ್ರಕೃತಿ ಪುರುಷರ ಅಸಾಧಾರಣಧರ್ಮ ಲಕ್ಷಣಗಳನ್ನು ತಿಳಿಸು.

ಕಪಿಲ ಸತ್ವರಜಸ್ತಮೋಗುಣಾತ್ಮಕವಾದುದುದೇ ಜಡಪ್ರಕೃತಿ. ಇದರ ಅಭಿಮಾನಿಯೇ ಚೇತನ ಪ್ರಕೃತಿ. ಇದು ಸೂಕ್ಷ್ಮವಾದುದು. ಇದಕ್ಕೆ ನಾಶವಿಲ್ಲ. ವ್ಯಕ್ತಾವ್ಯಕ್ತವೆಂಬ ಅವಸ್ಥೆಗಳನ್ನು ಹೊಂದಿರುವುದು. ಇದು ಯಾವುದರಿಂದಲೂ ಆದುದಲ್ಲ. ಇದರಿಂದ ಮಹತ್ತತ್ವ ಮೊದಲಾದ ತತ್ವಗಳು ಹುಟ್ಟುವುವು. ಇದು ಕಾರ್ಯಗಳಿಗೆ ಪ್ರಧಾನವಾದ್ದರಿಂದ ಇದಕ್ಕೆ ಪ್ರಧಾನವೆಂದೂ ಹೆಸರು. ಈ ಸತ್ವ ರಜಸ್ತಮೋಗುಣಗಳಿಗೆ ಕ್ರಮವಾಗಿ ಶ್ರೀ ಭೂ ದುರ್ಗಾರೂಪಗಳಿಂದ ಲಕ್ಷ್ಮಿದೇವಿಯು ಅಭಿಮಾನಿಯಾಗಿ ಗುಣ ಪ್ರವರ್ತಕಳಾದ್ದರಿಂದ ತ್ರಿಗುಣಾತ್ಮಕವಾದ ಜಗತ್ತಿನ ಔಪಚಾರಿಕವಾಗಿ ಉಪಾದಾನ ಕಾರಣಳೆನಿಸುವಳು. ಬ್ರಹ್ಮದೇವರ ಸೃಷ್ಟಿಗೆ ಕಾರಣಳಾದ್ದರಿಂದ ಈಕೆಗೆ ಪ್ರಕೃತಿಯೆಂದು ಹೆಸರು. ಸೃಷ್ಟಿಕಾರ್ಯದಲ್ಲಿ ಉದಾಸೀನಳಾಗಿದ್ದಾಗ ಅವ್ಯಕ್ತಳೆಂದೂ, ಸೃಷ್ಟೀಚ್ಛೆ ಹೊಂದಿದಾಗ ವ್ಯಕ್ತಾವ್ಯಕ್ತಳೆಂದೂ ಮಹದಾದಿ ತತ್ವಗಳಲ್ಲಿ ವ್ಯಾಪಿಸಿರುವಾಗ ವ್ಯಕ್ತಳೆಂದೂ ಕರೆಸಿಕೊಳ್ಳುವಳು. ಜಡ ಪ್ರಕೃತಿಯೂ ಸೂಕ್ಷ್ಮಾವಸ್ಥೆಯಲ್ಲಿ ಅವ್ಯಕ್ತವೆಂದೂ, ಪರಿಣಾಮಶಕ್ತಿಯು ಹೊರಹೊಮ್ಮುವ ಅವಸ್ಥೆಯಲ್ಲಿ ವ್ಯಕ್ತಾವ್ಯಕ್ತವೆಂದೂ ಮಹತ್ತತ್ವ ಮೊದಲಾಗಿ ಪರಿಣಾಮ ಹೊಂದಿದಾಗ ವ್ಯಕ್ತವೆಂದೂ ಕರೆಸಿಕೊಳ್ಳುವುದು. ಭೂಮಿ, ನೀರು, ಬೆಂಕಿ ಗಾಳಿ ಮತ್ತು ಆಕಾಶಗಳೆಂಬ ಪಂಚಭೂತಗಳೂ ಕ್ರಮವಾಗಿ ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದಗಳೆಂಬ ಐದು ತನ್ಮಾತ್ರೆಗಳೂ, ಕಿವಿ, ತ್ವಕ್, ಕಣ್ಣು ನಾಲಿಗೆ, ಮೂಗು, ವಾಕ್, ಪಾಣಿ, ಪಾದ, ಗುಹ್ಯೇಂದ್ರಿಯ ಮತ್ತು ಪಾಯುಗಳೆಂಬ ಪಂಚ ಜ್ಞಾನ ಮತ್ತು ಪಂಚ ಕರ್ಮೇಂದ್ರಿಯಗಳೂ ಸೇರಿ ಹತ್ತು ಇಂದ್ರಿಯಗಳೂ, ಅಂತಃಕರಣದಲ್ಲಿ ನಿಶ್ಚಯವೇ ವ್ಯಾಪಾರವಾಗಿಉಳ್ಳ ಬುದ್ಧಿ, ಸಂಶಯ ವ್ಯಾಪಾರವುಳ್ಳ ಮನಸ್ಸು, ನಾನು ಎಂಬ ಅಭಿಮಾನ ವ್ಯಾಪಾರವುಳ್ಳ ಅಹಂಕಾರ ಮತ್ತು ಸ್ಮರಣ ವ್ಯಾಪಾರವುಳ್ಳ ಚಿತ್ತ ಹೀಗೆ ನಾಲ್ಕು ಭೇದಗಳೂ ಒಟ್ಟು ಇಪ್ಪತ್ತುನಾಲ್ಕು ತತ್ವಗಳನ್ನೂ ಪ್ರಧಾನತತ್ವದ ಕಾರ್ಯವೆಂದು (ಪರಿಣಾಮ) ಬಲ್ಲವರು ಹೇಳುತ್ತಾರೆ. ಸಗುಣಬ್ರಹ್ಮವೆಂದು ಕರೆಸುವ ಲಕ್ಷ್ಮಿಯಿಂದ ಅಭಿಮನ್ಯಮಾನವಾದ ಪ್ರಕೃತಿಯ ಸಂಸ್ಥಾನ ವಿಶೇಷವು ಇಪ್ಪತ್ತನಾಲ್ಕೇ ಹೊರತು ಹೆಚ್ಚಲ್ಲವೆಂದು ನಿನಗೆ ಈಗ ತಿಳಿಸಿರುವೆನು. ಇನ್ನು ಮತ್ತೊಬ್ಬರ ಅಧೀನನಲ್ಲದ ಸ್ವತಂತ್ರನಾದ ಕಾಲನೆಂಬ ಶ್ರೀಹರಿಯೇ ಇಪ್ಪತ್ತೈದನೆಯ ತತ್ತ್ವವು.

ಈ ಶ್ರೀಹರಿಯ ತತ್ವವನ್ನು ಚೆನ್ನಾಗಿ ಬಲ್ಲ ಜ್ಞಾನಿಗಳು ಅಹಂಕಾರದಿಂದ ಮುಗ್ಧನಾಗಿ ಪ್ರಕೃತಿಬದ್ಧನಾಗಿರುವ ಜೀವನನ್ನು ಜನನ ಮರಣರೂಪ ಸಂಸಾರದಲ್ಲಿ

ತೊಳಲುವಂತೆ ಮಾಡಿದ ಈ ಶ್ರೀಹರಿಗೆ ಎರಡು ಕಾಲರೂಪಗಳನ್ನು ಹೇಳುತ್ತಾರೆ. ಒಂದು ಹೃದಯಸ್ಥಿತನಾದ ಶ್ರೀಹರಿಯ ವ್ಯಾಪ್ತವಾದ ರೂಪ. ಮತ್ತೊಂದು ರುದ್ರದೇಹಸ್ಥಿತವಾದ ಪುರುಷಾಕಾರವಾದ ರೂಪ. ಇದೇ ಸಂಹಾರಕರೂಪ ಮತ್ತು ಸಂಸಾರಕ್ಕೆ ಕಾರಣವಾದ ರೂಪ.

ಕಾರ್ಯದಲ್ಲಿ ಉದಾಸೀನಳೂ ಪ್ರಳಯಾವಸ್ಥೆಯನ್ನು ಹೊಂದಿರುವವಳೂ ಆದ ಪ್ರಧಾನ ತತ್ತ್ವಾಭಿಮಾನಿ ಮೂಲ ಲಕ್ಷ್ಮೀದೇವಿಗೆ ಶ್ರೀ, ಭೂ, ದುರ್ಗಾರೂಪಗಳಿಂದ ಸೃಷ್ಟಿಯಲ್ಲಿ ಇಚ್ಛೆಯುಂಟಾಗುವಂತೆ ಶ್ರೀಹರಿಯೇ ಪ್ರೇರಿಸುವನು. ಆದ್ದರಿಂದ ಅವನೇ ಕಾಲನೆನಿಸುವನು. ತನ್ನ ಇಚ್ಛೆಯಿಂದ ಶ್ರೀಹರಿಯು ಎಲ್ಲ ಪ್ರಾಣಿಗಳ ಹೃದಯದಲ್ಲಿ ಅಂತರ್ಯಾಮಿಯಾಗಿ ಪುರುಷನೆನಿಸುವನು. ಹೊರಗೆ ವ್ಯಾಪನಾಗಿ ಕಾಲನೆನಿಸುವನು. ಈ ಎರಡು ರೂಪಗಳಿಗೆ ಯಾವ ಭೇದವೂ ಇಲ್ಲ.

ನಾರಾಯಣರೂಪದಿಂದಪ್ರಕೃತಿಯಲ್ಲಿ ಕ್ಷೋಭೆಯನ್ನು ಉಂಟುಮಾಡಿದನು. ಆಗ ಪ್ರಧಾನ ತತ್ತ್ವಾಭಿಮಾನಿಯಾದ ಲಕ್ಷ್ಮಿಯಲ್ಲಿ ಸೃಷ್ಟಿಮಾಡಬೇಕೆಂಬ ಇಚ್ಛೆಯನ್ನು ಹುಟ್ಟಿಸಿದನು. ಆ ಲಕ್ಷ್ಮಿಯಿಂದ ಸೃಷ್ಟಿಗೆ ಕಾರಣವಾದ "ಶ್ರೀ" ರೂಪವು ವ್ಯಕ್ತವಾಯಿತು. ನಾರಾಯಣರೂಪದಿಂದ ವ್ಯಕ್ತನಾದ ಪುರುಷೋತ್ತಮ ನಾಮಕ ಶ್ರೀಹರಿಯು ಆ ಶ್ರೀದೇವಿಯಲ್ಲಿ ತನ್ನ ವೀರ್ಯವನ್ನಿಟ್ಟನು. ಆಗ ಹಿರಣ್ಮಯವಾದ ಮಹತ್ತತ್ತ್ವವು ಅವಳಿಂದ ಸೃಷ್ಟಿಯಾಯಿತು. ಆ ಪರಮ ಪುರುಷರೂಪವು ಬ್ರಹ್ಮ ಮೊದಲಾದ ಸರ್ವ ಜೀವಸಮುದಾಯಕ್ಕೂ ಆಧಾರವಾದುದು. ಆ ರೂಪದ ಉದರದಲ್ಲಿ ಎಲ್ಲ ಜಗತ್ತೂ ಅಡಗಿತ್ತು. ಅದನ್ನು ವ್ಯಕ್ತಗೊಳಿಸಬೇಕೆಂದು ಅವನು ಇಚ್ಛಿಸಿದನು. ತಾನು ಆಶ್ರಯನಾಗಿದ್ದು ಜಗತ್ತನ್ನು ಆನಂದಪಡಿಸುವ ಆ ಶ್ರೀಹರಿಯು ತನ್ನ ಯೋಗನಿದ್ರೆಗೆ ಕಾರಣವಾಗಿದ್ದ ನಿಬಿಡಾಂಧಕಾರವನ್ನು ತನ್ನ ಪ್ರಕಾಶದಿಂದ ನಾಶಪಡಿಸಿದನು. ಆ ಹಿರಣ್ಮಯವಾದ ಮಹತ್ತತ್ತ್ವಕ್ಕೆ ವಾಸುದೇವನೇ ನಿಯಾಮಕನು. ಅವನು ಪೂರ್ಣಾನಂದನು, ಶುದ್ಧನು; ಕಾಲುಷ್ಯವಿಲ್ಲದವನು. ಆದ್ದರಿಂದಲೇ ಆ ಮಹತ್ತತ್ತ್ವವೂ ಸಾತ್ತ್ವಿಕವೂ, ಶುಕ್ಲವೂ, ಸ್ತಿಮಿತವೂ ಆಗಿರುವುದು. ಈ ಮಹತ್ತತ್ತ್ವ ನಿಯಾಮಕವಾಸುದೇವರೂಪದಿಂದ ಪ್ರಾಣಿಗಳ ಚಿತ್ತವು ಹುಟ್ಟುವುದು. ನಿರ್ಮಲವಾಗಿರುವಿಕೆ, ಸ್ವಲ್ಪ ವಿಕಾರವನ್ನು ಹೊಂದುವಿಕೆ ಮತ್ತು ಪ್ರಸನ್ನವಾಗಿರುವಿಕೆ ಇವು ಚಿತ್ತದ ಸ್ವಾಭಾವಿಕ ಲಕ್ಷಣಗಳು. ಅಂದರೆ ನೀರು ಹೇಗೆ ಸ್ವಾಭಾವಿಕವಾಗಿ ಬೆಳ್ಳಗಿರುವುದೋ ಹಾಗೆ ಚಿತ್ತವೂ ಸ್ವಾಭಾವಿಕವಾಗಿ ಮೇಲಿನ ಗುಣಗಳನ್ನು ಹೊಂದಿದೆ ಎಂದು ತಿಳಿಯಬೇಕು. ಶ್ರೀಹರಿಯ ಇಚ್ಛೆಯಂತೆ ಮಹತ್ತತ್ತ್ವವು ವಿಕಾರಗೊಂಡು ಮೂರು ವಿಧವಾದ ಅಹಂಕಾರತತ್ತ್ವಕ್ಕೆ ಕಾರಣವಾಯಿತು. ಇದರಲ್ಲಿ ಮಹತ್ತತ್ತ್ವಕ್ಕಿಂತ ಜ್ಞಾನಶಕ್ತಿಯು ಕಡಿಮೆ. ಆದ್ದರಿಂದ ಇದಕ್ಕೆ ಕ್ರಿಯಾಶಕ್ತಿಯೆಂದು

ಪ್ರಸಿದ್ಧಿ. ಇದರಲ್ಲಿ ಮೊದಲನೆಯದಾದ ವೈಕಾರಿಕಾಹಂಕಾರವು ಮನಸ್ತತ್ವಕ್ಕೂ ಎರಡನೆಯದಾದ ತೈಜಸಾಹಂಕಾರವು ಇಂದ್ರಿಯತತ್ವಗಳಿಗೂ ಮೂರನೆಯದಾದ ತಾಮಸಾಹಂಕಾರವು ಪಂಚಮಹಾಭೂತಗಳಿಗೂ ಕಾರಣವು ಮತ್ತು ವೈಕಾರಿಕಾ-ಹಂಕಾರದಿಂದ ದಿಗಭಿಮಾನಿಗಳೇ ಮೊದಲಾದ ದೇವತೆಗಳೂ ತೈಜಸಾಹಂಕಾರದಿಂದ ದಿಗಭಿಮಾನಿಗಳೇ ಮೊದಲಾದ ದೇವತೆಗಳೂ ತೈಜಸಾಹಂಕಾರದಿಂದ ಬುದ್ಧಿಗೆ ಅಭಿಮಾನಿಯಾದ ಉಮಾ ಮತ್ತು ಅಹಂಕಾರಿಕ ಪ್ರಾಣರೂ ಹುಟ್ಟಿದರು. ತಾಮಸಾಹಂಕಾರದಿಂದ ಶಬ್ದ ಮೊದಲಾದ ತನ್ಮಾತ್ರೆಗಳೂ ಹುಟ್ಟಿದುವು. ಈ ತ್ರಿಗುಣಾತ್ಮಕವಾದ ಅಹಂಕಾರವು ಶಾಂತ, ಘೋರ ಮತ್ತು ಮೂಢಭಾವಗಳಿಗೆ ವ್ಯಂಜಕವು. ಮೂರು ಭಾಗವಾಗದಿರುವ ಅವಸ್ಥೆಯಲ್ಲಿ ಅಹಂಕಾರ ತತ್ವವನ್ನು ಸೂಕ್ಷ್ಮಾಹಂಕಾರವೆನ್ನುವರು. ಇದಕ್ಕೆ ಸಂಕರ್ಷಣರೂಪಿಯಾದ ಶ್ರೀಹರಿಯು ನಿಯಾಮಕನು. ಇವನೇ ಪಂಚಮಹಾಭೂತಗಳಿಗೂ ಜ್ಞಾನ ಕರ್ಮೇಂದ್ರಿಯಗಳಿಗೂ ಪ್ರಧಾನ ಪ್ರವರ್ತಕನು. ಇವನಿಗೆ ಅನಂತ ಶಿರಸ್ಸುಗಳು. ಗುಣ, ದೇಶ ಮತ್ತು ಕಾಲಗಳಿಂದ ಕೊನೆಯಿಲ್ಲದವನಿವನು. ಮೂರು ಭಾಗವನ್ನು ಹೊಂದಿದ ಅಹಂಕಾರತತ್ವಕ್ಕೆ ಸ್ಥೂಲಾಹಂಕಾರವೆಂದು ಹೆಸರು. ಇದಕ್ಕೆ ಪ್ರದ್ಯುಮ್ನನು ನಿಯಾಮಕನು. ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ರೂಪಗಳಿಂದ ಪ್ರೇರಿತರಾದ ಸಾವಿರಹೆಡೆಯ ಶೇಷದೇವರು ಈ ಅಹಂಕಾರತತ್ವಕ್ಕೆ ಅಭಿಮಾನಿಗಳು. ಮನಸ್ತತ್ವಕ್ಕೆ ಕಾರಣವಾದ ವೈಕಾರಿಕಾಹಂಕಾರವು ಕರ್ತೃವೆನಿಸುವುದು. ಇಂದ್ರಿಯಗಳಿಗೆ ಕಾರಣವಾದ ತೈಜಸಾಹಂಕಾರವು ಕರಣವೆನಿಸುವುದು. ಪಂಚಭೂತಗಳಿಗೂ ಭೌತಿಕಪದಾರ್ಥಗಳಿಗೂ ಕಾರಣವಾದ ತಾಮಸಾಹಂಕಾರವು ಕಾರ್ಯವೆನಿಸುವುದು. ವೈಕಾರಿಕಹಂಕಾರವು ಶ್ರೀಹರಿಯಲ್ಲಿ ನಿಷ್ಠೆಯನ್ನು ಉಂಟುಮಾಡುವುದರಿಂದ ಶಾಂತವೆನಿಸುವುದು. ತೈಜಸಾಹಂಕಾರವು ಇಂದ್ರಿಯ-ಗಳಿಂದ ಘೋರಪದಾರ್ಥಗಳ ಜ್ಞಾನ ಘೋರರಕರ್ಮಗಳಿಗೆ ಕಾರಣವಾದ್ದರಿಂದ ಘೋರವೆನಿಸುವುದು. ತಾಮಸಾಹಂಕಾರವು ಪಂಚಭೂತಗಳಿಗೆ ಕಾರಣವಾಗಿ (ಅಷ್ಟೊಂದು ಜ್ಞಾನಪ್ರಕಾಶಕ್ಕೆ ಅವಕಾಶ ಕೊಡದಿರುವುದರಿಂದ) ಮೂಢವೆನಿಸುವುದು.

ಶ್ರೀಹರಿಯ ಇಚ್ಛೆಯಿಂದ ವೈಕಾರಿಕಾಹಂಕಾರವು ವಿಕಾರವನ್ನು ಹೊಂದಿ ಮನಸ್ತತ್ವವಾಗಿ ಪರಿಣಮಿಸಿತು. ಇದರ ವ್ಯವಹಾರಗಳೇ ಸಂಕಲ್ಪ-ವಿಕಲ್ಪಗಳು. ಇದರಿಂದಲೇ ಅನೇಕ ಬಗೆಯ ಇಚ್ಛೆಗಳ ಉತ್ಪತ್ತಿಯು. ಹಿಂದೆ ಹೇಳಿದ ಪ್ರದ್ಯುಮ್ನ ರೂಪದಿಂದ ಅಭಿವ್ಯಕ್ತನಾದ ಅನಿರುದ್ಧರೂಪಿಯೂ ಈ ಮನಸ್ತತ್ವಕ್ಕೆ ನಿಯಾಮಕನು. ಇವನೇ ಎಲ್ಲ ಇಂದ್ರಿಯಗಳಿಗೂ ನೇತಾರನು. ಇವನ ವರ್ಣವು ಕನ್ನೈದಿಲೆಯಂತೆ ನೀಲವರ್ಣ. ಇವನನ್ನು ಸನಕಾದಿಗಳು ಅವ್ಯಗ್ರ ಮನಸ್ಸಿನಿಂದ ಧ್ಯಾನಮಾಡುವರು.

ಇವನೇ ಕಾಮಪುತ್ರನಾದ ಅನಿರುದ್ಧನಲ್ಲಿ ಅಂತರ್ಯಾಮಿಯಾಗಿರುವನು. ಮನಸ್ಸೂ ಸ್ವಾಭಾವಿಕವಾಗಿ ತಡೆಯಿಲ್ಲದೆ ಇರುವುದರಿಂದ ಅನಿರುದ್ಧವೆನಿಸುವುದು; (ಕೆಟ್ಟ ವಿಷಯಗಳನ್ನಾಲೋಚಿಸುವುದರಿಂದ) ಕೃಷ್ಣವರ್ಣವೆನಿಸುವುದು. ಇದು ಎಲ್ಲ ಇಂದ್ರಿಯಗಳನ್ನೂ ನಿಯಮಿಸುವುದು. ಇಂತಹ ಮನಸ್ಸನ್ನು ಯೋಗಿಗಳು ಪ್ರಾಣಾಯಾಮ ಮೊದಲಾದವುಗಳಿಂದ ಕ್ರಮವಾಗಿ ತಮ್ಮ ವಶಪಡಿಸಿಕೊಳ್ಳುವರು. ಶ್ರೀಹರಿಯ ಇಚ್ಛೆಯಿಂದ ತೈಜಸಾಹಂಕಾರವು ವಿಕಾರವನ್ನು ಹೊಂದಿ ಬುದ್ಧಿತತ್ತ್ವವಾಯಿತು. ನಿರ್ದೋಷಗಳಾದ ಇಂದ್ರಿಯಗಳಿಂದ ಪದಾರ್ಥವು ತೋರಿದಾಗ ಆ ಪದಾರ್ಥಗಳ ವಿಶೇಷಜ್ಞಾನವು ಈ ತತ್ತ್ವದಿಂದ ಹುಟ್ಟುವುದು. ಸಂಶಯ, ಭ್ರಾಂತಿ, ನಿಶ್ಚಯ ಸ್ಮರಣ ಮತ್ತು ಅಜ್ಞಾನ ಇವು ಈ ಬುದ್ಧಿತತ್ತ್ವದ ಸ್ವಾಭಾವಿಕ ಲಕ್ಷಣಗಳು. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ತೈಜಸಾಹಂಕಾರದ ಪರಿಣಾಮಗಳು. ಇವುಗಳಲ್ಲಿ ಕರ್ಮೇಂದ್ರಿಯಗಳಿಗೆ ಅಹಂಕಾರಿಕ ಪ್ರಾಣನು ಅಭಿಮಾನಿಯು. ಜ್ಞಾನೇಂದ್ರಿಯಗಳಿಗೆ ಉಮಾದೇವಿ. ಶ್ರೀಹರಿಯ ಪ್ರೇರಣೆಯಿಂದ ವಿಕಾರಹೊಂದಿದ ತಾಮಸಾಹಂಕಾರದಿಂದ ಶಬ್ದತನ್ಮಾತ್ರೆಯು ಹುಟ್ಟಿತು. ಅದರಿಂದ ಆಕಾಶದ ಉತ್ಪತ್ತಿಯಾಯಿತು. ಅಲ್ಲದೆ ಶಬ್ದ ಜ್ಞಾನವನ್ನು ಹುಟ್ಟಿಸುವ ಶೋತ್ರೇಂದ್ರಿಯು (ಗೋಲಕ)ವೂ ಹುಟ್ಟಿತು. ಪದಾರ್ಥಗಳನ್ನು ತಿಳಿಸುವುದು. ಶ್ರೀಹರಿಯನ್ನು ತಿಳಿಸಿಕೊಡುವುದು, ಆಕಾಶದ ಗುಣವಾಗಿರುವುದು ಇವು ಶಬ್ದದ ಲಕ್ಷಣಗಳು. ಪ್ರಾಣಿಗಳಿಗೆ ಅವಕಾಶ ಕೊಡುವುದು, ಒಳಗೆ ಹೊರಗೆ ದಿಗ್ರೂಪವಾಗಿರುವುದು, ಪ್ರಾಣಾದಿ ಪಂಚವಾಯುಗಳಿಗೂ ಇಂದ್ರಿಯಗಳಿಗೂ ಜೀವರಿಗೂ ವಾಸಕ್ಕೆ ಅರ್ಹವಾಗಿರುವುದು ಇವು ಆಕಾಶದ ಸ್ವಾಭಾವಿಕ ಲಕ್ಷಣಗಳು. ಶ್ರೀಹರಿಯ ಪ್ರೇರಣೆಯಂತೆ ಆಕಾಶವು ವಿಕಾರವನ್ನು ಹೊಂದಿ ಸ್ಪರ್ಶತನ್ಮಾತ್ರೆಗೆ ಕಾರಣವಾಯಿತು. ಇದರಿಂದ ಭೂತವಾಯುವೂ, ಸ್ಪರ್ಶಜ್ಞಾನಕ್ಕೆ ಕಾರಣವಾದ ಸ್ಪರ್ಶೇಂದ್ರಿಯವೂ ಹುಟ್ಟಿದವು. ಮಾರ್ದವ, ಕಾಠಿಣ್ಯ, ಶೈತ್ಯ, ಔಷ್ಣ್ಯ ಇವೂ ವಾಯುವಿನ ವಿಶೇಷ ಗುಣ (ತನ್ಮಾತ್ರೆ)ವಾಗಿರುವುದೂ ಸ್ಪರ್ಶದ ಸ್ವಭಾವವು. ಪದಾರ್ಥಗಳನ್ನು ಅಲ್ಲಾಡಿ(ಅಲುಗಾಡಿ)ಸುವುದೂ, ಒಂದುಗೂಡಿಸುವುದೂ, ವ್ಯಾಪಿಸಿರುವುದೂ, ದ್ರವ್ಯಗಳನ್ನು ಶಬ್ದವನ್ನು ಒಂದು ಕಡೆಯಿಂದ ಮತ್ತೊಂದುಕಡೆ ತೆಗೆದುಕೊಂಡು ಹೋಗುವುದೂ, ಎಲ್ಲ ಇಂದ್ರಿಯಗಳಿಗೂ ಅತ್ಯವಶ್ಯಕವಾಗಿದ್ದು ಸ್ವಾಮಿಯಾಗಿರುವುದೂ ವಾಯುವಿನ ಲಕ್ಷಣಗಳು. ಶ್ರೀಹರಿಯ ಇಚ್ಛೆಯಂತೆ ವಿಕಾರಹೊಂದಿದ ವಾಯುವಿನಿಂದ ರೂಪತನ್ಮಾತ್ರೆಯು ಹುಟ್ಟಿತು. ಅದರಿಂದ ತೇಜಸ್ತತ್ತ್ವವೂ ರೂಪಜ್ಞಾನಕ್ಕೆ ಕಾರಣವಾದ ಚಕ್ಷುರಿಂದ್ರಿಯವೂ ಹುಟ್ಟಿದುವು. ಪದಾರ್ಥಗಳಿರುವವರೆಗೂ ಇರೋಣವೂ ಪ್ರಕಾಶಮಾನವಾಗಿರುವುದೂ,

ವ್ಯಕ್ತಿಯಾಗಿರುವಿಕೆಯೂ ಉಗ್ರವಾಗಿರುವಿಕೆಯೂ ರೂಪತನ್ಮಾತ್ರೆಯ ಸ್ವಭಾವವು. ಪ್ರಕಾಶಗೊಳಿಸುವುದು, ಪಚನಮಾಡುವುದು, ರಸವನ್ನು ಹೀರುವುದು, ಸುಡುವುದು, ಶೈತ್ಯವನ್ನು ಹೊಗಲಾಡಿಸುವುದು, ಒಣಗಿಹೋಗುವಂತೆ ಮಾಡುವುದು ಪ್ರಾಣಿಗಳಿಗೆ ಹಸಿವು ನೀರಡಿಕೆಗಳನ್ನು ಉಂಟುಮಾಡುವುದು ಇವು ಬೆಂಕಿಯ ಸ್ವಭಾವ. ಶ್ರೀಹರಿಯ ಇಚ್ಛೆಯಂತೆ ವಿಕಾರಹೊಂದಿದ ತೇಜಸ್ಸಿನಿಂದ ರಸತನ್ಮಾತ್ರೆಯೂ ಅದರಿಂದ ನೀರೂ ಮತ್ತು ರಸಜ್ಞಾನಜನಕವಾದ ರಸನೇಂದ್ರಿಯವೂ ಹುಟ್ಟಿದುವು. ರಸವು ಒಂದೇ ಆದರೂ ಭೌತಿಕ ಪದಾರ್ಥಗಳ ವಿಕಾರದಿಂದ ಒಗರು ಸಿಹಿ, ಕಹಿ, ಖಾರ, ಹುಳಿ ಮತ್ತು ಲವಣವೆಂದು, ಅನೇಕ ಬಗೆ. ತೋಯಿಸುವುದು, ಮುದ್ದೆಮಾಡುವುದು, ತೃಪ್ತಿಪಡಿಸುವುದು, ಪ್ರಾಣಕ್ಕೆ ಕಾರಣವಾಗುವುದು, ಸಂತೋಷಕ್ಕೆ ಕಾರಣವಾಗುವುದು, ಬಿಂದುಗಳಾಗಿ ಆಗುವುದು, ಸಂತಾಪವನ್ನು ಪರಿಹರಿಸುವುದು. ಕಾರ್ಯಗಳಲ್ಲಿ ಹೆಚ್ಚಿಕೆ ಇರುವುದು ಇವು ನೀರಿನ ಸ್ವಭಾವವು. ಶ್ರೀಹರಿಯ ಇಚ್ಛೆಯಂತೆ ವಿಕಾರಹೊಂದಿದ `ನೀರಿನಿಂದ ಗಂಧತನ್ಮಾತ್ರೆಯು ಹುಟ್ಟಿತು. ಅದರಿಂದ ಭೂಮಿಯೂ ಗಂಧ ಜ್ಞಾನವನ್ನು ತಂದುಕೊಡುವ ಘ್ರಾಣೇಂದ್ರಿಯವೂ ಹುಟ್ಟಿದುವು. ಗಂಧವು ಒಂದೇ ಆದರೂ ದ್ರವ್ಯಗಳ ಮತ್ತು ಅವಯವಗಳ ವ್ಯತ್ಯಾಸದಿಂದ ಸುಟ್ಟವಾಸನೆ, ಕೊಳೆತವಾಸನೆ, ಸುವಾಸನೆ, ಮಿಶ್ರವಾಸನೆ, ಘಾಟುವಾಸನೆ, ಹುಳಿವಾಸನೆ ಇವೇ ಮೊದಲಾದ ಅನೇಕ ವಿಧಗಳಾಗಿ ಕರೆಸಿಕೊಳ್ಳುವುದು. ಅಂಕುರಗಳ ಉತ್ಪತ್ತಿಗೆ ಕಾರಣವಾಗಿರುವುದು, ಪಾರ್ಥಿವ ಶರೀರದಲ್ಲಿ ಶ್ರೀಹರಿಯ ಸ್ಥಾನವಾಗಿರುವದು. ಮೂರ್ತದ್ರವ್ಯಗಳನ್ನು ಧರಿಸಿರುವುದು, ಮೇಲಿನ ಮೂರು ಭೂತಗಳಿಗಿಂತ ಹೆಚ್ಚಾಗಿ ವ್ಯಕ್ತವಾಗಿರುವುದು, ಪ್ರಾಣಿಗಳ ದೇಹಗಳಲ್ಲಿ ಆಯಾಯಾ ಗುಣಗಳನ್ನು ವ್ಯಕ್ತಪಡಿಸುವುದು ಇವು ಭೂಮಿಯ ಸ್ವಾಭಾವಿಕ ಲಕ್ಷಣಗಳು.

ಶ್ರೋತ್ರೇಂದ್ರಿಯಕ್ಕೆ ಆಕಾಶಗುಣವಾದ ಶಬ್ದವೇ ವಿಷಯ. ಸ್ಪರ್ಶನೇಂದ್ರಿಯಕ್ಕೆ ವಾಯುವಿನ ವಿಶೇಷಗುಣವಾದ ಸ್ಪರ್ಶ ವಿಷಯ. ಚಕ್ಷುರಿಂದ್ರಿಯಕ್ಕೆ ತೇಜಸ್ಸಿನ ವಿಶೇಷಗುಣವಾದ ರೂಪ ವಿಷಯ. ರಸನೇಂದ್ರಿಯಕ್ಕೆ ನೀರಿನ ವಿಶೇಷ ಗುಣವಾದ ರಸ ವಿಷಯ. ಘ್ರಾಣೇಂದ್ರಿಯಕ್ಕೆ ಭೂಮಿಯ ವಿಶೇಷಗುಣವಾದ ಗಂಧ ವಿಷಯ. ಹಿಂದೆ ಹಿಂದೆ ಹೇಳಿದ ಭೂತಗಳ ಗುಣಗಳು ಮುಂದೆ ಬಂದ ಭೂತಗಳಲ್ಲಿ ಸಂಕ್ರಾಂತವಾಗುವುವು. ಆದ್ದರಿಂದ ಭೂಮಿಯಲ್ಲಿ ಐದು ಗುಣಗಳೂ ಇವೆ. ಜಡಗಳಾದ ಈ ಮಹತ್, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ ಮತ್ತು ಭೂಮಿತತ್ವಗಳು ಒಂದಕ್ಕೊಂದು ಸೇರದೆ ಇದ್ದುದರಿಂದ ಬ್ರಹ್ಮಾಂಡವನ್ನೂ ಬ್ರಹ್ಮದೇವರ ಶರೀರವನ್ನೂ ಸೃಷ್ಟಿಸಲಾರದಾದುವು. ಆಗ ಶ್ರೀಹರಿಯು

ಕಾಲಕರ್ಮಗಳ ಗುಣಗಳನ್ನೇ ಕಾರಣವಾಗಿ ಮಾಡಿಕೊಂಡು ಅವುಗಳಲ್ಲಿ ಪ್ರವೇಶಮಾಡಿದನು. ಅವುಗಳ ಕಾರ್ಯೋತ್ಪತ್ತಿ ಶಕ್ತಿಯನ್ನು ಪ್ರಕಾಶಕ್ಕೆ ತಂದನು. ಆಗ ಆ ತತ್ತ್ವಗಳಿಂದ ಅಚೇತನವಾದ ಬ್ರಹ್ಮಾಂಡವು ಹುಟ್ಟಿತು. ಆ ಅಂಡದಿಂದ ಪ್ರಕಾಶಮಾನರಾದ ಬ್ರಹ್ಮದೇವರು ಹುಟ್ಟಿದರು. ಈ ಬ್ರಹ್ಮಾಂಡಕ್ಕೆ ವಿಶೇಷವೆಂದು ಹೆಸರು. ಇದಕ್ಕೆ ಹೊರಗಡೆ ಹತ್ತು ಹತ್ತು ಪಾಲು ಹೆಚ್ಚಾಗಿರುವ ಜಲತತ್ತ್ವ, ಅಗ್ನಿತತ್ತ್ವ, ವಾಯುತತ್ತ್ವ, ಆಕಾಶತತ್ತ್ವ, ಅಹಂಕಾರತತ್ತ್ವ ಮತ್ತು ಮಹತ್ತತ್ತ್ವಗಳು ಆವರಿಸಿಕೊಂಡಿವೆ. ಅದಕ್ಕೂ ಆಚೆ ತಮಸ್ಸು, ರಜಸ್ಸು ಮತ್ತು ಸತ್ತ್ವಗುಣಗಳ ಆವರಕಗಳಿವೆ. ಈ ಬ್ರಹ್ಮಾಂಡದ ಒಳಗೆ ಹದಿನಾಲ್ಕು ಲೋಕಗಳು ವಿಭಕ್ತವಾಗಿರುವುವು. ಇದು ಸರ್ವೋತ್ತಮನಾದ ಶ್ರೀಹರಿಯ ಪ್ರತಿಮೆಯೆನಿಸುವುದು. ಮೇಲೆ ಹೇಳಿದ ಮೂರು ಕಾರಣಗಳಿಂದ ಇದಕ್ಕೆ ವಿಶೇಷವೆಂಬ ಹೆಸರು ಯುಕ್ತವಾಗಿದೆ.

ನೀರಿನಿಂದ ಬ್ರಹ್ಮಾಂಡವನ್ನು ಮೇಲಕ್ಕೆ ಎತ್ತಿದ ಶ್ರೀಹರಿಯು ಅದರ ಒಳಗೆ ಪ್ರವೇಶಿಸಿದನು. ಅದರಲ್ಲಿದ್ದ ಬ್ರಹ್ಮದೇವರ ದೇಹದಲ್ಲಿಯೂ ಪ್ರವೇಶಿಸಿದನು. ಆ ದೇಹದಲ್ಲಿ ಅನೇಕ ಬಗೆಯಲ್ಲಿ ಅವಕಾಶವನ್ನು ಹೊರಹೊಮ್ಮಿಸಿದನು.

ಮೊದಲು ಮುಖ(ಬಾಯಿ)ವನ್ನು ವ್ಯಕ್ತಪಡಿಸಿದನು. ಅದರಲ್ಲಿ ವಾಗಿಂದ್ರಿಯವೂ ಅದಕ್ಕೆ ಅಭಿಮಾನಿಗಳಾದ ಅಗ್ನಿದೇವರೂ ಪ್ರಕಟರಾದರು. ಅನಂತರ ಎರಡು ಮೂಗಿನಹೊಳ್ಳೆಗಳೂ ಅವುಗಳಲ್ಲಿ ಘ್ರಾಣೇಂದ್ರಿಯವೂ ಅದಕ್ಕೆ ಅಭಿಮಾನಿಗಳಾದ ಪ್ರಾಣದೇವರೂ ವ್ಯಕ್ತರಾದರು. ಇದಾದ ಮೇಲೆ ಕಣ್ಣುಗಳು ವ್ಯಕ್ತವಾದುವು. ಇವುಗಳಲ್ಲಿ ಚಕ್ಷುರಿಂದ್ರಿಯವೂ ಅದಕ್ಕೆ ಅಭಿಮಾನಿಯಾದ ಸೂರ್ಯದೇವರೂ ವ್ಯಕ್ತರಾದರು. ಹೀಗೆಯೇ ಕಿವಿಗಳೂ, ಶ್ರೋತ್ರೇಂದ್ರಿಯವೂ ದಿಗ್ದೇವತೆಗಳೂ; ಚರ್ಮವೂ, ರೋಮ, ಗಡ್ಡ ಮೊದಲಾದುವೂ ಓಷಧಿಗಳೂ ಓಷಧ್ಯಭಿಮಾನಿ ದೇವತೆಗಳೂ; ಶಿಶ್ನವೂ ಉಪಸ್ಥೇಂದ್ರಿಯವೂ, ರೇತಸ್ಸೂ ತದಭಿಮಾನಿಜಲಾಭಿಮಾನಿ ದೇವತೆಗಳೂ; ಗುದವೂ, ಪಾಯು ಇಂದ್ರಿಯವೂ, ಅಪಾನವಾಯುವೂ ಮೃತ್ಯುವೂ ಕೈಗಳೂ, ಬಲಕಾರ್ಯಮಾಡುವ ಹಸ್ತೇಂದ್ರಿಯವೂ ಅದರ ಅಭಿಮಾನಿಗಳಾದ ಇಂದ್ರ ದೇವರೂ; ಕಾಲುಗಳೂ, ನಡಿಗೆಗೆ ಕಾರಣವಾದ ಪಾದೇಂದ್ರಿಯವೂ, ಅದಕ್ಕೆ ಅಭಿಮಾನಿಯಾದ ಯಜ್ಞನಾಮಕ ದೇವತೆಯೂ ಅವನ ಅಂತರ್ಯಾಮಿಯಾಗಿ ವಿಶೇಷ ಸನ್ನಿಧಾನದಿಂದಿರುವ ವಿಷ್ಣುವೂ; ನಾಡಿಗಳೂ, ಅವುಗಳಿಂದ ರಕ್ತವೂ, ತದಭಿಮಾನಿ ನದ್ಯಭಿಮಾನಿದೇವತೆಗಳೂ; ಹೊಟ್ಟೆಯೂ, ಹಸಿವೆನೀರಡಿಕೆಗಳೂ, ತದಭಿಮಾನಿ ಸಮುದ್ರಾಭಿಮಾನಿದೇವತೆಯೂ; ಹೃದಯವೂ, ಮನೋಂದ್ರಿಯವೂ ತದಭಿಮಾನಿ ಚಂದ್ರನೂ; ಆ ಹೃದಯದಿಂದ

ಬುದ್ಧಿಯೂ, ತದಭಿಮಾನಿ ಬೃಹಸ್ಪತಿಯೂ; ಅದೇ ಹೃದಯದಿಂದ ಅಹಂಕಾರವೂ ತದಭಿಮಾನಿಗಳಾದ ರುದ್ರದೇವರೂ; ಅದೇ ಹೃದಯದಿಂದಲೇ ಚಿತ್ತವೂ, ಅದರ ಅಭಿಮಾನಿಯಾದ ಬ್ರಹ್ಮದೇವರೂ ತದಂತರ್ಯಾಮಿಯಾಗಿ ವಿಷ್ಣುವೂ; (ಬುದ್ಧಿ ಅಹಂಕಾರ ಮತ್ತು ಚಿತ್ತಗಳು ಮನಸ್ಸಿನ ಪ್ರಭೇದಗಳು) ವ್ಯಕ್ತರಾದರು.

ಹೀಗೆ ಶ್ರೀಹರಿಯ ಇಚ್ಛೆಯಿಂದ ವ್ಯಕ್ತರಾದ ಇಂದ್ರಿಯಾಭಿಮಾನಿದೇವತೆಗಳು ಬ್ರಹ್ಮದೇವರ ದೇಹವನ್ನು ಎಬ್ಬಿಸಲು ಸಮರ್ಥರಾಗಲಿಲ್ಲ. ಇವರು ಒಬ್ಬೊಬ್ಬರಾಗಿ ಆಯಾ ಇಂದ್ರಿಯಗೋಲಕಗಳನ್ನು ಮತ್ತೆ ಪ್ರವೇಶಿಸಿದರು. ವಹ್ನಿದೇವನು ವಾಗೀಂದ್ರಿಯದೊಂದಿಗೆ ಮೂಗನ್ನು ಸೇರಿದರೂ ಸೂರ್ಯನು ಚಕ್ಷುರಿಂದ್ರಿಯ-ದೊಂದಿಗೆ ಕಣ್ಣುಗಳನ್ನು ಹೊಂದಿದರೂ, ದಿಗ್ದೇವತೆಗಳು ಶ್ರೋತ್ರೇಂದ್ರಿಯದೊಂದಿಗೆ ಕಿವಿಗಳನ್ನೂ ಹೊಕ್ಕರೂ, ಓಷಧ್ಯಭಿಮಾನಿಗಳು ರೋಮಗಳೊಂದಿಗೆ ಚರ್ಮೇಂದ್ರಿಯವನ್ನು ಪ್ರವೇಶಿಸಿದರೂ, ಜಲಾಭಿಮಾನಿಯು ರೇತಸ್ಸಿನೊಂದಿಗೆ ಉಪಸ್ಥೇಂದ್ರಿಯ ಗೋಲಕವನ್ನು ಸೇರಿದರೂ, ಮೃತ್ಯುದೇವತೆಯು ಅಪಾನ ವಾಯುವಿನೊಂದಿಗೆ ಗುದವನ್ನು ಹೊದಿದರೂ, ಇಂದ್ರದೇವರು ಬಲದೊಂದಿಗೆ ಹಸ್ತಗಳನ್ನು ಹೊಕ್ಕರೂ, ವಿಷ್ಣುವಿನಿಂದ ವಿಶೇಷಸನ್ನಿಧಾನಯುಕ್ತನಾದ ಯಜ್ಞನಾಮಕ ದೇವತೆಯು ಗಮನಕ್ರಿಯೆಯೊಂದಿಗೆ ಕಾಲನ್ನು ಹೊಂದಿದರೂ ನದ್ಯಭಿಮಾನಿಗಳು ರಕ್ತದೊಂದಿಗೆ ನಾಡಿಗಳನ್ನು ವ್ಯಾಪಿಸಿದರೂ, ಸಮುದ್ರಾಭಿಮಾನಿಯು ಹಸಿವೆ ಬಾಯಾರಿಕೆಗಳೊಂದಿಗೆ ಉದರವನ್ನು ಸೇರಿದರೂ, ಚಂದ್ರನು ಮನಸ್ಸಿನೊಂದಿಗೆ, ಬೃಹಸ್ಪತಿಯು ಬುದ್ಧಿಯೊಂದಿಗೆ, ರುದ್ರನು ಅಹಂಕಾರದೊಂದಿಗೆ ಹೃದಯವನ್ನು ಪ್ರವೇಶಿಸಿದರೂ ಆ ಬ್ರಹ್ಮದೇವರ ದೇಹದಲ್ಲಿ ಚೈತನ್ಯವು ಮೂಡಲಿಲ್ಲ. ಬ್ರಹ್ಮಾಂತರ್ಯಾಮಿಯಾದ ಕ್ಷೇತ್ರಜ್ಞನೆನಿಸುವ ಶ್ರೀಹರಿಯು ಬ್ರಹ್ಮವಾಯುಗಳ ಜೊತೆಗೆ ಆ ದೇಹವನ್ನು ಪ್ರವೇಶಿಸಿದ ಕೂಡಲೆ ಬ್ರಹ್ಮದೇವರ ದೇಹವು ಚೈತನ್ಯಹೊಂದಿ ನೀರಿನಿಂದ ಮೇಲಕ್ಕೆ ಎದ್ದಿತು. ಶ್ರೀಹರಿಯ ಪ್ರಭಾವದಿಂದಲೇ ಅದಕ್ಕೆ ಮತ್ತೆ ಚೈತನ್ಯ ಬಂದಿತು. ಕೇವಲ ಪ್ರಾಣದೇವರಿಂದಲ್ಲ. ಒಂದಂಶದಿಂದ ದೇಹದಲ್ಲಿ ಸುಪ್ತರಂತಿದ್ದ ಬ್ರಹ್ಮದೇವರು ಮತ್ತೆ ಯಾರಿಂದಲೂ ಎಚ್ಚರಗೊಳ್ಳಲಿಲ್ಲ. ಈ ಸತ್ಯಾಂಶವನ್ನರಿತು ಸರ್ವೋತ್ತಮನಾದ ಶ್ರೀಹರಿಯನ್ನೇ ಶರೀರಾಂತರ್ಯಾಮಿ-ಯಾದ ಕ್ಷೇತ್ರಜ್ಞನನ್ನೇ ವೈರಾಗ್ಯ, ಭಕ್ತಿ ಇವುಗಳಿಂದ ಕೂಡಿದ ನಿಶ್ಚಯಾತ್ಮಕಜ್ಞಾನದಿಂದ ವಿವೇಕಯುಕ್ತನಾಗಿ ಉಪಾಸಕನು ಹೃದಯದಲ್ಲಿ ಧ್ಯಾನಮಾಡಬೇಕು.



# ಅಥ ಅಷ್ಟಾವಿಂಶೋಽಧ್ಯಾಯಃ

ಶ್ರೀಹರಿಯೂ ಜೀವನೂ ಒಂದೇ ಶರೀರದಲ್ಲಿದ್ದರೂ ಪರಮಾತ್ಮನಿಗೆ ಶರೀರನಿಮಿತ್ತ ದುಃಖಭೋಗವಿಲ್ಲ, ಜೀವನಿಗೆ ಮಾತ್ರ ಎಂದು ಹಿಂದೆ ಹೇಳಿದ್ದನ್ನೇ ಅದರಲ್ಲಿ ತಾತ್ಪರ್ಯಾತಿಶಯವಿದೆ ಎಂದು ತಿಳಿಸಲು ಮತ್ತೇ ಹೇಳುವರು ಈ ಅಧ್ಯಾಯದಲ್ಲಿ

**ಪ್ರಕೃತಿಸ್ಥೋಽಪಿ ಪುರುಷೋ ನಾಜ್ಯತೇ ಪ್ರಾಕೃತೈರ್ಗುಣೈಃ ।**
**ಅವಿಕಾರಾದಕರ್ತೃತ್ವಾನ್ನಿರ್ಗುಣತ್ವಾಜ್ಜಲಾರ್ಕವತ್ ॥೧॥**

ಪ್ರಕೃತಿಸ್ಥಃ ಅಪಿ=ಪ್ರಾಕೃತ ಶರೀರದಲ್ಲಿದ್ದರೂ (ಶರೀರದಲ್ಲಿದ್ದದ್ದರಿಂದ ಪುರುಷ ನೆನಿಸಿದ)ಪುರುಷಃ=ಭಗವಂತನು ಅಕರ್ತೃತ್ವಾತ್=ಪರಾಧೀನಕರ್ತೃವಲ್ಲದ್ದರಿಂದಲೂ ನಿರ್ಗುಣತ್ವಾತ್=ಸತ್ವಾದಿಗುಣ ರಹಿತನಾದ್ದರಿಂದಲೂ ಅವಿಕಾರಾತ್=ಆರು ಭಾವ-ವಿಕಾರ ರಹಿತನಾದ್ದರಿಂದಲೂ ಜಲಾರ್ಕವತ್=ಪ್ರತಿಬಿಂಬ ಜನನ ದ್ವಾರಾ ನೀರಿನಲ್ಲಿರುವ ಬಿಂಬನಾದ ಸೂರ್ಯನಿಗೆ ಹೇಗೆ ನೀರಿನ ಚಲನ ಮುಂತಾದ ದೋಷಗಳಿಂದ ಸಂಬಧವಿಲ್ಲವೋ ಅದರಂತೆ ಪ್ರಾಕೃತೈಃ=ಶರೀರನಿಮಿತ್ತಕವಾದ ಗುಣೈಃ=ದುಃಖಾದಿ-ಗಳಿಂದ ನ ಅಜ್ಯತೇ=ಸಂಬಂದ್ಧನಾಗುವುದಿಲ್ಲ.(ಜಲಾರ್ಕವತ್=ನೀರಿನಲ್ಲಿ ಪ್ರತಿಫಲಿ-ಸಿದ ಸೂರ್ಯನ ಪ್ರತಿಬಿಂಬದಂತೇ ಜೀವನೇ ಲೇಪ ಉಳ್ಳವನಾಗುವನು) ॥೧॥

ಪರಮಾತ್ಮನಿಗೆ ಸುಖದುಃಖ ಇಲ್ಲವಾದರೆ ಜಾತಃ ಮೃತಃ ದರಿದ್ರಃ ಮುಂತಾಗಿ ಕರೆಯಲ್ಪಡುವವನಾರು ? ಎಂದರೆ ಹೇಳುವರು –

ಜೀವನಾದರೂ ಸ್ವಾಭಾವಿಕವಾಗಿ ಚಿದ್ರೂಪನಾದ್ದರಿಂದ ಈ ಸಂಸಾರ ಅವನಿಗೆ ಬರಲು ಕಾರಣವೇನು ಎಂದೂ ಹೇಳವರು –

**ಸ ಏಷ ಯರ್ಹಿ ಪ್ರಕೃತೇರ್ಗುಣೇಷ್ವಭಿವಿಷಜ್ಜತೇ ।**
**ಅಹಂಕಾರವಿಮೂಢಾತ್ಮಾ ಕರ್ತಾಸ್ಮೀತ್ಯಭಿಮನ್ಯತೇ ॥೨॥**

ಸಃ=ಹಿಂದಿನ ಅಧ್ಯಾಯದಲ್ಲಿ (ಚಿಂತನಕರ್ತೃವಾಗಿ) ಪ್ರಕೃತನಾದ, ಏಷಃ= ಪ್ರತ್ಯಕ್ಷಸಿದ್ಧನಾದ ಜೀವನು, ಯರ್ಹಿ=ಯಾವಾಗ, ಪ್ರಕೃತೇಃ ಗುಣೇಷು=ಶರೀರ-ಕಾರ್ಯವಾದ ಸುಖದುಃಖಾದಿಗಳಲ್ಲಿ, ಅಭಿವಿಷಜ್ಜತೇ=ಅನುಭವದಿಂದ ಸಂಬದ್ಧ-

ನಾಗುವನೋ, ತದಾ=ಆಗ, ಅಹಂಕಾರವಿಮೂಢಾತ್ಮಾ=ಮನಃಪ್ರಭೇದವಾದ ಅಹಂಕಾರವೆಂಬ ಇಂದ್ರಿಯದಿಂದ ಪರಮಾತ್ಮನ ಸ್ವಾತಂತ್ರ್ಯವನ್ನರಿಯದೇ, ನಾನೇ ಸುಖದುಃಖಾದಿಗಳಿಗೆ, ಕರ್ತಾ ಅಸ್ಮಿ=ಕರ್ತೃವಾಗಿದ್ದೇನೆ ಎಂದು ಅಭಿಮನ್ಯತೇ= ಅಭಿಮಾನ ಉಳ್ಳವನಾಗುವನು. ಅಥವಾ ಸತ್ವಾದಿಗುಣರಚಿತ ಶರೀರ ಉಳ್ಳವನಾಗಿ ಜನಿಸಿದಾಗ ಗುಣತ್ರಯಜನ್ಯ ಅಹಂಕಾರದಿಂದ ಪರಮಾತ್ಮ ಸ್ವರೂಪವನ್ನರಿಯದೇ ತನಗೆ ಇಲ್ಲದಿರುವ ಸ್ವತಂತ್ರಕರ್ತೃತ್ವವನ್ನು ತಿಳಿಯುವನು. ॥೨॥

**ತೇನ ಸಂಸಾರಪದವೀಮವಶೋಽಭ್ಯೇತ್ಯನಿರ್ವೃತಃ ।**
**ಪ್ರಾಸಂಗಿಕೈಃ ಕರ್ಮದೋಷೈಃ ಸದಸನ್ಮಿಶ್ರಯೋನಿಷು ॥೩॥**

ತೇನ=ಇಲ್ಲದಿರುವ ಕರ್ತೃತ್ವಾಭಿಮಾನದಿಂದ,ಅವಶಃ=ಅಕಾರವಾಚ್ಯ ಶ್ರೀಹರಿಯ ಅಧೀನನಾದ ಜೀವನು, ಅನಿರ್ವೃತಃ=ದುಃಖಮಿಶ್ರವಲ್ಲದ ಸುಖರಹಿತನಾಗಿ, ಕ್ಷಣಭಂಗುರವಾದ ವಿಷಯಗಳಲ್ಲಿ (ಅಲಂಬುದ್ಧಿಗೋಚರ) ಸಾಕೆನಿಸುವ ಆನಂದ ರಹಿತನಾಗಿ, ಪ್ರಾಸಂಗಿಕೈಃ=ವಿಷಾಯಾಸಕ್ತಿಯಿಂದುಂಟಾದ, ಕರ್ಮದೋಷೈಃ= ಪುಣ್ಯಪಾಪಗಳಿಂದ, ಸದಸನ್ಮಿಶ್ರಯೋನಿಷು=ದೇವಾಸುರಮನುಷ್ಯಯೋನಿಗಳಲ್ಲಿ ಜನಿಸಿ ಸಂಸಾರಪದವೀಂ ಅಭ್ಯೇತಿ=ಸುಖದುಃಖರೂಪಸಂಸಾರ ಹೊಂದುವನು. ॥೩॥

ಪ್ರಯೋಜನ ರಹಿತವಾದ ಅಸ್ವಾಭಾವಿಕ ಸಂಸಾರ ತಾನಾಗಿಯೇ ನಿವೃತ್ತವಾಗುವುದೇ ? ಅಥವಾ ನಿವೃತ್ತವಾಗದಿರಲು ಕಾರಣವೇನು ? ಸ್ವಯಂ ನಿವೃತ್ತವಾಗುವುದಿಲ್ಲ, ಅದಕ್ಕೆ ಕಾರಣ ವಿಷಯಾಭಿಧ್ಯಾನವೆಂದು ಹೇಳುವರು-

**ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।**
**ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ॥೪॥**

ಅರ್ಥೇ=ಪ್ರಯೋಜನವು ಅವಿದ್ಯಮಾನೇಽಪಿ=ಇಲ್ಲದಿದ್ದರೂ ವಿಷಯಾನ್= ವಿಷಯಗಳನ್ನು ಧ್ಯಾಯತಃ=ಆಲೋಚಿಸುವ ಅಸ್ಯ=ಅಧಿಕಾರಿಗೆ ಯಥಾ=ಹೇಗೆ ಸ್ವಪ್ನೇ=ಕನಸಿನಲ್ಲಿ ಅನರ್ಥಾಗಮಃ=ಪ್ರಯೋಜನವಿಲ್ಲದ ಸಂಸಾರಪ್ರಾಪ್ತಿ ಆಗುವುದೋ ಹಾಗೆ ಸಂಸೃತಿಃ=ಸಂಸಾರವು ನ ನಿವರ್ತತೇ=ಹೋಗಲಾರದು. ಜಾಗ್ರದವಸ್ಥೆಯಲ್ಲಿ ನೋಡಿದ ಸಂಸ್ಕಾರದಿಂದ ಕನಸಿನಲ್ಲಿ ಪದಾರ್ಥಗಳನ್ನು ಕಾಣುವಂತೆ ವಿಷಯಧ್ಯಾನದ ಸಂಸ್ಕಾರದಿಂದ ಬೀಜಾಂಕುರಗಳಂತೆ ಅನಾದಿಕಾಲ- ದಿಂದ ಬಂದ ಸಂಸಾರ ಶ್ರೀಹರಿಯ ಅನುಗ್ರಹವಿಲ್ಲದೆ ಹೋಗಲಾರದು ಎಂದು ಭಾವ. ॥೪॥

ಸಂಸಾರನಿವೃತ್ತಿಗೆ ಉಪಾಯ ಹೇಳುವರು -

**ಪ್ರಬುದ್ಧ್ಯ ಸ್ವಪ್ನಸುಪ್ತಿಭ್ಯಾಂ ಸಂಸ್ಮರನ್ನಾತ್ಮವೈಶಸಮ್ ।**
**ವೈತಥ್ಯಂ ವ್ಯಭಿಚಾರಂ ಚ ನಾಸೌ ಧ್ಯಾಯೇದ್ಯತೋ ಭಯಮ್ ॥೫॥**

ಸ್ವಪ್ನಸುಪ್ತಿಭ್ಯಾಂ=ವಿಪರೀತಜ್ಞಾನ ಅಜ್ಞಾನಗಳಿಂದ ಆತ್ಮವೈಶಸಂ ದುಷ್ಟವಿಷಯ ಸೇವನದ್ವಾರಾ ಆಗುವ ತನ್ನ ಹಿಂಸೆಯನ್ನು ಪ್ರಬುಧ್ಯ=ಗುರೂಪದೇಶದಿಂದ ಚೆನ್ನಾಗಿ ತಿಳಿದು ವೈತಥ್ಯಂ=ವಿಷಯ ಅನಿತ್ಯ, ಪುರುಷಾರ್ಥಸಾಧನವಲ್ಲವೆಂಬುದನ್ನು ವ್ಯಭಿಚಾರಂ=ತನ್ನನ್ನು ಬಿಟ್ಟು ಅಗಲುವುದನ್ನು ಸಂಸ್ಮರನ್=ಚೆನ್ನಾಗಿ ಜ್ಞಾಪಕದಲ್ಲಿಟ್ಟು-ಕೊಂಡು ಯತಃ=ಯಾವ ವಿಷಯಗಳಿಂದ ಭಯಂ=ಮತ್ತೆ ಸಂಸಾರಭಯವಿದೆಯೋ ತತ್=ಆ ವಿಷಯಸಮೂಹವನ್ನು ಅಸೌ=ಅಧಿಕಾರಿಯೂ ನ ಧ್ಯಾಯೇತ್=ಚಿಂತಿಸಬಾರದು.

ಇಲ್ಲಿ ಕನಸುನಿದ್ರೆಗಳಿಂದ ಎಚ್ಚೆತ್ತು ತನ್ನ ನಾಶವನ್ನು ತಿಳಿದು ಎಂದು ಹೇಳಿದರೆ ಜಾಗ್ರದವಸ್ಥೆ ತನ್ನ ನಾಶಕಾರಣವೆಂದು ಹೇಳಿದಂತೆ ಕಾಣುವುದು. ಹಾಗಿಲ್ಲದ ಕಾರಣ ತಾತ್ಪರ್ಯ ಹೇಳುವರು-

**ಅಜ್ಞಾನಂ ಸುಪ್ತಿಶಬ್ದೋಕ್ತಂ ಸ್ವಪ್ನಶ್ಚೈವ ವಿಪರ್ಯಯಃ । ಇತಿ ಭಾರತೇ ।**

ಪ್ರಕೃತದಲ್ಲಿ ಪ್ರಸಿದ್ಧ ಸ್ವಪ್ನಸುಪ್ತಿಗಳಲ್ಲ. ಸುಪ್ತಿ ಎಂದರೆ ಅಜ್ಞಾನ. ಸ್ವಪ್ನವೆಂದರೆ ವಿಪರೀತ ಜ್ಞಾನವೆಂದು ಭಾರತದಲ್ಲಿ ಹೇಳಿದೆ ಎಂದು ಭಾವ. ॥೫॥

ಗುರೂಪದೇಶ ಪಡೆದವರಿಗೂ ವಿಷಯಗಳ ಧ್ಯಾನಬರದಿರಲು ಶ್ರೀಹರಿಯಲ್ಲಿ ಮನಸಿಡುವುದೇ ಕಾರಣವೆಂದು ಹೇಳುವರು -

**ಅತ ಏವ ಶನೈಶ್ಚಿತ್ತಂ ಪ್ರಸಕ್ತಮಸತಾಂ ಪಥಿ ।**
**ಭಕ್ತಿಯೋಗೇನ ತೀವ್ರೇಣ ವಿರಕ್ತ್ಯಾಽಽತ್ಮವಶಂ ನಯೇತ್ ॥೬॥**

ಅತ ಏವ=ವಿಷಯಾಸಕ್ತಿಯು ಸಂಸಾರ ಕಾರಣವಾದುದರಿಂದ ಅಸತಾಂ ಪಥಿ=ದುಷ್ಟವಿಷಯಗಳ ಮಾರ್ಗದಲ್ಲಿ ಪ್ರಸಕ್ತಂ=ಆಸಕ್ತವಾದ ಚಿತ್ತಂ=ಮನಸ್ಸನ್ನು ಶನೈಃ=ನಿಧಾನವಾಗಿ ತೀವ್ರೇಣ ಭಕ್ತಿಯೋಗೇನ=ದೃಢವಾದ ಭಕ್ತಿ ರೂಪ ಉಪಾಯದಿಂದ ವಿರಕ್ತ್ಯಾ ವೈರಾಗ್ಯದಿಂದಲೂ ಆತ್ಮವಶಂ ನಯೇತ್=ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಬೇಕು. ಶ್ರೀಹರಿಯಲ್ಲಿ ನೆಲಸುವಂತೆ ಮಾಡಬೇಕೆಂದರ್ಥ. ॥೬॥

ಮನವಶವಾಗಲು ಕಾರಣ ಹೇಳುತ್ತ ಅದರಿಂದಾಗುವ ಅಪರೋಕ್ಷಜ್ಞಾನವೇ ಮೋಕ್ಷಸಾಧನವೆಂದು ಹೇಳುವರು -

**ಯಮಾದಿಭಿರ್ಯೋಗಪಥೈಃ ಅಭ್ಯಸಂಛ್ರದ್ಧಯಾನ್ವಿತಃ ।**
**ಮಯಿ ಭಾವೇನ ಸತ್ಯೇನ ಮತ್ಕಥಾಶ್ರವಣೇನ ಚ ॥೭॥**

ಯಮಾದಿಭಿಃ=ಯಮ, ನಿಯಮ, ಪ್ರತ್ಯಾಹಾರ, ಪ್ರಾಣಯಾಮ ಮುಂತಾದ ಯೋಗಪಥೈಃ=ಯೋಗಮಾರ್ಗದಿಂದ ಅಭ್ಯಸನ್=ಮತ್ತೆ ಮತ್ತೆ ಚಿತ್ತವನ್ನು ಏಕಾಗ್ರಗೊಳಿಸುತ್ತ ಶ್ರದ್ಧಯಾನ್ವಿತಃ=ಆಸ್ತಿಕ್ಯಬುದ್ಧಿಯಿಂದ ಕೂಡಿದವನಾಗಿ ಮಯಿ= ನನ್ನಲ್ಲಿ ಭಾವೇನ=ಭಕ್ತಿಯಿಂದ ಸತ್ಯೇನ=ಸಜ್ಜನರಿಗೆ ಹಿತವಾಗುವ ವಚನಗಳಿಂದ ಮತ್ಕಥಾಶ್ರವಣೇನ ಚ=ನನ್ನ ಚರಿತ್ರೆ ಕೇಳುವುದರಿಂದಲೂ ॥೭॥

**ಸರ್ವಭೂತಸಮತ್ವೇನ ನಿರ್ವೈರೇಣಾಪ್ರಸಂಗತಃ ।**
**ಬ್ರಹ್ಮಚರ್ಯೇಣ ಮೌನೇನ ಸ್ವಧರ್ಮೇಣ ಮಹೀಯಸಾ ॥೮॥**

ಸರ್ವಭೂತಸಮತ್ವೇನ=ಎಲ್ಲರಲ್ಲಿರುವ ಶ್ರೀಹರಿಯು ಗುಣಪೂರ್ಣ-ನಿರ್ದೋಷನಾಗಿರುವನು ಎಂಬ ಸಾಮ್ಯದೃಷ್ಟಿಯಿಂದ ಮತ್ತು ಆವರವರ ಯೋಗ್ಯತಾನುಗುಣವಾಗಿ ತಿಳಿಯುವುದರಿಂದಲೂ ನಿರ್ವೈರೇಣ=ವೈಷ್ಣವರಲ್ಲಿ ದ್ವೇಷ ಮಾಡದಿರುವುದರಿಂದಲೂ ಅಪ್ರಸಂಗತಃ=ದುಷ್ಟ ಸಂಗ ಬಿಡುವುದರಿಂದ ಬ್ರಹ್ಮಚರ್ಯೇಣ=ಬ್ರಹ್ಮಚರ್ಯದಿಂದ ಮಹೀಯಸಾ=ಶ್ರೀಹರಿಯಲ್ಲಿ ಸಮರ್ಪಿ-ಸುವುದರಿಂದ ಅತ್ಯಂತಮಹತ್ತರವಾದ ಸ್ವಧರ್ಮೇಣ=ತನಗೆ ವಿಹಿತ ಧರ್ಮಾನು-ಷ್ಠಾನದಿಂದಲೂ ॥೮॥

**ಯದೃಚ್ಛಯೋಪಲಬ್ಧೇನ ಸಂತುಷ್ಟೋ ಮಿತಭುಜ್ ಮುನಿಃ ।**
**ವಿವಿಕ್ತಶರಣಃ ಶಾಂತೋ ಮೈತ್ರಃ ಕರುಣ ಆತ್ಮವಾನ್ ॥೯॥**

ಯದೃಚ್ಛಯಾ=ತನ್ನ ಪ್ರಯತ್ನವಿಲ್ಲದೇ ಶ್ರೀಹರಿಯ ಇಚ್ಛೆಯಿಂದ ಉಪಲಬ್ಧೇನ= ದೊರೆತುದರಿಂದ ಸಂತುಷ್ಟಃ=ತೃಪ್ತನು ಮಿತಭುಕ್=ಮಿತವಾದ ಆಹಾರ ಸೇವಿಸು-ವವನು ಮುನಿಃ=ಮೌನಿಯು ವಿವಿಕ್ತಶರಣಃ=ಏಕಾಂತವಾಸಿಯು ಶಾಂತಃ=ಭಗವನ್ನಿಷ್ಠ ಬುದ್ಧಿಯುಳ್ಳವನು ಮೈತ್ರಃ=ಸಮರಾದ ಸಜ್ಜನರನ್ನು ಆಪತ್ತನ್ನು ತಿಳಿದು ರಕ್ಷಿಸುವವನು ಕರುಣಃ=ತನಗಿಂತ ಕಡಿಮೆ ಸಜ್ಜನರಲ್ಲಿ ದಯೆ ಮಾಡುವವನು ಆತ್ಮವಾನ್=ತನಗಿಂತ ಉತ್ತಮರು ತನಗೆ ಸ್ವಾಮಿ ಎಂದು ತಿಳಿದವನು. ॥೯॥

**ಸಾನುಬಂಧೇ ಚ ದೇಹೇಽಸ್ಮಿನ್ನಕುರ್ವನ್ನಸದಾಗ್ರಹಂ ।**
**ಜ್ಞಾನೇನ ದೃಷ್ಟತತ್ವೇನ ಪ್ರಕೃತೇಃ ಪುರುಷಸ್ಯ ಚ ॥೧೦॥**

ಸಂಸಾರನಿವೃತ್ತಿಗೆ ಉಪಾಯ ಹೇಳುವರು -

**ಪ್ರಬುದ್ಧ್ಯ ಸ್ವಪ್ನಸುಪ್ತಿಭ್ಯಾಂ ಸಂಸ್ಮರನ್ನಾತ್ಮವೈಶಸಮ್ ।**
**ವೈತಥ್ಯಂ ವ್ಯಭಿಚಾರಂ ಚ ನಾಸೌ ಧ್ಯಾಯೇದ್ಯತೋ ಭಯಮ್ ॥೫॥**

ಸ್ವಪ್ನಸುಪ್ತಿಭ್ಯಾಂ=ವಿಪರೀತಜ್ಞಾನ ಅಜ್ಞಾನಗಳಿಂದ ಆತ್ಮವೈಶಸಂ ದುಷ್ಟವಿಷಯ ಸೇವನದ್ವಾರಾ ಆಗುವ ತನ್ನ ಹಿಂಸೆಯನ್ನು ಪ್ರಬುಧ್ಯ=ಗುರೂಪದೇಶದಿಂದ ಚೆನ್ನಾಗಿ ತಿಳಿದು ವೈತಥ್ಯಂ=ವಿಷಯ ಅನಿತ್ಯ, ಪುರುಷಾರ್ಥಸಾಧನವಲ್ಲವೆಂಬುದನ್ನು ವ್ಯಭಿಚಾರಂ=ತನ್ನನ್ನು ಬಿಟ್ಟು ಅಗಲುವುದನ್ನು ಸಂಸ್ಮರನ್=ಚೆನ್ನಾಗಿ ಜ್ಞಾಪಕದಲ್ಲಿಟ್ಟು-ಕೊಂಡು ಯತಃ=ಯಾವ ವಿಷಯಗಳಿಂದ ಭಯಂ=ಮತ್ತೆ ಸಂಸಾರಭಯವಿದೆಯೋ ತತ್=ಆ ವಿಷಯಸಮೂಹವನ್ನು ಅಸೌ=ಅಧಿಕಾರಿಯೂ ನ ಧ್ಯಾಯೇತ್= ಚಿಂತಿಸಬಾರದು.

ಇಲ್ಲಿ ಕನಸುನಿದ್ರೆಗಳಿಂದ ಎಚ್ಚೆತ್ತು ತನ್ನ ನಾಶವನ್ನು ತಿಳಿದು ಎಂದು ಹೇಳಿದರೆ ಜಾಗ್ರದವಸ್ಥೆ ತನ್ನ ನಾಶಕಾರಣವೆಂದು ಹೇಳಿದಂತೆ ಕಾಣುವುದು. ಹಾಗಿಲ್ಲದ ಕಾರಣ ತಾತ್ಪರ್ಯ ಹೇಳುವರು-

**ಅಜ್ಞಾನಂ ಸುಪ್ತಿಶಬ್ದೋಕ್ತಂ ಸ್ವಪ್ನಶ್ಚೈವ ವಿಪರ್ಯಯಃ । ಇತಿ ಭಾರತೇ ।**

ಪ್ರಕೃತದಲ್ಲಿ ಪ್ರಸಿದ್ಧ ಸ್ವಪ್ನಸುಪ್ತಿಗಳಲ್ಲ. ಸುಪ್ತಿ ಎಂದರೆ ಅಜ್ಞಾನ. ಸ್ವಪ್ನವೆಂದರೆ ವಿಪರೀತ ಜ್ಞಾನವೆಂದು ಭಾರತದಲ್ಲಿ ಹೇಳಿದೆ ಎಂದು ಭಾವ. ॥೫॥

ಗುರೂಪದೇಶ ಪಡೆದವರಿಗೂ ವಿಷಯಗಳ ಧ್ಯಾನಬರದಿರಲು ಶ್ರೀಹರಿಯಲ್ಲಿ ಮನಸಿಡುವುದೇ ಕಾರಣವೆಂದು ಹೇಳುವರು -

**ಅತ ಏವ ಶನೈಶ್ಚಿತ್ತಂ ಪ್ರಸಕ್ತಮಸತಾಂ ಪಥಿ ।**
**ಭಕ್ತಿಯೋಗೇನ ತೀವ್ರೇಣ ವಿರಕ್ತ್ಯಾಽಽತ್ಮವಶಂ ನಯೇತ್ ॥೬॥**

ಅತ ಏವ=ವಿಷಯಾಸಕ್ತಿಯು ಸಂಸಾರ ಕಾರಣವಾದುದರಿಂದ ಅಸತಾಂ ಪಥಿ= ದುಷ್ಟವಿಷಯಗಳ ಮಾರ್ಗದಲ್ಲಿ ಪ್ರಸಕ್ತಂ=ಆಸಕ್ತವಾದ ಚಿತ್ತಂ=ಮನಸ್ಸನ್ನು ಶನೈಃ= ನಿಧಾನವಾಗಿ ತೀವ್ರೇಣ ಭಕ್ತಿಯೋಗೇನ=ದೃಢವಾದ ಭಕ್ತಿ ರೂಪ ಉಪಾಯದಿಂದ ವಿರಕ್ತ್ಯಾ ವೈರಾಗ್ಯದಿಂದಲೂ ಆತ್ಮವಶಂ ನಯೇತ್=ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಬೇಕು. ಶ್ರೀಹರಿಯಲ್ಲಿ ನೆಲಸುವಂತೆ ಮಾಡಬೇಕೆಂದರ್ಥ. ॥೬॥

ಮನವಶವಾಗಲು ಕಾರಣ ಹೇಳುತ್ತ ಅದರಿಂದಾಗುವ ಅಪರೋಕ್ಷಜ್ಞಾನವೇ ಮೋಕ್ಷಸಾಧನವೆಂದು ಹೇಳುವರು -

**ಯಮಾದಿಭಿರ್ಯೋಗಪಥೈಃ ಅಭ್ಯಸಂಚ್ಛ್ರದ್ಧಯಾನ್ವಿತಃ ।**
**ಮಯಿ ಭಾವೇನ ಸತ್ಯೇನ ಮತ್ಕಥಾಶ್ರವಣೇನ ಚ ॥೭॥**

ಯಮಾದಿಭಿಃ=ಯಮ, ನಿಯಮ, ಪ್ರತ್ಯಾಹಾರ, ಪ್ರಾಣಯಾಮ ಮುಂತಾದ ಯೋಗಪಥೈಃ=ಯೋಗಮಾರ್ಗದಿಂದ ಅಭ್ಯಸನ್=ಮತ್ತೆ ಮತ್ತೆ ಚಿತ್ತವನ್ನು ಏಕಾಗ್ರಗೊಳಿಸುತ್ತ ಶ್ರದ್ಧಯಾನ್ವಿತಃ=ಆಸ್ತಿಕ್ಯಬುದ್ಧಿಯಿಂದ ಕೂಡಿದವನಾಗಿ ಮಯಿ= ನನ್ನಲ್ಲಿ ಭಾವೇನ=ಭಕ್ತಿಯಿಂದ ಸತ್ಯೇನ=ಸಜ್ಜನರಿಗೆ ಹಿತವಾಗುವ ವಚನಗಳಿಂದ ಮತ್ಕಥಾಶ್ರವಣೇನ ಚ=ನನ್ನ ಚರಿತ್ರೆ ಕೇಳುವುದರಿಂದಲೂ ॥೭॥

**ಸರ್ವಭೂತಸಮತ್ವೇನ ನಿರ್ವೈರೇಣಾಪ್ರಸಂಗತಃ ।**
**ಬ್ರಹ್ಮಚರ್ಯೇಣ ಮೌನೇನ ಸ್ವಧರ್ಮೇಣ ಮಹೀಯಸಾ ॥೮॥**

ಸರ್ವಭೂತಸಮತ್ವೇನ=ಎಲ್ಲರಲ್ಲಿರುವ ಶ್ರೀಹರಿಯು ಗುಣಪೂರ್ಣ- ನಿರ್ದೋಷನಾಗಿರುವನು ಎಂಬ ಸಾಮ್ಯದೃಷ್ಟಿಯಿಂದ ಮತ್ತು ಅವರವರ ಯೋಗ್ಯತಾನುಗುಣವಾಗಿ ತಿಳಿಯುವುದರಿಂದಲೂ ನಿರ್ವೈರೇಣ=ವೈಷ್ಣವರಲ್ಲಿ ದ್ವೇಷ ಮಾಡದಿರುವುದರಿಂದಲೂ ಅಪ್ರಸಂಗತಃ=ದುಷ್ಟ ಸಂಗ ಬಿಡುವುದರಿಂದ ಬ್ರಹ್ಮಚರ್ಯೇಣ=ಬ್ರಹ್ಮಚರ್ಯದಿಂದ ಮಹೀಯಸಾ=ಶ್ರೀಹರಿಯಲ್ಲಿ ಸಮರ್ಪಿ- ಸುವುದರಿಂದ ಅತ್ಯಂತಮಹತ್ತರವಾದ ಸ್ವಧರ್ಮೇಣ=ತನಗೆ ವಿಹಿತ ಧರ್ಮಾನು- ಷ್ಠಾನದಿಂದಲೂ ॥೮॥

**ಯದೃಚ್ಛಯೋಪಲಬ್ಧೇನ ಸಂತುಷ್ಟೋ ಮಿತಭುಜ್ ಮುನಿಃ ।**
**ವಿವಿಕ್ತಶರಣಃ ಶಾಂತೋ ಮೈತ್ರಃ ಕರುಣ ಆತ್ಮವಾನ್ ॥೯॥**

ಯದೃಚ್ಛಯಾ=ತನ್ನ ಪ್ರಯತ್ನವಿಲ್ಲದೇ ಶ್ರೀಹರಿಯ ಇಚ್ಛೆಯಿಂದ ಉಪಲಬ್ಧೇನ= ದೊರೆತುದರಿಂದ ಸಂತುಷ್ಟಃ=ತೃಪ್ತನು ಮಿತಭುಕ್=ಮಿತವಾದ ಆಹಾರ ಸೇವಿಸು- ವವನು ಮುನಿಃ=ಮೌನಿಯು ವಿವಿಕ್ತಶರಣಃ=ಏಕಾಂತವಾಸಿಯು ಶಾಂತಃ=ಭಗವನ್ನಿಷ್ಠ ಬುದ್ಧಿಯುಳ್ಳವನು ಮೈತ್ರಃ=ಸಮರಾದ ಸಜ್ಜನರನ್ನು ಆಪ್ತನ್ನು ತಿಳಿದು ರಕ್ಷಿಸುವವನು ಕರುಣಃ=ತನಗಿಂತ ಕಡಿಮೆ ಸಜ್ಜನರಲ್ಲಿ ದಯೆ ಮಾಡುವವನು ಆತ್ಮವಾನ್=ತನಗಿಂತ ಉತ್ತಮರು ತನಗೆ ಸ್ವಾಮಿ ಎಂದು ತಿಳಿದವನು. ॥೯॥

**ಸಾನುಬಂಧೇ ಚ ದೇಹೇಽಸ್ಮಿನ್ನಕುರ್ವನ್ನಸದಾಗ್ರಹಂ ।**
**ಜ್ಞಾನೇನ ದೃಷ್ಟತತ್ವೇನ ಪ್ರಕೃತೇಃ ಪುರುಷಸ್ಯ ಚ ॥೧೦॥**

ಸಾನುಬಂಧೇ=ಹೆಂಡತಿ ಮಕ್ಕಳುಗಳಿಂದ ಸಹಿತವಾದ ಅಸ್ಮಿನ್ ದೇಹೇ=ಈ ದೇಹದಲ್ಲಿ ಅಸದಾಗ್ರಹಂ=ಇಲ್ಲದಿರುವ ಮಮತೆಯನ್ನು ನ ಕುರ್ವನ್=ಮಾಡದೇ ಪ್ರಕೃತೇಃ ಪುರುಷಸ್ಯ ಚ=ಪ್ರಕೃತಿಪುರುಷರ ದೃಷ್ಟತತ್ವೇನ ಜ್ಞಾನೇನ=ಸರಿಯಾಗಿ ಸ್ವರೂಪವನ್ನು ವಿಷಯೀಕರಿಸಿದ ಜ್ಞಾನದಿಂದ ॥೧೦॥

**ನಿವೃತ್ತಬುದ್ಧ್ಯವಸ್ಥಾನೋ ದೂರೀಭೂತಾನ್ಯದರ್ಶನಃ ।**
**ಉಪಲಭ್ಯಾತ್ಮನಾಽಽತ್ಮಾನಂ ಚಕ್ಷುಷೇವಾರ್ಕ ಮಾತ್ಮ(ಮೇಕ)ದೃಕ್ ॥**

ನಿವೃತ್ತಬುದ್ಧ್ಯವಸ್ಥಾನಃ=ನಿದ್ರೆಯನ್ನು ತೊರೆದವನಾಗಿ ದೂರೀಭೂತಾನ್ಯ-ದರ್ಶನಃ=ವಿಷಯದರ್ಶನವನ್ನು ಅಥವಾ ಪರಕೀಯಶಾಸ್ತ್ರವನ್ನು ದೂರಮಾಡಿ-ದವನಾಗಿ ಆತ್ಮನಾ=ಮನಸ್ಸಿನಿಂದ ಆತ್ಮಾನಂ=ಪರಮಾತ್ಮನನ್ನು ಉಪಲಭ್ಯ= ಅಪರೋಕ್ಷವಾಗಿ ತಿಳಿದು ಚಕ್ಷುಷಾ=ಕಣ್ಣಿನಿಂದ ಅರ್ಕಂ ಇವ=ಸೂರ್ಯನನ್ನು ನೋಡಿದಂತೆ ಆತ್ಮದೃಕ್=ಶ್ರೀಹರಿಯ ದಾಸನೆಂದು ತನ್ನನ್ನು ತಿಳಿದು ಅಥವಾ ಕಣ್ಣಿನಿಂದ ಸೂರ್ಯನನ್ನು ಕಂಡಂತೆ ಆತ್ಮನ ಬಾಹ್ಯಾಂತಃಕರಣದಿಂದ ಮಿಶ್ರವಾಗದ ಸ್ವರೂಪಾಂತಃಕರಣದಿಂದ ಆತ್ಮಾನಂ=ತನ್ನ ಸ್ವರೂಪವನ್ನು ತಿಳಿದು ತಿಳಿಯಬೇಕಾದ ನಾಮಾದಿಪ್ರಾಣಪರ್ಯಂತ ದೇವತಾಸ್ವರೂಪವನ್ನು ತಿಳಿದು ಅವರ ಪ್ರಸಾದದಿಂದ ಆತ್ಮಾನಂ=ತನ್ನ ಅಂತರ್ಯಾಮಿಯನ್ನೂ ದೃಷ್ಟ್ವಾ=ನೋಡಿ ಏಕದೃಕ್=ಜ್ಞಾನವೇ ಮುಖ್ಯವಾಗುಳ್ಳವನು ಎಂದರ್ಥ. ॥೧೧॥

**ಮುಕ್ತಲಿಂಗಃ ಸದಾಭಾಸಮಸತಿ ಪ್ರತಿಪದ್ಯತೇ ।**
**ಸತೋ ಬಂಧುಂ ಸಮಂ ಚಕ್ಷುಃ ಸರ್ವಾನುಸ್ಯೂತಮದ್ವಯಂ ॥೧೨॥**

ಅಸತಿ=ಪ್ರಲಯಕಾಲದಲ್ಲಿ ಮುಕ್ತಲಿಂಗಃ=ಲಿಂಗದೇಹವನ್ನು ತ್ಯಜಿಸಿದವನಾಗಿ ಸದಾಭಾಸಂ=ಮುಖ್ಯವಾಯುವೇ ಪ್ರತಿಬಿಂಬನಾಗಿರುವ ಸತೋಬಂಧುಂ= ವಾಯುದೇವರ ತಂದೆಯಾದ ಸಮಂ=ಎಲ್ಲ ರೂಪಗಳಲ್ಲಿಯೂ ಪೂರ್ಣತೆ ಮುಂತಾದವುಗಳಿಂದ ಸಮನಾದ ಚಕ್ಷುಃ=ಸರ್ವಜ್ಞನಾದ ಸರ್ವಾನುಸ್ಯೂತಂ=ಎಲ್ಲ ಪ್ರಾಣಿಗಳಲ್ಲಿ ನಿಯಾಮಕನಾಗಿರುವ ಅದ್ವಯಂ=ಸಮಾಧಿಕರಹಿತನಾದ ಶ್ರೀಹರಿಯನ್ನು ಪ್ರತಿಪದ್ಯತೇ=ಹೊಂದುವನು. ॥೧೨॥

**ಅಸತಿ ಪ್ರಲಯೇ ।**

ಭಗವಂತನ ಅಪರೋಕ್ಷಜ್ಞಾನ ತನ್ನ ಬಿಂಬದ ದ್ವಾರಾ ಆಗುವುದು ಎಂದು ಹೇಳುವರು –

**ಯಥಾ ಜಲಸ್ಥ ಆಭಾಸಃ ಸ್ಥಲಸ್ಥೇನಾವದೃಶ್ಯತೇ ।**
**ಸ್ವಾಭಾಸೇನ ಯಥಾ ಸೂರ್ಯೋ ಜಲಸ್ಥೇನ ದಿವಿ ಸ್ಥಿತಃ ॥೧೩॥**

ಯಥಾ=ಹೇಗೆ ಜಲಸ್ಥಃ=ಬೂದಿಯನ್ನು ಹಚ್ಚಿ ಸ್ವಚ್ಛವಾಗಿ ತಿಕ್ಕಿದ ಕಂಚಿನ ಪಾತ್ರೆಯಲ್ಲಿರುವ ನೀರಿನಲ್ಲಿರುವ ಆಭಾಸಃ=ಸೂರ್ಯಪ್ರತಿಬಿಂಬವು ಯಾವಾಗ ಮನೆಯಲ್ಲಿರುವ ಗೋಡೆಯ ಮೇಲೆ ಪ್ರತಿಫಲಿಸುವುದೋ ಆಗ ಮನೆಯಲ್ಲಿರುವ ಜನರಿಂದ ಸ್ಥಲಸ್ಥೇನ=ಗೋಡೆಯ ಮೇಲಿರುವ ತನ್ನ ಪ್ರತಿಬಿಂಬವು ಅವದೃಶ್ಯತೇ= ಕಾಣುವುದು ಯಥಾ=ಹೇಗೆ ಜಲಸ್ಥೇನ ಸ್ವಾಭಾಸೇನ=ನೀರಲ್ಲಿರುವ ತನ್ನ ಪ್ರತಿಬಿಂಬದಿಂದ ದಿವಿಸ್ಥಿತಃ ಸೂರ್ಯಃ=ಬಿಂಬನಾದ ಆಕಾಶದಲ್ಲಿರುವ ಸೂರ್ಯನು ಕಾಣಿಸುವನು ಅದರಂತೆ ಹಿಂದೆ ಮುಖ್ಯಪ್ರಾಣ ಮುಂತಾದ ಪ್ರತಿಬಿಂಬಗಳು ಬಿಂಬನಾದ ಪರಮಾತ್ಮ ಪ್ರದರ್ಶಕವೆಂದು ಹೇಳಿದೆ. ಪ್ರತಿಬಿಂಬಗಳು ಬಿಂಬವನ್ನು ತಿಳಿಸುವುದು ಹೇಗೆಂದು ದೃಷ್ಟಾಂತದಿಂದ ಇಲ್ಲಿ ತಿಳಿಸುವರು. ಆಕಾಶದಲ್ಲಿರುವ ಸೂರ್ಯನ ಪ್ರತಿಬಿಂಬ ನೀರಲ್ಲಿ ಮೂಡಿ ಕೆಲವೊಮ್ಮೆ ನೀರಿನಲ್ಲಿಯ ಪ್ರತಿಬಿಂಬದ ಪ್ರತಿಬಿಂಬ ಗೋಡೆಯಲ್ಲಿ ಮೂಡುವುದು. ಹೀಗಿರುವಾಗ ಸ್ಥಲಸ್ಥೇನ=ಗೋಡೆಯಲ್ಲಿ-ರುವ ಪ್ರತಿಬಿಂಬದಿಂದ (ತನಗೆ ಬಿಂಬವಾದ) ನೀರಲ್ಲಿರುವ ಸೂರ್ಯ=ಪ್ರತಿಬಿಂಬ ತಿಳಿಯುವುದು ನೀರಲ್ಲಿರುವ ಪ್ರತಿಬಿಂಬದಿಂದ ಆಕಾಶದಲ್ಲಿರುವ ಬಿಂಬ ತಿಳಿಯುವುದು. ಅಥವಾ ಜಲಸ್ಥಃ ಆಭಾಸಃ=ನೀರಲ್ಲಿ ಮೂಡಿದ ಮುಖವು ಸ್ಥಲಸ್ಥೇನ ಪುರುಷೇಣ=ದಂಡೆಯಲ್ಲಿರುವ ಪುರುಷನಿಂದ ದಂಡೆಯಲ್ಲಿರುವ ಪುರುಷ ಮುಖ ಹೀಗಿದೆ ಎಂದು ತಿಳಿಸುವುದು ಹೀಗೂ ಯೋಜಿಸಬಹುದು. ॥೧೪॥

ದಾರ್ಷ್ಟಾಂತಿಕ ಹೇಳುವರು -

**ಏವಂ ತ್ರಿವೃದಹಂಕಾರೋ ಭೂತೇಂದ್ರಿಯಮನೋಗುಣೈಃ ।**
**ಸ್ವಾಭಾಸೈರ್ಲಕ್ಷಿತೋಽನೇನ ಸದಾಭಾಸೇನ ಸತ್ಯದೃಕ್ ॥೧೪॥**

ಏವಂ=ಅದೇ ರೀತಿಯಾಗಿ ತ್ರಿವೃತ್=ವೈಕಾರಿಕ, ತೈಜಸ, ತಾಮಸವೆಂದು ಮೂರು ವಿಧವಾದ ಅಹಂಕಾರಃ=ಅಹಂಕಾರ ತತ್ವಾಭಿಮಾನಿಯಾದ ಶೇಷದೇವನು ಸ್ವಾಭಾಸೈಃ=ತನ್ನ ಪ್ರತಿಬಿಂಬರಾದ ಭೂತೇಂದ್ರಿಯಮನೋಗುಣೈಃ=ಪಂಚಭೂತ-ಗಳು, ಇಂದ್ರಿಯಗಳು, ಶಬ್ದಾದಿಗುಣಗಳು ಇವುಗಳ ಅಭಿಮಾನಿಗಳಿಂದ ಲಕ್ಷಿತಃ ಭವತಿ=ಜ್ಞಾತನಾಗುವನು. ಸದಾಭಾಸೇನ=ಬ್ರಹ್ಮದೇವರ ಪ್ರತಿಬಿಂಬನಾದ ಅನೇನ= ಶೇಷದೇವನಿಂದ ಸತ್ಯದೃಕ್=ತನ್ನ ಬಿಂಬನಾದ ಬ್ರಹ್ಮನು ಲಕ್ಷಿತೋ ಭವತಿ= ಜ್ಞಾತನಾಗುವನು. ಸದಾಭಾಸೇನ=ಸನ್ನಾಮಕ ಪರಬ್ರಹ್ಮನ ಪ್ರತಿಬಿಂಬನಾದ

ಬ್ರಹ್ಮನಿಂದ ಸತ್ಯದೃಕ್=ಸ್ವಪರಗತ ಅಬಾಧ್ಯ ಅಶೇಷಜ್ಞಾನವುಳ್ಳ ಪರಮಾತ್ಮನು ಲಕ್ಷಿತೋ ಭವತಿ=ಜ್ಞಾತನಾಗುವನು.

ಈ ಶ್ಲೋಕದ ಅರ್ಥ ಸರಿಯಾಗಿ ಆಗದಿರುವುದರಿಂದ ತಾತ್ಪರ್ಯವನ್ನು ಹೇಳುವರು –

**ಶೇಷಸ್ಯ ಪ್ರತಿಬಿಂಬಾಸ್ತು ದೇವಾಃ ಶೇಷಸ್ತು ಬ್ರಹ್ಮಣಃ ।**
**ಸ ಪರಬ್ರಹ್ಮಣಶ್ಚೈವ ತೇ ಸ್ವಬಿಂಬಪ್ರದರ್ಶಕಾಃ ।**
**ತತಃ ಸ್ವಬಿಂಬದ್ವಾರೇಣ ಪರಮಾತ್ಮಪ್ರದರ್ಶನಮ್ ॥ ಇತಿ ಬ್ರಹ್ಮತರ್ಕೇ ।**

ಪಂಚಭೂತಗಳು, ಇಂದ್ರಿಯವಿಷಯಾಭಿಮಾನಿದೇವತೆಗಳು, ಅಹಂಕಾರಾಭಿ-ಮಾನಿ ಶೇಷದೇವರ ಪ್ರತಿಬಿಂಬರು. ಶೇಷದೇವರು ಬ್ರಹ್ಮದೇವರ ಪ್ರತಿಬಿಂಬರು. ಆ ಬ್ರಹ್ಮದೇವರು ಪರಮಾತ್ಮನ ಪ್ರತಿಬಿಂಬರು. ಆ ದೇವತೆಗಳು ತನ್ನ ಬಿಂಬರಾದ ಶೇಷದೇವರ ಜ್ಞಾನಮಾಡಿಸುವರು. ನಂತರ ಶೇಷದೇವರು ತನ್ನ ಬಿಂಬರಾದ ಬ್ರಹ್ಮಜ್ಞಾನ ಮಾಡಿಕೊಡುವುದರ ಮುಖಾಂತರ ಶ್ರೀಹರಿಯ ಜ್ಞಾನಮಾಡಿ ಕೊಡುವರು ಎಂದು ಭಾವ. ॥೧೪॥

ಪರಮಾತ್ಮನ ಅಪರೋಕ್ಷಜ್ಞಾನವಾಗಲು ಜೀವಪರಮಾತ್ಮರ ವೈಲಕ್ಷಣ್ಯಜ್ಞಾನ ಮತ್ತು ಜೀವನು ಭಗವಂತನನ್ನು ಆಶ್ರಯಿಸಿದವನು ಎಂಬ ಜ್ಞಾನವೂ ಮುಖ್ಯ ಕಾರಣ ಎಂಬ ಅಭಿಪ್ರಾಯದಿಂದ ಹೇಳುವರು–

**ಭೂತಸೂಕ್ಷ್ಮೇಂದ್ರಿಯಮನೋಬುದ್ಧ್ಯಾದಿಷ್ವಿಹ ನಿದ್ರಯಾ ।**
**ಲೀನೇಷು ಸತ್ಸು ಯಸ್ತತ್ರ ವಿನಿದ್ರೋ ನಿರಹಂಕ್ರಿಯಃ ॥೧೫॥**

**ಮನ್ಯಮಾನಸ್ತದಾತ್ಮಾನಮನಷ್ಟೋ ನಷ್ಟವನ್ಮೃಷಾ ।**
**ನಷ್ಟೇಽಹಂಕರಣೇ ದ್ರಷ್ಟಾ ನಷ್ಟಚಿತ್ತ ಇವಾತುರಃ ॥೧೬॥**

ಇಲ್ಲಿ ಎರಡೂ ಶ್ಲೋಕಗಳು ಒಂದೇ ವಿಷಯ ಹೇಳುವವು ಎಂಬ ಭ್ರಮವನ್ನು ನಿವಾರಿಸಲು ಯೋಜನೆಯನ್ನು ತೋರಿಸುವರು –

**ಯೋ ವಿನಿದ್ರಃ ಸಃ ಸತ್ಯದೃಕ್ ।**

ಇದರಿಂದ ಹಿಂದಿನ ಶ್ಲೋಕದಲ್ಲಿ (೧೪) ಹೇಳಲ್ಪಟ್ಟ ಸತ್ಯದೃಕ್ ಆದ ಪರಮಾತ್ಮ ಸ್ವರೂಪ ತಿಳಿಸುವುದು ಹದಿನೈದನೆ ಶ್ಲೋಕ ಎಂದಂತಾಯಿತು. ಅದಕ್ಕೆ ವಿಪರೀತವಾಗಿ ಜೀವನ ಸ್ವರೂಪವನ್ನು ತಿಳಿಸುವುದು ಮನ್ಯಮಾನ ಎಂಬ ಹದಿನಾರನೇ ಶ್ಲೋಕ.

ಅನ್ವಯ ತಿಳಿಸುತ್ತ ವ್ಯಾಖ್ಯಾನಿಸುವರು-

**ಯಃ ಅನಷ್ಟಃ ನಷ್ಟವತ್ ನ ಅಜ್ಞಾಸಿಷಂ ಇತಿ ಮನ್ಯಮಾನಃ ಸಃ ಆತುರೋ ದ್ರಷ್ಟಾ ಜೀವಃ ।**

ಹಿಂದಿನ ಶ್ಲೋಕದ ಯಃ ಎಂಬುದು ಇಲ್ಲಿಯೂ ಅನುವೃತ್ತವಾಗುವುದು ಎಂದು ಸೂಚಿತವಾಗುವುದು. ತನ್ನ ಸ್ವರೂಪನಾಶವಾಗದಿದ್ದರೂ ಮೃತನಾದವನಂತೆ ನಾನು ಏನೂ ತಿಳಿಯಲಿಲ್ಲ ಎಂದು ತಿಳಿಯುವವನು, ವಿವಶನಾದ ದ್ರಷ್ಟು ಶಬ್ದವಾಚ್ಯನಾದ ಜೀವನು ಎಂದು ತಾತ್ಪರ್ಯದ ಭಾವ.

ಇನ್ನು ಶ್ಲೋಕಾರ್ಥ ಅಸತಿ=ಪ್ರಲಯಕಾಲದಲ್ಲಿ ಭೂತಸೂಕ್ಷ್ಮೇಂದ್ರಿಯ-ಮನೋಬುದ್ಧ್ಯಾದಿಷು=ಪಂಚಮಹಾಭೂತಗಳು ಮತ್ತು ತನ್ಮಾತ್ರಾಗಳು ಇಂದ್ರಿಯಗಳು, ಮನಸ್ಸು ಬುದ್ಧಿ ಮುಂತಾದವು ಲೀನೇಷು=ನಾಶವಾಗುತ್ತಿರಲು ಇಹ=ಸಂಸಾರಿಗಳು ನಿದ್ರಯಾಲೀನೇಷು ಸತ್ಸು=ಪ್ರಲಯಕಾಲದ ದೀರ್ಘನಿದ್ದೆ-ಯನ್ನು ಹೊಂದುತ್ತಿರಲು ಯಃ=ಯಾರು ತತ್ರ=ಆಕಾಲದಲ್ಲಿಯೂ ವಿನಿದ್ರಃ= ನಿದ್ರಾರಹಿತನೂ ನಿರಹಂಕ್ರಿಯಃ=ಅಹಂಕಾರ (ಶೂನ್ಯನು) ವಿಲ್ಲದವನೂ ಸಃ= ಅವನು ಸತ್ಯದೃಕ್=ನಿತ್ಯಜ್ಞಾನವಾದ ಪರಮಾತ್ಮನು ॥೧೫॥

ಯಃ=ಯಾವನು ಅನಷ್ಟಃ=ಸ್ವರೂಪನಾಶವಾಗದವನಾದರೂ ತದಾ= ಪ್ರಲಯಕಾಲದಲ್ಲಿ ಅಹಂಕರಣೇ ನಷ್ಟೇ=ಅಹಂಕಾರ, ಮಮಕಾರಜನಕವಾದ (ಅಭಿಮಾನ ಜನಕ) ಮನಃಪ್ರಭೇದವಾದ ಅಹಂಕಾರವು ನಾಶವಾಗುತ್ತಿರಲು ಆತ್ಮಾನಂ=ತನ್ನನ್ನು ನಷ್ಟವತ್ ಮೃಷಾ ಮನ್ಯಮಾನಃ=ಸತ್ತವನಂತೆ ಸುಳ್ಳಾಗಿ ತಿಳಿದವನಾರೋ ಸಃ=ಅವನು ಆತುರಃ ದ್ರಷ್ಟಾ=ವಿವಶನಾದ ದ್ರಷ್ಟುವಾದ ಜೀವನು. ಮರಣ ಹೊಂದಿದವನು ಮರಣಾನಂತರ ಮರಣಸಮಯದಲ್ಲಿ ಏನನ್ನೂ ತಿಳಿದಿರಲಿಲ್ಲ ಎಂದು ತಿಳಿಯುವನೋ ಅದರಂತೇ ಪ್ರಲಯಾನಂತರದಲ್ಲಿ ಸ್ಥೂಲಶರೀರವು ಮತ್ತೆ ಬಂದಾಗ ಇಷ್ಟರವರೆಗೆ ಏನನ್ನೂ (ಪ್ರಲಯದಲ್ಲಿ) ತಿಳಿದಿರಲಿಲ್ಲವೆಂದು ತಿಳಿಯುವನು ಇದು ಭ್ರಾಂತಿಯು. ಆದ್ದರಿಂದ ಮೃಷಾ ಎಂದಿದ್ದಾರೆ ಏಕೆಂದರೆ ಪ್ರಲಯಕಾಲದಲ್ಲಿ ತನ್ನ ಸ್ವರೂಪ, ಕಾಲ ಮುಂತಾದವುಗಳ ಜ್ಞಾನ ಇದ್ದೇ ಇರುವುದು. ॥೧೬॥

**ಏವಂ ಪ್ರತ್ಯವಮೃಶ್ಯಾಸಾವಾತ್ಮಾನಂ ಪ್ರತಿಪದ್ಯತೇ ।**
**ಸಾಹಂಕಾರಸ್ಯ ದ್ರವ್ಯಸ್ಯ ಯೋಽವಸ್ಥಾನಮನುಗ್ರಹಃ ॥೧೭॥**

ಅಸೌ=ಅಧಿಕಾರಿಯು ಏವಂ=ಈ ರೀತಿಯಾಗಿ ಪ್ರತ್ಯವಮೃಶ್ಯ=ಯುಕ್ತಿಯಿಂದ ಜೀವಪರಮಾತ್ಮರ ವೈಲಕ್ಷಣ್ಯವನ್ನು ತಿಳಿದು ಯಃ=ಯಾವನು ಸಾಹಂಕಾರಸ್ಯ ದ್ರವ್ಯಸ್ಯ=ಜೀವನಿಗೆ ಅವಸ್ಥಾನಂ=ಆಶ್ರಯನು ಮತ್ತು ಅನುಗ್ರಹಃ=ಅನುಗ್ರಾಹಕನು ತಂ ಆತ್ಮಾನಂ=ಆ ಪರಮಾತ್ಮನನ್ನು ಪ್ರತಿಪದ್ಯತೇ=ಅಪರೋಕ್ಷವಾಗಿ ತಿಳಿಯುವನು.

ಈ ಶ್ಲೋಕದಲ್ಲಿಯ ಸಾಹಂಕಾರದ್ರವ್ಯಶಬ್ದಕ್ಕೆ ಪ್ರಕೃತಸಂಗತವಾದ ಅರ್ಥ ಹೇಳುವರು–

**ಸಾಹಂಕಾರಂ ದ್ರವ್ಯಂ ಜೀವಃ ತಸ್ಯ ಅವಸ್ಥಾನಂ ಅನುಗ್ರಾಹಕಶ್ಚ ಪರಮಾತ್ಮಾ ।**

ಹಿಂದೆ ನಿರಹಂಕೃತಿಃ ಎಂಬುದಕ್ಕೆ ಪ್ರತಿಪದವಾಗಿ ಹೇಳುತ್ತಿರುವುದರಿಂದ ಸಾಹಂಕಾರದ್ರವ್ಯವೆಂದರೆ ಜೀವನೇ ಎಂದು ಭಾವ. ಅವಸ್ಥಾನವೆಂದರೆ ಆಶ್ರಯನು ಅನುಗ್ರಹಃ=ಅನುಗ್ರಾಹಕನು ಎಂದರ್ಥ.

ಮೇಲಿನ ಮೂರು ಶ್ಲೋಕದಲ್ಲಿ ಹೇಳಿದ ವಿಷಯದಲ್ಲಿ ಪ್ರಮಾಣ ಸಂವಾದ ತೋರಿಸುವರು–

**ನಿತ್ಯದೃಕ್ ಪರಮಾತ್ಮಾಸೌ ಮೃತವದ್ಯೋ ನ ಕಿಂಚನ ।**
**ಜಾನಾತಿ ಜೀವಃ ಸ ಜ್ಞೇಯಃ ಪರಮಾತ್ಮಾ ತದಾಶ್ರಯಃ ॥**

**ಇತಿ ಹರಿವಂಶೇಷು ।**

ಯಾವನು ನಿತ್ಯಜ್ಞಾನವುಳ್ಳವನೋ ಅವನು ಪರಮಾತ್ಮನು, ಯಾವನು ಮೃತನಂತೆ ಏನನ್ನೂ ತಿಳಿಯಲಾರನೋ ಅವನು ಜೀವನು. ಇವನಿಗೆ ಪರಮಾತ್ಮನು ಆಶ್ರಯನು ಎಂದು ಹರಿವಂಶದಲ್ಲಿ ಹೇಳಿದೆ. ॥೧೭॥

ಹಿಂದೆ ಮುಕ್ತಲಿಂಗಃ ಎಂದು ಮುಕ್ತನಿಗೆ ಲಿಂಗಶರೀರ ಸಂಬಂಧವಿಲ್ಲವೆಂದು ಹೇಳಿದೆ. ಅದು ಸರಿಯಲ್ಲವೆಂದು ಶಂಕಿಸುವಳು–

**ದೇವಹೂತಿರುವಾಚ**

**ಪುರುಷಂ ಪ್ರಕೃತಿರ್ಬ್ರಹ್ಮನ್ ನ ವಿಮುಂಚತಿ ಕರ್ಹಿಚಿತ್ ।**
**ಅನ್ಯೋನ್ಯಾಪಾಶ್ರಯತ್ವಾಚ್ಚ ನಿತ್ಯತ್ವಾದನಯೋಃ ಪ್ರಭೋ ॥೧೮॥**

ಪ್ರಭೋ=ಕಪಿಲನೇ ಬ್ರಹ್ಮನ್=ಪೂರ್ಣನೇ ಅನಯೋಃ=ಪ್ರಕೃತಿಪುರುಷರಿಗೆ ನಿತ್ಯತ್ವಾತ್=ನಿತ್ಯತ್ವವಿರುವುದರಿಂದ, ಅನ್ಯೋನ್ಯಾಪಾಶ್ರಯತ್ವಾತ್=ಒಬ್ಬರನ್ನು ಬಿಟ್ಟು ಇನ್ನೊಬ್ಬರಿಗೆ ಪ್ರವೃತ್ತಿ, ಸಾಮರ್ಥ್ಯವಿಲ್ಲದ್ದರಿಂದ ಪ್ರಕೃತಿಃ=ಪ್ರಕೃತಿಯು ಪುರುಷಂ=ಜೀವನನ್ನು ಕರ್ಹಿಚಿತ್=ಯಾವ ಕಾಲದಲ್ಲಿಯೂ ನ ವಿಮುಂಚತಿ=ಬಿಡಲಾರದು.

ಅನಾದಿ ಕಾಲದಿಂದಿರುವ ಪ್ರಕೃತಿ ಪುರುಷರ ಸಂಬಂಧವು ಸಂಬಂಧಿಗಳೆರಡರಿಂದ ವ್ಯಾಪ್ತವಾದ್ದರಿಂದ ಸಂಬಂಧಿಗಳಿರುವಾಗ ಹೇಗೆ ಹೋಗುವುದು ಎಂದು ಶಂಕಾಭಿಪ್ರಾಯ. ॥೧೮॥

ಇದನ್ನೇ ದೃಷ್ಟಾಂತದಿಂದ ಉಪಪಾದಿಸುವಳು –

**ಯಥಾ ಗಂಧಸ್ಯ ಭೂಮೇಶ್ಚ ನ ಭಾವೋ ವ್ಯತಿರೇಕತಃ ।**
**ಅಪಾಂ ರಸಸ್ಯ ಚ ಯಥಾ ತಥಾ ಬುದ್ಧೇಃ ಪರಸ್ಯ ಚ ॥೧೯॥**

ಭೂಮೇಃ=ಪೃಥಿವಿಗೆ ಗಂಧಸ್ಯ=ಅದರ ಗುಣವಾದ ಗಂಧಕ್ಕೆ ವ್ಯತಿರೇಕತಃ= ಭಾವಃ=ವಿನಾಭಾವವು ನ=ಇರುವುದಿಲ್ಲವೋ (ಪೃಥಿವಿಯು ಗಂಧವಿಲ್ಲದೆ ಇರುವುದಿಲ್ಲವೋ) ಯಥಾ ಅಪಾಂ=ನೀರುಗಳಿಗೆ ರಸಸ್ಯ=ಅದರ ಗುಣವಾದ ಮಾಧುರ್ಯವು ಒಂದನ್ನು ಬಿಟ್ಟು ಇನ್ನೊಂದು ಇರಲಾರದೋ ತಥಾ=ಹಾಗೆ ಬುದ್ಧೇಃ=ಪ್ರಕೃತಿಗೆ ಪರಸ್ಯ=ಅದರಿಂದ ವಿಲಕ್ಷಣನಾದ ಜೀವನಿಗೆ ವ್ಯತಿರೇಕತಃ ಭಾವಃ ನ=ವಿನಾಭಾವ ಇಲ್ಲ. ಯಾವುದು ಸಂಬಂಧವೋ ಅದು ಸಬಂಧಿಗಳಿಂದ ಅವಿನಾಭೂತವು. ಅದು ಸಂಬಂಧಿಗಳಿರುವಾಗ ನಾಶವಾಗಲಾರದು ಎಂಬುದಕ್ಕೆ ಇವೆರಡು ಉದಾಹರಣೆಗಳು. ॥೧೯॥

**ಅಕರ್ತುಃ ಕರ್ಮಬಂಧೋಽಯಂ ಪುರಷಸ್ಯ ಯದಾಶ್ರಯಃ ।**
**ಗುಣೇಷು ಸತ್ಸು ಪ್ರಕೃತೇಃ ಕೈವಲ್ಯಂ ತೇಷ್ವತಃ ಕಥಂ ॥೨೦॥**

ಅತಃ=ಆದ್ದರಿಂದ ಅಕರ್ತುಃ=ಪ್ರಕೃತಿಯಿಲ್ಲದೆ ಕರ್ತೃವಲ್ಲದ ಪುರುಷಸ್ಯ= ಜೀವನಿಗೆ ಅಯಂ=ಅನಾದಿಸಿದ್ಧವಾದ ಕರ್ಮಬಂಧಃ=ಸಂಸಾರವು ಯದಾಶ್ರಯಃ= ಯಾವ ಪ್ರಕೃತಿಮೂಲಕವಾಗಿರುವುದೋ ತೇಷು ಪ್ರಕೃತೇಃ ಗುಣೇಷು ಸತ್ಸು= ಅಂತಹ ಪ್ರಕೃತಿಗುಣಗಳಾದ ಸತ್ವಾದಿಗಳು ಇರುವಾಗ ಪ್ರಕೃತೇಃ ಕೈವಲ್ಯಂ ಕಥಂ=ಸತ್ವಾದಿರೂಪ ಪ್ರಕೃತಿಯಿಂದ ಮೋಕ್ಷ ಹೇಗಾದೀತು ? ಆಗಲಾರದು. ಸಂಬಂಧಿಗಳೆರಡೂ ಇರುವಾಗ ಸಂಬಂಧನಿವೃತ್ತಿಯು ಹೇಗೆಂದು ಭಾವ. ॥೨೦॥

**ಸಕೃತ್ ತತ್ವಾವಮರ್ಶೇನ ನಿವೃತ್ತಂ ಭಯಮುಲ್ಬಣಂ ।**
**ನಿಮಿತ್ತಸ್ಯಾನಿವೃತ್ತತ್ವಾತ್ ಪುನಃ ಪ್ರತ್ಯವತಿಷ್ಠತೇ ॥೨೧॥**

ತತ್ವಾವಮರ್ಶೇನ=ಹಿಂದೆ ಹೇಳಿದ ಪ್ರಕಾರ ವಿಷಯಗಳ ಅನಿತ್ಯತೆ ಮುಂತಾದವನ್ನು ತಿಳಿದು ವಿಷಯಗಳ ಧ್ಯಾನವನ್ನು ಬಿಡುವುದರಿಂದ ಮನಸ್ಸು ವಶವಾಗಿ ಅಪರೋಕ್ಷಜ್ಞಾನದಿಂದ ಕರ್ಮಕ್ಷಯವಾದಾಗ ಉಲ್ಬಣಂ ಭಯಂ=

ಸ್ಥೂಲಶರೀರ ಬರುವುದೆಂಬ ಕ್ರೂರವಾದ ಭಯವು ಸಕೃತ್ ನಿವೃತ್ತಂ=ಒಮ್ಮೆ ಹೋದರೂ ನಿಮಿತ್ತಸ್ಯ ಅನಿವೃತ್ತತ್ವಾತ್=ಅದಕ್ಕೆ ಕಾರಣವಾದ ಲಿಂಗಶರೀರದ ನಾಶವಾಗದ್ದರಿಂದ ಪುನಃ ಪ್ರತ್ಯವತಿಷ್ಠತೇ=ಸ್ಥೂಲ ಶರೀರ ಮತ್ತೆ ಬರುವುದೆಂಬ ಭಯ ಬರುವುದು. ಹೇಗೆ ಪ್ರಲಯಕಾಲದಲ್ಲಿ ಸ್ಥೂಲಶರೀರವಿಲ್ಲದಿದ್ದರೂ ಸೂಕ್ಷ್ಮಶರೀರವಿರುವುದರಿಂದ ಮತ್ತೆ ಸಂಸಾರ ಬರುವಂತೆ ಸೃಷ್ಟಿಸಮಯದಲ್ಲಿ ಪ್ರಕೃತಿ ಸಂಬಂಧದಂತೆಯೇ ಕರ್ಮಸಂಬಂಧವೂ ಸಂಪೂರ್ಣ ಹೋಗಲಾರದೆಂದು ಭಾವ. ॥೨೦॥

ಹಿಂದೆ ಹೇಳಿದ ಮುಂದೆ ಹೇಳುವ ಸಾಧನಸಮುದಾಯಗಳಿಂದ ಮತ್ತು ಅಘಟಿತಘಟಕಪ್ರಸಾದದಿಂದಲೂ ಅನಿವಾರ್ಯವೆಂದು ಪ್ರಸಕ್ತವಾದ ಪ್ರಕೃತಿಬಂಧ ಕರ್ಮಸಂಬಂಧ ಸಂಪೂರ್ಣ ನಿವೃತ್ತವಾಗುವುದು. ಆದ್ದರಿಂದ ಅನಿವೃತ್ತನಿಮಿತ್ತತ್ವ-ವಿಲ್ಲದಿರುವುದರಿಂದ ಮತ್ತೆ ಸಂಸಾರ ಬರಲಾರದು ಎಂದು ಉತ್ತರಿಸುವನು –

**ಶ್ರೀಭಗವಾನುವಾಚ**

**ಅನಿಮಿತ್ತಪ್ರವೃತ್ತೇನ ಸ್ವಧರ್ಮೇಣಾಮಲಾತ್ಮನಾ ।**
**ತೀವ್ರಯಾ ಮಯಿ ಭಕ್ತ್ಯಾ ಚ ಶ್ರುತಿಸಂಭೃತಯಾ ಚಿರಂ ॥೨೨॥**

ಅನಿಮಿತ್ತಪ್ರವೃತ್ತೇನ=ಅಕಾರವಾಚ್ಯನಾದ ಪರಮಾತ್ಮನ ಪ್ರೀತ್ಯರ್ಥವಾಗಿ ಅನುಷ್ಠಿತವಾದ ಆದ್ದರಿಂದಲೇ ಅಮೂಲಾತ್ಮನಾ=ನಿರ್ದುಷ್ಟವಾದ ಮನಸ್ಸಿನಿಂದ ಸ್ವಧರ್ಮೇಣ=ತನಗೆ ವಿಹಿತವಾದ ಧರ್ಮದಿಂದ ಚಿರಂ=ಬಹುಕಾಲ ಶ್ರುತಿಸಂಭೃ-ತಯಾ=ವೇಂದಾಂತ ಶ್ರವಣದಿಂದ ಚೆನ್ನಾಗಿ ಅಭಿವೃದ್ಧವಾದ ತೀವ್ರಯಾ=ದೃಢವಾದ ಮಯಿ ಭಕ್ತ್ಯಾ ಚ=ನನ್ನಲ್ಲಿ ಮಾಡುವ ಭಕ್ತಿಯಿಂದಲೂ ॥೨೨॥

**ದೃಷ್ಟತತ್ತ್ವೇನ ಜ್ಞಾನೇನ ವೈರಾಗ್ಯೇಣ ಬಲೀಯಸಾ ।**
**ತಪೋಯುಕ್ತೇನ ಯೋಗೇನ ತೀವ್ರೇಣಾತ್ಮಸಮಾಧಿನಾ ॥೨೩॥**

ದೃಷ್ಟತತ್ತ್ವೇನ=ಪರಾಪರತತ್ತ್ವವಿಷಯಕವಾದ ಜ್ಞಾನೇನ=ಜ್ಞಾನದಿಂದಲೂ ಬಲೀಯಸಾ ವೈರಾಗ್ಯೇಣ=ಬಲವಾದ ವಿರಕ್ತಿಯಿಂದಲೂ ತಪೋಯುಕ್ತೇನ= ತಪಸ್ಸಿನಿಂದ ಕೂಡಿದ ಯೋಗೇನ=ಪ್ರಾಣಾಯಾಮಾದಿರೂಪ ಉಪಾಯದಿಂದಲೂ ತೀವ್ರೇಣ ಸಮಾಧಿನಾ=ಸ್ಥಿರವಾದ ಮನಸ್ಸಿನ ಏಕಾಗ್ರತೆಯಿಂದಲೂ ॥೨೩॥

**ಪ್ರಕೃತಿಃ ಪುರುಷಸ್ಯೈವಂ ದಹ್ಯಮಾನಾ ತ್ವಹರ್ನಿಶಮ್ ।**
**ತಿರೋಭವಿತ್ರೀ ಶನಕೈರಗ್ನೇರ್ಯೋನಿರಿವಾರಣಿಃ ॥೨೪॥**

ಏವಂ=ಈ ರೀತಿ ಅಹರ್ನಿಶಂ=ಹಗಲಿರುಳು ದಹ್ಯಮಾನಾ=ಸುಡಲ್ಪಡುವ ಪ್ರಕೃತಿಃ=ಪ್ರಕೃತಿಯು ಶನಕೈಃ=ನಿಧಾನವಾಗಿ ಅಗ್ನೇಃ ಯೋನಿಃ ಅರಣಿಃ ಇವ=ಅಗ್ನಿಗೆ ಸ್ಥಾನವಾದ ಅರಣಿ ಎಂಬ ಕಟ್ಟಿಗೆಯಂತೇ ಪುರುಷಸ್ಯ=ಅಧಿಕಾರಿಗೆ ತಿರೋಭವಿತ್ರೀ= ಮರೆಯಾಗುವುದು. ಪ್ರಕೃತಿಯು ನಿತ್ಯವಾದ್ದರಿಂದ ನಾಶವಾಗುವುದಿಲ್ಲ. ತಿರೋಭಾವದಲ್ಲಿಯೇ ದೃಷ್ಟಾಂತ ಹೊರತು ನಾಶದಲ್ಲಿ ಅಲ್ಲ. ॥೨೪॥

**ಭುಕ್ತಭೋಗಾ ಪರಿತ್ಯಕ್ತಾ ದೃಷ್ಟದೋಷಾ ಚ ನಿತ್ಯಶಃ ।**
**ನೇಶ್ವರಸ್ಯಾಶುಭಂ ಧತ್ತೇ ಸ್ವೇ ಮಹಿಮ್ನಿ ಸ್ಥಿತಸ್ಯ ಚ ॥೨೫॥**

ಭುಕ್ತಭೋಗಾ=ಅನುಭವಿಸಿದ ನಿತ್ಯಶಃ ದೃಷ್ಟದೋಷಾ=ಯಾವಾಗಲೂ ಅದರಲ್ಲಿರುವ ದೋಷವನ್ನರಿತು ಪರಿತ್ಯಕ್ತಾ=ಬಿಡಲ್ಪಟ್ಟ ಪ್ರಕೃತಿಯು ಈಶ್ವರಸ್ಯ= ಭಗವಂತನ ಅನುಗ್ರಹದಿಂದ ಪ್ರಕೃತಿಯನ್ನು ಗೆಲ್ಲಲು ಸಮರ್ಥನಾದ ಸ್ವೇ ಮಹಿಮ್ನಿ=ತನ್ನ ಸ್ವರೂಪಾನಂದಾನುಭವ ಮಾಡುತ್ತಿರುವವನಿಗೆ ಅಶುಭಂ ನ ಧತ್ತೇ= ದುಃಖರೂಪಸಂಸಾರ ಭಯವನ್ನುಂಟುಮಾಡಲಾರದು. ॥೨೫॥

**ಯಥಾ ಹ್ಯಪ್ರತಿಬುದ್ಧಸ್ಯ ಪ್ರಸ್ವಾಪೋ ಬಹ್ವನರ್ಥಕೃತ್ ।**
**ಸ ಏವ ಪ್ರತಿಬುದ್ಧಸ್ಯ ನ ವೈ ಮೋಹಾಯ ಕಲ್ಪತೇ ॥೨೬॥**

ಯಥಾ=ಹೇಗೆ ಅಪ್ರತಿಬುದ್ಧಸ್ಯ=ಎಚ್ಚರವಿಲ್ಲದವನಿಗೆ ಪ್ರಸ್ವಾಪಃ=ನಿದ್ರೆಯು ಬಹ್ವನರ್ಥಕೃತ್=ಕನಸಿನಲ್ಲಿ ಹುಲಿ ಮುಂತಾದವುಗಳನ್ನು ತೋರಿಸಿ ಭಯಜನಕವೋ ಸಃ ಏವ=ಅದೆ ನಿದ್ರೆಯೇ ಪ್ರತಿಬುದ್ಧಸ್ಯ=ಎಚ್ಚತ್ತವನಿಗೆ ಮೋಹಾಯ ನ ಕಲ್ಪತೇ= ಭಯಜನಕವಾಗಲಾರದು. ॥೨೬॥

**ಏವಂ ವಿದಿತತತ್ವಸ್ಯ ಪ್ರಕೃತಿರ್ಮಯಿ ಮಾನಸಮ್ ।**
**ಯುಂಜತೋ ನಾಪಕುರುತೇ ಆತ್ಮಾರಾಮಸ್ಯ ಕರ್ಹಿಚಿತ್ ॥೨೭॥**

ಏವಂ=ಅದೇ ರೀತಿಯಾಗಿ ವಿದಿತತತ್ವಸ್ಯ=ಅಪರೋಕ್ಷೀಕೃತವಾದ ನಾಮಾದಿ- ಯಾಗಿ ನನ್ನ ಪರ್ಯಂತ ದೇವತೆಗಳ ನಿಜರೂಪವನ್ನು ತಿಳಿದವನಿಗೆ ಮತ್ತು ಮಯಿ=ನನ್ನಲ್ಲಿ ಮಾನಸಂ ಯುಂಜಾನಸ್ಯ=ಮನಸ್ಸಿನ ಸಂಬಂಧವನ್ನಿರಿಸಿ ಆತ್ಮಾರಾಮಸ್ಯ=ಭಗವದ್ದರ್ಶನದಿಂದ ಸಂತುಷ್ಟನಾದವನಿಗೆ ಪ್ರಕೃತಿಃ=ಪ್ರಕೃತಿಯು ಕರ್ಹಿಚಿತ್=ಯಾವ ಕಾಲದಲ್ಲಿಯೂ ನ ಅಪಕುರುತೇ=ನನ್ನ ಪ್ರಭಾವದಿಂದ ಅಪಕಾರ ಮಾಡಲಾರದು. ॥೨೭॥

**ಯದೈವಮಧ್ಯಾತ್ಮರತಃ ಕಾಲೇನ ಬಹುಜನ್ಮನಾ ।**
**ಸರ್ವತ್ರ ಜಾತವೈರಾಗ್ಯ ಆಬ್ರಹ್ಮಭುವನಾನ್ಮುನಿಃ ॥೨೮॥**

ಯದಾ=ಯಾವಾಗ ಏವಂ=ಈ ರೀತಿಯಾಗಿ ಬಹುಜನ್ಮನಾ ಕಾಲೇನ=ಅನೇಕ ಜನ್ಮಗಳಿಂದ ಬಹಳಕಾಲದ ನಂತರ ಅಧ್ಯಾತ್ಮರತಃ=ತನಗಿಂತ ಉತ್ತಮರನ್ನಾರಂಭಿಸಿ ಪರಮಾತ್ಮನ ಪರ್ಯಂತ ತತ್ವಗಳಲ್ಲಿ ಆಸಕ್ತನಾದ ಆಬ್ರಹ್ಮಭುವನಾತ್=ಸತ್ಯ ಲೋಕಪರ್ಯಂತ ಸರ್ವತ್ರ ಜಾತವೈರಾಗ್ಯಃ=ಅನಿತ್ಯ ಅಸಾರವೆಂದು ತಿಳಿದು ವೈರಾಗ್ಯ ಜನಿಸಿದ ಮುನಿಃ=ನಿರಂತರ ನನ್ನ ಮನನ ಶೀಲನಾದವನು. ॥೨೮॥

**ಮದ್ಭಕ್ತಃ ಪ್ರತಿಬುದ್ಧಾರ್ಥೋ ಮತ್ಪ್ರಸಾದೇನ ಭೂಯಸಾ ।**
**ನಿಃಶ್ರೇಯಸಂ ಸ್ವಸಂಸ್ಥಾನಂ ಕೈವಲ್ಯಾಖ್ಯಂ ಮದಾಶ್ರಯಂ ॥೨೯॥**

ಮದ್ಭಕ್ತಃ=ನನ್ನ ಭಕ್ತನು ಭೂಯಸಾ ಮತ್ಪ್ರಸಾದೇನ=ಬಹಳವಾದ ನನ್ನ ಅನುಗ್ರಹ-ದಿಂದ ಪ್ರತಿಬುದ್ಧಾರ್ಥಃ=ನಾಮಾದಿ ಸಕಲಶ್ರೀಹರಿಪರ್ಯಂತ ತತ್ವಸಾಕ್ಷಾತ್ಕಾರ-ವುಳ್ಳವನು ಸ್ವಸಂಸ್ಥಾನಃ=ತನ್ನ ಸ್ವರೂಪಾವಿರ್ಭಾವವನ್ನು ಮದಾಶ್ರಯಂ=ನಾನೇ ಆಶ್ರಯನಾಗಿವುಳ್ಳ ಕೈವಲ್ಯಾಖ್ಯಂ=ಕೈವಲ್ಯವೆಂದು ಪ್ರಸಿದ್ಧವಾದ ನಿಃಶ್ರೇಯಸಂ= ಪುರುಷಾರ್ಥವನ್ನು ॥೨೯॥

**ಪ್ರಾಪ್ನೋತೀಹಾಂಜಸಾ ಧೀರಃ ಸ್ವದೃಶಾ ಛಿನ್ನಸಂಶಯಃ ।**
**ಯದ್ ಗತ್ವಾ ನ ನಿವರ್ತೇತ ಯೋಗೀ ಲಿಂಗವಿನಿರ್ಗಮೇ ॥೩೦॥**

ಸ್ವದೃಶಾ=ಸ್ವರೂಪಜ್ಞಾನದಿಂದ ಅಥವಾ ತನಗೆ ಭಗವದಾವಿರ್ಭಾವಾ-ಪರೋಕ್ಷದಿಂದ ಛಿನ್ನಸಂಶಯಃ=ಸಂಶಯವನ್ನು ಕಳೆದುಕೊಂಡು ತತ್ವನಿಶ್ಚಯವುಳ್ಳ-ವನಾಗಿ ಧೀರಃ=ಜ್ಞಾನಿಯು ಯೋಗೀ=ಯೋಗವುಳ್ಳವನು ಲಿಂಗವಿನಿರ್ಗಮೇ= ಲಿಂಗಶರೀರ ಹೋದ ಮೇಲೆ ಯದ್‌ಗತ್ವಾ=ಎಲ್ಲಿಗೆ ಹೋದ ನಂತರ ನ ನಿವರ್ತೇತ=ಹಿಂತಿರುಗುವುದಿಲ್ಲವೋ ಅಂತಹ ಪುರುಷಾರ್ಥವನ್ನು ಅಂಜಸಾ ಪ್ರಾಪ್ನೋತಿ=ಚೆನ್ನಾಗಿ ಹೊಂದುವನು ॥೩೦॥

ಜೀವನ್ಮುಕ್ತನು ಜ್ಞಾನಸಾಮರ್ಥ್ಯದಿಂದ ಬಂದ ಅಣಿಮಾದಿ ಐಶ್ವರ್ಯ ಭೋಗದಲ್ಲಿ ಅಸಕ್ತನಾಗದಿದ್ದರೆ ಶೀಘ್ರದಲ್ಲಿ ನನ್ನ ಲೋಕಪ್ರಾಪ್ತಿ ಆಗುವುದು ಎಂದು ಹೇಳುವನು –

**ಯದಾ ನ ಯೋಗೋಪಚಿತಾಸು ಚೇತೋ**
**ಮಾಯಾಸು ಸಿದ್ಧಸ್ಯ ವಿಷಜ್ಜತೇ ಚ ।**
**ಅನನ್ಯಹೇತುಷ್ವಥ ಮೇ ಗತಿಃ ಸ್ಯಾದ್**
**ಆತ್ಯಂತಿಕೀ ಯತ್ರ ನ ಮೃತ್ಯುಹಾಸಃ ॥೩೧॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಅಷ್ಟಾವಿಂಶೋಽಧ್ಯಾಯಃ ॥***

ಯದಾ=ಯಾವಾಗ ಅನನ್ಯಹೇತುಷು=ನನ್ನ ಹೊರತು ಬೇರೆ ಕಾರಣವಿಲ್ಲದ ಯೋಗೋಪಚಿತಾಸು=ವಿದ್ಯಾಸಾಮರ್ಥ್ಯದಿಂದ ದೊರೆತ ಮಾಯಾಸು=ಅಣಿಮಾದಿ ಅಷ್ಟೈಶ್ವರ್ಯಗಳಲ್ಲಿ ಚೇತಃ=ಮನಸ್ಸು ಸಿದ್ಧಸ್ಯ=ಸಾಧನವನ್ನು ಸಿದ್ಧಿಸಿದವನಿಗೆ ನ ವಿಷಜ್ಜತೇ=ವಿಶೇಷವಾಗಿ ಅನುಭವಿಸಬೇಕೆಂದು ಆಸಕ್ತವಾಗುವುದಿಲ್ಲವೋ ಅಥ= ಆಗ ಆತ್ಯಂತಿಕೀ=ಪುನರಾವರ್ತಿ ಇಲ್ಲದ ಯತ್ರ=ಎಲ್ಲಿ ಮೃತ್ಯುಹಾಸಃ ನ=ಯಮನ ವ್ಯಾಪಾರವಾದ ಮರಣವಿಲ್ಲವೋ ಅಂತಹ ಮೇ ಗತಿಃ=ಮುಕ್ತಿರೂಪವಾದ ನನ್ನ ಪ್ರಾಪ್ತಿಯಾಗುವುದು. ಇದರಿಂದ ಅಣಿಮಾದಿ ಐಶ್ವರ್ಯ ಅನುಭವಿಸಿ ಮತ್ತೆ ಮುಕ್ತಿದೊರೆಯುವುದರಿಂದ ಭಕ್ತಿ ವ್ಯರ್ಥವಲ್ಲವೆಂದು ಧ್ವನಿತವಾಗುವುದು. ಅಪರೋಕ್ಷಜ್ಞಾನಿಗಳಿಗೆ ಅಣಿಮಾದಿಸಿದ್ಧಿಗಳು ದೊರೆಯುವುವು. ಅವುಗಳಲ್ಲಿ ಆಸಕ್ತನಾದರೆ ನನ್ನಲೋಕ ಪಡೆಯಲು ವಿಳಂಬವಾಗುವುದು ಎಂದು ಭಾವ ॥೩೧॥

***ಇಲ್ಲಿಗೆ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು.***

# ಇಪ್ಪತ್ತೆಂಟನೆಯ ಅಧ್ಯಾಯದ ತಾತ್ಪರ್ಯ

ಕಪಿಲ - ಮನುಪುತ್ರಿ, ಪರಿಪೂರ್ಣನಾದ ಶ್ರೀಹರಿಯು ಜಡದೇಹಗಳಲ್ಲಿ ಇದ್ದರೂ ಅವನಿಗೆ ಯಾವ ಬಗೆಯ ವಿಕಾರವೂ ಇರುವುದಿಲ್ಲ. ಅವನು ಮತ್ತೊಬ್ಬರಿಗೆ ಅಧೀನನಾಗಿ ಕರ್ತೃವೆನಿಸಿಲ್ಲ. ಪ್ರಾಕೃತಗುಣಗರಹಿತನವನು. ಪ್ರಾಕೃತ ದೇಹದ ಗುಣಗಳೆನಿಸಿದ ಸುಖ-ದುಃಖ ಹುಟ್ಟು-ಸಾವು ಮೊದಲಾದವುಗಳಿಂದ ದೂರನಾಗಿರವನು ನೀರಿನಲ್ಲಿ ಕಾಣುವ ಸೂರ್ಯನಲ್ಲಿ ನೀರಿನ ದೋಷಗಳು ಸಂಬಂಧಿಸುವುಂಟೇ ? 'ಅಹಂ' ಎಂಬ ಪ್ರತ್ಯಕ್ಷಕ್ಕೆ ವಿಷಯನಾದ ಜೀವನಾದರೂ ಹೀಗಲ್ಲ. ಅವನು ಜಡದೇಹದಲ್ಲಿ ದೇಹಾಭಿಮಾನಯುಕ್ತನಾದಾಗ ಹುಟ್ಟುವನು. ಅಹಂಕಾರ ಮಮಕಾರಗಳಿಗೆ ವಶನಾಗಿ ಶ್ರೀಹರಿಯನ್ನು ಮರೆತು ತಾನೇ ಸ್ವತಂತ್ರಕರ್ತನೆಂದು ಭ್ರಾಂತನಾಗಿದ್ದಾನೆ. ಈ ಭ್ರಾಂತಿಯ ಫಲವಾಗಿ ಸುಖದುಃಖ ರೂಪವಾದ ಸಂಸಾರವನ್ನು ಹೊಂದಿದ್ದಾನೆ. ಇವನು ಶ್ರೀಹರಿಯ ಅಧೀನ. ಶಬ್ದ ಮೊದಲಾದ ವಿಷಯಗಳು ನಶ್ವರವಾದ್ದರಿಂದ ಇವನ ಮನಸ್ಸಿಗೆ ತೃಪ್ತಿಯನ್ನು ಉಂಟುಮಾಡಲಾರವು. ಆದರೂ ಈ ಬಗೆಯ ವಿಷಯಗಳಲ್ಲಿ ಆಸಕ್ತನಾಗಿ ಕರ್ಮಗಳ ದೋಷಕ್ಕೆ ಆಶ್ರಯನಾಗಿ ತತ್ಫಲವಾಗಿ ದೇವಾಸುರ ಮನುಷ್ಯ ಯೋನಿಗಳಲ್ಲಿ ಹುಟ್ಟು ಸಾವುಗಳಿಗೆ ಈಡಾಗುತ್ತಾನೆ. ಇವನು ಯಾವಾಗಲೂ ಶಬ್ದ ಮೊದಲಾದ ವಿಷಯಗಳನ್ನೇ ಆಲೋಚಿಸುತ್ತಿರುವನು. ಮುಕ್ತಿಯೋಗ್ಯನಾದ ಈ ಜೀವನ ಸ್ವರೂಪವು ಸುಖಜ್ಞಾನಾತ್ಮಕವಾದುದು. ಆದರೂ ವಿಷಯಾನುಭವಕಾಲದಲ್ಲಿ ಇವನಿಗೆ (ನಿತ್ಯ) ಸುಖಿ ಎಂಬ ವ್ಯವಹಾರವಿರುವುದಿಲ್ಲ. ಇವನಿಗಾಗುವ ಪ್ರಯೋಜನವು ಬಾಧಿತ (ನಶ್ವರ)ವಾದುದು. ಆದರೂ ಅದರ ಪರಿಣಾಮವಾದ ಸಂಸಾರವೆಂಬ ಅನರ್ಥವು ಇವನಿಗೆ ತಪ್ಪುವುದಿಲ್ಲ. ಎಚ್ಚರದಲ್ಲಿದ್ದಾಗ ವಿವಿಧ ಪದಾರ್ಥಗಳನ್ನು ಆಲೋಚಿಸಿದುದರ ಫಲವಾಗಿ ಸ್ವಪ್ನದಲ್ಲಿ ಕತ್ತೆಯನ್ನು ಏರಿದಂತೆ ಕಂಡವನು ಅಬಾಧಿತವಾಗಿ ಆ ಬಗೆಯ ವ್ಯವಹಾರಕ್ಕೆ ವಿಷಯನಲ್ಲವಾದರೂ ಆ ಸ್ವಪ್ನದಿಂದ ಸೂಚಿತವಾದ ಮರಣರೂಪವಾದ ಅನರ್ಥಕ್ಕೆ ಗುರಿಯಾಗುವನಲ್ಲವೆ ! ಈ ಸಂಸಾರವು ಜೀವನಿಗೆ ಆಗಂತುಕವಾದ್ದರಿಂದ ಅದನ್ನು ಹೋಗಲಾಡಿಸಿಕೊಳ್ಳ-ಬಹುದು. ಅವನು ಅನ್ಯಥಾಜ್ಞಾನ ಮತ್ತು ಅಜ್ಞಾನಗಳನ್ನು ಕಳೆದುಕೊಂಡು ಶಾಸ್ತ್ರಜ್ಞಾನವನ್ನು ಹೊಂದಿ ಈ ವಿಷಯ ಸೇವನೆಯು ಆತ್ಮನಾಶಕ್ಕೆ (ಅಧೋಗತಿಗೆ)

ಕಾರಣವೆಂದು ಮನವರಿತು ವಿಷಯಗಳು ಅನಿತ್ಯಗಳೆಂದೂ ಆದ್ದರಿಂದ ಶಾಶ್ವತಫಲ ಕೊಡಲಾರವೆಂದೂ ತಿಳಿದು ಈ ಸಂಸಾರಕ್ಕೆ ಕಾರಣವಾದ ವಿಷಯಗಳ ಆಲೋಚನೆಯನ್ನೇ ಬಿಟ್ಟು ಬಿಡಬೇಕು. ವಿಷಯಗಳಲ್ಲಿ ಮನಸ್ಸಿನ ಆಸಕ್ತಿಯೇ (ಸಂಗವೇ)ಸಂಸಾರಕ್ಕೆ ಕಾರಣವು. ಅಂತಹವರ ಮಾರ್ಗವು ಎಂದಿಗೂ ಮೋಕ್ಷಮಾರ್ಗವಲ್ಲ. ಆದ್ದರಿಂದ ಮನಸ್ಸನ್ನು ಮೋಕ್ಷವಿರುದ್ಧವಾದ ಆ ಮಾರ್ಗದಿಂದ ಕ್ರಮವಾಗಿ ಹಿಂತೆಗೆದುಕೊಳ್ಳಬೇಕು. ಇದಕ್ಕಾಗಿ ಶ್ರೀಹರಿಯಲ್ಲಿ ನಿರತಿಶಯ ಭಕ್ತಿಯನ್ನು ಮಾಡಬೇಕು. ವಿಷಯಗಳಲ್ಲಿ ವೈರಾಗ್ಯವನ್ನು ಹೊಂದಬೇಕು. ಹೀಗೆ ಮನಸ್ಸನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳಬೇಕು. ಯಮ, ನಿಯಮ ಮತ್ತು ಪ್ರಾಣಾಯಾಮಗಳನ್ನು ಅಭ್ಯಾಸಮಾಡಿ 'ಓಂ'ಕಾರವನ್ನು ಧ್ಯಾನಿಸುತ್ತಾ ಶ್ರೀಹರಿಯಲ್ಲಿ ಶದ್ಧಾಯುಕ್ತವಾದ ಭಕ್ತಿಯನ್ನು ಮಾಡಬೇಕು. ಯಾವ ಪ್ರಾಣಿಗೂ ಅಹಿತಕರವಾದ ಮಾತನ್ನಾಡದೆ ಸರ್ವಭೂತಹಿತವಾದ ಮಾತನ್ನಾಡಬೇಕು. ಶ್ರೀಹರಿಯ ಕಥಾಶ್ರವಣ-ಮಾಡಬೇಕು. ಸರ್ವ ಅಂತರ್ಯಾಮಿರೂಪಗಳೂ ಪರಿಪೂರ್ಣಗಳೆಂದೂ ಅಭಿನ್ನಗಳೆಂದೂ ತಿಳಿಯಬೇಕು. ವಿಷ್ಣುಭಕ್ತರಲ್ಲಿ ದ್ವೇಷಮಾಡದೆ, ವಿಷಯಾಸಕ್ತರೊಂದಿಗೆ ವ್ಯವಹರಿಸದೆ, ವಿಷಯಾನುಭವದಲ್ಲಿ ಆಸಕ್ತನಾಗದೆ, ಲೌಕಿಕ ಹರಟೆಯಲ್ಲಿ ಮಗ್ನನಾಗದೆ ಶ್ರೇಷ್ಠವಾದ ತನ್ನ ವರ್ಣ ಮತ್ತು ಆಶ್ರಮೋಚಿತ ಧರ್ಮಾನುಷ್ಠಾನ-ದಿಂದ ಶ್ರೀಹರಿಯನ್ನು ಸೇವಿಸಬೇಕು. ಅದೃಷ್ಟನಿಯಾಮಕನಾದ ಶ್ರೀಹರಿಯು ಕೊಟ್ಟದ್ದರಿಂದ ತೃಪ್ತನಾಗಿ ಮಿತಾಹಾರವನ್ನು ಸೇವಿಸುತ್ತಾ ಶ್ರೀಹರಿಯ ಗುಣಗಳನ್ನು ಮನನಮಾಡಬೇಕು. ಏಕಾಂತ ಪ್ರದೇಶದಲ್ಲಿ ಇದ್ದುಕೊಂಡು ಮನಸ್ಸನ್ನು ಶ್ರೀಹರಿಯಲ್ಲಿಯೇ ನೆಲೆಗೊಳಿಸಿ, ಸಜ್ಜನರಿಗೆ ಬಂದ ಕಷ್ಟದಲ್ಲಿ ನೆರವಾಗಿ ಗಾಯತ್ರೀಪ್ರತಿಪಾದ್ಯನಾದ ಶ್ರೀಹರಿಯ ರೂಪವನ್ನು ತ್ರಿಸಂಧ್ಯಗಳಲ್ಲಿಯೂ ಧ್ಯಾನಮಾಡುತ್ತಾ ಮಿತ್ರರೂ ಅಥವಾ ಉದಾಸೀನರೂ ಆದ ಸಜ್ಜನರಲ್ಲಿ ಕೃಪೆ ಮಾಡುವವನಾಗಬೇಕು. ಮನಸ್ಸನ್ನು ವಶಪಡಿಸಿಕೊಂಡು ಕರ್ಮವಶದಿಂದ ಬಂದ ದೇಹದಲ್ಲಿಯೂ ಅದರ ಸಲುವಾಗಿ ಅನುಬಂಧಿಗಳಾದ ಪತ್ನೀ ಪುತ್ರ ಮೊದಲಾದ ಬಾಂಧವರಲ್ಲಿಯೂ ನಾನು ನನ್ನದು ಎಂಬ ದುರಾಗ್ರಹವನ್ನು ಹೊಂದದೆ ಇರಬೇಕು. ಶ್ರೀಹರಿಯ, ಚೇತನರ ಮತ್ತು ಪ್ರಕೃತಿಯ ಯಥಾವತ್ತಾದ ಜ್ಞಾನವನ್ನು ಸಂಪಾದಿಸಬೇಕು. ಹೀಗೆ ತತ್ವಜ್ಞಾನಿಯಾಗಿ ಅತಿನಿದ್ರೆಗೆ ಒಳಗಾಗದೆ ಶಬ್ದ ಮೊದಲಾದ ವಿಷಯಗಳ ಆಲೋಚನೆಯನ್ನು ಬಿಟ್ಟು, ಕೆಟ್ಟ ಮತಗಳ ಸಿದ್ಧಾಂತಗಳನ್ನು ಅಪ್ರಾಮಾಣಿಕಗಳೆಂದು ತಿಳಿದು ಸತ್ಸಿದ್ಧಾಂತದಂತೆ ಉಪಾಸನೆ ಮಾಡುತ್ತಾ ಸ್ವರೂಪಾಂತಃಕರಣದಿಂದ ತನ್ನ ಸ್ವರೂಪವನ್ನು ಕಂಡು ನಾಮಾಭಿಮಾನಿಯಾದ ಉಷಾದೇವಿಯಿಂದ ಹಿಡಿದು ಪ್ರಾಣದೇವರ

ಪರ್ಯಂತರಾದ ದೇವತೆಗಳ ಅಪರೋಕ್ಷವನ್ನು ಪಡೆದು ಅವರ ಅನುಗ್ರಹದ ಫಲವಾಗಿ ಬಿಂಬರೂಪಿಯಾದ ಶ್ರೀಹರಿಯನ್ನು ಕಂಡು ಅವನೇ ಸರ್ವಸ್ವಾಮಿಯೆಂದೂ ಮುಖ್ಯತಮನೆಂದು ಉಪಾಸಿಸಬೇಕು.

ಆಗ ಪ್ರಾರಬ್ಧಕರ್ಮಕ್ಷಯವಾದಮೇಲೆ ಪ್ರಳಯಕಾಲದಲ್ಲಿ ಬ್ರಹ್ಮದೇವರನ್ನು ಪ್ರವೇಶಿಸಿ (ಶ್ರೀಹರಿಯ ಉದರದಲ್ಲಿ ಇದ್ದು ಮತ್ತೆ ಸೃಷ್ಟಿಯಕಾಲದಲ್ಲಿ) ಲಿಂಗ ದೇಹವನ್ನು ತ್ಯಜಿಸಿ ಪ್ರಾಣದೇವರ ಬಂಧುವೂ, ಸರ್ವರೂಪಗಳಲ್ಲಿ ಸಮನೂ, ನಿರ್ದೋಷನೂ, ಸರ್ವಜ್ಞನೂ, ಮುಕ್ತಾಮುಕ್ತಜಗತ್ತಿಗೆ ಆಶ್ರಯನೂ ಸಮಾಧಿ ಕರಹಿತನೂ ಆದ ಶ್ರೀಹರಿಯನ್ನು ಹೊಂದುವನು. ಬ್ರಹ್ಮದೇವರೇ ಪ್ರತಿಬಿಂಬವಾಗಿ-ಉಳ್ಳ ಇವನನ್ನು ಬ್ರಹ್ಮದೇವರ ಅನುಗ್ರಹದಿಂದಲೇ ಕಾಣಲು ಸಾಧ್ಯವು. ಸ್ವಚ್ಛವಾದ ಗೋಡೆಯಲ್ಲಿ ಪ್ರತಿಬಿಂಬಿಸಿದ ನೀರಿನ ಪ್ರತಿಬಿಂಬದಿಂದ ನೀರಿನಲ್ಲಿ ಪ್ರತಿಬಿಂಬಿಸಿದ ಸೂರ್ಯನನ್ನು ಕಾಣುವಂತೆ, ನೀರಿನಲ್ಲಿನ ಸೂರ್ಯನ ಪ್ರತಿಬಿಂಬದಿಂದ ಆಕಾಶಗತನಾದ ಸೂರ್ಯನನ್ನು ಕಾಣುವಂತೆ, ದಡದಲ್ಲಿ ಇರುವ ಪುರುಷನ ಮುಖವನ್ನು ನೀರಿನಲ್ಲಿ ಬಿದ್ದಿರುವ ಅದರ ನೆರಳಿನಿಂದ ತಿಳಿಯುವಂತೆ ಶೇಷದೇವರ ಪ್ರತಿಬಿಂಬರಾದ ಇಂದ್ರಿಯಾದ್ಯಭಿಮಾನಿ ಇಂದ್ರಾದಿ ದೇವತೆಗಳ ಅನುಗ್ರಹದಿಂದ ಅಹಂಕಾರಾಭಿಮಾನಿ ಇಂದ್ರಾದಿ ದೇವತೆಗಳ ಅನುಗ್ರಹದಿಂದ ಅಹಂಕಾರಾಭಿಮಾನ ಶೇಷದೇವರನ್ನೂ, ಬ್ರಹ್ಮಪ್ರತಿಬಿಂಬರಾದ ಈ ಶೇಷದೇವರ ಅನುಗ್ರಹದಿಂದ ಬ್ರಹ್ಮದೇವರನ್ನೂ (ವಾಯುದೇವರನ್ನೂ) ಶ್ರೀಹರಿಯ ಪ್ರತಿಬಿಂಬರಾದ ಬ್ರಹ್ಮದೇವರ ಅನುಗ್ರಹದಿಂದ ಶ್ರೀಹರಿಯನ್ನೂ ಉಪಾಸಕನು ಕಾಣುವನು. ಶ್ರೀಹರಿಯನ್ನು ಸಾಕಲ್ಯೇನ ಯಾರೂ ತಿಳಿಯಲಾರರಾದ್ದರಿಂದ ಶ್ರೀಹರಿಯೊಬ್ಬನೇ ಮುಖ್ಯ(ನಿರುಪಚರಿತ)ವಾಗಿ ಯಥಾರ್ಥ ಜ್ಞಾನಿಯು.

ಇವನು ಪ್ರತಿಬಿಂಬರಾದ ಬ್ರಹ್ಮಾದಿ ಚೇತನರು ಅವರವರ ಯೋಗ್ಯತಾನುಸಾರ-ವಾಗಿ ಯಥಾರ್ಥಜ್ಞಾನಿಗಳು. ಇವರೊಡನೆ ಶ್ರೀಹರಿಯು ಇದ್ದರೂ ಎಂದೂ ಅವನು ಅಪೂರ್ಣ ಜ್ಞಾನನಲ್ಲ. ಭೂತ, ತನ್ಮಾತ್ರೆ, ಇಂದ್ರಿಯಮತ್ತು ಬುದ್ಧಿ ಇವುಗಳ ಅಭಿಮಾನಿಗಳಾದ ದೇವತೆಗಳು ಸಂಸಾರಿಯಾದ ಜೀವನ ಸ್ಥೂಲದೇಹದಲ್ಲಿ ಇದ್ದು ನಿದ್ರಾಕಾಲದಲ್ಲಿ ಉಪರತರಾಗಿದ್ದರೂ ಶ್ರೀಹರಿಯು ನಿದ್ರಾರಹಿತನೂ, ಅಭಿಮಾನರಹಿತನೂ ಆಗಿ ಎಚ್ಚೆತ್ತಿರುವನು. ಇದರಿಂದಲೇ ಅವನಿಗೆ ಅಜ್ಞಾನಾದಿ-ಗಳಿಲ್ಲವೆಂದು ತಿಳಿಯಬೇಕು. ಆದರೆ ಜೀವನು ನಿದ್ರಾವಸ್ಥೆಯಲ್ಲಿ ಮನೋಧರ್ಮ-ವಾದ ಅಹಂಕಾರವು ನಷ್ಟವಾದ್ದರಿಂದ ತನ್ನನ್ನೂ ನಷ್ಟನಂತೆ ವ್ಯರ್ಥವಾಗಿ ತಿಳಿದು ಹಣವನ್ನು ಕಳೆದುಕೊಂಡ ಧನಿಕನಂತೆ ಆತುರನಾಗಿರುವನು. ಇವನಿಗೆ

ಶ್ರೀಹರಿಯಂತೆ ವಿನಷ್ಟವಾಗದ ದ್ರಷ್ಟೃತ್ವ(ಜ್ಞಾನ)ವಿಲ್ಲವಾಗಿ ಇವನು ಶ್ರೀಹರಿಗಿಂತ ಭಿನ್ನನು. ಹೀಗೆ ಜೀವ ಪರಬ್ರಹ್ಮರಿಗೆ ಭೇದವನ್ನು ತಿಳಿದು ಶ್ರೀಹರಿಯೇ ಜೀವರಿಗೆ ಸತ್ತೆಯನ್ನೂ ಜ್ಞಾನವನ್ನೂ ಕೊಟ್ಟು ಅನುಗ್ರಹಿಸುವನೆಂದು, ಉಪಾಸಿಸಿ ಶ್ರೀಹರಿಯನ್ನು ಜೀವನು ಹೊಂದುವನು.

ದೇವಹೂತಿ - ಗುಣಪೂರ್ಣನಾದ ಶ್ರೀಹರಿಯೇ, ಪ್ರಕೃತಿಯೂ ನಿತ್ಯ; ಜೀವನೂ ನಿತ್ಯ; ಪ್ರಾಕೃತದೇಹವಿಲ್ಲದೆ ಜೀವನ ಚೇಷ್ಟೆಯೇ ಆಗುವಂತಿಲ್ಲ. ಜೀವನ ಸಂಬಂಧವಿಲ್ಲದೆ ಅಚೇತನವಾದ ಪ್ರಕೃತಿಯೂ ಚೇಷ್ಟೆ ಮಾಡಲಾರದು. ಆದ್ದರಿಂದ ಪರಸ್ಪರ ಉಪಕಾರಿಗಳಾದ ಇವರಿಬ್ಬರಿಗೂ ವಿಯೋಗವೇ ಸಾಧ್ಯವಿಲ್ಲ. ಹೀಗಾಗಿ ತ್ರಿಗುಣಾತ್ಮಕ ಪ್ರಕೃತಿಯ ಸಂಬಂಧವು ಪುಣ್ಯಪಾಪಗಳ ಫಲಕ್ಕೆ ಭಾಗಿಯಾದ ಜೀವನಿಗೆ ಎಂದೂ ತಪ್ಪುವಂತಿಲ್ಲ. ಭೂಮಿಗೂ ಗಂಧಕ್ಕೂ, ಜಲಕ್ಕೂ ರಸಕ್ಕೂ ಹೇಗೆ ಪರಸ್ಪರ ಬಿಡುಗಡೆ ಇಲ್ಲವೋ ಹಾಗೆ ಪ್ರಕೃತಿಗೂ ಜೀವನಿಗೂ ಪರಸ್ಪರ ವಿರಹವು ಇಲ್ಲವೇ ಇಲ್ಲ. ಜೀವನು ಸ್ವತಂತ್ರಕರ್ತನಲ್ಲ. ಇವನಿಗೆ ಸಂಸಾರ ಪ್ರಾಪ್ತಿಯು ಪ್ರಾಕೃತಗುಣಗಳನ್ನೇ ಆಶ್ರಯಿಸಿರುವುದು. ಅಂದಮೇಲೆ ಜೀವನಿಗೆ ಈ ಪ್ರಕೃತಿ ಬಂಧದಿಂದ ಮುಕ್ತಿಯು ಸಾಧ್ಯವೇ ಇಲ್ಲ. ಪ್ರಾಕೃತ ಗುಣಗಳು ಹೋದರಲ್ಲವೇ ಅದರ ಕಾರ್ಯವಾದ ಸಂಸಾರವೂ ಹೋದೀತು ! ನೀನು ಜೀವ ಪರಮಾತ್ಮರ ಭೇದಜ್ಞಾನದಿಂದ ಈ ಪ್ರಕೃತಿಬಂಧವು ಹೋಗುತ್ತದೆಂದು ಹೇಳಿದ್ದೀ. ಅದರಿಂದ ಸಂಸಾರ ಹೋಗವುದಿಲ್ಲವೆಂಬ ಭಯವು ಸ್ವಲ್ಪಮಟ್ಟಿಗೆ ನಿವೃತ್ತಿಯಾದರೂ ಬಾಹ್ಯಾಂತಃಕರಣವು ಹೋಗದಿರುವುದರಿಂದ ಮತ್ತೆ ಹೋಗುವುದೋ ಇಲ್ಲವೋ ಎಂಬ ಸಂಶವು ಉಳಿದೇ ಇದೆ. ದಯವಿಟ್ಟು ಅದನ್ನು ನಿವಾರಿಸು.

ಕಪಿಲ - ಮನುಪುತ್ರಿ ! ಯಾವ ಫಲಾಪೇಕ್ಷೆಯೂ ಇಲ್ಲದೆ ಮಾಡುವ ವರ್ಣಾಶ್ರಮಧರ್ಮಗಳು ಶುದ್ಧವೆನಿಸುವುವು. ಇವುಗಳನ್ನು ಆಚರಿಸಿ ಬಹುಕಾಲ ವೇದಾಂತಶಾಸ್ತ್ರಶ್ರವಣ ಮಾಡಬೇಕು. ಅದರಿಂದ ಶ್ರೀಹರಿಯಲ್ಲಿ ಅತಿಶಯವಾದ ಭಕ್ತಿಯು ಹುಟ್ಟುವುದು. ಇದರ ಫಲವಾಗಿ ಶ್ರೀಹರಿಯನ್ನು ಹಿಡಿದು ಎಲ್ಲ ದೇವತೆಗಳ ಅಪರೋಕ್ಷವಾಗುವುದು. ಇದಾಗಬೇಕಾದರೆ ದೃಢವಾದ ವಿಷಯ ವೈರಾಗ್ಯವಿರಬೇಕು. ಕಾಯಶುದ್ಧಿಕರಗಳಾದ ಉಪವಾಸಾದಿ ವ್ರತಗಳೂ, ಅಷ್ಟಾಂಗ ಸಹಿತವಾದ ಯೋಗಾಭ್ಯಾಸವೂ, ಇದರಿಂದ ನಿಶ್ಚಲವಾದ ಮನಸ್ಸಿನ ಏಕಾಗ್ರತೆಯೂ ಸಾಧ್ಯವಾಗುವುದು. ಈ ಏಕಾಗ್ರಧ್ಯಾನದಿಂದ ಉಂಟಾದ ಜ್ಞಾನಾಗ್ನಿಯಿಂದ ಪುರುಷನಿಗೆ ಅಂಟಿಕೊಂಡಿರುವ ಪ್ರಕೃತಿಯು ಬೆಂಕಿಯ ಜ್ವಾಲೆಯಿಂದ ಬೆಂಕಿಗೆ ಕಾರಣವಾದ ಅಶ್ವತ್ಥದ ಕೊರಡು (ಅರಣಿ) ನಾಶವಾಗುವಂತೆ ಕ್ರಮವಾಗಿ ಕಾಣದೆ

ಹೋಗುವುದು. ತನ್ನ ಬಿಂಬರೂಪಿಯಾದ ಶ್ರೀಹರಿಯನ್ನು ಅಪರೋಕ್ಷೀ-ಕರಿಸಿಕೊಂಡು ಅವನ ಅನುಗ್ರಹವನ್ನು ಸಂಪಾದಿಸಿ ತನ್ನ ಸ್ವರೂಭೂತವಾದ ಜ್ಞಾನಾನಂದಾದಿಗಳನ್ನು ಹೊಂದಿರುವ ಜೀವನನ್ನು ಸಂಪೂರ್ಣವಾಗಿ ಅನುಭೂತವಾಗಿ ದೋಷದರ್ಶನದಿಂದ ಬಿಡಲ್ಪಟ್ಟ ಪ್ರಕೃತಿಯು ಮತ್ತೆ ಸಂಸಾರಕ್ಕೆ ಗುರಿಪಡಿಸಲಾರದು. ನಿದ್ರೆಯಲ್ಲಿರುವವನು ನಿದ್ರೆಯಿಂದ ಹುಲಿ ಮೊದಲಾದ ಕ್ರೂರಪ್ರಾಣಿಗಳ ಭಯಕ್ಕೆ ಒಳಪಡುವಂತೆ ಎಚ್ಚೆತ್ತಿರುವನು ಒಳಪಡುವುದಿಲ್ಲವಷ್ಟೆ! ಹೀಗೆಯೇ ನಾಮಾಭಿಮಾನಿಯಾದ ಉಷಾದೇವಿಯಿಂದ ಹಿಡಿದು ಪರಮಾತ್ಮ ಪರ್ಯಂತವಾದ ಎಲ್ಲ ತತ್ವಗಳ ಅಪರೋಕ್ಷವನ್ನು ಪಡೆದು ಶ್ರೀಹರಿಯಲ್ಲಿಯೇ ಮನಸ್ಸನ್ನಿಟ್ಟಿರುವ ಭಕ್ತನಿಗೆ ಪ್ರಕೃತಿಯು ಸಂಸಾರಕ್ಕೆ ಕಾರಣವಾಗಲಾರದು. ಹೀಗೆ ಅನೇಕ ಜನ್ಮಗಳಲ್ಲಿ ಸ್ವೋತ್ತಮರಿಂದ ಹಿಡಿದು ಶ್ರೀಹರಿಯ ಪರ್ಯಂತ ಎಲ್ಲ ದೇವತೆಗಳಲ್ಲಿಯೂ ಯಥಾಯೋಗ್ಯ (ತಾರತಮ್ಯಕ್ಕನುಗುಣವಾಗಿ) ಭಕ್ತಿಮಾಡಿ, ಸತ್ಯಲೋಕದವರೆಗೂ ಎಲ್ಲ ಲೋಕಗಳೂ ಎಲ್ಲ ಪದವಿಗಳೂ ಅನಿತ್ಯವೂ ಅಸಾರವೂ ಎಂದು ದೃಢವಾದ ವೈರಾಗ್ಯವನ್ನು ಹೊಂದಿ ಶ್ರೀಹರಿಯ ಗುಣಗಳನ್ನೆ ಮನನಮಾಡುತ್ತ ಭಕ್ತಿಯುಕ್ತನಾಗಬೇಕು. ಆಗ ಶ್ರೀಹರಿಯ ಅತಿಶಯ ಅನುಗ್ರಹ-ವಾಗುವುದು. ಅದರ ಫಲವಾಗಿ ಎಲ್ಲ ದೇವತೆಗಳ ಅಪರೋಕ್ಷವಾಗುವುದು. ಹೀಗೆ ತನ್ನ ಮತ್ತು ಇತರ ದೇವತೆಗಳ ಸ್ವರೂಪವನ್ನು ಅರಿತ ಜೀವನು ಎಲ್ಲ ಸಂಶಯಗಳನ್ನೂ ಹೋಗಲಾಡಿಸಿಕೊಂಡವನಾಗಿ ತತ್ವನಿಶ್ಚಯವನ್ನು ಹೊಂದುವನು. ಆಗ ಶ್ರೀಹರಿಯಲ್ಲಿಯೇ ರತಿಯನ್ನು ಹೊಂದಿ ಯೋಗಸಿದ್ಧಿಯನ್ನು ಪಡೆಯುವನು. ಲಿಂಗಶರೀರವನ್ನು ಹೋಗಲಾಡಿಸಿಕೊಂಡು ಅವನು ತನ್ನ ಸ್ವರೂಪಾಭಿವ್ಯಕ್ತಿಯನ್ನು ಹೊಂದಿ ಶ್ರೀಹರಿಯನ್ನೇ ಹೊಂದುವನು. ಶ್ರೀಹರಿಯೊಬ್ಬನನ್ನೇ ಆಶ್ರಯಿಸಿರುವು-ದರಿಂದ ನಿಃಶ್ರೇಯಸವೆಂದೂ ಹೆಸರು. ಇಂತಹ ಮೋಕ್ಷವನ್ನು ಪಡೆದ ಜೀವನು ಮತ್ತೆ ಸೃಷ್ಟಿಗೆ ಬರುವುದಿಲ್ಲ. ಉಪಾಸಕನು ಈ ಭಗೆಯ ಸಾಧನಮಾರ್ಗದಲ್ಲಿ ಇರುವಾಗ ಯೋಗೇಶ್ವರನಾದ ಶ್ರೀಹರಿಯ ಅನುಗ್ರಹದಿಂದ 'ಅಣಿಮಾ' ಮೊದಲಾದ ಯೋಗಸಿದ್ಧಿಗಳನ್ನೂ ಹೊಂದುವನು. ಅವುಗಳನ್ನು ಅನುಭವಿಸುವ ಇಚ್ಛೆಯಿಂದ ಅವುಗಳಲ್ಲಿಯೇ ಅವನು ಆಸಕ್ತನಾದರೆ ಮುಕ್ತಿಯು ವಿಳಂಬವಾಗುವುದು. ಆಸಕ್ತನಾಗದೆ ಶ್ರೀಹರಿಯಲ್ಲಿಯೇ ನಿರತನಾದಲ್ಲಿ ಪುನರಾವೃತ್ತಿರೂಪವಾದ ಮೃತ್ಯುವಿನ ಭಯವಿಲ್ಲದ ನಿತ್ಯವಾದ ನನ್ನ ಸ್ಥಾನವನ್ನು ಜಾಗ್ರತೆಯಾಗಿ ಹೊಂದುವನು. ಇದೇ ಮೋಕ್ಷವು.



# ಅಥ ಏಕೋನತ್ರಿಂಶೋಽಧ್ಯಾಯಃ

ಶ್ರೀಕಪಿಲನಾಮಕಪರಮಾತ್ಮನು ವಿರಕ್ತನಾಗಿ ಭಕ್ತಿಯನ್ನು ಪಡೆದವನಿಗೆ, ಪರಮಾತ್ಮನ ಉಪಾಸನೆಯಿಂದ ಉಂಟಾದ ಅಪರೋಕ್ಷಜ್ಞಾನದಿಂದ ಸ್ವರೂಪಾ-ವಿರ್ಭಾವರೂಪವಾದ ಮೋಕ್ಷವಾಗುವುದೆಂದು ಹೇಳಿ, ಈಗ ಅಪರೋಕ್ಷಜ್ಞಾನಕ್ಕೆ ಜನಕವಾದ ಅಷ್ಟಾಂಗಯೋಗವನ್ನು ಹೇಳುವೆನೆಂದು ಪ್ರತಿಜ್ಞೆ ಮಾಡುವನು-

**ಶ್ರೀಭಗವಾನುವಾಚ**

**ಯೋಗಸ್ಯ ಲಕ್ಷಣಂ ವಕ್ಷ್ಯೇ ಸಬೀಜಸ್ಯ ನೃಪಾತ್ಮಜೇ ।**
**ಮನೋ ಯೇನೈವ ವಿಧಿನಾ ಪ್ರಸನ್ನಂ ಯಾತಿ ಸತ್ಪಥಮ್ ॥೧॥**

ಹೇ ನೃಪಾತ್ಮಜೇ=ಸ್ವಾಯಂಭುವಪುತ್ರಿಯಾದ ದೇವಹೂತಿಯೇ ! ಯೇನ= ಯಾವ ವಿಧಿನಾ=ಪ್ರಕಾರದಿಂದ ಪ್ರಸನ್ನಂ=ಸಂತುಷ್ಟವಾಗಿ ಮನಃ=ಮನಸ್ಸು ಸತ್ಪಥಂ= ಬ್ರಹ್ಮಮಾರ್ಗವನ್ನು ಯಾತಿ=ಹೊಂದುವುದೋ ಅಂಥ ಸಬೀಜಸ್ಯ=ವಿಷ್ಣುದೇವತಾ-ಕವಾದ ಯೋಗಸ್ಯ=ಅಷ್ಟಾಂಗಯೋಗದ ಲಕ್ಷಣಂ=ಅಸಾಧಾರಣಧರ್ಮ ಹೇಳುವ ಮುಖಾಂತರ ಸ್ವರೂಪವನ್ನು ವಕ್ಷ್ಯೇ=ಹೇಳುವೆನು.

ಈ ಶ್ಲೋಕದಲ್ಲಿರುವ ಸಬೀಜಸ್ಯ ಎಂಬ ಪದಕ್ಕೆ ಪ್ರಕೃತ ಸಂಗತವಾದ ಅರ್ಥವನ್ನು ಮತ್ತು ಅದರಿಂದ ವ್ಯಾವರ್ತ್ಯವನ್ನೂ ಹೇಳುವರು ಶ್ರೀಮದಾಚಾರ್ಯರು –

**ಸಬೀಜೋ ವೈಷ್ಣವೋ ಯೋಗೋ ನಿರ್ಬೀಜಸ್ತ್ವನ್ಯದೇವತಾಃ ।**
**ಬೀಜಂ ವಿಷ್ಣುರ್ಹಿ ಜಗತಃ ಶಾಖಾದ್ಯಾಸ್ತ್ವನ್ಯದೇವತಾಃ ॥ ಇತಿ ಕೌರ್ಮೇ**

ಯಾವ ಕಾರಣ ಜಗತ್ತಿಗೆ ವಿಷ್ಣುವು ವ್ಯಂಜಕನೋ ಆಕಾರಣ ಬೀಜಶಬ್ದವಾಚ್ಯನು. ಅದ್ದರಿಂದ ವಿಷ್ಣುಸಹಿತವಾದ ಅಂದರೆ ವಿಷ್ಣುದೇವತಾಕವಾದ ಯೋಗವು ಸಬೀಜವು. ಇತರ ದೇವತೆಗಳು ಶಾಖಾ=ಟೊಂಗೆಗಳಿದ್ದಂತೆ. ಆದ್ದರಿಂದ ಆ ದೇವತೆಗಳ ಯೋಗವು ನಿರ್ಬೀಜವೆನಿಸುವುದು ಎಂದು ಕೂರ್ಮ ಪುರಾಣದಲ್ಲಿ ಹೇಳಿದೆ. ॥೧॥

ಯೋಗವು ಜ್ಞಾನಸಾಧನ, ಯೋಗಕ್ಕೆ ಸಾಧನ ಯಾವುದೆಂದು ಹೇಳುವನು, 'ಸ್ವಧರ್ಮಾಚರಣಂ' ಎಂದಾರಂಭಿಸಿ 'ಸಮಾಧಾನಂ ತಥಾತ್ಮನಃ' ಎಂಬಲ್ಲಿವರೆಗೆ. ಮೊದಲಿಗೆ ನಿಮಯಗಳನ್ನು ಹೇಳುವರು –

**ಸ್ವಧರ್ಮಾಚರಣಂ ಶಕ್ತ್ಯಾ ವಿಧರ್ಮಾಚ್ಚ ನಿವರ್ತನಮ್ ।**
**ದೈವಲಬ್ಧೇನ ಸಂತೋಷ ಆತ್ಮವಿಚ್ಚರಣಾರ್ಚನಮ್ ॥೨॥**

ಶಕ್ತ್ಯಾ=ಶಕ್ತ್ಯಾನುಸಾರವಾಗಿ ಸ್ವಧರ್ಮಾಚರಣಂ=ತನಗೆ ವಿಹಿತವಾದ ಧರ್ಮಾನುಷ್ಠಾನ ಮಾಡುವುದು, ವಿಧರ್ಮಾಚ್ಚ ನಿವರ್ತನಂ=ಧರ್ಮದಂತೆ ಕಾಣುವ ವಸ್ತುತಃ ಧರ್ಮವಲ್ಲದ ಶಾಸ್ತ್ರನಿಷಿದ್ಧವಾದದ್ದನ್ನು ಪರಿತ್ಯಾಗ ಮಾಡವುದು, ದೈವಲಬ್ಧೇನ ಸಂತೋಷಃ=ತನ್ನ ಅದೃಷ್ಟಪ್ರೇರಕ ಭಗವಂತನ ಅನುಗ್ರಹದಿಂದ ದೊರೆತದ್ದರಿಂದ ಅಲಂಬುದ್ಧಿ (ಸಾಕು ಎನ್ನುವ ಬುದ್ಧಿ) ಇರುವುದು. ಆತ್ಮವಿಚ್ಚರಣಾ-ರ್ಚನಂ=ಬ್ರಹ್ಮಜ್ಞಾನಿಗಳ ಪಾದಗಳನ್ನು ಪೂಜಿಸುವುದು.

'ವಿಧರ್ಮಃ ಪರಧರ್ಮಶ್ಚ ಆಭಾಸ ಉಪಮಾ ಛಲಃ । ಅಧರ್ಮಶಾಖಾಃ ಪಂಚೇಮಾಃ ಧರ್ಮಜ್ಞೋಽಧರ್ಮವತ್ ತ್ಯಜೇತ್'' ಎಂದು ಹೇಳಿದ ಪ್ರಕಾರ ಅಧರ್ಮದ ಶಾಖೆಗಳಾದ ಐದನ್ನೂ ಧರ್ಮಜ್ಞನು ತ್ಯಜಿಸಬೇಕು, ಎಂದು ವಿಧರ್ಮಾಚ್ಚ ನಿವರ್ತನಂ ಎಂಬುದಕ್ಕೆ ಅರ್ಥ. ॥೨॥

**ಗ್ರಾಮ್ಯಧರ್ಮನಿವೃತ್ತಿಶ್ಚ ಮೋಕ್ಷಧರ್ಮರತಿಸ್ತಥಾ ।**
**ಮಿತಮೇಧ್ಯಾದನಂ ಶಶ್ವದ್ ವಿವಿಕ್ತಕ್ಷೇತ್ರಸೇವನಮ್ ॥೩॥**

ಗ್ರಾಮ್ಯಧರ್ಮನಿವೃತ್ತಿಃ=ವಿಷಯಸೇವನೆಯನ್ನು ಬಿಡುವುದು ಅಥವಾ ತ್ರೈವರ್ಗಿಕವಾದ ಪ್ರವೃತ್ತಧರ್ಮತ್ಯಾಗ ಮೋಕ್ಷಧರ್ಮರತಿಃ=ನಿವೃತ್ತಧರ್ಮದಲ್ಲಿ ಆಸಕ್ತಿ ಮಿತಮೇಧ್ಯಾದನಂ=ಮಿತವಾದ ಶುದ್ಧವಾದ ಆಹಾರ ಸೇವನೆ ಶಶ್ವತ್= ಯಾವಾಗಲೂ ವಿವಿಕ್ತಕ್ಷೇತ್ರಸೇವನಂ=ಶ್ರೀಹರಿಯ ಕ್ಷೇತ್ರಗಳಿಗೆ ಹೋಗುವುದು ಅಥವಾ ನಿರ್ಜನಸ್ಥಾನದಲ್ಲಿರುವುದು. (ಇವು ನಿಯಮಗಳು) ''ದ್ವೌ ಭಾಗೌ ಪೂರಯೇದನ್ನೈಸ್ತೋಯೇನೈಕಂ ತು ಪೂರಯೇತ್, ಮಾರುತಸ್ಯ ಪ್ರಚಾರಾರ್ಥಂ ಚತುರ್ಥಮವಶೇಷಯೇತ್'' ''ಸವ್ಯಂಜನಸ್ಯ ಅಶನಸ್ಯ ಅರ್ಧಂ, ಉದಕಸ್ಯ ತೃತೀಯಂ, ವಾಯೋಃಸಂಚರಣಾರ್ಥಂ ಚತುರ್ಥಂ ಅವಶೇಷಯೇತ್ ಎಂದು ಹೇಳಿದ ಪ್ರಕಾರ ಪಲ್ಯ,ಚಟ್ನಿ ಮುಂತಾದ ವ್ಯಂಜನಸಹಿತವಾದ ಅನ್ನಕ್ಕೆ ಉದರದ ಅರ್ಧ ಭಾಗ, ನೀರಿಗೆ ಒಂದು ಭಾಗ, ಗಾಳಿಗೆ ಒಂದು ಭಾಗ ಎಂದು ಹೇಳಿದ ಪ್ರಕಾರ ಮಿತಶಬ್ದಾರ್ಥ ತಿಳಿಯಬೇಕು. ಮೇಧ್ಯ ಎಂದರೆ ಶಾಸ್ತ್ರವಿಹಿತ ಶುದ್ಧವೆಂದರ್ಥ. ॥೩॥

ಯಮಗಳನ್ನು ಹೇಳವರು –

**ಅಹಿಂಸಾ ಸತ್ಯಮಸ್ತೇಯಂ ಯಾವದರ್ಥಪರಿಗ್ರಹಃ ।**
**ಬ್ರಹ್ಮಚರ್ಯಂ ತಪಃ ಶೌಚಂ ಸ್ವಾಧ್ಯಾಯಃ ಪುರುಷಾರ್ಚನಂ ॥೪॥**

ಅಹಿಂಸಾ=ಶಾಸ್ತ್ರನಿಷಿದ್ಧಹಿಂಸೆಮಾಡದಿರುವುದು ಸತ್ಯಂ=ಸುಳ್ಳು ಹೇಳದಿರುವುದು, ಸಜ್ಜನರಿಗೆ ಹಿತವಾಗುವಂತೆ ನುಡಿಯುವುದು, ಅಸ್ತೇಯಂ=ಯಜಮಾನ- ನಿಗೆ ತಿಳಿಯದೇ ಒಂದು ಹುಲ್ಲು ಕಡ್ಡಿಯನ್ನೂ ತೆಗೆದುಕೊಳ್ಳದಿರುವುದು, ಯಾವದರ್ಥಪರಿಗ್ರಹಃ=ತನ್ನ ಶರೀರಯಾತ್ರಾ ನಡೆಯುವಷ್ಟು ಮಾತ್ರ ಧಾನ್ಯಾದಿಗಳನ್ನು ಸ್ವೀಕರಿಸುವುದು, ತಪಃ=ಉಪವಾಸಾದಿಗಳು, ತತ್ತ್ವವಿಚಾರ ಮಾಡುವುದು, (ತದ್ಧಿ ತಪಃ) ಶೌಚಂ=ಹೊರ ಒಳಗಿನ ಶುದ್ಧಿ ಸ್ವಾಧ್ಯಾಯಃ= ವೇದಾಧ್ಯಯನರೂಪ ಬ್ರಹ್ಮಯಜ್ಞವು ಪುರುಷಾರ್ಚನಂ=ಶ್ರೀಮನ್ನಾರಾಯಣನ ಪೂಜೆ ಮಾಡುವುದು ಬ್ರಹ್ಮಚರ್ಯ ಇವುಗಳು ಯಮವೆನಿಸುವುವು-

ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಂ।
ಸಂಕೇತೋಽಧ್ಯವಸಾಯಶ್ಚಕ್ರಿಯಾನಿರ್ವೃತಿರೇವ ಚ॥
ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ।
ವಿಪರೀತಂ ಬ್ರಹ್ಮಚರ್ಯಮೇತದೇವಾಷ್ಟಲಕ್ಷಣಂ॥

ಸ್ತ್ರೀಯನ್ನು ಸ್ಮರಿಸುವುದು, ವರ್ಣಿಸುವುದು (ಕೇಲಿಃ) ಕ್ರೀಡಿಸುವುದು, ನೋಡವುದು, ಏಕಾಂತದಲ್ಲಿ ಮಾತನಾಡಿಸುವುದು, ಸಂಜ್ಞೆಮಾಡುವುದು, ಸಂಪರ್ಕಿಸುವ ನಿಶ್ಚಯ, ಸಂಭೋಗಿಸುವುದು ಹೀಗೆ ಎಂಟು ವಿಧವಾದುದು ಮೈಥುನ. ಈ ಎಂಟನ್ನೂ ಮಾಡದಿರುವುದೇ ಬ್ರಹ್ಮಚರ್ಯೆ ಎನಿಸುವುದು. ॥೪॥

ಆಸನ ಮುಂತಾದ ಅಂಗಗಳನ್ನು ಹೇಳುವರು -

**ಮೌನಂ ಸದಾಸನಂ ಸ್ಥೈರ್ಯಂ ಪ್ರಾಣಾನಾಂ ಚ ಜಯಃ ಶನೈಃ ।**
**ಪ್ರತ್ಯಾಹಾರಶ್ಚೇಂದ್ರಿಯಾಣಾಂ ವಿಷಯಾನ್ಮನಸಾ ಹೃದಿ ॥೫॥**

ಮೌನಂ=ವ್ಯರ್ಥಮಾತನಾಡದಿರುವುದು ಸದಾಸನಂ=ಪದ್ಮಾಸನವು ಸ್ಥೈರ್ಯಂ =ವೈಷ್ಣವಸಿದ್ಧಾಂತದಿಂದ ಚಲಿಸದಿರುವುದು ಶನೈಃ=ನಿಧಾನವಾಗಿ ಪ್ರಾಣಾನಾಂ ಜಯಃ=ಪ್ರಾಣಾಯಾಮಾದಿಗಳಿಂದ ಪ್ರಾಣಗಳನ್ನು ಜಯಿಸುವುದು. ಮನಸಾ ಸಹ ಇಂದ್ರಿಯಾಣಾಂ ವಿಷಯಾತ್ ಹೃದಿ ಸ್ಥಿತಂ ಹರಿಂ ಪ್ರತಿ ಪ್ರತ್ಯಾಹಾರಃ=ಮನಸ್ಸಿನಿಂದ ಸಹಿತವಾಗಿ ಎಲ್ಲ ಇಂದ್ರಿಯಗಳನ್ನು ವಿಷಯಗಳಿಂದ ಕಿತ್ತು ಹೃದಯದಲ್ಲಿರುವ ಶ್ರೀಹರಿಯಲ್ಲಿ ನೆಲೆಸುವುದು ಪ್ರತ್ಯಾಹಾರವೆನಿಸುವುದು. ॥೫॥

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ, ಹೀಗೆ ಎಂಟು ವಿಧವಾದುದು ಯೋಗ. ಅದರಲ್ಲಿ ಯಮಾದಿಗಳೈದು ಧಾರಣಾದಿಗಳಿಗೆ ಅಂಗವಾದುದರಿಂದ ಅವುಗಳನ್ನು ಹೇಳಿ ಈಗ ಧಾರಣಾದಿಗಳನ್ನು ಹೇಳುವರು -

**ಸ್ವಧಿಷ್ಣ್ಯಾನಾಮೇಕದೇಶೇ ಮನಸಾ ಪ್ರಾಣಧಾರಣಮ್ ।**
**ವೈಕುಂಠಲೀಲಾಭಿಧ್ಯಾನಂ ಸಮಾಧಾನಂ ತಥಾಽಽತ್ಮನಃ ॥೬॥**

ಸ್ವಧಿಷ್ಣ್ಯಾನಾಂ=ಸ್ವಶಬ್ದವಾಚ್ಯನಾದ ಶ್ರೀಹರಿಯ ಪಾದಾದಿಸ್ಥಾನಗಳಲ್ಲಿ ಏಕದೇಶೇ=ಒಂದೊಂದೇ ಅವಯವದಲ್ಲಿ ಮನಸಾ ಪ್ರಾಣಧಾರಣಂ=ಮನಸ್ಸಿನ ಜೊತೆಗೆ ಇಂದ್ರಿಯಗಳನ್ನು ಸ್ಥಾಪಿಸುವುದನ್ನು (ಇರಿಸುವುದು) ಧಾರಣಾ=ಧಾರಣಾ ಎಂದು ಕರೆಯುತ್ತಾರೆ 'ಖಂಡಸ್ಮೃತಿರ್ಧಾರಣಾ ಸ್ಯಾತ್ ಅಖಂಡಾ ಧ್ಯಾನಮುಚ್ಯತೇ' ಎಂದು ಹೇಳಿದೆ. ಈ ಧಾರಣಾದಿಂದ ಸಾಧ್ಯವಾದ ಎಲ್ಲ ಅವಯವಗಳ ಧ್ಯಾನವನ್ನು ಹೇಳುವರು–

ವೈಕುಂಠಲೀಲಾಭಿಧ್ಯಾನಂ=ಶ್ರೀಹರಿಯ, ತನಗೆ ಉಪಾಸನೆ ಮಾಡಲು ಯೋಗ್ಯವಾದ ಗುಣಗಳ ಸಮ್ಯಗ್‌ಧ್ಯಾನಮಾಡುವುದು. ಇದರಿಂದ ಆತ್ಮನಃ ಸಮಾಧಾನಂ=ಮನಸ್ಸನ್ನು ಪ್ರಯತ್ನವಿಲ್ಲದೆ ಶ್ರೀಹರಿಯಲ್ಲಿ ಇರಿಸುವಿಕೆ ಎಂಬ ಸಮಾಧಿಯು ಉಂಟಾಗುವುದು, ಎಂದು ತಿಳಿಯಬೇಕು. ಪ್ರಯತ್ನಪೂರ್ವಕ ಮನಸ್ಸಿನ ಇರಿಸುವಿಕೆಯು ಧ್ಯಾನವು. ಅಪ್ರಯತ್ನದಿಂದ ಮನಃಸ್ಥಿತಿಯು ಸಮಾಧಿಯಾದ ಕಾರಣ ಪುನರುಕ್ತಿ ಇಲ್ಲ.

**ಸಮಾಧಿರಪ್ರಯತ್ನೇನ ಮನಸಃ ಸಂಸ್ಥಿತಿರ್ಭವೇತ್ । ಇತಿ ಚ ।**

ಪ್ರಯತ್ನವಿಲ್ಲದೇ ಹರಿಯಲ್ಲಿ ಮನ ನಿಲ್ಲುವುದೇ ಸಮಾಧಿ ಎಂದು ಭಾವ ॥೬॥

**ಏತೈರನ್ಯೈಶ್ಚ ಪಥಿಭಿರ್ಮನೋ ದುಷ್ಟಮಸತ್ಪಥಮ್ ।**
**ಬುಧ್ಯಾ ಯುಂಜೀತ ಶನಕೈರ್ಜಿತಪ್ರಾಣೋ ಹ್ಯತಂದ್ರಿತಃ ॥೭॥**

ದುಷ್ಟಂ=ವಿಷಯಸಂಗದಿಂದ ದೂಷಿತವಾದ ಅಸತ್ಪಥಂ=ದುರ್ಮಾರ್ಗದಲ್ಲಿರುವ ಮನಃ=ಮನಸ್ಸನ್ನು ಏತೈಃ ಅನ್ಯೈಃ ಪಥಿಭಿಃ=ವ್ರತದಾನಾದಿ ಉಪಾಯಗಳಿಂದ ಶನಕೈಃ=ನಿಧಾನವಾಗಿ ಅಂತದ್ರಿತಃ=ಆಲಸ್ಯರಹಿತನಾಗಿ ಜಿತಪ್ರಾಣಃ=ಇಂದ್ರಿಯಗಳನ್ನು ಗೆದ್ದು ಬುದ್ಧ್ಯಾ ಯುಂಜೀತ=ಶ್ರೀಹರಿಯಲ್ಲಿಯೇ ಇರಿಸಬೇಕು ಯಾವಾಗಲೂ ಶ್ರೀಹರಿಯನ್ನೇ ಚಿಂತಿಸಬೇಕು. ॥೭॥

ಆಸನವನ್ನಾರಂಭಿಸಿ ಸಮಾಧಿಯವರೆಗೆ ಮತ್ತೆ ವಿಶದಪಡಿಸುವುರು –

**ಶುಚೌ ದೇಶೇ ಪ್ರತಿಷ್ಠಾಪ್ಯ ವಿಜಿತಾಸನ ಆಸನಂ ।**
**ತಸ್ಮಿನ್ ಸ್ವಸ್ತಿಸಮಾಸೀನ ಋಜುಕಾಯಃ ಸಮಭ್ಯಸೇತ್ ॥೮॥**

ವಿಜಿತಾಸನಃ=ಪದ್ಮಾಸನವನ್ನಭ್ಯಸಿಸಿದವನಾಗಿ ಶುಚೌ ದೇಶೇ=ಶುದ್ಧವಾದ ಸ್ಥಳದಲ್ಲಿ ಆಸನಂ ಪ್ರತಿಷ್ಠಾಪ್ಯ=ಚೈಲಾಜಿನಕುಶೋತ್ತರಂ ಎಂದು ಹೇಳಿದ ಪ್ರಕಾರ ವಸ್ತ್ರ ಕೃಷ್ಣಾಜಿನ, ದರ್ಭೆಗಳನ್ನು ಪ್ರತಿಷ್ಠಾಪ್ಯ=ಹಾಕಿಕೊಂಡು ತಸ್ಮಿನ್=ಅವುಗಳ ಮೇಲೆ ಸ್ವಸ್ತಿಸಮಾಸೀನಃ=ಸುಖವಾಗುವಂತೆ ಚೆನ್ನಾಗಿ ಕುಳಿತುಕೊಂಡು ಋಜುಕಾಯಃ =ದೇಹವನ್ನು ನೀಳವಾಗಿರಿಸಿ ಸಮಭ್ಯಸೇತ್=ಪ್ರಾಣಧಾರಣವನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು. ॥೮॥

**ಪ್ರಾಣಸ್ಯ ಶೋಧಯೇನ್ಮಾರ್ಗಂ ಪೂರಕುಂಭಕರೇಚಕೈಃ ।**
**ಪ್ರತಿಕೂಲೇನ ವಾ ಚಿತ್ತಂ ಯಥಾಸ್ಥಿರಮಚಂಚಲಮ್ ॥೯॥**

ಪೂರಕುಂಭಕರೇಚಕೈಃ=ಪೂರಕ, ಕುಂಬಕ, ರೇಚಕಗಳಿಂದ, ಪ್ರತಿಕೂಲೇನ= ರೇಚಕ, ಕುಂಭಕ ಪೂರಕಗಳಿಂದ ವಾ=ಅಥವಾ ರೇಚಕ ಪೂರಕ ಕುಂಭಕಗಳಿಂದಲೂ ಯಥಾ=ಹೇಗೆ ಮಾಡುವರಿಂದ ಚಿತ್ತಂ=ಮನಸ್ಸು ಸ್ಥಿರಂ ಸತ್=ಸ್ಥಿರವಾಗಿ ಅಚಂಚಲಂ=ಚಂಚಲವಾಗದಂತೆ ಇರುವುದೋ ತಥಾ=ಹಾಗೆ, ಪ್ರಾಣಸ್ಯ ಮಾರ್ಗಂ ಶೋಧಯೇತ್=ಶ್ವಾಸಮಾರ್ಗವನ್ನು ಶುದ್ಧಗೊಳಿಸಬೇಕು. ॥೯॥

ಪ್ರಾಣಾಯಾಮದ ಫಲ ಹೇಳುವರು-

**ಮನೋಽಚಿರಾತ್ ಸ್ಯಾದ್ ವಿರಜಂ ಜಿತಶ್ವಾಸಸ್ಯ ಯೋಗಿನಃ ।**
**ವಾಯ್ವಗ್ನಿಭ್ಯಾಂ ಯಥಾ ಲೋಹಂ ಧ್ಮಾತಂ ತ್ಯಜತಿ ವೈ ಮಲಂ॥೧೦॥**

ಯಥಾ=ಹೇಗೆ ವಾಯ್ವಗ್ನಿಭ್ಯಾಂ=ಗಾಳಿ,ಬೆಂಕಿಗಳಿಂದ ಧ್ಮಾತಂ=ಚನ್ನಾಗಿ ಕಾಯಿಸಿದ ಲೋಹಂ=ಚಿನ್ನವು ಮಲಂ ತ್ಯಜತಿ=ಕೊಳೆಯನ್ನು ಕಳೆದುಕೊಳ್ಳುವುದೋ ತಥಾ= ಹಾಗೆ ಜಿತಶ್ವಾಸಸ್ಯ=ವಾಯುಜಯಗಳಿಸಿದ ಯೋಗಿನಃ=ಸಾಧಕನ ಮನಃ=ಮನಸ್ಸು ಅಚಿರಾತ್=ಬೇಗನೆ ವಿರಜಂ ಸ್ಯಾತ್=ನಿರ್ಮಲವಾಗುವುದು. ॥೧೦॥

**ಪ್ರಾಣಾಯಾಮೈರ್ದಹೇದ್ ದೋಷಾನ್ ಧಾರಣಾಭಿಶ್ಚ ಕಿಲ್ಬಿಷಾನ್ ।**
**ಪ್ರತ್ಯಾಹಾರೇಣ ಸಂಸರ್ಗಾನ್ ಧ್ಯಾನೇನಾನೀಶ್ವರಾನ್ ಗುಣಾನ್ ॥**

ಪ್ರಾಣಾಯಾಮೈಃ=ಪ್ರಾಣಾಯಾಮಗಳಿಂದ ದೋಷಾನ್=ಮನಸ್ಸಿನ ದೋಷ- ಗಳಾದ ರಾಗದ್ವೇಷಾದಿಗಳನ್ನು ಧಾರಣಾಭಿಃ=ಭಗವಂತನ ಒಂದೊಂದು ಅವಯವಧ್ಯಾನರೂಪವಾದ ಖಂಡಸ್ಮೃತಿಗಳಿಂದ ಕಿಲ್ಬಿಷಾನ್=ಬ್ರಹ್ಮಹತ್ಯಾ ಮುಂತಾದವನ್ನು ಅಥವಾ ಜನ್ಮಾಂತರದಲ್ಲಿ ಸಂಚಿತ ಪಾಪಗಳನ್ನು ಪ್ರತ್ಯಾಹಾರೇಣ= ಇಂದ್ರಿಯಗಳನ್ನು ಶ್ರೀಹರಿಯ ಕಡೆಗೆ ಸೆಳೆಯುವುದರಿಂದ ಸಂಸರ್ಗಾನ್=

ದುಷ್ಟವಿಷಯಸಂಬಂಧವನ್ನೂ ದುರ್ಜನರ ಸಂಗವನ್ನೂ ಧ್ಯಾನೇನ=ಶ್ರೀಹರಿಯ ಲೀಲಾಧ್ಯಾನದಿಂದ ಅನೀಶ್ವರಾನ್ ಗುಣಾನ್=ಶ್ರೀಹರಿಯ ಐಶ್ವರ್ಯ ವಿರೋಧಿಯಾದ ಪ್ರಾಕೃತಸತ್ವಾದಿಗುಣಗಳನ್ನು ದಹೇತ್=ದೂರೀಕರಿಸಬೇಕು. ॥೧೧॥

**ಯದಾ ಮನಃ ಸ್ವಂ ವಿರಜಂ ಯೋಗೇನ ಸುಸಮಾಹಿತಮ್ ।**
**ಕಾಷ್ಠಾಂ ಭಗವತೋ ಧ್ಯಾಯೇತ್ ಸ್ವನಾಸಾಗ್ರಾವಲೋಕನಃ ॥೧೨॥**

ಯೋಗೇನ=ಪ್ರಾಣಾಯಾಮಾದಿ ಉಪಾಯದಿಂದ ಯದಾ=ಯಾವಾಗ ವಿರಜಂ=ನಿರ್ಮಲವಾದ ಸ್ವಂ ಮನಃ=ತನ್ನ ಮನಸ್ಸು ಸುಸಮಾಹಿತಂ=ಪ್ರಯತ್ನವಿಲ್ಲದೇ ಭಗವಂತನಲ್ಲಿ ನೆಲೆಸುವುದೋ ತದಾ=ಆಗ ಸ್ವನಾಸಾಗ್ರಾವಲೋಕನಃ=ತನ್ನ ಮೂಗಿನ ತುದಿಯನ್ನೇ ನೋಡುವನಾಗಿ ಬೇರೆಡೆ ನೋಡದೆ ಭಗವತಃ ಕಾಷ್ಠಾಂ ಧ್ಯಾಯೇತ್=ಉತ್ಕೃಷ್ಟತಾರತಮ್ಯದ ಅವಧಿಯಾದ (ಸರ್ವೋತ್ತಮವಾದ) ಪೂರ್ಣವಾದ ಶ್ರೀಹರಿಯ ಮೂರ್ತಿಯನ್ನು ಧ್ಯಾನಿಸಬೇಕು. ॥೧೨॥

ಧ್ಯೇಯಮೂರ್ತಿಯನ್ನು ವರ್ಣಿಸುವರು –

**ಪ್ರಸನ್ನವದನಾಂಭೋಜಂ ಪದ್ಮಗರ್ಭಾರುಣೇಕ್ಷಣಮ್ ।**
**ನೀಲೋತ್ಪಲದಲಶ್ಯಾಮಂ ಶಂಖಚಕ್ರಗದಾಧರಂ ॥೧೩॥**

ಪ್ರಸನ್ನವದನಾಂಭೋಜಂ=ಸಂತುಷ್ಟವಾದ (ವಿಕಸಿತವಾದ) ಮುಖ ಕಮಲವುಳ್ಳ ಪದ್ಮಗರ್ಭಾರುಣೇಕ್ಷಣಂ=ಕಮಲದ ಒಳಭಾಗದಂತೆ ಕೆಂಪಾದ ಕಣ್ಣುಳ್ಳ ನೀಲೋತ್ಪಲದಲಶ್ಯಾಮಂ=ನೀಲ ಕಮಲದಳದಂತೆ ಕಪ್ಪಾದ ಶಂಖಚಕ್ರಗದಾಧರಂ=ಶಂಖ, ಚಕ್ರ, ಗದೆಗಳನ್ನು ಧರಿಸಿದ ॥೧೩॥

**ಲಸತ್ಪಂಕಜಕಿಂಜಲ್ಕಪೀತಕೌಶೇಯವಾಸಸಮ್ ।**
**ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಾಮುಕ್ತಕಂಧರಮ್ ॥೧೪॥**

ಲಸತ್=ಹೊಳೆಯುವ ಪಂಕಜ=ಕಮಲದ ಕಿಂಜಲ್ಕ=ಕೇಸರದಂತೆ ಪೀತ=ಹಳದಿಯಾದ ಕೌಶೇಯ=ರೇಷ್ಮೆಯ ವಾಸಸಂ=ವಸ್ತ್ರಗಳನ್ನು ಧರಿಸಿದ ಶ್ರೀವತ್ಸ ವಕ್ಷಸಂ=ವಕ್ಷಸ್ಥಲದಲ್ಲಿ ಶ್ರೀವತ್ಸ=ಚಿನ್ಹವುಳ್ಳ ಭ್ರಾಜತ್ ಪ್ರಕಾಶಮಾನವಾದ ಕೌಸ್ತುಭಾಮುಕ್ತ=ಕೌಸ್ತುಭಮಣಿಯಿಂದ ಸಂಬದ್ಧವಾದ ಕಂಧರಂ=ಕುತ್ತಿಗೆಯುಳ್ಳ ಕಂಠದಲ್ಲಿ ಕೌಸ್ತುಭವನ್ನು ಧರಿಸಿದೆಂದರ್ಥ. ॥೧೪॥

**ಮತ್ತದ್ವಿರೇಫಾಕುಲಯಾ ಪರೀತಂ ವನಮಾಲಯಾ ।**
**ಪರಾರ್ಘ್ಯಹಾರವಲಯಕಿರೀಟಾಂಗದನೂಪರಮ್ ॥೧೫॥**

ಮತ್ತ=ಸಂತುಷ್ಟಗಳಾದ ದ್ವಿರೇಫ=ಭ್ರಮರಗಳಿಂದ ಆಕುಲಯಾ=ವ್ಯಾಪ್ತವಾದ ವನಮಾಲಯಾ=ವನಮಾಲೆಯಿಂದ ಪರೀತಂ=ಕೂಡಿದ ಪರಾರ್ಘ್ಯಹಾರವಲಯ-ಕಿರೀಟಾಂಗದನೂಪರಮ್=ಪರಾರ್ಘ್ಯ=ಅಮೌಲ್ಯವಾದುದರಿಂದ ಶ್ರೇಷ್ಠವಾದ ಹಾರ, ವಲಯ=ಕಡಗ, ಕಿರೀಟ, ಅಂಗದ=ಕೈಗೆ ಹಾಕುವ ಆಭರಣ ನೂಪರಂ=ಕಾಲ್ಗೆಜ್ಜೆಗಳನ್ನು ಧರಿಸಿದ ॥೧೫॥

**ಕಾಂಚೀಗುಣೋಲ್ಲಸಚ್ಛ್ರೋಣಿಂ ಹೃದಯಾಂಭೋಜವಿಷ್ಟರಮ್ ।**
**ದರ್ಶನೀಯತಮಂ ಶಾಂತಂ ಮನೋನಯನನಂದನಂ ॥೧೬॥**

ಕಾಂಚೀಗುಣೋಲ್ಲಸಚ್ಛ್ರೋಣಿಂ=ಉಡದಾರದಿಂದ ಶೋಭಿಸುವ ನಿತಂಬ ಪ್ರದೇಶವುಳ್ಳ, ಹೃದಯಾಂಭೋಜವಿಷ್ಟರಂ=ಭಕ್ತರ ಹೃದಯವೇ ಆಸನವಾಗಿವುಳ್ಳ, ದರ್ಶನೀಯತಮಂ=ಅತ್ಯಂತ ಸುಂದರನಾದ, ಶಾಂತಂ=ಶಾಂತನಾದ, ಮನೋ-ನಯನನಂದನಂ=ಕಣ್ಣುಗಳಿಗೆ ಆನಂದವನ್ನೀವ ॥೧೬॥

**ಅಪೀಚ್ಯದರ್ಶನಂ ಶಶ್ವತ್ ಸರ್ವಲೋಕನಮಸ್ಕೃತಮ್ ।**
**ಸಂತಂ ವಯಸಿ ಕೈಶೋರೇ ಭಕ್ತಾನುಗ್ರಹಕಾತರಮ್ ॥೧೭॥**

ಅಪೀಚ್ಯದರ್ಶನಂ=ಹದಿನಾರು ವರ್ಷದವನಂತೆ ಕಾಣುವ ಶಶ್ವತ್=ಯಾವಾಗಲೂ ಸರ್ವಲೋಕನಮಸ್ಕೃತಂ=ಸಮಸ್ತಜನರಿಂದ ವಂದ್ಯನಾದ ಕೈಶೋರೇ ವಯಸಿ=ಹನ್ನೆರಡುವರ್ಷ ವಯಸ್ಸಿನಲ್ಲಿರುವ ಭಕ್ತಾನುಗ್ರಹಕಾತರಂ=ಭಕ್ತರನ್ನು ಅನುಗ್ರಹ ಮಾಡಲು ಉತ್ಸುಕನಾದ ॥೧೭॥

**ಕೀರ್ತನ್ಯತೀರ್ಥಯಶಸಂ ಪುಣ್ಯಶ್ಲೋಕಯಶಸ್ಕರಮ್ ।**
**ಧ್ಯಾಯೇದ್ ದೇವಂ ಸಮಗ್ರಾಂಗಂ ಯಾವನ್ನ ಚ್ಯವತೇ ಮನಃ ॥೧೮॥**

ಕೀರ್ತನ್ಯತೀರ್ಥಯಶಸಂ=ಕೀರ್ತನೀಯವಾದ ಶುದ್ಧವಾದ ಕೀರ್ತಿಯುಳ್ಳ ಪುಣ್ಯಶ್ಲೋಕಯಶಸ್ಕರಂ=ಬ್ರಹ್ಮಾದಿಗಳಿಗೆ ಕೀರ್ತಿಸಂಪಾದಕನಾದ, ಸಮಗ್ರಾಂಗಂ=ಎಲ್ಲ ಅವಯವಸಹಿತನಾದ ದೇವಂ=ಪರಮಾತ್ಮನನ್ನು, ಮನಃ=ಮನಸ್ಸು ಯಾವತ್ ನ ಚ್ಯವತೇ=ಎಲ್ಲಿಯವರೆಗೆ ಚಲಿಸುವುದಿಲ್ಲವೋ ಅಲ್ಲಿಯವರೆಗೆ ಧ್ಯಾಯೇತ್=ಧ್ಯಾನಮಾಡಬೇಕು. ॥೧೮॥

**ಸ್ಥಿತಂ ವ್ರಜಂತಮಾಸೀನಂ ಶಯಾನಂ ವಾ ಗುಹಾಶಯಮ್ ।**
**ಪ್ರೇಕ್ಷಣೀಯೇಹಿತಂ ಧ್ಯಾಯೇಚ್ಛುದ್ಧಭಾವೇನ ಚೇತಸಾ ॥೧೯॥**

ಸ್ಥಿತಂ=ನಿಂತಿರುವ, ವ್ರಜಂತಂ=ಸಂಚರಿಸುವ, ಆಸೀನಂ=ಕುಳಿತಿರುವ, ಶಯಾನಂ =ಮಲಗಿರುವ, ಗುಹಾಶಯಂ=ಹೃದಯಗುಹಾದಲ್ಲಿ ಪವಡಿಸಿರುವ ಪ್ರೇಕ್ಷಣೀ-ಯೇಹಿತಂ=ನೋಡಲೇಬೇಕಾದ ವ್ಯಾಪಾರವುಳ್ಳ ಶ್ರೀಹರಿಯನ್ನು ಶುದ್ಧಭಾವೇನ ಚೇತಸಾ=ನಿರ್ಮಲವಾದ ಭಕ್ತಿಯುತವಾದ ಮನಸ್ಸಿನಿಂದ, ಧ್ಯಾಯೇತ್=ಧ್ಯಾನ ಮಾಡಬೇಕು. ||೧೯||

**ತಸ್ಮಿನ್ ಲಬ್ಧಪದಂ ಚಿತ್ತಂ ಸರ್ವಾವಯವಸಂಸ್ಥಿತಮ್ ।**
**ವಿಲೋಕ್ಯೈಕತ್ರ ಸಂಯುಜ್ಯಾದಂಗೇ ಭಗವತೋ ಮುನಿಃ ||೨೦||**

ತಸ್ಮಿನ್=ಶ್ರೀಹರಿಯ ಎಲ್ಲ ಅವಯವಗಳಲ್ಲಿ ಲಬ್ಧಪದಂ=ಸ್ಥಾನವನ್ನು ಪಡೆದ ಸರ್ವಾವಯವಸಂಸ್ಥಿತಂ=ಏಕಕಾಲದಲ್ಲಿ ಎಲ್ಲ ಅವಯವ ವಿಷಯಕವಾಗಿರುವ ಚಿತ್ತಂ=ಮನಸ್ಸನ್ನು ವಿಲೋಕ್ಯ=ಅಸಮರ್ಥವಾದುದನ್ನು ಕಂಡು ಭಗವತಃ ಏಕತ್ರ ಅಂಗೇ ಸಂಯುಜ್ಯಾತ್=ಭಗವಂತನ ಒಂದೇ ಅವಯವದಲ್ಲಿ (ಮನಸ್ಸನ್ನು) ನಿಲ್ಲಿಸಬೇಕು.

ಸಮಗ್ರಧ್ಯಾನ ಮಾಡುವಾಗ ಏಕತ್ರ ಮನಸಿಡುವುದು ಅಸಂಗತ, ಎಂಬ ಶಂಕೆಗೆ ಸಮಾಧಾನಕರ ತಾತ್ಪರ್ಯ ಹೇಳುವರು –

**ಸರ್ವಸ್ಮರಣಾಶಕ್ತಾವೇಕಾಂಗೇ । ಯಾವನ್ನಚ್ಯವತೇ ಮನ ಇತ್ಯುಕ್ತತ್ವಾತ್ ।**
**ಸರ್ವಂ ಸ್ಮರ್ತುಮಶಕ್ತಃ ಸನ್ನೇಕಾಂಗಂ ಚಿಂತಯೇದ್ಬುಧಃ । ಇತಿ ಚ ।**

ಎಲ್ಲ ಅವಯವ ಸ್ಮರಣ ಮಾಡಲು ಅಶಕ್ಯವಾದಾಗ ಏಕಾವಯವಸ್ಮರಣ ಮಾಡಬೇಕೆಂದು ಭಾವ. ಸಮಗ್ರ ಧ್ಯಾನಮಾಡುವಾಗ ಮನಸ್ಸು ಚ್ಯುತವಾಗು-ವವರೆಗೆ ಎಂದು ಹೇಳಿದ್ದರಿಂದ ಅರ್ಥಾತ್ ಚ್ಯುತವಾದಾಗ ಅಸಮಗ್ರ ಧ್ಯಾನ ಹೇಳಿದಂತಾಯಿತು. ಅಲ್ಲದೆ ಎಲ್ಲವನ್ನೂ ಸ್ಮರಿಸಲು ಅಶಕ್ತನಾದವನು ಒಂದೊಂದು ಅಂಗವನ್ನು ಸ್ಮರಿಸಬೇಕೆಂದು ಪ್ರಮಾಣವೂ ಇದೆ, ಎಂದು ಭಾವ ||೨೦||

ಒಂದೊಂದೇ ಅವಯವ ಧ್ಯಾನಿಸಬೇಕೆಂದು ಹೇಳಿದ್ದನ್ನೇ ಪಾದದಿಂದಾರಂಭಿಸಿ ಹೇಳುವರು –

**ಸಂಚಿತಯೇದ್ ಭಗವತಶ್ಚರಣಾರವಿಂದಂ**
**ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಮ್ ।**
**ಉತ್ತುಂಗರಕ್ತವಿಲಸನ್ನಖಚಕ್ರವಾಲ –**
**ಜ್ಯೋತ್ಸ್ನಾಭಿರಾಹತಮಹದ್ಧೃದಯಾಂಧಕಾರಮ್ ||೨೧||**

ವಜ್ರ, ಅಂಕುಶ, ಧ್ವಜ, ಸರೋರುಹ=ಕಮಲಗಳೆಂಬ ಲಾಂಛನ=ಚಿನ್ಹಗಳಿಂದ ಆಢ್ಯಂ=ಯುಕ್ತವಾದ ಉತ್ತುಂಗ=ಉನ್ನತವಾದ ಎತ್ತರವಾದ ರಕ್ತ=ಕೆಂಪಾದ ವಿಲಸತ್=ಪ್ರಕಾಶಮಾನವಾದ ನಖ=ಉಗುರುಗಳೆಂಬ ಚಕ್ರವಾಲಂ=(ಚಂದ್ರ) ಮಂಡಲದ ಜ್ಯೋತ್ಸ್ನಾಭಿಃ=ಬೆಳದಿಂಗಳಿನಿಂದ ಕಾಂತಿಯಿಂದ ಆಹತ=ದೂರಿಕೃತವಾದ ಮಹದ್ಧೃದಯಾಂಧಕಾರಂ=ಧ್ಯಾನಮಾಡುವ ಮಹಾತ್ಮರ ಹೃದಯಾಂಧಕಾರ (ಅಜ್ಞಾನ)ವುಳ್ಳ ಭಗವತಃ=ಶ್ರೀಹರಿಯ ಚರಣಾರವಿಂದಂ=ಪಾದಕಮಲವನ್ನು ಸಂಚಿಂತಯೇತ್=ಚೆನ್ನಾಗಿ ಧ್ಯಾನ ಮಾಡಬೇಕು. ॥೨೧॥

**ಯಚ್ಛೌಚನಿಃಸೃತಸರಿತ್ಪ್ರವರೋದಕೇನ**
**ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ।**
**ಧ್ಯಾತುರ್ಮನಃ ಶಮಲಶೈಲನಿಸೃಷ್ಟವಜ್ರಂ**
**ಧ್ಯಾಯೇಚ್ಚಿರಂ ಭಗವತಶ್ಚರಣಾರವಿಂದಮ್ ॥೨೨॥**

ಯತ್=ಯಾವ ಚರಣಾರವಿಂದದ, ಶೌಚ=ತೊಳೆಯುವುದರಿಂದ ನಿಃಸೃತ=ಹೊರಟ ಸರಿತ್ಪ್ರವರ=ಗಂಗೆಯ ಉದಕೇನ=ನೀರಿನಿಂದ ತೀರ್ಥೇನ=ಪವಿತ್ರವಾದುದರಿಂದ ಮೂರ್ಧ್ನಿ=ಶಿರಸಿನಲ್ಲಿ ಅಧಿಧೃತೇನ=ಧಾರಣ ಮಾಡಿದ್ದರಿಂದ ಶಿವಃ=ಮಹರುದ್ರದೇವನೂ ಸಹ ಶಿವಃ ಅಭೂತ್=ಪರಮ ಮಂಗಲನಾಗಿ ಶಿವನೆನಿಸಿಕೊಂಡನೋ ಮತ್ತು ಧ್ಯಾತುಃ=ಧ್ಯಾನ ಮಾಡುವರ ಮನಃಶಮಲಶೈಲ=ಮನಸ್ಸಿನಲ್ಲಿರುವ ಪಾಪಪರ್ವತದ ನಾಶಕ್ಕಾಗಿ ನಿಸೃಷ್ಟ=ಎಸೆದ ವಜ್ರಂ=ವಜ್ರದಂತಿರುವ ಭಗವತಃ=ಚರಣಾರವಿಂದಂ ಚಿರಂ ಧ್ಯಾಯೇತ್=ಭಗವಂತನ ಪಾದಕಮಲವನ್ನು ಬಹುಕಾಲ ಧ್ಯಾನ ಮಾಡಬೇಕು. ॥೨೨॥

**ಊರೂ ಸುಪರ್ಣಭುಜಯೋರಧಿಶೋಭಮಾನಾ-**
**ವೋಜೋನಿಧೀ ಸ್ವತಸಿಕಾಕುಸುಮಾವಭಾಸೌ ।**
**ವ್ಯಾಲಂಬಿಪೀತವರವಾಸಸಿ ವರ್ತಮಾನ**
**ಕಾಂಚೀಕಲಾಪಪರಿರಂಭಿ ನಿತಂಬಮಂಬ ॥೨೩॥**

ಹೇ ಅಂಬ=ತಾಯಿಯೇ ಸುಪರ್ಣ=ಗರುಡನ ಭುಜಯೋಃ ಅಧಿ=ಹೆಗಲಿನ ಮೇಲೆ ಶೋಭಮಾನೌ=ಪ್ರಕಾಶಿಸುವ ಓಜೋನಿಧೀ=ಬಲಕ್ಕೆ ಆಧಾರಗಳಾದ ಸ್ವತಸಿಕಾಕುಸುಮಾವಭಾಸೌ=ಪ್ರಫುಲ್ಲವಾದ ಕಲ್ಪಪುಷ್ಪದಂತೆ ಅವಭಾಸೌ=ಕಾಂತಿಯುಳ್ಳ ಊರೂ=ತೊಡೆಗಳನ್ನೂ, ವ್ಯಾಲಂಬಿ=ಗುಲ್ಫದವರೆಗೆ(ಪಾದದಗಂಟು) ಜೋತಾಡುವ ಪೀತ=ಬಂಗಾರಬಣ್ಣದ ವರ=ಶ್ರೇಷ್ಠವಾದ ವಾಸಸಿ=ವಸ್ತ್ರದಲ್ಲಿ

ವರ್ತಮಾನ=ಇರುವ ಕಾಂಚೀಕಲಾಪ=ಉಡುದಾರದ ಪರಿರಂಭಿ=ಸಂಶ್ಲೇಷವುಳ್ಳ ನಿತಂಬಂ=ಕಟಿ ಪ್ರದೇಶವನ್ನೂ ಸಂಚಿತಯೇತ್=ಧ್ಯಾನಿಸಬೇಕು. ॥೨೩॥

**ನಾಭಿಹ್ರದಂ ಭುವನಕೋಶಗುಹೋದರಸ್ಥಂ**
**ಯತ್ರಾತ್ಮಯೋನಿಧಿಷಣಾಖಿಲಲೋಕಪದ್ಮಮ್ ।**
**ವ್ಯೂಢಂ ಹರಿನ್ಮಣಿಮುಷಃ ಸ್ತನಯೋರಮುಷ್ಯ**
**ಧ್ಯಾಯೇದ್ ದ್ವಯಂ ವಿತತಹಾರಮಯೂಖಗೌರಮ್ ॥**

ಯತ್ರ=ಯಾವ ನಾಭಿಸರೋವರದಲ್ಲಿ ಆತ್ಮಯೋನಿ=ಚತುರ್ಮುಖನಿಗೆ ಧಿಷಣ =ಆಶ್ರಯವಾದ ಅಖಿಲಲೋಕಪದ್ಮಂ=ಹದಿನಾಲ್ಕು ಲೋಕಾತ್ಮಕಪದ್ಮವು ವ್ಯೂಢಂ= ಉತ್ಪನ್ನವಾಯಿತೋ ಅಂಥಹ ಭುವನಕೋಶಗುಹೋದರಸ್ಥಂ=ಲೋಕಗಳಿಗೆ ಆಶ್ರಯವಾದ ಒಂದು ಗುಹೆಯಂತಿರುವ ಉದರದಲ್ಲಿರುವ ನಾಭಿಹ್ರದಂ=ನಾಭಿ ಸರೋವರವನ್ನು ಮತ್ತು ಅಮುಷ್ಯ=ಭಗವಂತನ ಹರಿನ್ಮಣಿಮುಷಃ=ಇಂದ್ರನೀಲ- ಮಣಿಯ ಕಾಂತಿಯನ್ನು ನಾಚಿಸುವ ಸ್ತನಯೋಃ=ಸ್ತನಗಳ ದ್ವಯಂ=ದ್ವಂದ್ವವನ್ನು ವಿತತಹಾರಮಯೂಖಗೌರಂ=ವಿಸ್ತೃತವಾದ ಹಾರಗಳ ಕಿರಣಗಳಿಂದ ಬಿಳಿಯಾದವನ್ನು ಧ್ಯಾಯೇತ್=ಚಿಂತಿಸಬೇಕು.ಇದರಿಂದ ವಸ್ತುತಃ ಸ್ತನದ್ವಯಗಳು ನೀಲಕಾಂತಿ- ಯುಳ್ಳದ್ದು ಹಾರಗಳಿಂದಾಗಿ ಬಿಳಿಯಾಗಿ ಕಾಣುತ್ತಿದ್ದವು ಎಂದು ಭಾವ. ॥೨೪॥

**ವಕ್ಷೋಽಧಿವಾಸಮೃಷಭಸ್ಯ ಮಹಾವಿಭೂತೇಃ**
**ಪುಂಸಾಂ ಮನೋನಯನನಿರ್ವೃತಿಮಾದಧಾನಮ್ ।**
**ಕಂಠಂ ಚ ಕೌಸ್ತುಭಮಣೇರಧಿಭೂಷಣಾರ್ಥಂ**
**ಕುರ್ಯಾನ್ಮನಸ್ಯಖಿಲಲೋಕನಮಸ್ಕೃತಸ್ಯ ॥೨೫॥**

ಅಖಿಲಲೋಕನಮಸ್ಕೃತಸ್ಯ=ಎಲ್ಲ ಜನರಿಂದ ವಂದ್ಯನಾದ ವೃಷಭಸ್ಯ= ಶ್ರೇಷ್ಠನಾದ ಶ್ರೀಹರಿಯ, ಮಹಾವಿಭೂತೇಃ=ಲಕ್ಷ್ಮೀದೇವಿಗೆ ಅಧಿವಾಸಂ=ಆವಾಸ- ಸ್ಥಾನವಾದ ವಕ್ಷಃ=ವಕ್ಷಸ್ಥಳವನ್ನು ಕೌಸ್ತುಭಮಣೇಃ=ಕೌಸ್ತುಭಮಣಿಗೆ ಅಧಿಭೂಷಣಾರ್ಥಂ =ಅಲಂಕಾರವೇ ಪ್ರಯೋಜನವಾಗಿವುಳ್ಳ ಕಂಠಂ=ಕುತ್ತಿಗೆಯನ್ನೂ ಮನಸಿ ಕುರ್ಯಾತ್=ಮನಸ್ಸಿನಲ್ಲಿ ಚಿಂತಿಸಬೇಕೆಂದು ಭಾವ. ॥೨೫॥

**ಬಾಹೂಂಶ್ಚ ಮಂದರಗಿರೇಃ ಪರಿವರ್ತನೇನ**
**ನಿರ್ಣಿಕ್ತ ಭಾಹುವಲಯಾನಧಿಲೋಕಪಾಲಾನ್ ।**
**ಸಂಚಿತಯೇದ್ ದಶಶತಾರಮಸಹ್ಯತೇಜಃ**
**ಶಂಖಂ ಚ ತತ್ಕರಸರೋರುಹರಾಜಹಂಸಮ್ ॥೨೬॥**

ಮಂದರಗಿರೇಃ=ಮಂದರಪರ್ವತವನ್ನು ಪರಿವರ್ತನೇನ= ತಿರುಗಿಸುವುದ-ರಿಂದ ನಿರ್ಣಿಕ್ತ=ಉಜ್ವಲವಾದ ಬಾಹುವಲಯಾನ್=ಕೈಗಳ ಅಲಂಕಾರವುಳ್ಳ ಅಧಿಲೋಕಪಾಲಾನ್=ಲೋಕಪಾಲಕರಾದ ಇಂದ್ರಾದಿಗಳಿಗೆ ಆಶ್ರಯವಾದ ಬಾಹೂನ್=ಬಾಹುಗಳನ್ನು ಅಸಹ್ಯತೇಜಃ=ಸಹಿಸಲಾಗದ ಕಾಂತಿಯುಳ್ಳ ದಶ-ಶತಾರಂ=ಸಾವಿರ ಹಲ್ಲುಗಳುಳ್ಳ ಚಕ್ರವನ್ನೂ ತತ್ಕರಸರೋರುಹರಾಜಹಂಸಂ=ಅವನ ಕೈ ಎಂಬ ಕಮಲದಲ್ಲಿ ರಾಜಹಂಸದಂತಿರುವ ಶಂಖಂ=ಶಂಖವನ್ನೂ ಸಂಚಿತಯೇತ್ =ಧ್ಯಾನಿಸಬೇಕು. ॥೨೬॥

**ಕೌಮೋದಕೀಂ ಭಗವತೋ ದಯಿತಾಂ ಸ್ಮರೇತ**
**ದಿಗ್ಧಾಮರಾತಿಭಟಶೋಣಿತಕರ್ದಮೇನ ।**
**ಮಾಲಾಂ ಮಧುವ್ರತವರೂಥಗಿರೋಪಘುಷ್ಟಾಂ**
**ಚೈತ್ಯಸ್ಯ ತತ್ತ್ವಮಮಲಂ ಮಣಿಮಸ್ಯ ಕಂಠೇ ॥೨೭॥**

ಅರಾತಿಭಟಶೋಣಿತಕರ್ದಮೇನ ದಿಗ್ಧಾಂ=ಶತ್ರುಗಳ ರಕ್ತವೆಂಬ ಕೆಸರಿನಿಂದ ಲೇಪಿತವಾದ ಭಗವತಃ=ಭಗವಂತನ ದಯಿತಾಂ=ಪ್ರಿಯವಾದ ಕೌಮೋದಕೀಂ= ಕೌಮೋದಕೀ ಎಂಬ ಗದೆಯನ್ನು ಮಧುವ್ರತವರೂಥಗಿರೋಪಘುಷ್ಟಾಂ= ಭ್ರಮರಗಳ ಸಮೂಹದಿಂದ ಧ್ವನಿತವಾದ ಮಾಲಾಂ=ಮಾಲೆಯನ್ನು ಅಸ್ಯ= ಶ್ರೀಹರಿಯ ಕಂಠೇ ಕುತ್ತಿಗೆಯಲ್ಲಿ ಅಮಲಂ=ನಿರ್ದುಷ್ಟವಾದ ಚೈತ್ಯಸ್ಯ ತತ್ತ್ವಂ= ಚಿತ್ತಾಭಿಮಾನಿ ಬ್ರಹ್ಮದೇವರ ಸ್ವರೂಪವಾದ (ಅಭಿಮನ್ಯಮಾನವಾದ) ಮಣಿಂ= ಕೌಸ್ತುಭಮಣಿಯನ್ನು ಸ್ಮರೇತ=ಸ್ಮರಿಸಬೇಕು.

ಚೈತ್ಯಶಬ್ದಾರ್ಥವನ್ನು ಪ್ರಮಾಣದಿಂದ ತಿಳಿಸುವರು –

**ಬ್ರಹ್ಮಾ ಚಿತ್ತಾಭಿಮಾನೇನ ಚೈತ್ಯಸ್ತನ್ನಿಯಮಾದ್ಧರಿಃ ।**
**ಸ ಚ ಬ್ರಹ್ಮಾ ಹರೇಃ ಕಂಠೇ ಕೌಸ್ತುಭತ್ವೇನ ಭಾಸತೇ ॥ಇತಿಭಾಗವತತಂತ್ರೇ**

ಭಾಗವತತಂತ್ರದಲ್ಲಿ ಹೀಗೆ ಹೇಳಿದೆ – ಮನಸ್ಸಿನ ಪ್ರಭೇಧವಾದ ಚಿತ್ತಕ್ಕೆ ಅಭಿಮಾನಿಯಾದುದರಿಂದ ಬ್ರಹ್ಮದೇವನು ಚೈತ್ಯನೆನಿಸುವನು. ಬ್ರಹ್ಮನಿಗೆ ನಿಯಾಮಕನಾದ್ದರಿಂದ ಶ್ರೀಹರಿಯು ಚೈತ್ಯನೆನಿಸುವನು. ಚಿತ್ತಾಭಿಮಾನಿ ಬ್ರಹ್ಮನು ಶ್ರೀಹರಿಯ ಕುತ್ತಿಗೆಯಲ್ಲಿ ಕೌಸ್ತುಭಮಣಿಯಾಗಿ ಶೋಭಿಸುವನು ॥೨೭॥

**ಭೃತ್ಯಾನುಕಂಪಿತಧಿಯೇಹ ಗೃಹೀತಮೂರ್ತೇಃ**
**ಸಂಚಿತಯೇದ್ ಭಗವತೋ ವದನಾರವಿಂದಮ್ ।**

**ಯದ್ವಿಸ್ಫುರನ್ಮಕರಕುಂಡಲವಲ್ಗಿತೇನ**
**ವಿದ್ಯೋತಿತಾಮಲಕಪೋಲಮುದಾರಹಾಸಮ್ ॥೨೮॥**

ಯತ್=ಯಾವ ಮುಖಕಮಲವು ವಿಸ್ಫುರತ್=ವಿಶೇಷವಾಗಿ ಹೊಳೆಯುವ ಮಕರಕುಂಡಲ=ಮೊಸಳೆಯ ಆಕಾರದ ಕರ್ಣಾಭರಣಗಳ ವಲ್ಗಿತೇನ=ಚಲನದಿಂದ ವಿದ್ಯೋತಿತ=ಪ್ರಕಾಶಮಾನವಾದ ಅಮಲ=ನಿರ್ಮಲವಾದ ಕಪೋಲಂ= ಗಲ್ಲಗಳುಳ್ಳ ಉದಾರಹಾಸಂ=ಭಕ್ತಾಭೀಷ್ಟಕೊಡಲು ಸಮರ್ಥವಾದ ನಗುವುಳ್ಳ ಭೃತ್ಯಾನುಕಂಪಿತಧಿಯಾ=ಭಕ್ತರಲ್ಲಿ ದಯೆಯಿಂದ ಕೂಡಿದ ಬುದ್ಧಿಯಿಂದ ಇಹ= ಜಗತ್ತಿನಲ್ಲಿ ಗೃಹೀತಮೂರ್ತೇಃ=ಅವತರಿಸಿದ ಭಗವತಃ=ಶ್ರೀಹರಿಯ ವದನಾರ- ವಿಂದಂ=ಮುಖಕಮಲವನ್ನು ಸಂಚಿತಯೇತ್=ಧ್ಯಾನಿಸಬೇಕು. ॥೨೮॥

**ಯಚ್ಛ್ರೀನಿಕೇತಮಲಿಭಿಃ ಪರಿಸೇವ್ಯಮಾನಂ**
**ಭೂತ್ಯಾ ಸ್ವಯಾ ಕುಟಿಲಕುಂತಲವೃಂದಜುಷ್ಟಂ ।**
**ಮೀನದ್ವಯಶ್ರಿಯಮಧಿಕ್ಷಿಪದಬ್ಜನೇತ್ರಂ**
**ಧ್ಯಾಯೇನ್ಮನೋಮಯಮತಂದ್ರಿತಉಲ್ಲಸದ್ಭ್ರು ॥೨೯॥**

ಯತ್=ಯಾವ ವದನಾರವಿಂದವು ಶ್ರೀನಿಕೇತಂ=ಭಗವತ್‌ಸ್ವರೂಪಭೂತ- ಕಾಂತಿಗೆ ಆಶ್ರಯವಾಗಿದೆಯೋ, ಅಲಿಭಿಃ ಪರಿಸೇವ್ಯಮಾನಂ=ಸುಗಂಧದ ಲೋಭದಿಂದ ಭ್ರಮರಗಳಿಂದ ಸುತ್ತುವರಿಯಲ್ಪಟ್ಟ ಸ್ವಯಾ=ಸ್ವರೂಪಭೂತವಾದ ಭೂತ್ಯಾ ಏವ=ಶೋಭೆಯಿಂದಲೇ(ಸ್ವಾಭಾವಿಕವಾಗಿ) ಕುಟಿಲ=ವಕ್ರವಾದ ಕುಂತಲ=ಕೂದಲುಗಳ ವೃಂದ=ಸಮೂಹಗಳಿಂದ ಜುಷ್ಟಂ=ಕೂಡಿದ (ಹಣೆಯ ಮೇಲೆ ಗುಂಗುರು ಕೂದಲುಳ್ಳ)ಮೀನದ್ವಯಶ್ರಿಯಂ ಅಧಿಕ್ಷಿಪತ್=ಎರಡು ಮೀನುಗಳ ಕಾಂತಿಯನ್ನು ಧಿಕ್ಕರಿಸುವ ಅಬ್ಜನೇತ್ರಂ=ಕಮಲದಂತಿರುವ ಕಣ್ಣುಳ್ಳ ಮನೋಮಯಂ=ಮನೋಹರವಾದ ಉಲ್ಲಸದ್ಭ್ರು=ಪ್ರಕಾಶಮಾನವಾದ ಹುಬ್ಬುಗಳುಳ್ಳ ಮುಖಕಮಲವನ್ನು ಅತಂದ್ರಿತಃ=ಆಲಸ್ಯರಹಿತನಾಗಿ ಧ್ಯಾಯೇತ್= ಸ್ಮರಿಸಬೇಕು. ಇದರಿಂದ ಧ್ಯಾನದಲ್ಲಿ ಆದರನೈರಂತರ್ಯ ಸೂಚಿತವಾಗುವುದು. ॥೨೯॥

'ಶ್ರೀನಿಕೇತಂ'ಎಂದರೆ ಲಕ್ಷ್ಮೀದೇವಿಗೆ ಆಶ್ರಯ ಎಂದು ಅರ್ಥ ತೋರುವುದು. ಕಾರಣ ವ್ಯಾಖ್ಯಾನಿಸುವರು:-

**ಸಾಕ್ಷಾತ್ ಶ್ರೀಸ್ತು ಹರೇ ರೂಪಂ ಇಂದಿರಾ ತು ತದಾಶ್ರಯಾತ್ ॥**

ಭಗವಂತನ ಸ್ವರೂಪವೇ ಮುಖ್ಯವಾಗಿ ಶ್ರೀಶಬ್ದವಾಚ್ಯವಾಗಿದೆ.ಅದನ್ನು ಆಶ್ರಯಸಿದ್ದರಿಂದ ಲಕ್ಷ್ಮೀದೇವಿಯೂ ಶ್ರೀ ಶಬ್ದವಾಚ್ಯಳಾಗಿದ್ದಾಳೆ. ॥೨೩॥

**ತಸ್ಯಾವಲೋಕಮಧಿಕಂ ಕೃಪಯಾಽತಿಘೋರ-**
**ತಾಪತ್ರಯೋಪಶಮನಾಯ ನಿಸೃಷ್ಟಮಕ್ಷ್ಣೋಃ ।**
**ಸ್ನಿಗ್ಧಸ್ಮಿತಾನುಗುಣಿತಂ ವಿಪುಲಪ್ರಸಾದಂ-**
**ಧ್ಯಾಯೇಚ್ಚಿರಂ ವಿತತಭಾವನಯಾ ಗುಹಾಯಾಮ್ ॥೩೦॥**

ಅಧಿಕಂ ಕೃಪಯಾ=ಇತರರಿಂದ ಅಸಾಧ್ಯವಾದಕಾರ್ಯವನ್ನು ಮಾಡಲು ಸಮರ್ಥವಾದ ಕರುಣೆಯಿಂದ, ಅತಿಘೋರತಾಪತ್ರಯೋಪಶಮನಾಯ= ಭಯಂಕರವಾದ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ತಾಪಗಳನ್ನು ನಾಶಮಾಡಲು ಅಕ್ಷ್ಣೋಃ=ಕಣ್ಣುಗಳಿಂದ ನಿಸೃಷ್ಟಂ=ನಿರ್ಮಿತವಾದ ಸ್ನಿಗ್ಧಸ್ಮಿತಾನುಗುಣಿತಂ=ಸ್ನೇಹ ಪೂರಿತವಾದ ಮಂದಹಾಸದಿಂದ ಅನುಕೂಲಿತವಾದ (ನಿಬಿಡವಾದ) ವಿಪುಲಪ್ರಸಾದಂ=ಬಹಳ ಅನುಗ್ರಹಯುತವಾದ ತಸ್ಯ=ಭಗವಂತನ ಅವಲೋಕಂ= ನೋಟವನ್ನು ಗುಹಾಯಾಮ್=ಹೃದಯದಲ್ಲಿ ವಿತತಭಾವನಯಾ=ಪೂರ್ಣಭಕ್ತಿ- ಯಿಂದ ಶಾಸ್ತ್ರಜನಿತ ಸಂಸ್ಕಾರದಿಂದ ಚಿರಂ ಧ್ಯಾಯೇತ್=ಬಹುಕಾಲ ಧ್ಯಾನ ಮಾಡಬೇಕು. ॥೩೦॥

**ಹಾಸಂ ಹರೇರವನತಾಖಿಲಲೋಕತೀವ್ರ-**
**ಶೋಕಾಶ್ರುಸಾಗರವಿಶೋಷಣಮತ್ಯುದಾರಂ ।**
**ಸಂಮೋಹನಾಯ ರಚಿತಂ ನಿಜಮಾಯಯಾಸ್ಯ**
**ಭ್ರೂಮಂಡಲಂ ಮನುಸುತೇ ಮಕರಧ್ವಜಸ್ಯ ॥೩೧॥**

ಹೇ ಮನುಸುತೇ=ಮನುಪುತ್ರಿಯೇ ಅವನತ=ನಮಸ್ಕರಿಸಿದ ಅಖಿಲಲೋಕ= ಎಲ್ಲ ಜನರ ತೀವ್ರ=ಅತ್ಯುಲ್ಬಣವಾದ ಶೋಕಾಶ್ರು=ದುಃಖದ ಕಣ್ಣೀರಿನ ಸಾಗರ= ಸಮುದ್ರವನ್ನು ಶೋಷಣಂ=ಒಣಗಿಸುವ ಅತ್ಯುದಾರಂ=ಭಕ್ತಾಭೀಷ್ಟದಾನಶೂರ- ವಾದ ಹರೇಃ=ಭಗವಂತನ ಹಾಸಂ=ನಗುವನ್ನು ಮತ್ತು ನಿಜಮಾಯಯಾ=ತನ್ನ ಇಚ್ಛೆಯಿಂದ ಮಕರಧ್ವಜಸ್ಯ=ಕಾಮನಿಗೂ ಸಂಮೋಹನಾಯ=ಮೋಹಗಳಿಸಲು ರಚಿತಂ=ನಿರ್ಮಿಸಿದ ಭ್ರೂಮಂಡಲಂ=ಹುಬ್ಬುಗಳನ್ನು ಧ್ಯಾಯೇತ್=ಧ್ಯಾನಿಸಬೇಕು. ॥೩೧॥

ಒಂದೊಂದು ಅವಯವಧ್ಯಾನ ಮಾಡಿ ಆಯಾಸವಿಲ್ಲದ ಮನಸ್ಸಿಗೆ ಸಮಗ್ರ ದೇಹಧ್ಯಾನ ಹೇಳುವರು –

**ಧ್ಯಾನಾಯನಂ ರಹಸಿ ತದ್ ಬಹುಲಾಧರೋಷ್ಠ -**
**ಭಾಸಾಽರುಣಾಯಿತತನುದ್ವಿಜಕುಂದಪಂಕ್ತಿ ।**
**ಧ್ಯಾಯೇತ್ ಸ್ವಹೃತ್ಕುಹರಕೇಽವಸಿತಸ್ಯ ವಿಷ್ಣೋ-**
**ರ್ಭಕ್ತ್ಯಾರ್ದ್ರಯಾರ್ಪಿತಮನಾ ನ ಪೃಥಗ್ ದಿದೃಕ್ಷೇತ್ ॥**

ರಹಸಿ=ಏಕಾಂತದಲ್ಲಿ ಇದ್ದು ಸ್ವಹೃತ್ಕುಹರಕೇ=ತನ್ನ ಹೃದಯಗುಹಾದಲ್ಲಿ ಅವಸಿತಸ್ಯ=ನಿಶ್ಚಿತವಾದ ಸ್ಥಿತಿಯುಳ್ಳ ಧ್ಯಾನಾಯನಂ=ಅಪ್ರಯತ್ನವಾಗಿ ಒಂದೊಂದು ಅವಯವಧ್ಯಾನವಿಷಯವಾದ, ಬಹುಲ=ಬಹಳವಾದ ಅಧರೋಷ್ಠ=ಕೆಳದುಟಿಯ ಭಾಸಾ=ಕಾಂತಿಯಿಂದ ಅರುಣಾಯಿತ ಕೆಂಪಾಗಿಸಿದ, ತನು=ಸೂಕ್ಷ್ಮವಾದ, ದ್ವಿಜ= ಹಲ್ಲುಗಳೆಂಬ, ಕುಂದ=ಮೊಗ್ಗುಗಳ ಪಂಕ್ತಿ=ಸಾಲುಗಳುಳ್ಳ ವಿಷ್ಣೋಃ=ಶ್ರೀಹರಿಯ ತತ್=ದೇಹವನ್ನು ಭಕ್ತ್ಯಾರ್ದ್ರಯಾ=ಭಕ್ತಿಯಿಂದ ತೋಯಿಸಿದ ಅರ್ಪಿತಮನಾಃ= ಸ್ಥಿರಪಡಿಸಿದ ಚಿತ್ತನಾಗಿ ಧ್ಯಾಯೇತ್=ಭಗವಂತನ ರೂಪವನ್ನೇ ಧ್ಯಾನಿಸಬೇಕು. ನ ಪೃಥಕ್ ದಿದೃಕ್ಷೇತ್=ಬೇರೆ ಏನನ್ನೂ ನೋಡಲಿಚ್ಛಿಸಬಾರದು. ಭಗವಂತನಲ್ಲಿ ಮನಸ್ಸಿನ ಏಕಾಗ್ರತೆಯಿಂದ ಧ್ಯಾನಮಾಡುವುದರಿಂದ ಪರಮಾನಂದ ಲಭಿಸುವುದರಿಂದ ವಿಷಯದರ್ಶನೇಚ್ಛೆಯಾಗುವುದಿಲ್ಲವೆಂದು ಭಾವ.

ಈ ಶ್ಲೋಕದಲ್ಲಿ ನ ಪೃಥಕ್ ದಿದೃಕ್ಷೇತ್ ಎಂಬುದಕ್ಕೆ ಪರಮಾತ್ಮನನ್ನು ತನ್ನಿಂದ ಭಿನ್ನವಾಗಿ ತಿಳಿಯಬಾರದು ಎಂಬ ವಿಪರೀತ ಅರ್ಥವಾಗಬಾರದೆಂದು ತಾತ್ಪರ್ಯ ಹೇಳುವರು -

**ನ ಪೃಥಕ್ ದಿದೃಕ್ಷೇತ್ ತಮೇವ ದಿದೃಕ್ಷೇತ್ ಇತ್ಯರ್ಥಃ ।**

ಅವನನ್ನೇ ನೋಡಬೇಕೆಂದರ್ಥ. ಅಂದರೆ ಪೃಥಕ್ ಶ್ರೀಹರಿಯಿಂದ ಭಿನ್ನವಾದ ವಸ್ತುವನ್ನು ನೋಡಲಿಚ್ಛಿಸಬಾರದು. ಅವನನ್ನೇ ನೋಡಬೇಕೆಂದರ್ಥ, ಹೊರತು ಪರಮಾತ್ಮನನ್ನು ಭಿನ್ನವಾಗಿ ತಿಳಿಯಬಾರದೆಂದಲ್ಲ ॥೩೨॥

ಧ್ಯಾನ ಮಾಡಿದ ಮೇಲೆ ಅದರಿಂದ ಸಾಧ್ಯವಾದ ಸಮಾಧಿಯನ್ನು ಹೇಳುವರು -

**ಏವಂ ಹರೌ ಭಗವತಿ ಪ್ರತಿಲಬ್ಧಭಾವೋ**
**ಭಕ್ತ್ಯಾ ದ್ರವದ್ಧೃದಯ ಉತ್ಪುಲಕಪ್ರಮೋದಃ ।**
**ಔತ್ಕಂಠ್ಯಬಾಷ್ಪಕಲಯಾ ಮುಹುರರ್ದ್ಯಮಾನ-**
**ಸ್ತಚ್ಚಾಪಿ ಚಿತ್ತಬಡಿಶಂ ಶನಕೈರ್ವಿಯುಂಕ್ತೇ ॥೩೩॥**

ಏವಂ=ಈ ರೀತಿಯಾಗಿ ಭಗವತಿ ಹರೌ=ಐಶ್ವರ್ಯಶಾಲಿಯಾದ ಶ್ರೀಹರಿಯಲ್ಲಿ ಪ್ರತಿಲಬ್ಧಭಾವಃ=ಹೊಂದಲ್ಪಟ್ಟ ಮನಃಸ್ಥಿತಿಯುಳ್ಳವನು ಭಕ್ತ್ಯಾ=ಭಕ್ತಿಯಿಂದ ದ್ರವದ್ ಹೃದಯಃ=ತೋಯಿದ ಮನಸುಳ್ಳುವನಾಗಿ ಉತ್ಪುಲಕಪ್ರಮೋದಃ=ಉತ್ಕೃಷ್ಟವಾದ ರೋಮಾಂಚ ಮತ್ತು ಹರ್ಷಗಳುಳ್ಳ ಔತ್ಕಂಠ್ಯ=ಉತ್ಸಾಹದಿಂದ ಉಂಟಾದ ಬಾಷ್ಪಕಲಯಾ=ಕಣ್ಣೀರಿನಿಂದ ಮುಹುಃ=ಪುನಃ ಪುನಃ ಅರ್ದ್ಯಮಾನಃ= ಆರ್ದ್ರೀಕರಿಸಲ್ಪಟ್ಟ ವನಾಗಿ ಅಧಿಕಾರಿಯು ತತ್=ತನ್ನ ವಶವಾದ ಮನಸ್ಸನ್ನು ಚಿತ್ತಬಡಿಶಂ=ಗ್ರಹಿಸಲು ಅಸಾಧ್ಯನಾದ ಭಗವಂತನನ್ನು ಹಿಡಿಯಲು ಮೀನಿನ ಬಲೆಯಂತಿರುವ ಮನಸ್ಸನ್ನು ವಿಯುಂಕ್ತೇ=ವಿಶೇಷವಾಗಿ ಸಂಬಂಧಪಡಿಸುವನು.

ಸಂಬಂಧವಿಲ್ಲದಂತೆ ಮಾಡುವನು ಎಂದು ವಿಪರೀತ ಅರ್ಥವಾಗ-ಬಾರದೆಂದು ತಾತ್ಪರ್ಯ ಹೇಳವರು -

**ಚಿತ್ತಬಡಿಶವಿಯೋಗಃ ಧ್ಯಾನಾನಂತರಸಮಾಧಿಃ ।**

ಅಂದರೆ ವಿಶೇಷ ಯೋಗ ಪ್ರಯತ್ನವಿಲ್ಲದೇ ಸಂಬಂಧವಾಗುವುದು. ಇದೇ ಸಮಾಧಿರೂಪವೆಂದು ಭಾವ ॥೩೩॥

ಈ ರೀತಿ ಸಮಾಧಿಯ ಫಲ ಅಪರೋಕ್ಷಜ್ಞಾನವೆಂದು ಹೇಳವರು -

**ಮುಕ್ತಾಶ್ರಯಂ ಯರ್ಹಿ ನಿರ್ವಿಷಯಂ ಸ್ವಚಿತ್ತಂ**
**ನಿರ್ವಾಣಮೃಚ್ಛತಿ ಮನಃ ಸಹಸಾ ಯಥಾಽರ್ಚಿಃ ।**
**ಆತ್ಮಾನಮತ್ರ ಪುರುಷೋಽವ್ಯವಧಾನಮೇಕ-**
**ಮನ್ವೀಕ್ಷತೇ ಪ್ರತಿನಿವೃತ್ತಗುಣಪ್ರವಾಹಃ ॥೩೪॥**

ಯಥಾ=ಹೇಗೆ ಅರ್ಚಿಃ=ದೀಪದ ಜ್ವಾಲೆಯು ಸಹಸಾ ನಿರ್ವಾಣಂ ಋಚ್ಛತಿ= ಎಣ್ಣೆ ಬತ್ತಿಗಳಿಲ್ಲದಿರುವಾಗ ಒಮ್ಮೆಲೆ ನಾಶವಾಗುವುದೋ ತಥಾ=ಹಾಗೆಯೇ ಯರ್ಹಿ=ಯಾವಾಗ ಮನಃ=ಮನಸ್ಸು ನಿರ್ವಿಷಯಂ=ಶಬ್ದಾದಿವಿಷಯಗಳಿಂದ ತಿರುಗಿ ಬಂದು ಮುಕ್ತಾಶ್ರಯಂ=ನಿತ್ಯಮುಕ್ತನಾದ (ಸ್ವಾತಂತ್ರ್ಯೇಣ) ವಿಷ್ಣು ವಿಷಯಕವಾಗಿ ಆಗುವುದೋ ತದಾ=ಆಗ ಸ್ವಚಿತ್ತಂ=ಜೀವಚೈತನ್ಯದಲ್ಲಿ ವ್ಯಾಪ್ತವಾಗುವುದು. ಅಂದರೆ ಚಿದಾನಂದಾತ್ಮಕ ಸ್ವರೂಪದೇಹದಲ್ಲಿಯೇ ಇದು ನನ್ನ ದೇಹ ಎಂಬ ಅಭಿಮಾನ ಯುಕ್ತವಾಗುವುದು, ಇದರಿಂದ ಸಹಸಾ ನಿರ್ವಾಣಂ ಋಚ್ಛತಿ=ಸ್ವರೂಪದೇಹಾಭಿಮಾನದಿಂದ ಜಡಶರೀರಾಭಿಮಾನವನ್ನು ಬಿಡುವನು. ಮನೋಗತವಾದ ಜಡಶರೀರಾಭಿಮಾನ ನಾಶವಾಗುವುದು ಎಂದರ್ಥ. ಅತ್ರ=ಈ

ಅವಸ್ಥೆಯಲ್ಲಿ ಪುರುಷಃ=ಉಪಾಸಕನು ಏಕಂ=ಸರ್ವೋತ್ತಮನಾದ ಶ್ರೀಹರಿಯನ್ನು ಅವ್ಯವಧಾನಂ=ಸಮಾಧಿಪರಿಪಾಕದಿಂದ ಪರಮಾಚ್ಛಾದಿಕೆಯು ದೂರವಾದುದರಿಂದ ವ್ಯವಧಾನಶೂನ್ಯವಾದ ಆತ್ಮಾನಂ=ತನ್ನ ಬಿಂಬರೂಪಿ ಪರಮಾತ್ಮನನ್ನು ಈಕ್ಷತೇ=ಅಪರೋಕ್ಷವಾಗಿ ನೋಡುವನು. ಅನು=ನಂತರ ಪ್ರಾರಬ್ಧಕರ್ಮ ನಾಶವಾದ ಮೇಲೆ ಪ್ರತಿನಿವೃತ್ತಗುಣಪ್ರವಾಹಃ ಭವತಿ=ಪ್ರಾರಬ್ಧಕರ್ಮ ನಿರ್ಮಿತ ದೇಹಪರಂಪರಾರೂಪಸಂಸಾರದಿಂದ ನಿವೃತ್ತನಾಗುವನು ಎಂದು ಭಾವ.

ಈ ಶ್ಲೋಕದಲ್ಲಿ ಪದಗಳಿಗೆ ಪ್ರಕೃತ ಸಂಗತ ಅರ್ಥಗಳನ್ನು ತಿಳಿಸುವರು–

**ಮುಕ್ತಾಶ್ರಯಂ ವಿಷ್ಣುವಿಷಯಂ । ಸ್ವಚಿತ್ತಂ ಜೀವಚೈತನ್ಯೇ ತತಂ । ನಿರ್ವಾಣಂ ಋಚ್ಛತಿ ಶರೀರಾಭಿಮಾನಂ ಜಹಾತಿ । ಸ್ವಚಿದಭಿಮಾನೇನ ॥**

ಸ್ವಶಬ್ದಕ್ಕೆ ಜೀವ ಎಂದರ್ಥ. ಚಿತ್‌ಶಬ್ದಕ್ಕೆ ಚೈತನ್ಯ ಎಂದರ್ಥ. ತಕಾರಕ್ಕೆ ತತ ಎಂದರ್ಥ ಮಾಡಿರುವರು. ಅಭಿಮಾನನಾಶವೇ ನಿರ್ವಾಣಶಬ್ದಕ್ಕೆ ಅರ್ಥ. ಸ್ವರೂಪ ನಾಶವಲ್ಲವೆಂದು ಭಾವ. ಸ್ವಚಿತ್ತ ಎಂಬುದು ಅಭಿಮಾನನಾಶಕ್ಕೆ ಹೇತುವಾಗಿ ಹೇಳಿರುವರು ಎಂಬ ಅಭಿಪ್ರಾಯದಿಂದ ವ್ಯಾಖ್ಯಾನಿಸಿರುವರು ಎಂದು ತಿಳಿಯಬೇಕು ॥೩೪॥

ಜೀವನ್ಮುಕ್ತನ ಸ್ಥಿತಿಯನ್ನು ಹೇಳುವರು ಎರಡು ಶ್ಲೋಕದಿಂದ –

**ಸೋऽಪ್ಯೇತಯಾ ಚರಮಯಾ ಮನಸೋ ನಿವೃತ್ತ್ಯಾ**
**ತಸ್ಮಿನ್ ಮಹಿಮ್ನ್ಯವಸಿತಃ ಸುಖದುಃಖಬಾಹ್ಯೇ ।**
**ಹೇತುತ್ವಮಪ್ಯಸತಿ ಕರ್ತರಿ ದುಃಖಯೋರ್ನ**
**ಸ್ವಾತ್ಮನ್ ವಿಧತ್ತ ಉಪಲಬ್ಧಪರಾತ್ಮಕಾಷ್ಠಃ ॥೩೫॥**

ಸಃ ಅಪಿ=ಅಪರೋಕ್ಷವಾಗಿ ಪರಮಾತ್ಮನನ್ನು ಕಂಡವನು ಏತಯಾ ಮನಸಃ ನಿವೃತ್ತ್ಯಾ=ಮೇಲೆ ಹೇಳಿದ ಜಡಶರೀರಾಭಿಮಾನತ್ಯಾಗರೂಪವಾದ ನಾಶದಿಂದ ತಸ್ಮಿನ್=ಹಿಂದೆ ಹೇಳಿದ ಸುಖದುಃಖಬಾಹ್ಯೇ=ಪ್ರಾಕೃತಸುಖ ಮತ್ತು ದುಃಖಗಳಿಲ್ಲದ ಮಹಿಮ್ನಿ=ಸ್ವರೂಪಜ್ಞಾನಾನಂದಗಳಲ್ಲಿ ಅವಸಿತಃ=ನಾನು ನಿರ್ದೋಷಜ್ಞಾನಾನಂದಸ್ವರೂಪನು ಭಗವದಧೀನನು ಎಂಬ ನಿಶ್ಚಯವುಳ್ಳವನು, ಅಸತಿ ಕರ್ತರಿ= ಅಸ್ವತಂತ್ರ ಕರ್ತೃವಾದ ಸ್ವಾತ್ಮನ್=ತನ್ನಲ್ಲಿ ದುಃಖಯೋಃ=ದುಃಖಸುಖಗಳಿಗೆ ಹೇತುತ್ವಂ ಅಪಿ=ಕರ್ತೃತ್ವವನ್ನು ನ ವಿಧತ್ತೇ=ತಿಳಿಯಲಾರನು. ಏಕೆಂದರೆ ಉಪಲಬ್ಧ ಪರಾತ್ಮಕಾಷ್ಠಃ=ಅಪರೋಕ್ಷಿಕೃತವಾದ ಪರಮಾತ್ಮನ ಕರ್ತೃತ್ವವುಳ್ಳವನು.

ವಿಪರೀತ ಅರ್ಥವಾಗದಿರಲು ತಾತ್ಪರ್ಯ ಹೇಳವರು -

**ಅಸತ್ಕರ್ತಾ ತು ಜೀವಃ ಸ್ಯಾತ್ ಸತ್ಕರ್ತಾ ಪರಮೇಶ್ವರಃ ।**

**ಇತಿ ಶಬ್ದನಿರ್ಣಯೇ ।**

**ದುರ್ದುಃಖಮಿತಿ ವಿಜ್ಞೇಯಂ ಖಂ ಸುಖಂ ಚ ತಯೋರ್ಯತಃ ।**
**ಪ್ರದಾತಾ ಪರಮೋ ವಿಷ್ಣುಸ್ತಸ್ಮಾದ್ದುಃಖಾದಿನಾಮವಾನ್ ॥**

**ಇತಿ ಹರಿವಂಶೇಷು ।**

ಜೀವನು ಅಸ್ವತಂತ್ರಕರ್ತೃವು. ಸ್ವತಂತ್ರಕರ್ತೃವು ಪರಮಾತ್ಮನು ಎಂದು ಶಬ್ದನಿರ್ಣಯದಲ್ಲಿ ಹೇಳಿದೆ. "ದುಃ" ಎಂದರೆ ದುಃಖವು. "ಖಂ" ಎಂದರೆ ಸುಖವು ಇವೆರಡನ್ನೂ ಕೊಡುವವನು ಪರಮಾತ್ಮನಾದುದರಿಂದ ದುಃಖ ಮುಂತಾದ ನಾಮ ಉಳ್ಳವನು ಎಂದು ಹರಿವಂಶದಲ್ಲಿ ಹೇಳಿದೆ. ॥೩೫॥

**ದೇಹಂ ತು ತಂ ನ ಚರಮಂ ಸ್ಥಿತಮುಜ್ಝಿತಂ ವಾ**
**ಸಿದ್ಧೋ ವಿಪಶ್ಯತಿ ಯತೋಽಧ್ಯಗಮತ್ ಸ್ವರೂಪಂ ।**
**ದೈವಾದುಪೇತಮಥ ದೈವವಶಾದಪೇತಂ**
**ವಾಸೋ ಯಥಾ ಪರಿಕೃತಂ ಮದಿರಾಮದಾಂಧಃ ॥೩೬॥**

ಮದಿರಾಮದಾಂದಃ=ಮಧ್ಯಪಾನಮಾಡಿದ ಸುಖದಿಂದ ಕುರುಡನಾದವನು ಯಥಾ=ಹೇಗೆ ಪರಿಕೃತಂ ವಾಸಃ=ಉಟ್ಟಿರುವ ಬಟ್ಟೆಯು ಸ್ಥಿತಂ ಉಜ್ಝಿತಂ ವಾ= ಇದೆಯೋ ಇಲ್ಲವೋ ಎಂಬುದನ್ನು ನ ಪಶ್ಯತಿ=ತಿಳಿಯಲಾರನೋ ತಥಾ= ಹಾಗೆಯೇ ಯತಃ=ಯಾವ ಕಾರಣ ಸ್ವರೂಪಂ ಅಧ್ಯಗಮತ್=ಚೈತನ್ಯಾತ್ಮಕವಾದ ತನ್ನ ಸ್ವರೂಪದೇಹದಲ್ಲಿ ಅಭಿಮಾನವುಳ್ಳವನಾದ್ದರಿಂದ ತಂ ಚರಮಂ ದೇಹಂ= ಅಪರೋಕ್ಷಜ್ಞಾನ ಪಡೆದ ದೇಹವನ್ನು ಸಿದ್ಧಃ=ಅಪರೋಕ್ಷಜ್ಞಾನಿಯು ಸ್ಥಿತಂ=ತನ್ನ ಪ್ರೇರಣೆಯಿಂದ ಒಂದೆಡೆ ನಿಂತದ್ದೆಂದು ಉಜ್ಝಿತಂ=ಆ ಸ್ಥಾನ ರಹಿತವಾದುದನ್ನೂ ನ ಪಶ್ಯತಿ=ತಿಳಿಯುವುದಿಲ್ಲ ದೈವಾತ್ ಉಪೇತಂ=ಪ್ರಾರಬ್ಧ ಅದೃಷ್ಟಪ್ರೇರಕನಾದ ಈಶ್ವರನಿಂದ ಉಪೇತಂ=ಪ್ರಾಪ್ತವಾಯಿತೆಂದು ಅಪೇತಂ=ತನ್ನನ್ನು ಬಿಟ್ಟು ತೊಲಗಿತೆಂದು ಪಶ್ಯತಿ=ತಿಳಿಯುವನು. ॥೩೬॥

ಅಪರೋಕ್ಷಜ್ಞಾನಿಗೂ ದೇಹವಿರುವುದಾದರೆ ಮುಕ್ತಿ ಹೇಗೆ ಎಂಬ ಶಂಕೆಗೆ ಉತ್ತರ ಹೇಳುವರು -

**ದೇಹೋಽಪಿ ದೈವವಶಗಃ ಖಲು ಕರ್ಮ ಯಾವತ್**
**ಸ್ವಾರಂಭಕಂ ಪ್ರತಿಸಮೀಕ್ಷತ ಏವ ಸಾಸುಃ ।**
**ತಂ ಸಪ್ರಪಂಚಮಧಿರೂಢಸಮಾಧಿಯೋಗಃ**
**ಸ್ವಾಪ್ನಂ ಪುನರ್ನ ಭಜತೇ ಪ್ರತಿಬುದ್ಧವತ್ ಸಃ ॥೩೭॥**

ಸ್ವಾರಂಭಕಂ ಕರ್ಮ ಯಾವತ್=ತನಗೆ ಕಾರಣವಾದ ಪ್ರಾರಬ್ಧಕರ್ಮ ಇರುವವರೆಗೆ ದೈವವಶಗಃ=ಅದೃಷ್ಟದ ಅಧೀನವಾದ ದೇಹಃ ಅಪಿ=ದೇಹವಾದರೂ ಸಾಸುಃ=ಇಂದ್ರಿಯಸಹಿತವಾಗಿ ಪ್ರತಿಸಮೀಕ್ಷತೇ=ದಾರಿಕಾಯುವುದು, ಇರುವು-ದೆಂದರ್ಥ. ನಂತರ ಅಧಿರೂಢಸಮಾಧಿಯೋಗಃ=ಸಮಾಧಿಯ ಫಲವನ್ನು ಪಡೆದ ಅಧಿಕಾರಿಯು ಸಪ್ರಪಂಚಂ=ಇಂದ್ರಿಯ, ಪುತ್ರ ಮುಂತಾದವುಗಳಿಂದ ಸಹಿತವಾದ ತಂ=ದೇಹವನ್ನು ಪ್ರತಿಬುದ್ಧವತ್=ಜಾಗ್ರದವಸ್ಥೆಯನ್ನು ಹೊಂದಿದವನು ಸ್ವಾಪ್ನಂ ಯಥಾ ನ ಪುನರ್ಭಜತೇ ತಥಾ=ಕನಸಿನಲ್ಲಿ ಕಂಡ ದೇಹವನ್ನಾಗಲಿ ಅದರಂತಹ ದೇಹವನ್ನಾಗಲಿ ನೋಡುವದಿಲ್ಲವೋ ಹಾಗೆಯೇ ಸಃ=ಅಪರೋಕ್ಷಜ್ಞಾನಿಯು ಪುನಃ ನ ಭಜತೇ=ಪ್ರಾರಬ್ಧಕರ್ಮ ಮುಗಿದನಂತರ ಕಾರಣವಿಲ್ಲದ್ದರಿಂದ ಮತ್ತೆ ದೇಹಪಡೆಯಲಾರನು. ॥೩೭॥

ನಾನು ಕಪ್ಪು ನಾನು ಕೆಂಪು ಎಂಬ ವ್ಯವಹಾರದಿಂದ ದೇಹಭಿನ್ನನಾದ ಜೀವನೇ ಇಲ್ಲವಾದ್ದರಿಂದ ಕರ್ಮಗಳು ಮುಗಿದ ನಂತರ ದೇಹ ಪಡೆಯುವುದಿಲ್ಲವೆಂದು ಹೇಳಿದ್ದು ಸರಿಯಲ್ಲ ಎಂಬ ಶಂಕೆಗೆ ಉತ್ತರಿಸುವರು –

**ಯಥಾ ಪುತ್ರಾಚ್ಚ ವಿತ್ತಾಚ್ಚ ಪೃಥಙ್ಮರ್ತ್ಯಃ ಪ್ರತೀಯತೇ ।**
**ಅಪ್ಯಾತ್ಮತ್ವೇನಾಭಿಮತಾದ್ ದೇಹಾದೇಃ ಪುರುಷಸ್ತಥಾ ॥೩೮॥**

ಯಥಾ=ಹೇಗೆ ಪುತ್ರಾತ್=ಮಗನಿಂದ ವಿತ್ತಾತ್=ದ್ರವ್ಯದಿಂದ ಮರ್ತ್ಯಃ= ಮನುಷ್ಯನು ಪೃಥಕ್=ಪ್ರತ್ಯೇಕವಾಗಿ ಪ್ರತೀಯತೇ=ತಿಳಿಯಲ್ಪಡುವನೋ ತಥಾ= ಹಾಗೆಯೇ ಆತ್ಮತ್ವೇನ ಅಭಿಮತಾದ್=ತಾನೇ ಎಂದು ತಿಳಿದಿರುವ ದೇಹಾದೇಃ= ದೇಹೇಂದ್ರಿಯಾದಿಗಳಿಂದ ಪುರುಷಃ=ಜೀವನು ತಥಾ=ಭಿನ್ನನು. ಅಂದರೆ ಸ್ನೇಹವಿಶೇಷದಿಂದ ನಾನೇ ಮಗ, ನಾನೇ ಹಣ ಎಂದು ವ್ಯವಹರಿಸಿದರೂ ಮಗನು ಬೇರೆ, ತಂದೆ ಬೇರೆಯೋ ಹಾಗೆ ಕೆಂಪು, ಕಪ್ಪು ಮುಂತಾಗಿ ತಾನೇ ದೇಹವೆಂಬಂತೆ ವ್ಯವಹರಿಸಿದರೂ ನನ್ನ ದೇಹ, ನನ್ನ ಮಗ ಎಂಬ ನಿರ್ಬಾಧ ಅನುಭವಬಲದಿಂದ ಭಿನ್ನನೇ ಆಗಿರುವನು. ಅಭೇದವ್ಯವಹಾರ ಔಪಚಾರಿಕವೆಂದು ತಿಳಿಯಬೇಕು. ॥೩೮॥

ದೈವವಶಗಃ ಎಂದು ಹೇಳಿದ್ದು ಸರಿಯಲ್ಲ ದೇಹಜೀವರಿಂದ ಭಿನ್ನನಾದ ಈಶ್ವರನೇ ಇಲ್ಲ ಎಂದರೆ ಹೇಳುವರು -

**ಯಥೋಲ್ಮುಕಾದ್ ವಿಸ್ಫುಲಿಂಗಾದ್ ಧೂಮಾದ್ವಾಪಿ ಸ್ವಸಂಭವಾತ್ ।**
**ಅಪ್ಯಾತ್ಮತ್ವೇನಾಭಿಮತಾದ್ ದಾಹಕೋಽಗ್ನಿಃ ಪೃಥಙ್ಮತಃ ॥೩೯॥**

ಆತ್ಮತ್ವೇನ ಅಭಿಮತಾತ್=ಅವಿವೇಕಿಗಳು ಅಗ್ನಿಯೇ ಎಂದು ತಿಳಿದಿರುವ ಸ್ವಸಂಭವಾತ್=ತನ್ನಿಂದ ಹುಟ್ಟಿದ ಉಲ್ಮುಕಾತ್=ಕೊಳ್ಳಿಯಿಂದ ವಿಸ್ಫುಲಿಂಗಾತ್=ಕಿಡಿಯಿಂದ ಧೂಮಾತ್=ಹೊಗೆಯಿಂದಲೂ ದಾಹಕಃ ಅಗ್ನಿಃ ಪೃಥಕ್=ಸುಡುವ ಅಗ್ನಿಯು ಬೇರೆಯೋ ಹಾಗೆಯೇ ಜೀವನು ಈಶ್ವರನಿಂದ ಭಿನ್ನನು. ಇಲ್ಲವಾದರೆ ಅಗ್ನಿಗೆ ಜನಕತ್ವವೇ ಯುಕ್ತವಾಗಲಾರದು ಎಂದು ಭಾವ. ॥೩೯॥

**ಭೂತೇಂದ್ರಿಯಾಂತಃಕರಣಾತ್ ಪ್ರಧಾನಾಜ್ಜೀವಸಂಜ್ಞಿತಾತ್ ।**
**ಆತ್ಮಾ ತಥಾ ಪೃಥಗ್ ದ್ರಷ್ಟಾ ಭಗವಾನ್ ಬ್ರಹ್ಮಸಂಜ್ಞಿತಃ ॥೪೦॥**

ತಥಾ=ಅದೇ ರೀತಿ ಭೂತೇಂದ್ರಯಾಂತಃಕರಣಾತ್=ಪಂಚಮಹಾಭೂತಗಳು, ಇಂದ್ರಿಯಗಳು, ಜಡಮನಸ್ಸು ಇವುಗಳಿಂದಲೂ ಪ್ರಧಾನಾತ್=ಪ್ರಕೃತಿಯಿಂದಲೂ ಜೀವಸಂಜ್ಞಿತಾತ್=ಜೀವನೆನಿಸುವ ಸಂಸಾರಿಯಿಂದಲೂ ದ್ರಷ್ಟಾ=ಸರ್ವಜ್ಞನಾದ ಬ್ರಹ್ಮಸಂಜ್ಞಿತಃ=ಬ್ರಹ್ಮನೆನಿಸುವ ಆತ್ಮಾ=ಪರಮಾತ್ಮನು ಭಗವಾನ್=ಐಶ್ವರ್ಯ-ಶಾಲಿಯು ಪೃಥಗ್=ಭಿನ್ನನು. ವೇದೋಕ್ತ ಸರ್ವಜ್ಞಾದಿಪದಗಳು ಜೀವನಲ್ಲಿರದ ಅರ್ಥವನ್ನು ಹೇಳುವ ಮುಖಾಂತರ ಅವನಿಂದ ಭಿನ್ನನಾದ ಈಶ್ವರನನ್ನು ತಿಳಿಸುವವು ಎಂದು ಭಾವ. ॥೪೦॥

ಸಿಂಹಾವಲೋಕನನ್ಯಾಯದಿಂದ ಮೋಕ್ಷಸಾಧನ (ಜ್ಞಾನ) ಜನಕ ಧ್ಯಾನದಲ್ಲಿ ಉಪಸಂಹಾರ ಮಾಡಬೇಕಾದ ಗುಣಗಳನ್ನು ತಿಳಿಸುವರು -

**ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷೇತಾನನ್ಯಭಾವೇನ ಭೂತೇಷು ಚ ತದಾತ್ಮತಾಂ ॥೪೧॥**

ಆತ್ಮಾನಂ=ಅಂತರ್ಯಾಮಿಯಾದ ಶ್ರೀಹರಿಯನ್ನು ಸರ್ವಭೂತೇಷು=ಎಲ್ಲ ಪ್ರಾಣಿಗಳಲ್ಲಿ ನಿಯಾಮಕನೆಂದೂ ಆತ್ಮನಿ=ಶ್ರೀಹರಿಯಲ್ಲಿ ಸರ್ವಭೂತಾನಿ=ಎಲ್ಲ ಪ್ರಾಣಿಗಳು ಆಶ್ರಿತವೆಂದೂ ಈಕ್ಷೇತ=ತಿಳಿಯಬೇಕು. ಮತ್ತು ಅನನ್ಯಭಾವೇನ ಈಕ್ಷೇತ=ಸರ್ವ ಅಂತರ್ಯಾಮಿರೂಪಗಳನ್ನು ಅಭಿನ್ನವೆಂದು ತಿಳಿಯಬೇಕು. ಭೂತೇಷು ತದಾತ್ಮತಾಂ=ಎಲ್ಲ ವಸ್ತುಗಳ ವಿಷಯಕವಾದ ಶ್ರೀಹರಿಯ ಆದಾನಾದಿ ಕರ್ತೃತ್ವವನ್ನೂ ತಿಳಿಯಬೇಕು.

ಅನನ್ಯಭಾವೇನ ಎಂಬುದಕ್ಕೆ ಭೂತಗಳಿಂದ ಅಭಿನ್ನವೆಂದು ತಿಳಿಯಬೇಕು ಎಂದಾಗಲಿ, ತದಾತ್ಮತಾ ಎಂಬುದಕ್ಕೆ ಪರಮಾತ್ಮೈಕ್ಯವೆಂದಾಗಲಿ ಅರ್ಥವಲ್ಲವೆಂದು ತಿಳಿಸಲು ತಾತ್ಪರ್ಯ ಹೇಳುವರು -

**ಅನನ್ಯ ಭಾವೇನ ತದ್ರೂಪಾಣಾಮಭೇದೇನ । ತದಾತ್ಮತಾಂ ತಸ್ಯ ಆದಾನಾದಿ ಕರ್ತೃತ್ವಂ ಚ ಭೂತವಿಷಯೇ ॥**

ಭಗವಂತನ ರೂಪಗಳಿಗೆ ಅಭೇದ ತಿಳಿಯಬೇಕು. ಭಗವಂತನಿಗೆ ಭೂತಗಳ ಆದಾನಾದಿಕರ್ತೃತ್ವ ತಿಳಿಯಬೇಕೆಂದು ಭಾವ. ॥೪೧॥

ಎಲ್ಲ ಪ್ರಾಣಿಯಲ್ಲಿರುವ ಹರಿಗೆ ಅಭೇದವಿದ್ದ ಮೇಲೆ ದೇವತೆಗಳಲ್ಲಿರುವ ಹರಿಯು ಬಹಳ ಸಾಮರ್ಥ್ಯವ್ಯಕ್ತಿವುಳ್ಳವನು ಮನುಷ್ಯರಲ್ಲಿ ಹಾಗಿಲ್ಲವೆಂಬ ವೈಷಮ್ಯ ಹೇಗೆ ಎಂದರೆ ತಿಳಿಸುವರು -

**ಸ್ವಯೋನಿಷು ಯಥಾ ಜ್ಯೋತಿರೇಕಂ ನಾನಾ ಪ್ರತೀಯತೇ ।**
**ಯೋನೀನಾಂ ಗುಣವೈಷಮ್ಯಾತ್ ತಥಾತ್ಮಾ ಪ್ರಕೃತೌ ಸ್ಥಿತಃ ॥೪೨॥**

ಯಥಾ=ಹೇಗೆ ಏಕಂ ಜ್ಯೋತಿಃ=ಒಂದೇ ಅಗ್ನಿಯು ಸ್ವಯೋನಿಷು=ತನ್ನ ಕಾರಣಗಳಲ್ಲಿ ಯೋನೀನಾಂ=ಕಟ್ಟಿಗೆಗಳ ಗುಣವೈಷಮ್ಯಾತ್=ಹಸಿ, ವಣ ಎಂಬ ವಿಲಕ್ಷಣತೆಯಿಂದ ನಾನಾ=ವಿಲಕ್ಷಣವಾಗಿ ಪ್ರತೀಯತೇ=ತೋರುವುದೋ ವಸ್ತುತಃ ವಿಲಕ್ಷಣವಲ್ಲ (ಅಭಿಮಾನಿ ದೇವತೆ ವಿವಕ್ಷಯಾ ಇದು) ತಥಾ=ಹಾಗೆಯೇ ಪ್ರಕೃತೌ=ಪ್ರಕೃತಿಕಾರ್ಯವಾದ ದೇಹಗಳಲ್ಲಿ ಸ್ಥಿತಃ=ಇರುವ ಆತ್ಮಾ=ಪರಮಾತ್ಮನು ವಿಲಕ್ಷಣನೆಂದು ತೋರುವನು, ವಸ್ತುತಃ ವಿಲಕ್ಷಣನಲ್ಲ. ॥೪೨॥

**ತಸ್ಮಾದಿಮಾಂ ಸ್ವಾಂ ಪ್ರಕೃತಿಂ ದೇವೀಂ ಸದಸದಾತ್ಮಿಕಾಂ ।**
**ದುರ್ವಿಭಾವ್ಯಾಂ ಪರಾಭಾವ್ಯ ಸ್ವರೂಪೇಣಾವತಿಷ್ಠತೇ ॥೪೩॥**

ತಸ್ಮಾತ್=ಎಲ್ಲ ಕಡೆಯಲ್ಲಿಯೂ ಏಕರೂಪನಾದುದರಿಂದ ಸ್ವಾಂ=ತನ್ನ ಅಧೀನವಾದ ದೇವೀಂ=ನಾನಾವಿಧ ಕಾರ್ಯರೂಪದಿಂದ ತೋರುವ ಸದಸದಾತ್ಮಿಕಾಂ =ಕಾರ್ಯಕಾರಣರೂಪವಾದ ದುರ್ವಿಭಾವ್ಯಾಂ=ಅವ್ಯಕ್ತ ಸ್ವರೂಪವುಳ್ಳ ಪ್ರಕೃತಿಂ= ಪ್ರಕೃತಿಯನ್ನು ಪರಾಭಾವ್ಯ=ಅತಿಕ್ರಮಿಸಿ ಸ್ವರೂಪೇಣ ಅವತಿಷ್ಠತೇ=ಅದಕ್ಕಿಂತ ಉತ್ತಮನಾಗಿ ಸರ್ವದಾ ಇರುವನು ಎಂದು ಭಾವ.

ಪ್ರಕೃತಿಯನ್ನು ಮೀರಿ ಜೀವನು ಸ್ವರೂಪದಿಂದ ಇರುವನು ಎಂದು ವಿಪರೀತ ಅರ್ಥವಾಗುವುದು ಕಾರಣ ಯೋಜನೆಯನ್ನು ತಿಳಿಸುವರು -

**ಪ್ರಕೃತಿಂ ಪರಾಭಾವ್ಯ ತದುತ್ತಮತ್ವೇನೈವ ಸದಾವತಿಷ್ಠತೇ ಪರಃ ।**
**ಸರ್ವಭೂತಸ್ಥಮೀಶೇಶಂ ಜೇತಾರಂ ಪ್ರಕೃತೇರಪಿ ।**
**ಅವಿಶೇಷಂ ಸದೈವೈಕಂ ಚಿಂತಯನ್ವಿಪ್ರಮುಚ್ಯತೇ ॥ ಇತಿ ಚ ।**

ಪರಃ=ಪರಮಾತ್ಮನು ಪ್ರಕೃತಿಂ=ಪರಾಭಾವ್ಯ ಪ್ರಕೃತಿಯನ್ನು ಅತಿಕ್ರಮಿಸಿ ಅದಕ್ಕಿಂತ ಉತ್ತಮನಾಗಿ ಯಾವಾಗಲೂ ಇರುವನು.

ಎಲ್ಲ ಪ್ರಾಣಿಗಳಲ್ಲಿ ನಿಯಾಮಕನಾಗಿರುವ, ಬ್ರಹ್ಮಾದಿಗಳಿಗೂ ನಿಯಾಮಕನಾದ, ಪ್ರಕೃತಿಯನ್ನೂ ಗೆದ್ದ ,ಎಲ್ಲಡೆ ಇರುವ ರೂಪಗಳಲ್ಲಿ ಸರ್ವಕಾಲದಲ್ಲಿಯೂ ವೈಲಕ್ಷಣ್ಯ ರಹಿತನಾದ, ಏಕಂ ಪ್ರಧಾನನಾದ ಶ್ರೀಹರಿಯನ್ನು ಚಿಂತಯನ್ ಧ್ಯಾನಮಾಡು-ವವನು ವಿಪ್ರಮುಚ್ಯತೇ=ಮುಕ್ತನಾಗುವನು ಎಂದು ಭಾವ. ॥೪೩॥

**ಅನ್ವಯವ್ಯತಿರೇಕಾಚ್ಚ ಸಾಕ್ಷ್ಯಾತ್ಮಾ ವ್ಯಭಿಚಾರಿಣಃ ।**
**ವೈತಥ್ಯಂ ವ್ಯಭಿಚಾರಂ ಚ ನಿದ್ರಾಂತೇಽಸ್ಯಾನುಚಿಂತಯೇತ್ ॥೪೪॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಏಕೋನತ್ರಿಂಶೋಽಧ್ಯಾಯಃ ॥*

ಯಃ=ಯಾವನು ಸಾಕ್ಷ್ಯಾತ್ಮಾ=ಎಲ್ಲ ಸುಕೃತದುಷ್ಕೃತಗಳನ್ನು ಸಾಕ್ಷಾತ್ತಾಗಿ ನೋಡುವುದರಿಂದ ಸಾಕ್ಷಿಯು, ಆದನಾದಿಕರ್ತೃ ಆದ್ದರಿಂದ ಆತ್ಮಾ ಅನಿಸುವನೋ ಸಃ=ಅ ಹರಿಯು ಅನ್ವಯವ್ಯತಿರೇಕಾತ್ ಸಿದ್ಧಃ ಅಸ್ತಿ=ಅಂದರೆ ಪ್ರಪಂಚಸಹಿತ ದೇಶಕಾಲಗಳಲ್ಲಿಯೂ, ಪ್ರಪಂಚವಿಲ್ಲದ ದೇಶಕಾಲಗಳಲ್ಲಿಯೂ ಹರಿಯು ಇರುವುದರಿಂದ ವ್ಯಭಿಚಾರಿಣಃ=ಭಗವಂತನ ಲಕ್ಷಣವಿಲ್ಲದಿರುವ ಅನಿತ್ಯವಾದ ಪ್ರಪಂಚದ, ನಿದ್ರಾಂತೇ=ಬ್ರಾಹ್ಮಮೂಹರ್ತದಲ್ಲಿ ಎದ್ದು ವೈತಥ್ಯಂ=ನಿಷ್ಪ್ರಯೋಜನ-ತ್ವವನ್ನು ವ್ಯಭಿಚಾರಂ=ಸರ್ವದೇಶಕಾಲಗಳಲ್ಲಿ ಅಸತ್ವವನ್ನು ಅನುಚಿಂತಯೇತ್= ತಿಳಿಯಬೇಕು. ಇದು ಮೋಕ್ಷ ಸಾಧನವು. ॥೪೪॥

*ಇಲ್ಲಿಗೆ ಇಪ್ಪತ್ತೊಬ್ಬಂತ್ತನೆಯ ಅಧ್ಯಾಯವು ಮುಗಿಯಿತು.*

# ಇಪ್ಪತ್ತೊಬ್ಬಂತ್ತನೆಯ ಅಧ್ಯಾಯದ ತಾತ್ಪರ್ಯ

ಕಪಿಲ - ರಾಜಪುತ್ರಿ ! ಶ್ರೀಹರಿಯು ಜಗತ್ತಿಗೆ ನಿಮಿತ್ತ ಕಾರಣನಾದ್ದರಿಂದ ಬೀಜವೆನಿಸುವನು. ಅವನನ್ನು ಪಡೆಯಲು ಮಾಡುವ ಯೋಗವು ಸಬೀಜವೆನಿಸುವುದು. ಈ ಯೋಗವನ್ನು ಅಭ್ಯಾಸಮಾಡುವುದರಿಂದ ಶ್ರೀಹರಿಯನ್ನೇ ಶರಣು ಹೊಕ್ಕ ಭಕ್ತನ ಮನಸ್ಸು ಪರಬ್ರಹ್ಮನ ಮಾರ್ಗದಲ್ಲಿಯೇ ಹರಿಯುವುದು. ಈ ವೈಷ್ಣವ ಯೋಗಕ್ಕೆ ಎಂಟು ಅಂಗಗಳು. ಅವುಗಳ ಲಕ್ಷಣಗಳನ್ನೂ ಹೇಳುತ್ತೇನೆ. ಈ ಯೋಗದ ಸಾಧನಗಳನ್ನು ಮೊದಲು ತಿಳಿದುಕೋ. ಮುಮುಕ್ಷುವಾದ ಜೀವನು ತನಗೆ ಶಕ್ಯವಿದ್ದಷ್ಟು ತನ್ನ ವರ್ಣ ಮತ್ತು ಆಶ್ರಮ ಧರ್ಮಗಳನ್ನು ಅನುಷ್ಠಾನ ಮಾಡಬೇಕು; ನಿಷಿದ್ಧಧರ್ಮಗಳನ್ನು ಬಿಡಬೇಕು; ಅದೃಷ್ಟ ನಿಯಾಮಕನಾದ ಶ್ರೀಹರಿಯು ಅನುಗ್ರಹಿಸಿ ಕೊಟ್ಟಿದ್ದರಿಂದ ತೃಪ್ತನಾಗಬೇಕು; ಬ್ರಹ್ಮಜ್ಞಾನಿಗಳ ಪಾದಸೇವೆಯನ್ನು ಬಿಡಲಾರದು; ವಿಷಯ ಸುಖಗಳಲ್ಲಾಸಕ್ತನಾಗದೆ ಪ್ರವೃತ್ತಿಧರ್ಮದಿಂದ ದೂರನಾಗಿರಬೇಕು: ಮೋಕ್ಷಕ್ಕೆ ಕಾರಣವಾದ ನಿವೃತ್ತಿಧರ್ಮದಲ್ಲಿ ಆಸಕ್ತನಾಗಬೇಕು; ಶಾಸ್ತ್ರೋಕ್ತರೀತಿಯಲ್ಲಿ ಶ್ರೀಹರಿಗೆ ಸಮರ್ಪಿಸಿದ ಪವಿತ್ರವಾದ ಆಹಾರವನ್ನು ಮಿತವಾಗಿ ಸೇವಿಸಬೇಕು; ಶ್ರೀಹರಿಯ ಸನ್ನಿಧಾನಯುಕ್ತವಾದ ಕ್ಷೇತ್ರಗಳಿಗೆ ಹೋಗುತ್ತಿರಬೇಕು; ಶಾಸ್ತ್ರನಿಷಿದ್ಧವಾದ ಹಿಂಸೆಯನ್ನು ಮಾಡಬಾರದು; ಜಗತ್ತು ಸುಳ್ಳೆಂಬ ವಾದವನ್ನೂ ಭೂತಗಳಿಗೆ ಅಹಿತವಾದ ಮಾತನ್ನೂ ಆಡಬಾರದು; ಒಡೆಯನ ಅಪ್ಪಣೆಯಿಲ್ಲದೆ ತೃಣವನ್ನೂ ತೆಗೆದುಕೊಳ್ಳದೆ ಇರಬೇಕು; ಶರೀರ ಪೋಷಣೆಗೆ ಆವಶ್ಯಕವಾದಷ್ಟೇ ಪದಾರ್ಥಗಳನ್ನು ಸೇವಿಸಬೇಕು; ಎಂಟು ವಿಧವಾದ ಮಿಥುನಕರ್ಮದಿಂದಲೂ ದೂರನಾಗಿರಬೇಕು; ಉಪವಾಸವ್ರತ ಮೊದಲಾದುವನ್ನು ಮಾಡಬೇಕು; ತತ್ವಗಳನ್ನು ಆಲೋಚಿಸುತ್ತಿರಬೇಕು; ದೇಹದ ಒಳಗೂ ಹೊರಗೂ ಶುಚಿಯಾಗಿರಬೇಕು; ಶಾಸ್ತ್ರಾಧ್ಯಯನಮಾಡಬೇಕು; ಶಾಸ್ತ್ರೋಕ್ತರೀತಿಯಲ್ಲಿ ಶ್ರೀಹರಿಯನ್ನು ಅರ್ಚಿಸಬೇಕು; ಲೌಕಿಕ ಹರಟೆಗಳನ್ನು ಆಡಬಾರದು; ಆಸನಸ್ಥೈರ್ಯವನ್ನು ಸಂಪಾದಿಸಬೇಕು; ವಿಷ್ಣುಸರ್ವೋತ್ತಮನೆಂಬ ಸಿದ್ಧಾಂತವೇ ಸರಿಯಾದುದೆಂಬ ದಾರ್ಢ್ಯವಿರಬೇಕು; ಮೆಲ್ಲಮೆಲ್ಲನೆ ಪ್ರಾಣಾಯಾಮ ಅಭ್ಯಾಸದಿಂದ ವಾಯುವಿನ ಅನುಗ್ರಹವನ್ನು ಹೊಂದಬೇಕು; ಇಂದ್ರಿಯಗಳು ವಿಷಯಗಳ ಕಡೆ ನುಗ್ಗದಂತೆ ನಿಗ್ರಹಿಸಿ ಹೃದಯಗತ ಶ್ರೀಹರಿಯಲ್ಲಿ ಮನಸ್ಸಿನ

ಮೂಲಕ ಅವುಗಳನ್ನು ಸ್ಥಿರಗೊಳಿಸಬೇಕು; ಶ್ರೀಹರಿಯ ಪಾದಮೊದಲಾದ ಒಂದೊಂದು ಅವಯವಗಳಲ್ಲಿಯೂ ಮನಸ್ಸನ್ನು ನೆಲೆಗೊಳಿಸಿ ಶ್ರೀಹರಿಯ ಲೀಲೆಯೆನಿಸಿದ ಸೃಷ್ಟಿ ಮೊದಲಾದ ವ್ಯಾಪಾರಗಳನ್ನು ನಿರಂತರ ಸ್ಮರಿಸುತ್ತಿರಬೇಕು; ಅಭ್ಯಾಸಬಲದಿಂದ ಪ್ರಯತ್ನವಿಲ್ಲದೆ ಶ್ರೀಹರಿಯಲ್ಲಿಯೇ ಮನಸ್ಸು ಸ್ಥಿರಗೊಳ್ಳುವಂತೆ ಮಾಡಬೇಕು. ಇವೇ ಮೊದಲಾದ ಮಾರ್ಗಗಳಿಂದ ಇಂದ್ರಿಯಗಳನ್ನೂ ಮನಸ್ಸನ್ನೂ ಆಲಸ್ಯವಿಲ್ಲದೆ ವಶಪಡಿಸಿಕೊಂಡು ಶ್ರೀಹರಿಯಧ್ಯಾನದಲ್ಲಿ ತೊಡಗಿಸಬೇಕು. ಇಲ್ಲದಿದ್ದರೆ ದುರ್ವಿಷಯಗಳ ಸೇವನೆಯಲ್ಲಿಯೇ ಸ್ವಭಾವವುಳ್ಳ ಮನಸ್ಸು ಕೆಟ್ಟ ಮಾರ್ಗದಲ್ಲಿಯೇ ಹರಿಯುವುದು.

ಶುದ್ಧವಾದ ಪ್ರದೇಶದಲ್ಲಿ ಅಷ್ಟೇನೂ ಎತ್ತರವಿಲ್ಲದ ಆಸನವನ್ನು ಹಾಕಿಕೊಂಡು ಪದ್ಮಾಸನ ಮೊದಲಾದ ದೇಹಾಯಾಸಕರಗಳಲ್ಲದ ಆಸನಗಳಲ್ಲಿ ಕುಳಿತು ದೇಹವನ್ನು ನೆಟ್ಟಗೆ ಇಟ್ಟುಕೊಂಡು ಯೋಗವನ್ನು ಅಭ್ಯಸಿಸಬೇಕು. ಮೊದಲು ವಾಯುವನ್ನು ಒಳಕ್ಕೆ ಎಳೆದುಕೊಂಡು (ಪೂರಕ) ಒಳಗಡೆಯೇ ತಡೆದಿಟ್ಟು (ಕುಂಭಕ) ಮತ್ತೆ ನಿಧಾನವಾಗಿ ಹೊರಕ್ಕೆ ಬಿಟ್ಟು (ರೇಚಕ) ಅಥವಾ ರೇಚಕ, ಕುಂಭಕ ಮತ್ತು ಪೂರಕಗಳೆಂಬ ವಿಪರೀತಕ್ರಮದಿಂದ ದೇಹದ ಒಳಗಿನ ವಾಯುಮಾರ್ಗಗಳನ್ನು ಪರಿಶುದ್ಧಗೊಳಿಸಬೇಕು. ಈ ಬಗೆಯ ವಾಯುಧಾರಣೆಯಿಂದ ಚಂಚಲವಾದ ಮನಸ್ಸೂ ಸ್ಥಿರವಾಗಿ ನಿಲ್ಲುವುದು; ಲೋಹವು ವಾಯು ಬೆಂಕಿಗಳಿಂದ ಕೊಳೆಯನ್ನು ಕಳೆದುಕೊಂಡು ಶುದ್ಧವಾಗುವಂತೆ ಯೋಗಾಭ್ಯಾಸಿಯ ಮನಸ್ಸು ರಜೋಗುಣದಿಂದ ಶುದ್ಧವಾಗಿ ಸಾತ್ವಿಕವಾಗುವುದು. ಪ್ರಾಣಾಯಾಮದಿಂದ ರಾಗದ್ವೇಷ ಮೊದಲಾದ ದೋಷಗಳು ಸುಟ್ಟುಹೋಗುವುವು. ಪ್ರತ್ಯಾಹಾರದಿಂದ ದುರ್ಜನಸಂಗದಿಂದ ಬಂದ ಪಾಪಗಳು ಪರಿಹಾರವಾಗುವುವು. ಧಾರಣೆಯಿಂದ ಜನ್ಮಾಂತರಗಳಲ್ಲಿ ಸಂಚಿತವಾದ ಪಾಪಗಳು ಹೋಗುವುವು. ಮತ್ತು ಧ್ಯಾನದಿಂದ ಯೋಗಸಿದ್ಧಿಗೆ ಪ್ರತಿಬಂಧಕಗಳಾದ ಪ್ರಾಕೃತಗುಣಗಳು ನಾಶವಾಗುವುವು.

ಈ ರೀತಿಯಲ್ಲಿ ಮನಸ್ಸು ಶುದ್ಧವಾದಮೇಲೆ ಏಕಾಗ್ರತೆಯಿಂದ ಸಮಾಧಿ ಯುಕ್ತವಾಗಿ ಧ್ಯಾನಕ್ಕೆ ಅನುಕೂಲವಾಗುವುದು. ಆಗ ಸಾಧಕನು ಮೂಗಿನ ಕೊನೆಯಲ್ಲಿ ದೃಷ್ಟಿಯನ್ನು ನೆಲೆಗೊಳಿಸಿ ವಾಸನಾಮಯವಾದ ಶ್ರೀಹರಿಯ ಮೂರ್ತಿಯನ್ನು ಧ್ಯಾನಿಸಿ ತದ್ಗತನಾಗಿ ತದ್ಭಿನ್ನನಾಗಿ ತೇಜೋಮಯನಾಗಿ ತದಾಕಾರನಾಗಿ ಶ್ರೀಹರಿಯಿರುವನೆಂದು ಧ್ಯಾನಿಸಬೇಕು. ಮನಸ್ಸು ಚಲಿಸದೆ ಇರುವವರೆಗೆ ಕಮಲದಂತೆ ಪ್ರಸನ್ನವಾದ ಮುಖವುಳ್ಳ, ಕಮಲದ ಒಳಗಿನಂತೆ ಕೆಂಪಡರಿದ ಕಣ್ಣುಗಳುಳ್ಳ, ನೀಲೋತ್ಪಲದಂತೆ ಶ್ಯಾಮಲ ವರ್ಣವುಳ್ಳ, ಶಂಖ ಚಕ್ರ

ಮತ್ತು ಗದೆಗಳನ್ನು ಕೈಗಳಲ್ಲಿ ಧರಿಸಿದ, ಅರಳಿದ ಕಮಲದ ಪರಾಗದಂತೆ ಹಳದಿಯ ರೇಷ್ಮೆಯ ಬಟ್ಟೆಯನ್ನು ಉಟ್ಟಿರುವ ವಕ್ಷಸ್ಸಿನಲ್ಲಿ ಶ್ರೀವತ್ಸವನ್ನು ಹೊಂದಿರುವ, ಕುತ್ತಿಗೆಯಲ್ಲಿ ಪ್ರಕಾಶಮಾನವಾದ ಕೌಸ್ತುಭರತ್ನದಿಂದ ಕೂಡಿದ, ಮದಿಸಿದ ದುಂಬಿಗಳಿಂದ ತುಂಬಿರುವ ವನಮಾಲೆಯಿಂದ ಸುತ್ತುವರೆದಿರುವ, ಅತ್ಯಂತ ಬೆಲೆ ಬಾಳುವ ಕಡಗ, ಕಿರೀಟ, ಕೇಶಾಲಂಕಾರ ಮತ್ತು ಪಾದಾಭರಣಗಳಿಂದ ಅಲಂಕೃತನಾದ, ನಡುಪಟ್ಟಿಯ ಎಳೆಗಳಿಂದ ಪ್ರಕಾಶಿಸುವ ನಿತಂಬವುಳ್ಳ, ಭಕ್ತರ ಹೃದಯಕಮಲಗಳಲ್ಲಿ ನೆಲೆಸಿರುವ, ಅತ್ಯಂತ ಸುಂದರನೂ ಶಾಂತನೂ ಕಣ್ಣುಗಳಿಗೆ ತಣಿವನ್ನುಂಟುಮಾಡುವವನೂ ಆದ, ಯಾವಾಗಲೂ ಹದಿನಾರು ವರ್ಷದ ಹರೆಯದ, ಸರ್ವರಿಂದ ವಂದಿತನಾದ, ಹನ್ನೆರಡು ವರ್ಷದವನಂತೆ ಇರುವ, ಭಕ್ತರಿಗೆ ಅನುಗ್ರಹಿಸಲು ಕಾತುರತೆಯುಳ್ಳ, ಎಲ್ಲರೂ ಕೀರ್ತಿಸಬೇಕಾದ ಪವಿತ್ರ ಕೀರ್ತಿಯುಳ್ಳ ಪುಣ್ಯಶ್ಲೋಕರೆನಿಸಿದ ಬ್ರಹ್ಮ ಮೊದಲಾದವರಿಗೂ ಕೀರ್ತಿಕಾರಕನಾದ ಸಮಸ್ತ ಅವಯವಗಳಿಂದ ಕೂಡಿದ ಶ್ರೀಹರಿಯನ್ನು ಧ್ಯಾನಮಾಡಬೇಕು.

ಚಲಿಸದೆ ಇರುವ, ಚಲಿಸುತ್ತಿರುವ, ಕುಳಿತಿರುವ, ಮಲಗಿರುವ, ಎಲ್ಲರ ಹೃದಯಗುಹೆಯಲ್ಲಿಯೂ ವಾಸಿಸುವ, ನೋಡಲರ್ಹವಾದ ಸುಂದರ ಚೇಷ್ಟೆಗಳುಳ್ಳ ಶ್ರೀಹರಿಯನ್ನು ಶುದ್ಧವಾದ ಮನಸ್ಸಿನಿಂದ ಧ್ಯಾನಿಸಬೇಕು. ಹೀಗೆ ಮನನಮಾಡುವವನು ಮುನಿಯೆನಿಸುವನು. ಅವನ ಮನಸ್ಸು ಶ್ರೀಹರಿಯ ಎಲ್ಲ ಅವಯವಗಳನ್ನೂ ಹೊಂದಿ ಅಲ್ಲಿಯೇ ನೆಲೆಸುವುದು. ಒಂದುವೇಳೆ ಶ್ರೀಹರಿಯ ಎಲ್ಲ ಅವಯವಗಳನ್ನೂ ಒಮ್ಮೆಯೇ ಧ್ಯಾನಮಾಡಲು ಮನಸ್ಸು ಅಸಮರ್ಥವೆಂದು ಕಂಡುಬಂದರೆ ಅವನ ಒಂದೊಂದೇ ಅವಯವವನ್ನು ಸ್ಮರಿಸುತ್ತಾ ಪಾದದಿಂದ ಹಿಡಿದು ತಲೆಯವರೆಗೂ ಧ್ಯಾನಮಾಡುತ್ತ ಹೋಗಬೇಕು.

ಸರ್ವೋತ್ತಮನಾದ ಶ್ರೀಹರಿಯ ಪಾದಗಳನ್ನು ಧ್ಯಾನಮಾಡಬೇಕು. ಕಮಲದಂತಿರುವ ಆ ಪಾದಗಳಲ್ಲಿ ವಜ್ರ, ಅಂಕುಶ, ಧ್ವಜ, ಪದ್ಮರೇಖೆಗಳಿದ್ದು ಅವುಗಳ ಎತ್ತರವೂ ಕೆಂಪಗೂ ಇರುವ ಉಗುರುಗಳೆಂಬ ದುಂಡು ಚಂದ್ರಮಂಡಲ-ಗಳಿಂದ ಹೊರಹೊಮ್ಮುವ ತಂಪಾದ ಬೆಳಕಿನಿಂದ ಧ್ಯಾನಿಸುವ ಮಹಾಂತರ ಹೃದಯದ ಕತ್ತಲೆಯು, (ಅಜ್ಞಾನವು) ತಾನಾಗಿಯೇ ನಾಶವನ್ನೈದುವುದು. ಈ ಪಾದಗಳನ್ನು ಬ್ರಹ್ಮದೇವರು ತೊಳೆದಾಗ ಹೊರಟ ಜಲಪ್ರವಾಹವೇ ಅತಿಪವಿತ್ರವೆನಿಸಿದ ದೇವಗಂಗೆಯಾಯಿತು. ಈ ತೀರ್ಥೋದಕವನ್ನು ತಲೆಯಲ್ಲಿ ಧರಿಸಿದ ಶಿವನು ಮಹಾಪುಣ್ಯಶಾಲಿಯೆನಿಸಿದನು. ಅವುಗಳನ್ನು ಧ್ಯಾನಮಾಡುವ ಯೋಗಿಯ ಮನಸ್ಸಿನಲ್ಲಿರುವ ಪಾಪಪರ್ವತಗಳನ್ನು ಭೇದಿಸುವ ವಜ್ರಾಯುಧಗಳೇ

ಇವು. ಹೀಗೆಂದು ಇವುಗಳನ್ನು ಬಹಳಹೊತ್ತು ಧ್ಯಾನಮಾಡಬೇಕು. ಗರುಡದೇವನ ಹೆಗಲಮೇಲೆ ಶೋಭಿಸುವ ಅತ್ಯಂತ ಬಲಿಷ್ಠವೆನಿಸಿದ, ಕಲ್ಪವೃಕ್ಷದ ಅರಳಿದ ಪುಷ್ಪದಂತೆ ಪ್ರಕಾಶಿಸುವ ಶ್ರೀಹರಿಯ ಎರಡು ತೊಡೆಗಳನ್ನು ಧ್ಯಾನಮಾಡಬೇಕು. ಉಟ್ಟಿರುವ ನೀಳವಾದ ಪೀತಾಂಬರದ ಮೇಲೆ ಹಾಕಿಕೊಂಡಿರುವ ನಡುಪಟ್ಟಿಯ ಎಳೆಗಳಿಂದ ಸುತ್ತುವರೆದಿರುವ ಶ್ರೀಹರಿಯ ನಿತಂಬಗಳನ್ನು ಧ್ಯಾನಮಾಡಬೇಕು. ಬ್ರಹ್ಮದೇವರ ಮನೆಯಾಗಿಯೂ ಹದಿನಾಲ್ಕು ಲೋಕಾತ್ಮಕವಾಗಿಯೂ ಇರುವ ಕಮಲಕ್ಕೆ ಉತ್ಪತ್ತಿಸ್ಥಾನವೆನಿಸಿದ ಬ್ರಹ್ಮಾಂಡವನ್ನೇ ಒಳಗೆ ಇಟ್ಟುಕೊಂಡಿರುವ ಶ್ರೀಹರಿಯ ಉದರಭಾಗದಲ್ಲಿರುವ ಆಳವಾದ ನಾಭಿಯನ್ನು ಚಿಂತಿಸಬೇಕು. ಇಂದ್ರನೀಲ–ಮಣಿಯಂತೆ ನೀಲವರ್ಣವುಳ್ಳ ಆದರೆ ಹಾಕಿಕೊಂಡಿರುವ ಹಾರದ ಮಣಿಗಳ ಕಿರಣಪ್ರಭಾವದಿಂದ ಬೆಳ್ಳಗೆ ಕಾಣುವ ಶ್ರೀಹರಿಯ ಸ್ತನದ್ವಯಗಳನ್ನು ಧ್ಯಾನಿಸಬೇಕು. ಲಕ್ಷ್ಮೀನಿವಾಸಸ್ಥಾನವಾಗಿ ಧ್ಯಾನಮಾಡುವರ ಕಣ್ಮನಗಳಿಗೆ ಸಂತೋಷವನ್ನು ಉಂಟುಮಾಡುವ ಸರ್ವೋತ್ತಮನಾದ ಶ್ರೀಹರಿಯ ವಕ್ಷಸ್ಥಲವನ್ನು ಮನಸ್ಸಿನಲ್ಲಿ ಆಲೋಚಿಸಬೇಕು. ಕೌಸ್ತುಭಮಣಿಗೂ ಅಲಂಕಾರವಾಗಿರುವ ಶ್ರೀಹರಿಯ ಕಂಠವನ್ನು ಧ್ಯಾನಮಾಡಬೇಕು. ಲೋಕಪಾಲಕರಿಗೆ ಆಶ್ರಯಗಳಾಗಿರುವ ಮಂದರಪರ್ವತವನ್ನು ಗಿರಗಿರನೆ ತಿರುಗಿಸಿದ, ತೋಳ್ಬಳೆಗಳಿಂದ ಕೂಡಿದ ಶ್ರೀಹರಿಯ ನಾಲ್ಕು ತೋಳುಗಳನ್ನು ಚಿಂತಿಸಬೇಕು. ಶ್ರೀಹರಿಯ ಬಲಗೈಯಲ್ಲಿರುವ, ಸಾವಿರ ಅರಗಳುಳ್ಳ ಶತ್ರುಗಳಾದ ದೈತ್ಯರಿಂದ ಸಹಿಸಲಾಗದ ತೇಜಸ್ಸಿನಿಂದ ತುಂಬಿರುವ ಚಕ್ರವನ್ನೂ; ಶ್ರೀಹರಿಯ ಕೈಯೆಂಬ ಕಮಲದಲ್ಲಿ ರಾಜಹಂಸದಂತೆ ಇರುವ ಶಂಖವನ್ನೂ; ಶತ್ರುಭಟರ ರಕ್ತದ ಕೆಸರಿನಿಂದ ಬಳಿಯಲ್ಪಟ್ಟ ಶ್ರೀಹರಿಗೆ ಅತ್ಯಂತ ಪ್ರಿಯವೆನಿಸಿದ ಕೌಮೋದಕಿಯೆಂಬ ಗದೆಯನ್ನೂ; ದುಂಬಿಗಳ ಸಮೂಹವಾಗಿರುವ, ಶುದ್ಧವಾದ ಶ್ರೀಹರಿಯ ಕಂಠದಲ್ಲಿ ಶೋಭಿಸುವ ಕೌಸ್ತುಭಮಣಿಯನ್ನೂ ಧ್ಯಾನಮಾಡಬೇಕು. ಶ್ರೀಹರಿಯು ಭಕ್ತರಮೇಲೆ ತನಗಿರುವ ಕನಿಕರದಿಂದ ವಿಗ್ರಹವನ್ನು ಹೊಂದಿರುವನು. ಅವನ ಆ ಶರೀರದಲ್ಲಿ ಇರುವ ಮುಖವನ್ನು ಚಿಂತಿಸಬೇಕು. ಆ ಮುಖದಲ್ಲಿ ಇರುವ ಕಪೋಲಗಳು ಅಲುಗಾಡುವ ಮಕರ ಕುಂಡಲಗಳ ಕುಣಿತದಿಂದ ಪ್ರಕಾಶಮಾನವಾಗಿರುವುವು. ಸುಂದರವಾದ ಮುಗುಳುನಗೆಯು ಮುಖವನ್ನಲಂಕರಿಸಿರುವುದು. ಪರಮಮಂಗಳದ ನಿವಾಸಸ್ಥಾನವಾದ ಆ ಮುಖವು ಸುವಾಸನೆಯಿಂದ ಆಕೃಷ್ಟಗಳಾಗಿ ಬಂದ ದುಂಬಿಗಳಿಂದ ಸೇವಿತವಾಗಿರುವುದು. ಶ್ರೀಹರಿಯ ಸ್ವರೂಪಭೂತವಾದ ಕಾಂತಿಯಿಂದ ಕಮನೀಯವಾಗಿರುವುದು. ಹಣೆಯಲ್ಲಿ ವಕ್ರವಾಗಿರುವ ಮುಂಗೂದಲುಗಳು ಇಳಿಬಿದ್ದಿರುವುವು. ಕಣ್ಣುಗಳು ಮೀನುಗಳಂತೆ ಮಧ್ಯದಲ್ಲಿ

ಅಗಲವೂ ದೀರ್ಘವೂ ಕೊನೆಗಳಲ್ಲಿ ಸಣ್ಣವೂ ಸುತ್ತಲೂ ಬೆಳ್ಳಗೂ ಇರುವುವು. ಕಮಲದಂತೆ ರಕ್ತವರ್ಣಯುಕ್ತವಾಗಿರುವುವು. ಆ ಮುಖದಲ್ಲಿ ಎರಡು ಹುಬ್ಬುಗಳು ಪ್ರಕಾಶಮಾನವಾಗಿರುವುವು. ಧ್ಯಾನಿಸುವ ಯೋಗಿಯ ಮನಸ್ಸಿನಲ್ಲಿ ತೋರುವ ವಾಸನಾಮಯವಾದ ಈ ಮೂರ್ತಿಯಲ್ಲಿ ಶ್ರೀಹರಿಯ ತೇಜೋಮಯವಾದ ಮೂರ್ತಿಯಿರುವುದು. ಹೀಗೆ ಶ್ರೀಹರಿಯ ಮುಖಕಮಲ-ವನ್ನು ಧ್ಯಾನಿಸುವುವಲ್ಲಿ ಯೋಗಿಯು ಸ್ವಲ್ಪವೂ ಆಲಸ್ಯಯುಕ್ತನಾಗಬಾರದು. ಹೃದಯಗುಹೆಯಲ್ಲಿ ವಾಸಿಸುವ ಶ್ರೀಹರಿಯು ಅತ್ಯಂತ ಸಮರ್ಥವಾದ ದಯೆಯಿಂದ ಭಕ್ತರ ಕಡೆ ತನ್ನ ಕಡೆಗಣ್ಣಿನ ನೋಟವನ್ನು ಹರಿಸಿರುವನು. ಆ ನೋಟವು ಭಕ್ತರ ಭಯಂಕರ ತಾಪತ್ರಯಗಳನ್ನು ಸಂಪೂರ್ಣವಾಗಿ ಹೋಗಲಾಡಿಸುವುದು. ಮಂದಹಾಸಯುಕ್ತವಾದ ಪ್ರಸನ್ನವಾದ ಆ ನೋಟವನ್ನು ಬಹುಕಾಲ ಭಕ್ತಿಯಿಂದ ಧ್ಯಾನಮಾಡಬೇಕು. ನಮಿಸುವ ಎಲ್ಲ ಭಕ್ತರ ದುಃಖವನ್ನು ಸಂಪೂರ್ಣವಾಗಿ ಪರಿಹರಿಸುವ ಅನುಗ್ರಾಹಕವಾದ ಶ್ರೀಹರಿಯ ಮಂದಹಾಸವನ್ನು ಚಿಂತಿಸಬೇಕು. ಮನುಪುತ್ರಿ! ಮನ್ಮಥನನ್ನೂ ಮೋಹಗೊಳಿಸಲು ತನ್ನ ಇಚ್ಛೆಯಿಂದಲೇ ಶ್ರೀಹರಿಯು ನಿರ್ಮಿಸಿಕೊಂಡಿರುವ ಹುಬ್ಬುಗಳನ್ನು ಚಿಂತಿಸಬೇಕು.

ಹೀಗೆ ಒಂದೊಂದೇ ಅವಯವಗಳನ್ನು ಧ್ಯಾನಮಾಡುವ ಅಭ್ಯಾಸದಲ್ಲಿ ಮುಂದುವರೆವ ಉಪಾಸಕನ ಹೃದಯ ಗುಹೆಯಲ್ಲಿ ಶ್ರೀಹರಿಯು ಸ್ಥಿರವಾಗಿ ನಿಲ್ಲುವನು. ಕೆಳದುಟಿಯ ಕೆಂಪಿನಿಂದ ಕೆಂಪಗೆ ಕಾಣುವ ಮೊಗ್ಗಿನಂತಿರುವ ಸಣ್ಣ ಹಲ್ಲುಗಳ ಸಾಲುಳ್ಳ ಆ ಶ್ರೀಹರಿಯ ಮೂರ್ತಿಯನ್ನು ಸಮಗ್ರವಾಗಿ ಭಕ್ತಿಯಿಂದ ಮನಸ್ಸಿನಲ್ಲಿ ನೋಡಬೇಕು. ಮುಕ್ತಿಯನ್ನು ಆಗ ಶ್ರೀಹರಿಯು ಅನುಗ್ರಹಿಸುವನು. ಮತ್ತೆ ಯಾರೂ ಮುಕ್ತಿಯನ್ನು ಕೊಡುವಲ್ಲಿ ಸಮರ್ಥರಲ್ಲ. ಸ್ವತಂತ್ರರೂ ಅಲ್ಲ. ಹೀಗೆ ಶ್ರೀಹರಿಯಲ್ಲಿ ಧ್ಯಾನಾಸಕ್ತನಾದವನ ಮನಸ್ಸು ಶ್ರೀಹರಿಯಲ್ಲಿಯೇ ಸ್ನೇಹಪೂರಿತವಾಗುವುದು. ರೋಮಾಂಚಿತನಾಗಿ ಆನಂದದಿಂದ ಹಿಗ್ಗುವ ಅವನ ಕಣ್ಣುಗಳಿಂದ ಶ್ರೀಹರಿಯನ್ನು ಕಾಣುವ ಕುತೂಹಲದ ಗುರುತಾಗಿ ನೀರು ಹನಿಯಿಡುವುದು. ಹೀಗೆ ಲಕ್ಷ್ಯವನ್ನು ವಶಪಡಿಸಿಕೊಂಡ ಮನಸ್ಸು ನಿರಾಯಾಸವಾಗಿ ಸಮಾಧಿಯಲ್ಲಿ ತೊಡಗುವುದು. ಇದರ ಫಲವಾಗಿ ಮನಸ್ಸು ಪ್ರಾಕೃತ ವಿಷಯಗಳನ್ನು ದೂರಮಾಡಿ ನಿತ್ಯಮುಕ್ತನಾದ ಶ್ರೀಹರಿಯನ್ನೇ ವಿಷಯೀಕರಿಸು-ವುದು. ಸ್ವರೂಪಭೂತವಾದ ಚಿದಾನಂದಾತ್ಮಕದೇಹವೇ ತನ್ನದೆಂದು ಬಗೆದು ಈ ಸ್ಥೂಲದೇಹದ ಅಭಿಮಾನವನ್ನು ಸಂಪೂರ್ಮವಾಗಿ ಬಿಟ್ಟು ಬಿಡುವುದು. ದೀಪಜ್ವಾಲೆಯು ಎಣ್ಣೆಬತ್ತಿಗಳು ಮುಗಿದ ಮೇಲೆ ನಂದಿಹೋಗುವಂತೆ ಈ ಸ್ಥೂಲಮನಸ್ಸು ಸ್ಥೂಲಸೂಕ್ಷ್ಮದೇಹಗಳ ಅಭಿಮಾನರಹಿತವಾಗಿ ನಿರ್ವಿಷಯವಾಗು-

ವುದು. ಆಗ ಶ್ರೀಹರಿಯ ಅಪರೋಕ್ಷಕ್ಕೆ ಪ್ರತಿಬಂಧಕವಾಗಿದ್ದ ಸಂಸಾರವೂ ನಾಶವಾಗುವುದು. ಹೀಗೆ ಜೀವನ್ಮುಕ್ತನೆನಿಸಿದ ಅಪರೋಕ್ಷಜ್ಞಾನಿಯು ಬಾಹ್ಯಮನಸ್ಸು ನಿವೃತ್ತವಾದ್ದರಿಂದ ಸಚ್ಚಿದಾನಂದ ಸ್ವರೂಪವಾದ ತನ್ನ ಸ್ವರೂಪವನ್ನು ತಿಳಿದು ನಿರ್ದೋಷಜ್ಞಾನಾನಂದಸ್ವರೂಪನಾದ ಶ್ರೀಹರಿಯ ಅಧೀನನೆಂದು ತನ್ನನ್ನು ಚೆನ್ನಾಗಿ ಅರಿತು ಶ್ರೀಹರಿಯ ಸಚ್ಚಿದಾನಂದಸ್ವರೂಪವನ್ನು ಕಾಣುವನು. ಲೌಕಿಕ ಸುಖದುಃಗಳಿಗೆ ಬಾಹ್ಯಾಂತಃಕರಣವು ಕಾರಣ. ಅದು ಹೋದ್ದರಿಂದ ಅಭಿಮಾನ-ಶೂನ್ಯವಾಗಿ ಇರುವನು. ಕಾರಣವಾದ ದೇಹಾಭಿಮಾನವೇ ಇಲ್ಲದಿರುವಾಗ ಅವನಿಗೆ ಲೌಕಿಕ ಸುಖವಾಗಲೀ ದುಃಖವಾಗಲೀ ಇರುವುದಿಲ್ಲ. ಶ್ರೀಹರಿಯ ಅಪರೋಕ್ಷದಿಂದ ಯಾವಾಗಲೂ ಆನಂದದಲ್ಲಿ ಮುಳುಗಿರುವ ಅಪರೋಕ್ಷಿಗೆ ತನ್ನ ಕೊನೆಯ ದೇಹದಲ್ಲಿಯೂ ಅಭಿಮಾನವಿರುವುದಿಲ್ಲ. ಮದ್ಯಪಾನಮತ್ತನು ಮೈಮೇಲಿನ ಬಟ್ಟೆಹೋದುದನ್ನೂ ಇರುವುದನ್ನೂ ತಿಳಿಯದಿರುವಂತೆ ಈ ಅಪರೋಕ್ಷಜ್ಞಾನಿಯು ದೇಹವು ನನ್ನದು ಎಂಬ ಅಭಿಮಾನದಿಂದ ನೋಡದಿರುವು-ದರಿಂದ ಅದು ಇದ್ದುದನ್ನೂ ಹೋದುದನ್ನೂ ಗಮನಿಸದಿರುವನು. ದೇಹವಿದ್ದರೂ ಅದರ ಸಂಬಂಧವು ಅವನಿಗಿರುವುದಿಲ್ಲ. ಶ್ರೀಹರಿಯನ್ನೇ ಸ್ವಾಮಿಯೆಂದು ತಿಳಿದು ಅವನ ಸಂಬಂಧವನ್ನೇ ಹೊಂದಿರುವನು. ಶ್ರೀಹರಿಯ ಅಪರೋಕ್ಷವಾದಕೂಡಲೆ ಈ ಚರಮದೇಹವು ಬಿದ್ದು ಹೋಗುವುದಿಲ್ಲ. ಪ್ರಾರಬ್ಧಕರ್ಮಫಲವಾಗಿ ಶ್ರೀಹರಿಯಿಂದ ದತ್ತವಾದ ಈ ದೇಹವು ಪ್ರಾರಬ್ಧಕರ್ಮ ಮುಗಿಯುವವರೆಗೂ ಇದ್ದು ಅದು ಮುಗಿದ ಕೂಡಲೆ ಬಿದ್ದು ಹೋಗುವುದು. ಸ್ವಪ್ನದಲ್ಲಿ ಕಂಡ ವಾಸನಾದೇಹದ ರಕ್ಷಣೆಗೆ ಎಚ್ಚರಗೊಂಡವನು ಪ್ರಯತ್ನಿಸದಿರುವಂತೆ ಅಪರೋಕ್ಷಿಯು ಮಾತ್ರ ತನ್ನ ಚರಮದೇಹದ ರಕ್ಷಣೆಯಲ್ಲಿ ಎಂದೂ ತೊಡಗುವುದಿಲ್ಲ. ತನ್ನವನೆನಿಸಿದ ಮಗನಿಗಿಂತಲೂ ತನ್ನದೆನಿಸಿದ ಹಣಕ್ಕಿಂತಲೂ ದೇಹವು ಬೇರೆಯಾಗಿರುವಂತೆ ತಾನೇ ಎಂದು ತಿಳಿದಿರುವ ದೇಹಕ್ಕಿಂತಲೂ ಆತ್ಮ(ಜೀವ)ನು ಭಿನ್ನನೇ. ಕೆಂಡದಿಂದಲೂ ಕಿಡಿಯಿಂದಲೂ, ಹೊಗೆಯಿಂದಲೂ ಹೇಗೆ ಸುಡುವ ಶಕ್ತಿಯುಳ್ಳ ಬೆಂಕಿಯು ಭಿನ್ನವೋ, ಹಾಗೆಯೇ ಪ್ರಾಕೃತಗಳೆನಿಸಿದ ಪಂಚಭೂತಗಳು, ಇಂದ್ರಿಯಗಳು, ಮನಸ್ಸು ಇವುಗಳಿಗಿಂತಲೂ, ಪ್ರಕೃತಿಗಿಂತಲೂ, ಸಂಸಾರಿ ಅಥವಾ ಮುಕ್ತನಾದ ಜೀವನಿಗಿಂತಲೂ ಶ್ರೀಹರಿಯು ಭಿನ್ನನು. ಅವನು ಸರ್ವಜ್ಞನು; ಗುಣಪರಿಪೂರ್ಣನು ಮತ್ತು ಸ್ವಾಮಿಯು.

ವಿವಿಧ ಯೋಗ್ಯತೆಯುಳ್ಳ ಜೀವರು ಪರಸ್ಪರ ಭಿನ್ನರು. ಇವರೆಲ್ಲರಲ್ಲಿಯೂ ಶ್ರೀಹರಿಯು ಅಂತರ್ಯಾಮಿಯಾಗಿರುವನೆಂದೂ, ಇವರೆಲ್ಲರೂ ಶ್ರೀಹರಿಯನ್ನೇ ಆಶ್ರಯಿಸಿಕೊಂಡಿರುವರೆಂದೂ ಉಪಾಸಿಸಬೇಕು. ಶ್ರೀಹರಿಯ ರೂಪಗಳಲ್ಲಿ

ಪರಸ್ಪರ ಭೇದವನ್ನೆಣಿಸಬಾರದು. ಜೀವರನ್ನು ಅನುಗ್ರಹಿಸುವುದಕ್ಕಾಗಿ ಶ್ರೀಹರಿಯು ತಾನು ನಿತ್ಯತೃಪ್ತನಾಗಿದ್ದರೂ ಆದಾನಾದಿ ಕಾರ್ಯದಲ್ಲಿ ತೊಡಗಿರುವನು. ಅನುಗ್ರಹವನ್ನು ಹೊಂದುವ ಜೀವರಿಗೂ ಅನುಗ್ರಹಮಾಡುವ ಶ್ರೀಹರಿಗೂ ಇರುವ ಭೇದವು ಎಂದೂ ಹೋಗತಕ್ಕದ್ದಲ್ಲ. ಬೆಂಕಿಗೆ ಕಾರಣವಾದ ಕಟ್ಟಿಗೆ ಒಣಗಿದ್ದು ಹಸಿಯದು ಎಂಬ ವ್ಯತ್ಯಾಸವನ್ನು ಹೊಂದಿದ್ದರೂ ಕಟ್ಟಿಗೆಗಳಲ್ಲಿರುವ ಬೆಂಕಿಯು ಒಂದೇ ಆಗಿರುವಂತೆ ಈ ಜಗತ್ತಿನಲ್ಲಿ ಇರುವ ಶ್ರೀಹರಿಯು ಆಯಾಯಾ ಪದಾರ್ಥಗಳಂತೆ ವಿಲಕ್ಷಣನಾಗಿ ಕಂಡರೂ ಅವನು ಒಬ್ಬನೇ. ಹೀಗೆ ಶ್ರೀಹರಿಯು ಸರ್ವಸಮರ್ಥನಾಗಿ ಭಿನ್ನನಾಗಿ ಇರುವುದರಿಂದಲೇ ಅಧೀನವಾದ ಜಡಪ್ರಕೃತಿಯನ್ನೂ ಅದಕ್ಕೆ ಅಭಿಮಾನಿಯೂ ಕಾರ್ಯಕಾರಣಗಳಲ್ಲಿ ವ್ಯಾಪ್ತಳೂ ಆದ್ದರಿಂದಲೇ ಬ್ರಹ್ಮ ಮೊದಲಾದವರಿಂದಲೂ ತಿಳಿಯಲಾಗದವಳೂ ಆದ ಚಿತ್ಪ್ರಕೃತಿಯೆನಿಸಿದ ಲಕ್ಷ್ಮಿಯನ್ನೂ ಅತಿಕ್ರಮಿಸಿ ಸರ್ವೋತ್ತಮನಾಗಿರುವನು.

ಶ್ರೀಹರಿಯು ಇಲ್ಲದ ಕಾಲವಿಲ್ಲ; ದೇಶವಿಲ್ಲ. ಸೃಷ್ಟಿಕಾಲದಲ್ಲಿಯೂ ಲಯಕಾಲದಲ್ಲಿಯೂ ವ್ಯಾಕೃತ ಮತ್ತು ಅವ್ಯಾಕೃತ ಆಕಾಶದಲ್ಲಿಯೂ ಅವನು ಇದ್ದೇ ಇರುವನು. ಎಲ್ಲಕ್ಕೂ ಸಾಕ್ಷಿಯವನು. ಸರ್ವವ್ಯಾಪಿಯಾದ ಅವನೇ ಎಲ್ಲದರ ಆಗುಹೋಗುಗಳಿಗೆ ಕಾರಣನು. ಅವನಿಗಿಂತ ಭಿನ್ನವಾದ ಈ ಪ್ರಪಂಚವಾದರೋ ಅವನಿಗೆ ಯಾವ ಪ್ರಯೋಜನಕ್ಕೂ ಕಾರಣವಲ್ಲ. ಆದ್ದರಿಂದ ಅಸಾರ; ಅನಿತ್ಯ. ಈ ಬಗೆಯ ಉಪಾಸನೆಯನ್ನು ಪ್ರತಿನಿತ್ಯವೂ ಬ್ರಾಹ್ಮಮೂಹೂರ್ತದಲ್ಲಿ ಎದ್ದು ಉಪಾಸಕನು ಮಾಡಬೇಕು. ಆಗಲೇ ಶ್ರೀಹರಿಯ ಅನುಗ್ರಹಕ್ಕೆ ಪಾತ್ರನಾಗುವನು.



# ಅಥ ತ್ರಿಂಶೋಽಧ್ಯಾಯಃ

ಈಅಧ್ಯಾಯದಲ್ಲಿ ಭಕ್ತಿಯೋಗದ ತಾರತಮ್ಯ ತಿಳಿಯಲು ದೇವಹೂತಿಯು ಹಿಂದೆ ಹೇಳಿದ್ದನ್ನು ಪ್ರಶಂಸಿಸಿ ಭಕ್ತಿ ಮಾರ್ಗವನ್ನು ಹೇಳಲು ಪ್ರಾರ್ಥಿಸುವಳು–

**ದೇವಹೂತಿರುವಾಚ**

**ಲಕ್ಷಣಂ ಮಹದಾದೀನಾಂ ಪ್ರಕೃತೇಃ ಪುರುಷಸ್ಯ ಚ ।**
**ಸ್ವರೂಪಂ ಲಕ್ಷ್ಯತೇಽಮೀಷಾಂ ಯೇನ ತತ್ ಪಾರಮಾರ್ಥಿಕಂ ॥೧॥**

**ಯಥಾ ಸಾಂಖ್ಯೇಷು ಕಥಿತಂ ಯನ್ಮೂಲಂ ತತ್ ಪ್ರಚಕ್ಷತೇ ।**
**ಭಕ್ತಿಯೋಗಸ್ಯ ಮೇ ಮಾರ್ಗಂ ಬ್ರೂಹಿ ವಿಸ್ತರಶಃ ಪ್ರಭೋ ॥೨॥**

ಪ್ರಭೋ=ಸಮರ್ಥನಾದ ಕಪಿಲನೇ ! ಯನ್ಮೂಲಂ ತತ್ ಪ್ರಚಕ್ಷತೇ=ಯತ್=ಯಾವ ಸಾಂಖ್ಯಶಾಸ್ತ್ರವು, ಯಾವುದರ ಮೂಲಂ=ವಿಶೇಷಪ್ರತಿಪಾದಕವಾಗಿ-ದೆಯೋ ತತ್=ಅದು ಮಹದಾದಿಲಕ್ಷಣವೆಂದು ಪ್ರಚಕ್ಷತೇ=ಪ್ರಾಜ್ಞರು ಹೇಳುವರು. (ಸಾಂಖ್ಯಶಾಸ್ತ್ರವು ವಿಶೇಷವಾಗಿ ಮಹದಾದಿಗಳ ಲಕ್ಷಣವನ್ನು ಪ್ರತಿಪಾದಿಸುತ್ತದೆ ಎಂದರ್ಥ.) ಕಾರಣ ತತ್=ಮಹದಾದಿಲಕ್ಷಣವು ಯನ್ಮೂಲಂ ಪ್ರಚಕ್ಷತೇ=ಯಾವ ಸಾಂಖ್ಯಮೂಲಕವೆಂದು ಹೇಳುವರೋ, ಅಂಥ ಸಾಂಖ್ಯೇಷು=ಸಾಂಖ್ಯಶಾಸ್ತ್ರದಲ್ಲಿ ಯಥಾ ಕಥಿತಂ=ಹೇಗೆ ಹೇಳಿದೆಯೋ ತಥಾ=ಹಾಗೆಯೇ ಮಹದಾದೀನಾಂ=ಮಹತ್ತತ್ವ ಮುಂತಾದವುಗಳ ಪ್ರಕೃತೇಃ=ಪ್ರಕೃತಿಯ ಪುರುಷಸ್ಯ=ಜೀವನ, ಲಕ್ಷಣಂ =ಲಕ್ಷಣವು, ಕಥಿತಂ=ಹೇಳಲ್ಪಟ್ಟಿತು. ಇದರಲ್ಲಿ ವಂಚಿತಳಾಗಿಲ್ಲ. ಯೇನ=ಯಾವ ಲಕ್ಷಣದಿಂದ ಅಮೀಷಾಂ=ಮಹದಾದಿಗಳ, ಪಾರಮಾರ್ಥಿಕಂ= ಪಾರಮಾರ್ಥಿಕ-ವಾದ ಸ್ವರೂಪಂ=ಯಥಾಸ್ಥಿತವಾದ ಸ್ವರೂಪವು ಲಕ್ಷ್ಯತೇ=ಇತರ ವ್ಯಾವೃತ್ತವಾಗಿ ತಿಳಿಯುವುದೋ ಆ ಲಕ್ಷಣ ಹೇಳಿ ಆಯಿತು.

ಮೇ=ನನಗೆ ಭಕ್ತಿಯೋಗಸ್ಯ ಮಾರ್ಗಂ=ಭಕ್ತಿಯೋಗದ ಮಾರ್ಗವನ್ನು ವಿಸ್ತರಶಃ=ವಿಸ್ತಾರವಾಗಿ ಬ್ರೂಹಿ=ಹೇಳು. (ಎಂದು ಪ್ರಾರ್ಥಿಸಿದಳು)

**ಯಥಾ ಸಾಂಖ್ಯೇಷೂಕ್ತಂ ತಥಾ ಕಥಿತಂ ।**
**ಯತ್ಸಾಂಖ್ಯಮೂಲಂ ತಲ್ಲಕ್ಷಣಂ ಪ್ರಚಕ್ಷತೇ ॥೧-೨॥**

ಭಕ್ತಿ ದಾರ್ಢ್ಯಕ್ಕಾಗಿ ಬೇಕಾದ ವೈರಾಗ್ಯಸಾಧನವನ್ನು ಕೇಳುವಳು-

**ವಿರಾಗೋ ಯೇನ ಪುರುಷೋ ಭಗವನ್ ಸರ್ವತೋ ಭವೇತ್ ।**
**ಆಚಕ್ಷ್ವ ಜೀವಲೋಕಸ್ಯ ವಿವಿಧಾಃ ಕರ್ಮಸಂಸೃತೀಃ ॥೩॥**

ಹೇ ಭಗವಾನ್=ಕಪಿಲನೇ ಯೇನ=ಯಾವ ಸಂಸಾರವನ್ನು ಹೇಳುವುದರಿಂದ ಪುರುಷಃ=ಅಧಿಕಾರಿಯು ಸರ್ವತಃ=ದೇಹಗೇಹಾದಿಗಳಲ್ಲೆಲ್ಲ ವಿರಾಗಃ ಭವೇತ್=ಆಸಕ್ತಿ ಇಲ್ಲದವನಾಗುವನೋ ಅಂಥ=ಜೀವಲೋಕಸ್ಯ=ಜೀವನ ವಿವಿಧಾಃ=ಅನೇಕ-ರೀತಿಯ ಕರ್ಮಸಂಸೃತೀಃ=ಕರ್ಮಾನುಸಾರವಾಗಿ ಬರುವ ಜನನ ಮರಣಗರ್ಭ-ಪಾಶರೂಪಸಂಸಾರವನ್ನು ಆಚಕ್ಷ್ವ=ಹೇಳು. ॥೩॥

**ಕಾಲಸ್ಯೇಶ್ವರರೂಪಸ್ಯ ಪರೇಷಾಂ ಚ ಪರಸ್ಯ ತೇ ।**
**ಸ್ವರೂಪಂ ಬತ ಕುರ್ವಂತಿ ಯದ್ಧೇತೋಃ ಕುಶಲಂ ಜನಾಃ ॥೪॥**

ಯದ್ಧೇತೋಃ=ಯಾವ ಕಾಲನಾಮಕನಾದ ನಿನ್ನ ಭಯದಿಂದ ಜನಾಃ=ಜನರು ಕುಶಲಂ=ಶುಭಕರ್ಮವನ್ನು ಕುರ್ವಂತಿ=ಮಾಡುವರೋ ತೇ=ಅಂಥ ಪರೇಷಾಂ=ಉತ್ತಮರಾದ ಬ್ರಹ್ಮಾದಿಗಳಿಗಿಂತ ಪರಸ್ಯ=ಉತ್ತಮನಾದ ಈಶ್ವರರೂಪಸ್ಯ=ಐಶ್ವರ್ಯ-ಮೂರ್ತಿಯಾದ ಕಾಲಸ್ಯ ಸ್ವರೂಪಂ ಆಚಕ್ಷ್ವ=ಕಾಲನಾಮಕನಾದ ನಿನ್ನ ಸ್ವರೂಪವನ್ನು ಹೇಳು. ॥೪॥

ಜ್ಞಾನೋಪದೇಶಕ್ಕೆ ಅವತರಿಸಿದ ನೀನೇ ಹೇಳಲು ಸಮರ್ಥನೆಂದು ಹೇಳುವಳು

**ಲೋಕಸ್ಯ ಮಿಥ್ಯಾಭಿಮತೇರಚಕ್ಷುಷ-**
**ಶ್ಚಿರಂ ಪ್ರಸುಪ್ತಸ್ಯ ತಮಸ್ಯನಾಶ್ರಯೇ ।**
**ಶ್ರಾಂತಸ್ಯ ಕರ್ಮಣ್ಯನುವಿದ್ಧಯಾ ಧಿಯಾ**
**ತ್ವಮಾವಿರಾಸೀಃ ಕಿಲ ಯೋಗಭಾಸ್ಕರಃ ॥೫॥**

ಅಚಕ್ಷುಷಃ=ಜ್ಞಾನದೃಷ್ಟಿ ಇಲ್ಲದ, ಆದ್ದರಿಂದಲೇ ಮಿಥ್ಯಾಭಿಮತೇಃ= ಇಲ್ಲದಿರುವ ಸ್ವಾತಂತ್ರ್ಯಾಭಿಮಾನವಿರುವ, ಅದ್ದರಿಂದ ಕರ್ಮಣ್ಯನುವಿದ್ಧಯಾ=ಪುಣ್ಯಪಾಪ-ರೂಪಕರ್ಮಗಳಲ್ಲಿ ಆಸಕ್ತವಾದ ಧಿಯಾ=ಬುದ್ಧಿಯಿಂದ ಶ್ರಾಂತಸ್ಯ=ಶ್ರಮವನ್ನು ಹೊಂದಿದ ಆದ್ದರಿಂದಲೇ ಅನಾಶ್ರಯೇ=ಅಪಾರವಾದ ತಮಸಿ=ಸಂಸಾರದಲ್ಲಿ ಚಿರಂ=ಅನಾದಿಕಾಲದಿಂದ ಪ್ರಸುಪ್ತಸ್ಯ=ಮಲಗಿದ ಲೋಕಸ್ಯ=ಮೋಕ್ಷಯೋಗ್ಯ ಜನರಿಗಾಗಿ (ಅವರಉದ್ಧಾರಕ್ಕಾಗಿ) ಯೋಗಭಾಸ್ಕರಃ=ಜ್ಞಾನಯೋಗವನ್ನು ಪ್ರಕಾಶಿ-ಸುವಲ್ಲಿ ಸೂರ್ಯನಂತೆ ಇರುವ ತ್ವಂ=ನೀನು ಆವಿರಾಸೀಃ ಕಿಲ=ಅವತರಿಸಿರು-ವಿಯಷ್ಟೇ ॥೫॥

**ಮೈತ್ರೇಯ ಉವಾಚ**

**ಇತಿ ಮಾತುರ್ವಚಃ ಶ್ಲಕ್ಷ್ಣಂ ಪ್ರತಿನಂದ್ಯ ಮಹಾಮುನಿಃ ।**
**ಆಬಭಾಷೇ ಕುರುಶ್ರೇಷ್ಠ ಪ್ರೀತಸ್ತಾಂ ಕರುಣಾರ್ದಿತಃ ॥೬॥**

ಕುರುಶ್ರೇಷ್ಠ=ವಿದುರನೇ ! ಇತಿ=ಈ ರೀತಿಯಾದ ಮಾತುಃ=ತಾಯಿಯ ಶ್ಲಕ್ಷ್ಣಂ =ಮೃದುವಾದ ವಚಃ=ಮಾತನ್ನು ಪ್ರತಿನಂದ್ಯ=ಅಭಿನಂದಿಸಿ ಮಹಾಮುನಿಃ= ಕಪಿಲನಾಮಕ ಭಗವಂತನು ಪ್ರೀತಃ=ಸಂತುಷ್ಟನಾಗಿ ಕರುಣಾರ್ದಿತಃ=ದಯೆಯನ್ನು ಹೊಂದಿ ತಾಂ=ತಾಯಿಯನ್ನು ಕುರಿತು ಆಬಭಾಷೇ=ಮಾತನಾಡಿದನು. ॥೬॥

**ಭಗವಾನುವಾಚ**

**ಭಕ್ತಿಯೋಗೋ ಬಹುವಿಧೋ ಮಾರ್ಗೈರ್ಭಾಮಿನಿ ಭಾವ್ಯತೇ ।**
**ಸ್ವಭಾವಗುಣಮಾರ್ಗೇಣ ಪುಂಸಾಂ ಭಾವೋ ವಿಭಿದ್ಯತೇ ॥೭॥**

ಹೇ ಭಾಮಿನಿ=ಸಂಸಾರವೆಂಬ ವೈರಿಯಲ್ಲಿ ಕೋಪಯುಕ್ತ ಸುಂದರಿಯಾದ ನನ್ನ ತಾಯಿಯೇ ಭಕ್ತಿಯೋಗಃ=ಭಕ್ತಿ ಎಂಬ ಉಪಾಯವು ಬಹುವಿಧಃ=ಅನೇಕ ರೀತಿಯಾಗಿ ಮಾರ್ಗೈಃ=ಶಾಸ್ತ್ರದ ಹಾದಿಯಿಂದ ಭಾವ್ಯತೇ=ನಿರೂಪಿಸಲ್ಪಡುವುದು. ಮತ್ತು ಪುಂಸಾಂ=ಅಧಿಕಾರಿಗಳ ಸ್ವಭಾವಗುಣಮಾರ್ಗೇಣ=ಯೋಗ್ಯತೆ ಮತ್ತು ಅದಕ್ಕೆ ಉದ್ಬೋಧಕವಾದ ಸತ್ವಾದಿಗುಣಗಳ ಭೇದದಿಂದ ಭಾವಃ=ಭಕ್ತಿಯು ವಿಭಾವ್ಯತೇ=ನಾನಾರೀತಿಯಾಗಿರುವುದು. ॥೭॥

ಬಾಹುವಿಧ್ಯವನ್ನೇ ಹೇಳುವರು –

**ಅಭಿಸಂಧಾಯ ಯೋ ಹಿಂಸಾಂ ದಂಭಂ ಮಾತ್ಸರ್ಯಮೇವ ಚ ।**
**ಸಂರಂಭೀ ಭಿನ್ನದೃಗ್ ಭಾವಂ ಮಯಿ ಕುರ್ಯಾತ್ ಸ ತಾಮಸಃ ॥**

ಯಃ=ಯಾವನು ಹಿಂಸಾಂ=ಪರೋಪದ್ರವವನ್ನು ದಂಭಂ=ಧರ್ಮಧ್ವಜವನ್ನು ಮಾತ್ಸರ್ಯಂ=ಹರಿಭಕ್ತರಲ್ಲಿ ಮಾತ್ಸರ್ಯವನ್ನು ಅಭಿಸಂಧಾಯ=ಮನಸಿನಲ್ಲಿಟ್ಟು-ಕೊಂಡು ಸಂರಂಭೀ=ಹರಿಭಕ್ತರ ದ್ವೇಷಿಯು ಭಿನ್ನದೃಕ್=ಅನ್ಯಥಾಜ್ಞಾನಿಯು ಮಯಿ=ನನ್ನಲ್ಲಿ ಭಾವಂ ಕುರ್ಯಾತ್=ಭಕ್ತಿ ಮಾಡುವನು ಸಃ=ಅವನು ತಾಮಸಃ= ತಾಮಸಭಕ್ತನು. ॥೮॥

**ವಿಷಯಾನಭಿಸಂಧಾಯ ಯಶ ಐಶ್ವರ್ಯಮೇವ ಚ ।**
**ಅರ್ಚಾದಾವರ್ಚಯೇದ್ ಯೋ ಮಾಂ ಪೃಥಗ್ಭಾವಃ ಸ ರಾಜಸಃ ॥**

ವಿಷಯಾನ್=ಕಾಮನೆಗಳನ್ನು ಚ=ಮತ್ತು ಯಶಃ=ಕೀರ್ತಿಯನ್ನು ಐಶ್ವರ್ಯಂ =ಸಂಪತ್ತನ್ನು ಅಭಿಸಂಧಾಯ=ಮನಸ್ಸಿನಲ್ಲಿ ಸಂಕಲ್ಪಿಸಿ ಯಃ=ಯಾವನು ಮಾಂ= ನನ್ನನ್ನು ಪೃಥಗ್ಭಾವಃ=ಪ್ರತಿಮೆಗಳಲ್ಲಿರುವ ರೂಪಗಳಿಗೆ ಭೇದ ತಿಳಿದು (ಅಂದರೆ ರಾಮನು ನನ್ನ ಅಭೀಷ್ಟ ಕೊಡಲು ಸಮರ್ಥನಲ್ಲ ಕೃಷ್ಣನೇ ಸಮರ್ಥ ಎಂದು ತಿಳಿದು ಅಲ್ಲಿಯೇ ಭಕ್ತಿವುಳ್ಳವನು) ಅರ್ಚಾದೌ=ಪ್ರತಿಮಾ, ಸ್ಥಂಡಿಲ, ಅಗ್ನಿ, ಬ್ರಾಹ್ಮಣ ಮುಂತಾದವುಗಳಲ್ಲಿ ಅರ್ಚಯೇತ್=ಪೂಜಿಸುವನೋ ಸಃ=ಅವನು ರಾಜಸಃ=ರಾಜಸಭಕ್ತನು.

**ತದ್ರೂಪಾಣಾಂ ಪೃಥಗ್ಭಾವಃ ।**

ಭಗವಂತನ ರೂಪಗಳಲ್ಲಿ ಪ್ರತ್ಯೇಕ ಭಕ್ತಿಯುಳ್ಳವನೆಂದರ್ಥ ॥೯॥

**ಕರ್ಮನಿರ್ಹಾರಮುದ್ದಿಶ್ಯ ಪರಸ್ಮಿನ್ ವಾ ತದರ್ಪಣಂ ।**
**ಯಜೇದ್ ಯಷ್ಟವ್ಯಮಿತಿ ವಾಽಪೃಥಗ್ಭಾವಃ ಸ ಸಾತ್ವಿಕಃ ॥೧೦॥**

ಕರ್ಮನಿರ್ಹಾರಂ ಉದ್ದಿಶ್ಯ=ಪಾಪನಾಶವನ್ನು ಇಚ್ಛಿಸಿ ಪರಸ್ಮಿನ್=ಸರ್ವೋತ್ತಮ-ನಾದ ನನ್ನಲ್ಲಿ ತದರ್ಪಣಂ=ಕರ್ಮಸಮರ್ಪಣವನ್ನೂ ಉದ್ದೇಶಿಸಿ ಯಃ=ಯಾವನು ಯಷ್ಟವ್ಯಂ ಇತಿ=ವಿಹಿತವಾದ್ದರಿಂದ ಕರ್ಮ ಮಾಡಬೇಕು, ಫಲಾಪೇಕ್ಷೆಯಿಂದಲ್ಲ ಎಂದು ಯಜೇತ್=ಯಜ್ಞಮಾಡುವನು, ಪೂಜಿಸುವನು ಅಪೃಥಗ್ಭಾವಃ= ಭಗವಂತನ ಎಲ್ಲ ರೂಪಗಳಲ್ಲಿ ಏಕರೀತಿ ಭಕ್ತಿ ಮಾಡುವವನೋ ಸಃ=ಅವನು ಸಾತ್ವಿಕಃ=ಸಾತ್ವಿಕಭಕ್ತನು.

**ಅಪೃಥಗ್ಭಾವಃ ಸ ಸಾತ್ವಿಕಃ ।**

ರೂಪಗಳಲ್ಲಿ ಸಮನಾಗಿ ಭಕ್ತಿ ಮಾಡುವವನು ಎಂದರ್ಥ. ॥೧೦॥

ಈ ರೀತಿ ಗುಣಕಾರ್ಯಭಕ್ತಿಯೋಗದ ಲಕ್ಷಣ ಹೇಳಿ, ಈಗ ಉತ್ತಮ ಭಕ್ತರ ಸ್ವಾಭಾವಿಕವಾದ ಮೊದಲಿಲ್ಲದ(ಅನಾದಿಯಾದ) ಭಕ್ತಿಯ ಲಕ್ಷಣವನ್ನು ಹೇಳುವರು -

**ಮದ್ಗುಣಶ್ರುತಮಾತ್ರೇಣ ಮಯಿ ಸರ್ವಗುಣಾಶ್ರಯೇ ।**
**ಮನೋಗತಿರವಿಚ್ಛಿನ್ನಾ ಯಥಾ ಗಂಗಾಂಭಸೋಽಂಬುಧೌ ॥೧೧॥**

**ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯ ಹ್ಯುದಾಹೃತಮ್ ।**
**ಅಹೈತುಕ್ಯವ್ಯವಹಿತಾ ಯಾ ಭಕ್ತಿಃ ಪುರುಷೋತ್ತಮೇ ॥೧೨॥**

ಮದ್ಗುಣಶ್ರುತಮಾತ್ರೇಣ=ನನ್ನ ಗುಣಗಳನ್ನು ಕೇವಲ ಕೇಳುವುದರಿಂದ ಸರ್ವಗುಣಾಶ್ರಯೇ=ಜ್ಞಾನಾನಂದಾದಿ ಸಕಲಗುಣಪೂರ್ಣನಾದ ಪುರುಷೋತ್ತಮೇ =ಕ್ಷರಾಕ್ಷರಚೇತನರಗಿಂತ ಉತ್ತಮನಾದ ಮಯಿ=ನನ್ನಲ್ಲಿ ಅಹೈತುಕೀ=ಫಲಾನು-ಸಂಧಾನವಿಲ್ಲದ ಅವ್ಯವಹಿತಾ=ನಿರಂತರವಾದ ಯಥಾ=ಹೇಗೆ ಅಂಬುಧೌ= ಸಮುದ್ರದಲ್ಲಿ ಗಂಗಾಂಭಸಃ=ಗಂಗೆಯ ನೀರಿನ ಅವಿಚ್ಛಿನ್ನಗತಿಯಂತೆ ಅವಿಚ್ಛಿನ್ನಾ ಮನೋಗತಿಃ=ಸತತವಾದ ಮನಃಪ್ರಾವಣ್ಯವೇನಿದೆಯೋ ಇದೆ ನಿರ್ಗುಣಸ್ಯ= ಸ್ವಾಭಾವಿಕವಾದ ಭಕ್ತಿಯೋಗಸ್ಯ=ಭಕ್ತಿ ಎಂಬ ಉಪಾಯದ ಲಕ್ಷಣಂ=ಸ್ವರೂಪವೆಂದು ಉದಾಹೃತಂ= ಹೇಳಲ್ಪಟ್ಟಿದೆ. ॥೧೧-೧೨।

ಇಂಥವರಿಗೆ ನಿಷ್ಕಾಮತೆಯನ್ನು ಕೈಮುತ್ಯದಿಂದ ಹೇಳುವರು-

**ಸಾಲೋಕ್ಯಸಾರ್ಷ್ಟಿಸಾಮೀಪ್ಯಸಾರೂಪ್ಯೈಕತ್ವಮಿತ್ಯುತ ।**
**ದೀಯಮಾನಂ ನ ಗೃಹ್ಣಂತಿ ವಿನಾ ಮತ್ಸೇವನಂ ಜನಾಃ ॥೧೩॥**

ಜನಾಃ=ಉತ್ತಮರು ಸಾಲೋಕ್ಯ=ಸಮಾನಲೋಕತೆ (ಒಂದೇ ಲೋಕದಲ್ಲಿ-ರುವುದು) ಸಾರ್ಷ್ಟಿ=ಸಮಾನ ಐಶ್ವರ್ಯಪ್ರಾಪ್ತಿ ಸಾಮೀಪ್ಯ=ಸಮೀಪದಲ್ಲಿರುವುದು ಸಾರೂಪ್ಯ=ಸಮಾನರೂಪತೆ ಏಕತ್ವಂ=ಸಾಯುಜ್ಯವು ಉತ=ಈರೀತಿ ಪ್ರಸಿದ್ಧವಾದ ಮೋಕ್ಷವನ್ನೂ ಸಹ,ದೀಯಮಾನಂ=ಕೊಡಲ್ಪಡುವವನ್ನು ಮತ್ಸೇವನಂ ವಿನಾ=ನನ್ನ ಸೇವೆಯ ಹೊರತಾಗಿ ನ ಗೃಹ್ಣಂತಿ=ತಮ್ಮ ಸೇವಾಫಲವಾಗಿ ಸ್ವೀಕರಿಸುವುದಿಲ್ಲ, ಅಂದಮೇಲೆ ಅವರಿಗೆ ಇತರ ಪುರುಷಾರ್ಥಾಪೇಕ್ಷೆ ಇಲ್ಲವೆಂದು ಬೇರೆ ಹೇಳಬೇಕಿಲ್ಲವೆಂದು ಭಾವ. ॥೧೩॥

ಇಲ್ಲಿ ಹೇಳಿದ ಲಕ್ಷಣ ಆತ್ಯಂತಿಕ ಭಕ್ತಿಯೋಗದ್ದೆಂದು ಶಾಸ್ತ್ರದಲ್ಲಿ ಹೇಳಿದೆ. ಸ್ವಾಭಾವಿಕ ಭಕ್ತಿಯೋಗ ಲಕ್ಷಣ ಎಂದು ಹೇಳಿದ್ದು ಹೇಗೆ ಎಂದರೆ ಹೇಳುವರು-

**ಸ ಏವ ಭಕ್ತಿಯೋಗಾಖ್ಯ ಆತ್ಯಂತಿಕ ಉದಾಹೃತಃ ।**
**ಯೇನಾತಿವ್ರಜ್ಯ ತ್ರಿಗುಣಾನ್ ಮದ್ಭಾವಾಯೋಪಪದ್ಯತೇ ॥೧೪॥**

ಯೇನ=ಯಾವ ಸ್ವಾಭಾವಿಕಭಕ್ತಿಯೋಗದಿಂದ ತ್ರಿಗುಣಾನ್=ಸಾತ್ವಿಕಾದಿ ಭಕ್ತರನ್ನು ಅತಿವ್ರಜ್ಯ=ಅತಿಕ್ರಮಿಸಿ ಮದ್ಭಾವಾಯ=ನನ್ನಲ್ಲಿರುವುದಕ್ಕೆ (ಸಾಯುಜ್ಯಕ್ಕೆ) ಉಪಪದ್ಯತೇ=ಯೋಗ್ಯನಾಗುವನೋ ಸಃ ಏವ ಭಕ್ತಿಯೋಗಾಖ್ಯಃ=ಆ ಸ್ವಾಭಾವಿಕ ಭಕ್ತಿಯೋಗವೇ ಆತ್ಯಂತಿಕ ಉದಾಹೃತಃ=ಆತ್ಯಂತಿಕವೆಂದು ಹೇಳಲ್ಪಟ್ಟಿದೆ. ಕಾರಣ ವಿರೋಧವಿಲ್ಲ. ॥೧೪॥

ವಿಷಯಾನ್=ಕಾಮನೆಗಳನ್ನು ಚ=ಮತ್ತು ಯಶಃ=ಕೀರ್ತಿಯನ್ನು ಐಶ್ವರ್ಯಂ =ಸಂಪತ್ತನ್ನು ಅಭಿಸಂಧಾಯ=ಮನಸ್ಸಿನಲ್ಲಿ ಸಂಕಲ್ಪಿಸಿ ಯಃ=ಯಾವನು ಮಾಂ= ನನ್ನನ್ನು ಪೃಥಗ್ಭಾವಃ=ಪ್ರತಿಮೆಗಳಲ್ಲಿರುವ ರೂಪಗಳಿಗೆ ಭೇದ ತಿಳಿದು (ಅಂದರೆ ರಾಮನು ನನ್ನ ಅಭೀಷ್ಟ ಕೊಡಲು ಸಮರ್ಥನಲ್ಲ ಕೃಷ್ಣನೇ ಸಮರ್ಥ ಎಂದು ತಿಳಿದು ಅಲ್ಲಿಯೇ ಭಕ್ತಿವುಳ್ಳವನು) ಅರ್ಚಾದೌ=ಪ್ರತಿಮಾ, ಸ್ಥಂಡಿಲ, ಅಗ್ನಿ, ಬ್ರಾಹ್ಮಣ ಮುಂತಾದವುಗಳಲ್ಲಿ ಅರ್ಚಯೇತ್=ಪೂಜಿಸುವನೋ ಸಃ=ಅವನು ರಾಜಸಃ=ರಾಜಸಭಕ್ತನು.

**ತದ್ರೂಪಾಣಾಂ ಪೃಥಗ್ಭಾವಃ ।**

ಭಗವಂತನ ರೂಪಗಳಲ್ಲಿ ಪ್ರತ್ಯೇಕ ಭಕ್ತಿಯುಳ್ಳವನೆಂದರ್ಥ ॥೯॥

**ಕರ್ಮನಿರ್ಹಾರಮುದ್ದಿಶ್ಯ ಪರಸ್ಮಿನ್ ವಾ ತದರ್ಪಣಂ ।**
**ಯಜೇದ್ ಯಷ್ಟವ್ಯಮಿತಿ ವಾಽಪೃಥಗ್ಭಾವಃ ಸ ಸಾತ್ವಿಕಃ ॥೧೦॥**

ಕರ್ಮನಿರ್ಹಾರಂ ಉದ್ದಿಶ್ಯ=ಪಾಪನಾಶವನ್ನು ಇಚ್ಛಿಸಿ ಪರಸ್ಮಿನ್=ಸರ್ವೋತ್ತಮ-ನಾದ ನನ್ನಲ್ಲಿ ತದರ್ಪಣಂ=ಕರ್ಮಸಮರ್ಪಣವನ್ನೂ ಉದ್ದೇಶಿಸಿ ಯಃ=ಯಾವನು ಯಷ್ಟವ್ಯಂ ಇತಿ=ವಿಹಿತವಾದ್ದರಿಂದ ಕರ್ಮ ಮಾಡಬೇಕು, ಫಲಾಪೇಕ್ಷೆಯಿಂದಲ್ಲ ಎಂದು ಯಜೇತ್=ಯಜ್ಞಮಾಡುವನು, ಪೂಜಿಸುವನು ಅಪೃಥಗ್ಭಾವಃ= ಭಗವಂತನ ಎಲ್ಲ ರೂಪಗಳಲ್ಲಿ ಏಕರೀತಿ ಭಕ್ತಿ ಮಾಡುವವನೋ ಸಃ=ಅವನು ಸಾತ್ವಿಕಃ=ಸಾತ್ವಿಕಭಕ್ತನು.

**ಅಪೃಥಗ್ಭಾವಃ ಸ ಸಾತ್ವಿಕಃ ।**

ರೂಪಗಳಲ್ಲಿ ಸಮನಾಗಿ ಭಕ್ತಿ ಮಾಡುವವನು ಎಂದರ್ಥ. ॥೧೦॥

ಈ ರೀತಿ ಗುಣಕಾರ್ಯಭಕ್ತಿಯೋಗದ ಲಕ್ಷಣ ಹೇಳಿ, ಈಗ ಉತ್ತಮ ಭಕ್ತರ ಸ್ವಾಭಾವಿಕವಾದ ಮೊದಲಿಲ್ಲದ(ಅನಾದಿಯಾದ) ಭಕ್ತಿಯ ಲಕ್ಷಣವನ್ನು ಹೇಳುವರು –

**ಮದ್ಗುಣಶ್ರುತಮಾತ್ರೇಣ ಮಯಿ ಸರ್ವಗುಣಾಶ್ರಯೇ ।**
**ಮನೋಗತಿರವಿಚ್ಛಿನ್ನಾ ಯಥಾ ಗಂಗಾಂಭಸೋಂಽಬುಧೌ ॥೧೧॥**

**ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯ ಹ್ಯುದಾಹೃತಮ್ ।**
**ಅಹೈತುಕ್ಯವ್ಯವಹಿತಾ ಯಾ ಭಕ್ತಿಃ ಪುರುಷೋತ್ತಮೇ ॥೧೨॥**

ಮದ್ಗುಣಶ್ರುತಮಾತ್ರೇಣ=ನನ್ನ ಗುಣಗಳನ್ನು ಕೇವಲ ಕೇಳುವುದರಿಂದ ಸರ್ವಗುಣಾಶ್ರಯೇ=ಜ್ಞಾನಾನಂದಾದಿ ಸಕಲಗುಣಪೂರ್ಣನಾದ ಪುರುಷೋತ್ತಮೇ =ಕ್ಷರಾಕ್ಷರಚೇತನರಗಿಂತ ಉತ್ತಮನಾದ ಮಯಿ=ನನ್ನಲ್ಲಿ ಅಹೈತುಕೀ=ಫಲಾನು- ಸಂಧಾನವಿಲ್ಲದ ಅವ್ಯವಹಿತಾ=ನಿರಂತರವಾದ ಯಥಾ=ಹೇಗೆ ಅಂಬುಧೌ= ಸಮುದ್ರದಲ್ಲಿ ಗಂಗಾಂಭಸಃ=ಗಂಗೆಯ ನೀರಿನ ಅವಿಚ್ಛಿನ್ನಗತಿಯಂತೆ ಅವಿಚ್ಛಿನ್ನಾ ಮನೋಗತಿಃ=ಸತತವಾದ ಮನಃಪ್ರಾವಣ್ಯವೇನಿದೆಯೋ ಇದೆ ನಿರ್ಗುಣಸ್ಯ= ಸ್ವಾಭಾವಿಕವಾದ ಭಕ್ತಿಯೋಗಸ್ಯ=ಭಕ್ತಿ ಎಂಬ ಉಪಾಯದ ಲಕ್ಷಣಂ=ಸ್ವರೂಪವೆಂದು ಉದಾಹೃತಂ= ಹೇಳಲ್ಪಟ್ಟಿದೆ. ॥೧೧-೧೨।

ಇಂಥವರಿಗೆ ನಿಷ್ಕಾಮತೆಯನ್ನು ಕೈಮುತ್ಯದಿಂದ ಹೇಳುವರು-

**ಸಾಲೋಕ್ಯಸಾರ್ಷ್ಟಿಸಾಮೀಪ್ಯಸಾರೂಪ್ಯೈಕತ್ವಮಿತ್ಯುತ ।**
**ದೀಯಮಾನಂ ನ ಗೃಹ್ಣಂತಿ ವಿನಾ ಮತ್ಸೇವನಂ ಜನಾಃ ॥೧೩॥**

ಜನಾಃ=ಉತ್ತಮರು ಸಾಲೋಕ್ಯ=ಸಮಾನಲೋಕತೆ (ಒಂದೇ ಲೋಕದಲ್ಲಿ- ರುವುದು) ಸಾರ್ಷ್ಟಿ=ಸಮಾನ ಐಶ್ವರ್ಯಪ್ರಾಪ್ತಿ ಸಾಮೀಪ್ಯ=ಸಮೀಪದಲ್ಲಿರುವುದು ಸಾರೂಪ್ಯ=ಸಮಾನರೂಪತೆ ಏಕತ್ವಂ=ಸಾಯುಜ್ಯವು ಉತ=ಈರೀತಿ ಪ್ರಸಿದ್ಧವಾದ ಮೋಕ್ಷವನ್ನೂ ಸಹ, ದೀಯಮಾನಂ=ಕೊಡಲ್ಪಡುವವನ್ನು ಮತ್ಸೇವನಂ ವಿನಾ=ನನ್ನ ಸೇವೆಯ ಹೊರತಾಗಿ ನ ಗೃಹ್ಣಂತಿ=ತಮ್ಮ ಸೇವಾಫಲವಾಗಿ ಸ್ವೀಕರಿಸುವುದಿಲ್ಲ. ಅಂದಮೇಲೆ ಅವರಿಗೆ ಇತರ ಪುರುಷಾರ್ಥಾಪೇಕ್ಷೆ ಇಲ್ಲವೆಂದು ಬೇರೆ ಹೇಳಬೇಕಿಲ್ಲವೆಂದು ಭಾವ. ॥೧೩॥

ಇಲ್ಲಿ ಹೇಳಿದ ಲಕ್ಷಣ ಆತ್ಯಂತಿಕ ಭಕ್ತಿಯೋಗದ್ದೆಂದು ಶಾಸ್ತ್ರದಲ್ಲಿ ಹೇಳಿದೆ. ಸ್ವಾಭಾವಿಕ ಭಕ್ತಿಯೋಗ ಲಕ್ಷಣ ಎಂದು ಹೇಳಿದ್ದು ಹೇಗೆ ಎಂದರೆ ಹೇಳುವರು-

**ಸ ಏವ ಭಕ್ತಿಯೋಗಾಖ್ಯ ಆತ್ಯಂತಿಕ ಉದಾಹೃತಃ ।**
**ಯೇನಾತಿವ್ರಜ್ಯ ತ್ರಿಗುಣಾನ್ ಮದ್ಭಾವಾಯೋಪಪದ್ಯತೇ ॥೧೪॥**

ಯೇನ=ಯಾವ ಸ್ವಾಭಾವಿಕಭಕ್ತಿಯೋಗದಿಂದ ತ್ರಿಗುಣಾನ್=ಸಾತ್ವಿಕಾದಿ ಭಕ್ತರನ್ನು ಅತಿವ್ರಜ್ಯ=ಅತಿಕ್ರಮಿಸಿ ಮದ್ಭಾವಾಯ=ನನ್ನಲ್ಲಿರುವುದಕ್ಕೆ (ಸಾಯುಜ್ಯಕ್ಕೆ) ಉಪಪದ್ಯತೇ=ಯೋಗ್ಯನಾಗುವನೋ ಸಃ ಏವ ಭಕ್ತಿಯೋಗಾಖ್ಯಃ=ಆ ಸ್ವಾಭಾವಿಕ ಭಕ್ತಿಯೋಗವೇ ಆತ್ಯಂತಿಕ ಉದಾಹೃತಃ=ಆತ್ಯಂತಿಕವೆಂದು ಹೇಳಲ್ಪಟ್ಟಿದೆ. ಕಾರಣ ವಿರೋಧವಿಲ್ಲ. ॥೧೪॥

ಈ ವಿಧಭಕ್ತಿಯ ಅಭಿವೃದ್ಧಿಕಾರಣಗಳನ್ನು ಹೇಳುವರು –

**ನಿಷೇವಿತೇನಾನಿಮಿತ್ತೇನ ಸ್ವಧರ್ಮೇಣ ಮಹೀಯಸಾ ।**
**ಕ್ರಿಯಾಯೋಗೇನ ಶಸ್ತೇನ ನಾತಿಹಿಂಸ್ರೇಣ ನಿತ್ಯಶಃ ॥೧೫॥**

ಅನಿಮಿತ್ತೇನ=ವಿಷ್ಣು ಉದ್ದೇಶ್ಯಕವಾಗಿ ಮಹೀಯಸಾ=ಶ್ರದ್ಧಾತಿಶಯದಿಂದ ಯುಕ್ತವಾದ ನಾತಿಹಿಂಸ್ರೇಣ=ಪ್ರಾಣಿಹಿಂಸಾರಹಿತವಾದ ಶಸ್ತೇನ=ಪ್ರಶಸ್ತವಾದ ಸ್ವಧರ್ಮೇಣ=ತನಗೆ ವಿಹಿತವಾದ ಧರ್ಮದಿಂದ ನಿತ್ಯಶಃ=ಪ್ರತಿದಿವಸ ನಿಷೇವಿತೇನ '=ಬಹಳವಾಗಿ ಮಾಡಲ್ಪಟ್ಟ ಕ್ರಿಯಾಯೋಗೇನ=ತಂತ್ರಸಾರೋಕ್ತಭಗವದರ್ಚನ ರೂಪಕ್ರಿಯಾರೂಪ ಉಪಾಯದಿಂದ ॥೧೫॥

**ಮದ್ಧಿಷ್ಣ್ಯದರ್ಶನಸ್ಪರ್ಶಪೂಜಾಸ್ತುತ್ಯಭಿವಂದನೈಃ ।**
**ಭೂತೇಷು ಮದ್ಭಾವನಯಾ ಸತ್ಯೇನಾಸಂಗಮೇನ ಚ ॥೧೬॥**

ಮದ್ಧಿಷ್ಣ್ಯ=ನನ್ನ ಪ್ರತಿಮೆಗಳ ದರ್ಶನ=ನೋಡುವುದು ಸ್ಪರ್ಶ=ಮುಟ್ಟುವುದು ಪೂಜಾ=ಪೂಜಿಸುವುದು ಸ್ತುತಿ=ಸ್ತೋತ್ರಮಾಡುವುದು ಅಭಿವಂದನೈಃ=ನಮಸ್ಕರಿಸುವುದರಿಂದಲೂ ಭೂತೇಷು=ಜೀವರಲ್ಲಿ ಮದ್ಭಾವನಯಾ=ಅಂತರ್ಯಾಮಿ ಎಂದು ನನ್ನ ಉಪಾಸನೆ ಮಾಡುವುದರಿಂದಲೂ ಸತ್ಯೇನ=ಸಜ್ಜನರ ಹಿತವಚನಗಳಿಂದಲೂ ಅಸಂಗಮೇನ=ದುರ್ಜನರ ಸ್ನೇಹ ಸಹವಾಸಗಳನ್ನು ಬಿಡುವುದರಿಂದಲೂ ॥೧೬॥

**ಮಹತಾಂ ಬಹುಮಾನೇನ ಹೀನಾನಾಮನುಕಂಪಯಾ ।**
**ಮೈತ್ರ್ಯಾ ವಾ ಚಾತ್ಮತುಲ್ಯೇಷು ಯಮೇನ ನಿಯಮೇನ ಚ ॥೧೭॥**

ಮಹತಾಂ=ತನಗಿಂತಉತ್ತಮರಲ್ಲಿ ಬಹುಮಾನೇನ=ಗೌರವ ವಿಡುವದರಿಂದ (ಗೌರವಿಸುವುದರಿಂದ) ಹೀನಾನಾಂ=ತನಗಿಂತ ಅಧಮರಲ್ಲಿ ಅನುಕಂಪಯಾ= ಕರುಣೆ ತೋರುವುದರಿಂದ ಆತ್ಮತುಲ್ಯೇಷು=ತನಗೆ ಸಮಾನರಾದವರಲ್ಲಿ ಮೈತ್ರ್ಯಾ ವಾ=ಸ್ನೇಹ ಮಾಡುವುದರಿಂದಲೂ ಯಮೇನ=ಅಹಿಂಸಾದಿಗಳಿಂದ ನಿಯಮೇನ ಚ=ಸ್ವಧರ್ಮಾಚರಣ ಮುಂತಾದುವುಗಳಿಂದಲೂ ॥೧೭॥

**ಆಧ್ಯಾತ್ಮಿಕಾನುಶ್ರವಣಾನ್ನಾಮಸಂಕೀರ್ತನಾಚ್ಚ ಮೇ ।**
**ಆರ್ಜವೇನಾರ್ಯಸಂಗೇನ ನಿರಹಂಕ್ರಿಯಯಾ ತಥಾ ॥೧೮॥**

ಆಧ್ಯಾತ್ಮಿಕಾನುಶ್ರವಣಾತ್=ವೇದಾಂತಶಾಸ್ತ್ರದ ನಿರಂತರ ಶ್ರವಣದಿಂದಲೂ ಚ=ಮತ್ತು ಮೇ=ನನ್ನ ನಾಮಸಂಕೀರ್ತನಾತ್=ನಾಮಗಳನ್ನು ಭಕ್ತಿಯಿಂದ ಉಚ್ಚಾರ ಮಾಡುವುದರಿಂದ ಆರ್ಜವೇನ=ವಿಷ್ಣುವೈಷ್ಣವರ ವಿಷಯದಲ್ಲಿ ಮನೋ-

ವಾಕ್ಕಾಯಗಳಿಂದ ವಿಪರೀತವಾಗಿ ನಡೆಯದಿರುವುದರಿಂದಲೂ ಆರ್ಯಸಂಗೇನ=ಪಂಡಿತರ ಸಹವಾಸದಿಂದಲೂ ತಥಾ=ಮತ್ತು ನಿರಹಂಕ್ರಿಯಯಾ=ದೇಹಗೇಹಾದಿಗಳಲ್ಲಿ ನಾನು ನನ್ನದೆಂಬ ಕರ್ತೃತ್ವ, ಸ್ವಾಮಿತ್ವ ಭ್ರಮ ತ್ಯಜಿಸುವುದರಿಂದಲೂ ॥೧೮॥

**ಮದ್ಧರ್ಮೇಣಾಪಿ ಯರ್ಹ್ಯೇತೈಃ ಪರಿಸಂಶುದ್ಧ ಆಶಯಃ ।**
**ಪುರುಷಸ್ಯಾಂಜಸಾऽಭ್ಯೇತಿ ಶ್ರುತಮಾತ್ರಗುಣಂ ಹಿ ಮಾಂ ॥೧೯॥**

ಯರ್ಹಿ=ಯಾವಾಗ ಏತೈಃ=ಹಿಂದೆ ಹೇಳಿದ ಧರ್ಮಾದಿಗಳ ಅನುಷ್ಠಾನಗಳಿಂದ ಮದ್ಧರ್ಮೇಣಾಪಿ=ವಿಷ್ಣುಪಂಚಕ ಉಪವಾಸಾದಿಗಳಿಂದಲೂ ಪುರುಷಸ್ಯ=ಅಧಿಕಾರಿಯ ಆಶಯಃ=ಅಂತಃಕರಣವು ಪರಿಸಂಶುದ್ಧಃ=ಅತ್ಯಂತ ನಿರ್ಮಲವಾಗುವುದು ತದಾ=ಆಗ ಶ್ರುತಮಾತ್ರಗುಣಂ=ಕೇವಲ ಯಾವನ ಗುಣಗಳು ಮಾತ್ರ ಶ್ರುತವಾಗಿವೆ, ದೋಷಗಳು ಶ್ರುತವಾಗಿಲ್ಲವೋ ಅಂಥ ಮಾಂ=ನನ್ನನ್ನು ಅಂಜಸಾ ಅಭ್ಯೇತಿ=ಅಭಿ=ಚೆನ್ನಾಗಿ ಭಕ್ತಿಯು ಅಭಿವೃದ್ಧವಾಗಿ ಏತಿ=ಹೊಂದುವನು. ॥೧೯॥

ಹೇಳಿದ ಸಾಧನ ಸಂಪತ್ತಿ ದೊರೆತ ಮೇಲೆ ಪ್ರಯತ್ನವಿಲ್ಲದೆ ಮನಸ್ಸಿಗೆ ಭಗವತ್ಪ್ರಾಪ್ತಿ ಆಗುವುದರಲ್ಲಿ ದೃಷ್ಟಾಂತ ಹೇಳುವರು ಈ ಶ್ಲೋಕದಲ್ಲಿ -

**ಯಥಾ ವಾತರಥೋ ಘ್ರಾಣಮಾವೃಂಕ್ತೇ ಗಂಧ ಆಶಯಾನ್ ।**
**ಏವಂ ಯೋಗರತಂ ಚೇತ ಆತ್ಮಾನಮವಿಕಾರಿ ಯತ್ ॥೨೦॥**

ಯಥಾ=ಹೇಗೆ ವಾತರಥಃ=ಗಾಳಿಯೇ ರಥವಾಗಿವುಳ್ಳ ಗಂಧಃ=ಗಂಧವು ಆಶಯಾತ್=ಪುಷ್ಪರೂಪಸ್ಥಾನದಿಂದ ಬಂದು ಘ್ರಾಣಂ ಆವೃಂಕ್ತೇ=ಮೂಗನ್ನು ಆವರಿಸುವುದೋ ಏವಂ=ಹಾಗೆ ಯೋಗರತಂ=ಹಿಂದೆ ಹೇಳಿದ ಸಾಧನಸಹಿತವಾದ ಆದ್ದರಿಂದ ಅವಿಕಾರಿ=ವಿಷಯವಿಕಾರಶೂನ್ಯವಾದ ಯತ್ ಚೇತಃ=ಯಾವ ಮನಸ್ಸಿದಿಯೋ ತತ್=ಆ ಮನಸ್ಸು ಆತ್ಮಾನಂ=ಪರಮಾತ್ಮನನ್ನು ಆವೃಂಕ್ತೇ=ಚೆನ್ನಾಗಿ ವಿಷಯೀಕರಿಸುವುದು. ॥೨೦॥

ಹಿಂದಿನ ಅಧ್ಯಾಯದಲ್ಲಿ ಎಲ್ಲ ಪ್ರಾಣಿಗಳಲ್ಲಿರುವ ಭಗವಂತನಿಗೆ ಅಭೇದವನ್ನು ಮತ್ತು ಭೂತಾದಾನಾದಿಕರ್ತೃತ್ವವನ್ನು ಹೇಳಿದೆಯಷ್ಟೇ! ಅದನ್ನು ಅವಶ್ಯ ತಿಳಿದು ಎಲ್ಲಡೆಯಲ್ಲಿ ಭಗವದನುಸಂಧಾನದಿಂದ ಪೂಜೆ ಮಾಡಬೇಕೆಂದು ಹೇಳಲು, ಸರ್ವತ್ರ ಭಗವದನುಸಂಧಾನವಿಲ್ಲದವರನ್ನು ನಿಂದಿಸುವರು–

**ಅಹಂ ಸರ್ವೇಷು ಭೂತೇಷು ಭೂತಾತ್ಮಾವಸ್ಥಿತಃ ಸದಾ ।**
**ತಮವಜ್ಞಾಯ ಮಾಂ ಮರ್ತ್ಯಃ ಕುರುತೇऽರ್ಚಾವಿಡಂಬನಮ್ ॥**

ಅಹಂ=ನಾನು ಸರ್ವೇಷು ಭೂತೇಷು=ಎಲ್ಲ ಪ್ರಾಣಿಗಳಲ್ಲಿ ಭೂತಾತ್ಮಾ=ಭೂತಗಳಿಗೆ ಆದಾನಾದಿಕರ್ತೃವಾಗಿ ಸದಾ ಅವಸ್ಥಿತಃ=ಇರುವೆನು ತಂ ಮಾಂ=ಸರ್ವಪ್ರಾಣಿಗಳಲ್ಲಿರುವ ನನ್ನನ್ನು ಅವಜ್ಞಾಯ=ಬಿಟ್ಟು ಮರ್ತ್ಯಃ=ಮನುಷ್ಯನು ಪ್ರತಿಮಾದಿಗಳನ್ನೇ ದೇವನೆಂದು ಪೂಜಿಸುವನೋ ಅದು ಅರ್ಚಾವಿಡಂಬನಂ=ಪೂಜೆಯ ಅನುಕರಣವೇ ಹೊರತು ವಾಸ್ತವಪೂಜಾ ಅಲ್ಲ. ॥೨೧॥

**ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಮ್ ।**
**ಹಿತ್ವಾಽರ್ಚಾಂ ಭಜತೇ ಮೌಢ್ಯಾತ್ ಭಸ್ಮನ್ಯೇವ ಜುಹೋತಿ ಸಃ ॥**

ಯಃ=ಯಾವನು ಸರ್ವೇಷು ಭೂತೇಷು ಸಂತಂ=ಎಲ್ಲ ಜೀವರಲ್ಲಿರುವ ಆತ್ಮಾನಂ=ನಿಯಾಮಕನಾದ ಈಶ್ವರಂ=ಸರ್ವೇಶ್ವರನಾದ ಮಾಂ=ನನ್ನನ್ನು ಹಿತ್ವಾ=ಬಿಟ್ಟು ಅರ್ಚಾಂ=ಪ್ರತಿಮೆಯನ್ನು ಮೌಢ್ಯಾತ್=ಇದೇ ದೇವರೆಂದು ಭಜತೇ=ಸೇವಿಸುವನೋ ಸಃ=ಅವನು ಭಸ್ಮನಿ ಜುಹೋತಿ=ಬೂದಿಯಲ್ಲಿ ಹೋಮ ಮಾಡುವವನು. ॥೨೨॥

**ದ್ವಿಷತಃ ಪರಕಾಯೇ ಮಾಂ ಮಾನಿನೋ ಭಿನ್ನದರ್ಶಿನಃ ।**
**ಭೂತೇಷು ಬದ್ಧವೈರಸ್ಯ ನ ಮನಃ ಶಾಂತಿಮೃಚ್ಛತಿ ॥೨೩॥**

ಪರಕಾಯೇ=ಬೇರೆಯವರ ದೇಹದಲ್ಲಿ ಮಾಂ ದ್ವಿಷತಃ=ನನ್ನನ್ನು ದ್ವೇಷಿಸುವವ ಅರ್ಥಾತ್ ಭಿನ್ನದರ್ಶಿನಃ=ಅಂತಾರ್ಯಾಮಿಯಲ್ಲಿ ಭೇದವನ್ನು ತಿಳಿಯುವ ಭೂತೇಷು ಬದ್ಧವೈರಸ್ಯ=ಎಲ್ಲ ಪ್ರಾಣಿಗಳಲ್ಲಿ ವಿಶೇಷತಃ ವೈಷ್ಣವರಲ್ಲಿ ಶ್ರೀಹರಿಯ ಪ್ರತಿಮೆಯಂದು ತಿಳಿದು ದಾನ, ಮಾನಮುಂತಾದ ಪೂಜೆ ಮಾಡದಿರುವ ಮಾನಿನಃ=ದುರಭಿಮಾನಿಗೆ ಮನಃ=ಮನಸ್ಸು ಶಾಂತಿಂ ನ ಋಚ್ಛತಿ=ಭಗವನ್ನಿಷ್ಠೆಯನ್ನು ಹೊಂದಲಾರದು. ॥೨೩॥

ಜನರ ಪೂಜೆ ಏಕೆ ? ಶಾಲಿಗ್ರಾಮಾದಿ ಪೂಜೆಯಿಂದಲೇ ಶ್ರೀಹರಿ ತೃಪ್ತನಾಗುವನಲ್ಲ ಎಂದರೆ –

**ಅಹಮುಚ್ಚಾವಚೈರ್ದ್ರವ್ಯೈಃ ಕ್ರಿಯಯೋತ್ಪನ್ನಯಾಽನಘೇ ।**
**ನೈವ ತೃಷ್ಯೇಽರ್ಚಿತೋಽರ್ಚಾಯಾಂ ಭೂತಗ್ರಾಮಾವಮಾನಿನಃ ॥**

ಹೇ ಅನಘೇ=ಪಾಪರಹಿತಳೇ ಅಹಂ=ನಾನು ಅರ್ಚಾಯಾಂ=ಶಾಲಿಗ್ರಾಮಾದಿಗಳಲ್ಲಿರುವನೆಂದು ಅರ್ಚಿತೋಽಪಿ=ಪೂಜಿಸಲ್ಪಟ್ಟರೂ ಉಚ್ಚಾವಚೈಃ-ದ್ರವ್ಯೈಃ=ಉತ್ತಮಾಧಮದ್ರವ್ಯಗಳಿಂದ ಉತ್ಪನ್ನಯಾ ಕ್ರಿಯಯಾ=ಉಂಟಾದ ಅನ್ನ

ನೀರುಗಳನ್ನು ಕೊಡುವುದೇ ಮುಂತಾದ ಕ್ರಿಯೆಗಳಿಂದ ಭೂತಗ್ರಾಮಾವ-ಮಾನಿನಃ=ಭಗವತ್ಪ್ರತಿಮೆಯೆಂದು ತಿಳಿದು ಜೀವಸಮೂಹವನ್ನು ಪೂಜಿಸದಿರು-ವವನಿಗೆ ನೈವ ತೃಪ್ಯೇ=ತೃಪ್ತನಾಗಲಾರೆನು ಆದ ಕಾರಣ ನನ್ನ ಪ್ರತಿಮೆಯೆಂದು ತಿಳಿದು ಚೇತನರ ಪೂಜೆ ಮಾಡಬೇಕೆಂದು ಭಾವ. ॥೨೪॥

ಹಾಗಾದರೆ ಪ್ರತಿಮೆಗಳಲ್ಲಿ ಶ್ರೀ ಹರಿಯನ್ನು ಪೂಜಿಸಲೇಬಾರದೇ ಎಂದರೆ ಹಾಗೇನಿಲ್ಲವೆಂದು ಈ ಶ್ಲೋಕದಲ್ಲಿ ಹೇಳುವರು –

**ಅರ್ಚಾದಾವರ್ಚಯೇತ್ ತಾವದೀಶ್ವರಂ ಮಾಂ ಸ್ವಕರ್ಮಕೃತ್ ।**
**ಯಾವನ್ನ ವೇದ ಸ್ವಹೃದಿ ಸರ್ವಭೂತೇಷ್ವವಸ್ಥಿತಮ್ ॥೨೫॥**

ಸ್ವಕರ್ಮಕೃತ್=ತನಗೆ ವಿಹಿತವಾದ ನಿಷ್ಕಾಮಕರ್ಮ ಮಾಡುವವನು ಸರ್ವಭೂತೇಷ್ವವಸ್ಥಿತಂ ಈಶ್ವರಂ=ಸರ್ವೇಶ್ವರನಾದ ಎಲ್ಲ ಜೀವರಾಶಿಗಳಲ್ಲಿ ನಿಯಾಮಕನಾಗಿರುವ ಮಾಂ=ನನ್ನನ್ನು ಯಾವತ್=ಎಲ್ಲಿಯವರೆಗೆ ಸ್ವಹೃದಿ=ತನ್ನ ಹೃದಯದಲ್ಲಿ ನ ವೇದ=ಅಪರೋಕ್ಷವಾಗಿ ನೋಡುವುದಿಲ್ಲವೋ ತಾವತ್=ಅಲ್ಲಿಯವರೆಗೆ ಅರ್ಚಾದೌ=ಶಾಲಿಗ್ರಾಮಾದಿಗಳಲ್ಲಿ ಅರ್ಚಯೇತ್=ಪೂಜಿಸಬೇಕು.

ಈ ಶ್ಲೋಕದಲ್ಲಿ ಅಪರೋಕ್ಷಜ್ಞಾನಿಯು ಪ್ರತಿಮೆಗಳಲ್ಲಿ ಪೂಜಿಸುವ ಆವಶ್ಯಕತೆ ಇಲ್ಲವೆಂದು ಹೇಳಿದಂತೆ ತೋರುವುದು. ಅದು ಸರಿಯಲ್ಲ. ಜ್ಞಾನಿಗೂ ಪ್ರತಿಮಾ ಪೂಜೆ ಶ್ರುತ್ಯಾದಿಸಿದ್ಧವಾಗಿದೆ ಕಾರಣ ಅಭಿಪ್ರಾಯ ತಿಳಿಸುವರು–

**ಅಜ್ಞೋಽರ್ಚಯೇದೇವಾರ್ಚಾಯಾಂ ಅನ್ಯಥಾ ದೋಷವಾನ್ ಭವೇತ್ ।**
**ಜ್ಞಸ್ತ್ವರ್ಚಯನ್ ಸ ಗುಣವಾನ್ ಅನ್ಯಥಾ ದೋಷವಾನ್ನ ತು ॥**
**ಇತಿ ಕಾಪಿಲೇಯೇ ।**

''ಅಜ್ಞಾನಿಯು ಅರ್ಥಾತ್ ಜಿಜ್ಞಾಸುವಾದವನು ಪ್ರತಿಮೆಗಳಲ್ಲಿ ಭಗವಂತನನ್ನು ಪೂಜಿಸಲೇಬೇಕು ಇಲ್ಲವಾದರೆ ದೋಷಿಯಾಗುವನು. ಅಪರೋಕ್ಷಜ್ಞಾನಿಯಾದ-ವನೂ ಸಹ ಪ್ರತಿಮೆಗಳಲ್ಲಿ ಭಗವಂತನ ಪೂಜೆ ಮಾಡುವುದರಿಂದ ಆನಂದಾಭಿವೃದ್ಧಿರೂಪಗುಣವುಳ್ಳವನಾಗುವನು. ಪೂಜಿಸದಿದ್ದಲ್ಲಿ ಅನಪರೋಕ್ಷಿ-ಯಂತೆ ದೋಷಿಯಾಗಲಾರನು'' ಎಂದು ಕಾಪಿಲೇಯದಲ್ಲಿದೆ. ಪಾಪಭೀತಿಯಿಂದ ಪ್ರತಿಮೆಗಳಲ್ಲಿ ಶ್ರೀಹರಿಯನ್ನು ಪೂಜಿಸುವುದು ಅಪರೋಕ್ಷಜ್ಞಾನ ಪಡೆಯುವವರೆಗೆ ಅಪರೋಕ್ಷಜ್ಞಾನಾನಂತರ ಪಾಪಭಯದಿಂದ ಪ್ರತಿಮೆಗಳಲ್ಲಿ ಪೂಜಿಸಬೇಕಿಲ್ಲ ಎಂದು ಮೂಲದ ಅಭಿಪ್ರಾಯವನ್ನು ತಿಳಿಯಬೇಕು. ॥೨೫॥

ಅಹಂ=ನಾನು ಸರ್ವೇಷು ಭೂತೇಷು=ಎಲ್ಲ ಪ್ರಾಣಿಗಳಲ್ಲಿ ಭೂತಾತ್ಮಾ=ಭೂತ-ಗಳಿಗೆ ಆದಾನಾದಿಕರ್ತೃವಾಗಿ ಸದಾ ಅವಸ್ಥಿತಃ=ಇರುವೆನು ತಂ ಮಾಂ=ಸರ್ವಪ್ರಾಣಿ-ಗಳಲ್ಲಿರುವ ನನ್ನನ್ನು ಅವಜ್ಞಾಯ=ಬಿಟ್ಟು ಮರ್ತ್ಯಃ=ಮನುಷ್ಯನು ಪ್ರತಿಮಾದಿಗಳನ್ನೇ ದೇವನೆಂದು ಪೂಜಿಸುವನೋ ಅದು ಅರ್ಚಾವಿಡಂಬನಂ=ಪೂಜೆಯ ಅನುಕರಣವೇ ಹೊರತು ವಾಸ್ತವಪೂಜಾ ಅಲ್ಲ. ॥೨೧॥

**ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಮ್ ।**
**ಹಿತ್ವಾಽರ್ಚಾಂ ಭಜತೇ ಮೌಢ್ಯಾತ್ ಭಸ್ಮನ್ಯೇವ ಜುಹೋತಿ ಸಃ ॥**

ಯಃ=ಯಾವನು ಸರ್ವೇಷು ಭೂತೇಷು ಸಂತಂ=ಎಲ್ಲ ಜೀವರಲ್ಲಿರುವ ಆತ್ಮಾನಂ=ನಿಯಾಮಕನಾದ ಈಶ್ವರಂ=ಸರ್ವೇಶ್ವರನಾದ ಮಾಂ=ನನ್ನನ್ನು ಹಿತ್ವಾ=ಬಿಟ್ಟು ಅರ್ಚಾಂ=ಪ್ರತಿಮೆಯನ್ನು ಮೌಢ್ಯಾತ್=ಇದೇ ದೇವರೆಂದು ಭಜತೇ=ಸೇವಿಸುವನೋ ಸಃ=ಅವನು ಭಸ್ಮನಿ ಜುಹೋತಿ=ಬೂದಿಯಲ್ಲಿ ಹೋಮ ಮಾಡುವವನು. ॥೨೨॥

**ದ್ವಿಷತಃ ಪರಕಾಯೇ ಮಾಂ ಮಾನಿನೋ ಭಿನ್ನದರ್ಶಿನಃ ।**
**ಭೂತೇಷು ಬದ್ಧವೈರಸ್ಯ ನ ಮನಃ ಶಾಂತಿಮೃಚ್ಛತಿ ॥೨೩॥**

ಪರಕಾಯೇ=ಬೇರೆಯವರ ದೇಹದಲ್ಲಿ ಮಾಂ ದ್ವಿಷತಃ=ನನ್ನನ್ನು ದ್ವೇಷಿಸುವವ ಅರ್ಥಾತ್ ಭಿನ್ನದರ್ಶಿನಃ=ಅಂತಾರ್ಯಮಿಯಲ್ಲಿ ಭೇದವನ್ನು ತಿಳಿಯುವ ಭೂತೇಷು ಬದ್ಧವೈರಸ್ಯ=ಎಲ್ಲ ಪ್ರಾಣಿಗಳಲ್ಲಿ ವಿಶೇಷತಃ ವೈಷ್ಣವರಲ್ಲಿ ಶ್ರೀಹರಿಯ ಪ್ರತಿಮೆಯಂದು ತಿಳಿದು ದಾನ, ಮಾನಮುಂತಾದ ಪೂಜೆ ಮಾಡದಿರುವ ಮಾನಿನಃ=ದುರಭಿಮಾನಿಗೆ ಮನಃ=ಮನಸ್ಸು ಶಾಂತಿಂ ನ ಋಚ್ಛತಿ=ಭಗವನ್ನಿಷ್ಠೆ-ಯನ್ನು ಹೊಂದಲಾರದು. ॥೨೩॥

ಜನರ ಪೂಜೆ ಏಕೆ ? ಶಾಲಿಗ್ರಾಮಾದಿ ಪೂಜೆಯಿಂದಲೇ ಶ್ರೀಹರಿ ತೃಪ್ತನಾಗುವನಲ್ಲ ಎಂದರೆ –

**ಅಹಮುಚ್ಚಾವಚೈರ್ದ್ರವ್ಯೈಃ ಕ್ರಿಯಯೋತ್ಪನ್ನಯಾಽನಘೇ ।**
**ನೈವ ತೃಪ್ಯೇಽರ್ಚಿತೋಽರ್ಚಾಯಾಂ ಭೂತಗ್ರಾಮಾವಮಾನಿನಃ ॥**

ಹೇ ಅನಘೇ=ಪಾಪರಹಿತಳೇ ಅಹಂ=ನಾನು ಅರ್ಚಾಯಾಂ=ಶಾಲಿಗ್ರಾಮಾದಿಗಳಲ್ಲಿರುವನೆಂದು ಅರ್ಚಿತೋಽಪಿ=ಪೂಜಿಸಲ್ಪಟ್ಟರೂ ಉಚ್ಚಾವಚೈಃ-ದ್ರವ್ಯೈಃ=ಉತ್ತಮಾಧಮದ್ರವ್ಯಗಳಿಂದ ಉತ್ಪನ್ನಯಾ ಕ್ರಿಯಯಾ=ಉಂಟಾದ ಅನ್ನ

ನೀರುಗಳನ್ನು ಕೊಡುವುದೇ ಮುಂತಾದ ಕ್ರಿಯೆಗಳಿಂದ ಭೂತಗ್ರಾಮಾವ-ಮಾನಿನಃ=ಭಗವತ್ಪ್ರತಿಮೆಯಂದು ತಿಳಿದು ಜೀವಸಮೂಹವನ್ನು ಪೂಜಿಸದಿರು-ವವನಿಗೆ ನೈವ ತೃಪ್ಯೇ=ತೃಪ್ತನಾಗಲಾರೆನು ಆದ ಕಾರಣ ನನ್ನ ಪ್ರತಿಮೆಯಂದು ತಿಳಿದು ಚೇತನರ ಪೂಜೆ ಮಾಡಬೇಕೆಂದು ಭಾವ. ॥೨೪॥

ಹಾಗಾದರೆ ಪ್ರತಿಮೆಗಳಲ್ಲಿ ಶ್ರೀ ಹರಿಯನ್ನು ಪೂಜಿಸಲೇಬಾರದೇ ಎಂದರೆ ಹಾಗೇನಿಲ್ಲವೆಂದು ಈ ಶ್ಲೋಕದಲ್ಲಿ ಹೇಳುವರು –

**ಅರ್ಚಾದಾವರ್ಚಯೇತ್ ತಾವದೀಶ್ವರಂ ಮಾಂ ಸ್ವಕರ್ಮಕೃತ್ ।**
**ಯಾವನ್ನ ವೇದ ಸ್ವಹೃದಿ ಸರ್ವಭೂತೇಷ್ವವಸ್ಥಿತಮ್ ॥೨೫॥**

ಸ್ವಕರ್ಮಕೃತ್=ತನಗೆ ವಿಹಿತವಾದ ನಿಷ್ಕಾಮಕರ್ಮ ಮಾಡುವವನು ಸರ್ವಭೂತೇಷ್ವವಸ್ಥಿತಂ ಈಶ್ವರಂ=ಸರ್ವೇಶ್ವರನಾದ ಎಲ್ಲ ಜೀವರಾಶಿಗಳಲ್ಲಿ ನಿಯಾಮಕನಾಗಿರುವ ಮಾಂ=ನನ್ನನ್ನು ಯಾವತ್=ಎಲ್ಲಿಯವರೆಗೆ ಸ್ವಹೃದಿ=ತನ್ನ ಹೃದಯದಲ್ಲಿ ನ ವೇದ=ಅಪರೋಕ್ಷವಾಗಿ ನೋಡುವುದಿಲ್ಲವೋ ತಾವತ್=ಅಲ್ಲಿಯವರೆಗೆ ಅರ್ಚಾದೌ=ಶಾಲಿಗ್ರಾಮಾದಿಗಳಲ್ಲಿ ಅರ್ಚಯೇತ್=ಪೂಜಿಸಬೇಕು.

ಈ ಶ್ಲೋಕದಲ್ಲಿ ಅಪರೋಕ್ಷಜ್ಞಾನಿಯು ಪ್ರತಿಮೆಗಳಲ್ಲಿ ಪೂಜಿಸುವ ಆವಶ್ಯಕತೆ ಇಲ್ಲವೆಂದು ಹೇಳಿದಂತೆ ತೋರುವುದು. ಅದು ಸರಿಯಲ್ಲ. ಜ್ಞಾನಿಗೂ ಪ್ರತಿಮಾ ಪೂಜೆ ಶ್ರುತ್ಯಾದಿಸಿದ್ಧವಾಗಿದೆ ಕಾರಣ ಅಭಿಪ್ರಾಯ ತಿಳಿಸುವರು–

**ಅಜ್ಞೋಽರ್ಚಯೇದೇವಾರ್ಚಾಯಾಂ ಅನ್ಯಥಾ ದೋಷವಾನ್ ಭವೇತ್ ।**
**ಜ್ಞಸ್ತ್ವರ್ಚಯನ್ ಸ ಗುಣವಾನ್ ಅನ್ಯಥಾ ದೋಷವಾನ್ನ ತು ॥**

**ಇತಿ ಕಾಪಿಲೇಯೇ ।**

"ಅಜ್ಞಾನಿಯು ಅರ್ಥಾತ್ ಜಿಜ್ಞಾಸುವಾದವನು ಪ್ರತಿಮೆಗಳಲ್ಲಿ ಭಗವಂತನನ್ನು ಪೂಜಿಸಲೇಬೇಕು ಇಲ್ಲವಾದರೆ ದೋಷಿಯಾಗುವನು. ಅಪರೋಕ್ಷಜ್ಞಾನಿಯಾದ-ವನೂ ಸಹ ಪ್ರತಿಮೆಗಳಲ್ಲಿ ಭಗವಂತನ ಪೂಜೆ ಮಾಡುವುದರಿಂದ ಆನಂದಾಭಿವೃದ್ಧಿರೂಪಗುಣವುಳ್ಳವನಾಗುವನು. ಪೂಜಿಸದಿದ್ದಲ್ಲಿ ಅನಪರೋಕ್ಷಿ-ಯಂತೆ ದೋಷಿಯಾಗಲಾರನು" ಎಂದು ಕಾಪಿಲೇಯದಲ್ಲಿದೆ. ಪಾಪಭೀತಿಯಿಂದ ಪ್ರತಿಮೆಗಳಲ್ಲಿ ಶ್ರೀಹರಿಯನ್ನು ಪೂಜಿಸುವುದು ಅಪರೋಕ್ಷಜ್ಞಾನ ಪಡೆಯುವವರೆಗೆ. ಅಪರೋಕ್ಷಜ್ಞಾನಾನಂತರ ಪಾಪಭಯದಿಂದ ಪ್ರತಿಮೆಗಳಲ್ಲಿ ಪೂಜಿಸಬೇಕಿಲ್ಲ, ಎಂದು ಮೂಲದ ಅಭಿಪ್ರಾಯವನ್ನು ತಿಳಿಯಬೇಕು. ॥೨೫॥

ಅಂತರ್ಯಾಮಿರೂಪಗಳಿಗೆ ಭೇದವನ್ನು ತಿಳಿಯುವನಿಗೆ ಕೇವಲ ಭಗವನ್ನಿಷ್ಠೆ ಬರುವುದಿಲ್ಲವೆಂದಿಷ್ಟೇ ಅಲ್ಲ, ತಮಃಪ್ರಾಪ್ತಿಯೂ ಆಗುವುದು ಎಂದು ಹೇಳುವರು–

**ಆತ್ಮನಶ್ಚ ಪರಸ್ಯಾಪಿ ಯಃ ಕರೋತ್ಯಂತರೋದರಂ ।**
**ತಸ್ಯ ಭಿನ್ನದೃಶೋ ಮೃತ್ಯುರ್ವಿಧತ್ತೇ ಭಯಮುಲ್ಬಣಂ ॥೨೬॥**

ಯಃ=ಯಾವನು ಆತ್ಮನಃ=ತನ್ನಲ್ಲಿರುವ ಉದರಂ=ಪರಮಾತ್ಮನನ್ನು ಪರಸ್ಯ= ತನ್ನಿಂದ ಭಿನ್ನನಾದವರಲ್ಲಿರುವ ಉದರಂ=ಶ್ರೀಹರಿಯನ್ನು ಅಂತರಾ=ಭಿನ್ನವಾಗಿ ಕರೋತಿ=ತಿಳಿಯುವನೋ ತಸ್ಯ ಭಿನ್ನದೃಶಃ=ಆ ಅಂತರ್ಯಾಮಿರೂಪಗಳಿಗೆ ಭೇದವನ್ನು ತಿಳಿಯುವನಿಗೆ ಮೃತ್ಯುಃ=ಎಲ್ಲ ದುರ್ಜನ ಮಾರಕನಾದ ಶ್ರೀನರಸಿಂಹ- ದೇವನು ಉಲ್ಬಣಂ ಭಯಂ=ಕ್ರೂರವಾದ ತಮಸ್ಸೆಂಬ ಭಯವನ್ನು ವಿಧತ್ತೇ= ಕೊಡುವನು.

ಈ ಶ್ಲೋಕದಲ್ಲಿಯ ಅಂತರೋದರಶಬ್ದಕ್ಕೆ ಪ್ರಕೃತೋಪಯುಕ್ತ ಅರ್ಥ ತಿಳಿಸುವರು–

**ಅಂತೋರದರಂ ಭಿನ್ನಂ ಬ್ರಹ್ಮ । ಆತ್ಮಸ್ಥಂ ಅನ್ಯಸ್ಥಂ ಚ ಬ್ರಹ್ಮ ಯೋ ಭೇದೇನ ಪಶ್ಯತಿ । 'ಉದರಂ ಬ್ರಹ್ಮೇ'ತಿ ಶ್ರುತೇಃ ।**

ಇಲ್ಲಿ ಅಂತರಾಶಬ್ದವು ಭೇದವಾಚಕವು. ಉದರಶಬ್ದವು ಬ್ರಹ್ಮವಾಚಕವು. 'ಅಂತರಾ ಅಂತರೇಣ ಯುಕ್ತಂ ಉದರಂ ಅಂತರೋದರಂ' ಎಂದು 'ಯುಕ್ತ' ಎಂಬ ಪದ ಅಧ್ಯಾಹಾರ ಮಾಡಿಕೊಂಡು ಭಿನ್ನಂ ಬ್ರಹ್ಮ ಎಂದು ಹೇಳಿರುವರು. ಪೂರ್ವಾರ್ಧತಾತ್ಪರ್ಯವನ್ನು ಆತ್ಮಸ್ಥಂ ಮುಂತಾಗಿ ಹೇಳುವರು. ಬ್ರಹ್ಮವಾಚಕ ಉದರಶಬ್ದವನ್ನು ಆತ್ಮನಃ ಎಂಬಲ್ಲಿ ಪರಸ್ಯ ಎಂಬಲ್ಲಿಯೂ ಪ್ರತ್ಯೇಕ ಸಂಬಂಧ ಮಾಡಿ ಎರಡು ಸ್ಥಳದಲ್ಲಿ ಷಷ್ಠಿಗೆ 'ತಸ್ಥತ್ವ' ಎಂದು ಅರ್ಥ ಇಟ್ಟುಕೊಂಡು ಆತ್ಮಸ್ಥಂ ಅನ್ಯಸ್ಥಂ ಎಂದು ವ್ಯಾಖ್ಯಾನಿಸಿರುವರು. ಅಂತರಾಶಬ್ದಕ್ಕೆ ಭೇದೇನ ಎಂದರ್ಥ. ಕರೋತಿ ಎಂಬುದಕ್ಕೆ ಪಶ್ಯತಿ ಎಂದರ್ಥ ಮಾಡಿರುವರು. ಉದರಶಬ್ದ ಬ್ರಹ್ಮವಾಚಕವೆನ್ನಲು ಪ್ರಮಾಣವನ್ನು "ಉದರಂ ಬ್ರಹ್ಮ" ಎಂಬ ಶ್ರುತಿಯನ್ನು ತಿಳಿಸಿರುವರು. ॥೨೬॥

ಈ ರೀತಿ ಅಂತರ್ಯಾಮಿಗಳಿಗೆ ಭೇದ ತಿಳಿಯುವವನಿಗೆ ಅನರ್ಥ ಹೇಳಿ ಈಗ ಸರ್ವಭೂತಗಳಲ್ಲಿರುವ ಪರಮಾತ್ಮನನ್ನು ಅಭಿನ್ನನೆಂದು, ಪೂಜ್ಯನೆಂದು ತಿಳಿದು, ಭಗವಂತನ ಅಧಿಷ್ಠಾನವೆಂದು ತಿಳಿದು ಎಲ್ಲ ಭೂತಗಳನ್ನು ಪೂಜಿಸಬೇಕೆಂದು ಹೇಳುವನು –

**ಅಥ ಮಾಂ ಸರ್ವಭೂತೇಷು ಭೂತಾತ್ಮಾನಂ ಕೃತಾಲಯಂ ।**
**ಅರ್ಹಯೇದ್ ದಾನಮಾನಾಭ್ಯಾಂ ಮೈತ್ರ್ಯಾ ಭಿನ್ನೇನ ಚಕ್ಷುಷಾ ॥**

ಅಥ=ಭೇದಜ್ಞಾನವು ಅನರ್ಥಕಾರಣವಾದುದರಿಂದ ಸರ್ವಭೂತೇಷು=ಎಲ್ಲ ಪ್ರಾಣಿಗಳಲ್ಲಿ ಕೃತಾಲಯಂ=ಆವಾಸಮಾಡಿದ ಭೂತಾತ್ಮಾನಂ=ಭೂತಗಳ ಆದಾನಾದಿ ಕರ್ತೃವಾದ ಮಾಂ=ನನ್ನನ್ನು ಅಭಿನ್ನೇನ ಚಕ್ಷುಷಾ=ನನ್ನ ರೂಪಗಳಲ್ಲಿ ಅಭೇದಜ್ಞಾನ-ದಿಂದ ಸರ್ವಭೂತೇಷು=ನನಗೆ ಅಧಿಷ್ಠಾನಗಳಾದ ಎಲ್ಲ ಪ್ರಾಣಿಗಳಲ್ಲಿ ಭಿನ್ನೇನ ಚಕ್ಷುಷಾ=ನನ್ನಿಂದಲೂ, ಪರಸ್ಪರವಾಗಿಯೂ ಭೇದಜ್ಞಾನದಿಂದ ಮೈತ್ರ್ಯಾ=ಸ್ನೇಹ ಭಾವನೆಯಿಂದ ದಾನಮಾನಾಭ್ಯಾಂ=ದಾನಕೊಡುವವರಿಂದಲೂ, ಗೌರವಿಸು-ವುದರಿಂದಲೂ ಅರ್ಹಯೇತ್=ಪೂಜಿಸಬೇಕು. ॥೨೭॥

ದಾನಮಾನಗಳಿಂದ ತಾರತಮ್ಯಾನುಸಾರ ಹರಿಭಕ್ತರನ್ನು ಪೂಜಿಸಬೇಕು ಎಂದು ತಿಳಿಸಲು ಎಲ್ಲ ಭಕ್ತರ ತಾರತಮ್ಯ ತಿಳಿಸುವರು –

**ಜೀವಾಃ ಶ್ರೇಷ್ಠಾ ಹ್ಯಜೀವಾನಾಂ ತತಃ ಪ್ರಾಣಭೃತಃ ಶುಭೇ ।**
**ತತಃ ಸಚಿತ್ತಾ ಪ್ರವರಾಸ್ತತಶ್ಚೇಂದ್ರಿಯವೃತ್ತಯಃ ॥೨೮॥**

ಹೇ ಶುಭೇ=ತಾಯಿಯೇ ಅಜೀವಾನಾಂ=ಚಲನರಹಿತ ಸ್ಥಾವರ ಮುಕ್ತರಿಗಿಂತ ಜೀವಾಃ=ಜಂಗಮ ಮುಕ್ತರು ಶ್ರೇಷ್ಠರು. ಅಥವಾ ಅಜೀವಾನಾಂ=ಮೋಕ್ಷಯೋಗ್ಯ ಜೀವ ವಿರುದ್ಧರಾದ ನಿತ್ಯಸಂಸಾರಿ ಮತ್ತು ತಮೋಯೋಗ್ಯರಿಗಿಂತ ಜೀವಾಃ=ಸ್ಥಾವರ-ಮುಕ್ತರು ಶ್ರೇಷ್ಠಾಃ=ಶ್ರೇಷ್ಠರು ತತಃ=ಸ್ಥಾವರಮುಕ್ತರಿಗಿಂತ ಪ್ರಾಣಭೃತಃ=ಪ್ರಕೃಷ್ಟ ಚೇಷ್ಟಾವುಳ್ಳ ಜಂಗಮಮುಕ್ತರು ತತಃ=ಜಂಗಮ ಜೀವರಿಗಿಂತ ಸಚಿತ್ತಾಃ=ಮನೋ-ವ್ಯಾಪಾರವುಳ್ಳವರು ತತಃ=ಅವರಿಗಿಂತ ಇಂದ್ರಿಯವೃತ್ತಯಃ=ಚಕ್ಷುರಾದಿ ಇಂದ್ರಿಯ ಜನ್ಯಜ್ಞಾನವುಳ್ಳವರು ಪ್ರವರಾಃ=ಶ್ರೇಷ್ಠರು.

ಈ ಶ್ಲೋಕದಲ್ಲಿ ತತಃ=ಜೀವರಿಗಿಂತ ಪ್ರಾಣಭೃತಃ=ಜೀವರು ಶ್ರೇಷ್ಠರು ಎಂದರ್ಥ ತೋರುವುದು ಅದು ಸರಿಯಲ್ಲ, ಜೀವರು ಜೀವರಿಗಿಂತ ಉತ್ತಮ ಹೇಗಾದಾರು ? ಕಾರಣ ಇಲ್ಲಿ ವಿವಕ್ಷಿತ ಪ್ರಾಣಭೃತ್‌ಶಬ್ದಾರ್ಥ ಹೇಳುವರು–

**ಪ್ರಾಣಭೃತಃ ಚಲನಯುಕ್ತಾಃ ।**

ಪ್ರಾಣಭೃತಃ ಎಂದರೆ ಚಲನಯುಕ್ತರಾದ ಪಶ್ವಾದಿ ಜಂಗಮ ಜೀವರಾಶಿಯನ್ನು ತೆಗೆದುಕೊಳ್ಳಬೇಕು. ಜೀವಶಬ್ದದಿಂದ ಚಲನವುಳ್ಳ ಜೀವ ಮತ್ತು ಸ್ಥಾವರಗಳನ್ನೂ ಸ್ವೀಕರಿಸಬೇಕು ಎಂದು ಭಾವ.

ಇಲ್ಲಿ ಹೇಳಿದ ತಾತರಮ್ಯ ಜೀವರ ಸ್ವರೂಪದಲ್ಲಿ ಅಲ್ಲ. ಜೀವರು ಸ್ವಾಭಾವಿಕ ಚಿದ್ರೂಪರಾದ್ದರಿಂದ ಪಶುವೃಕ್ಷ ಮುಂತಾದರೂಪವಿರುವುದಿಲ್ಲ. ಇನ್ನು ದೇಹ ಸಹಿತರಾದವರಿಗೆ ಎಂದೂ ಹೇಳಲಾಗದು. ಕರ್ಮಾನುಸಾರ ಉಚ್ಚರಾದ ಮನುಷ್ಯರಿಗೂ ಸ್ಥಾವರದೇಹ ಬರಬಹುದು. ಕಾರಣ ಹೇಳಿದ ತಾರತಮ್ಯ ಕೂಡಲಾರದು ಎಂಬ ಶಂಕಾಪರಿಹಾರಕ್ಕಾಗಿ ಮೂಲವ್ಯಾಖ್ಯಾನರೂಪಸ್ಮೃತಿವಾಕ್ಯವನ್ನೇ ಹೇಳುವರು-

ಪಶುವೃಕ್ಷಾದಿಭೇದೇನ ಜೀವಾ ಏವ ಸ್ವತಃ ಸ್ಥಿತಾಃ ।
ಸಂಸೃತೌ ವ್ಯತ್ಯಯಸ್ತೇಷಾಂ ಮುಕ್ತೌ ತತ್ತತ್ಸ್ವರೂಪತಾ ॥
ತತ್ರ ಸ್ಥಾವರಮುಕ್ತೇಭ್ಯೋ ವರಾ ಜಂಗಮಮುಕ್ತಕಾಃ ।
ತೇಭ್ಯೋ ಮಾನುಷಮುಕ್ತಾಶ್ಚ ವಿಪ್ರಮುಕ್ತಾಸ್ತತೋಽಧಿಕಾಃ ॥
ತತೋಪದೇಶಮಾತ್ರೇಣ ಮುಕ್ತೇಭ್ಯೋ ವೇದವೇದಿನಃ ।
ಅರ್ಥಜ್ಞಾ ಋಷಯಸ್ತೇಭ್ಯೋಽತೋ ದೇವಾಃ ಸಂಶಯಚ್ಛಿದಃ ॥
ಪೂರ್ಣಧರ್ಮಾ ತತಸ್ತ್ವಿಂದ್ರೋ ನಿಃಸಂಗೋ ಗರುಡಸ್ತತಃ ।
ಭಕ್ತಿಪೂರ್ಣೋ ಹರೇರ್ಬ್ರಹ್ಮಾ ತಸ್ಮಾನ್ನಾನ್ಯೋಽಧಿಕಸ್ತತಃ ।
ಮುಕ್ತೌ ವಾ ಸಂಸೃತೌ ವಾಪಿ ಸಮ್ಯಗೇಷು ಹಿ ತೇ ಗುಣಾಃ ॥

ಇತಿ ಕಾಪಿಲೇಯೇ ।

ಪಶು, ವೃಕ್ಷ, ಪಕ್ಷಿ ಮುಂತಾದ ಜೀವರು ಸ್ವಾಭಾವಿಕವಾಗಿರುವರು. ಅವರೆಲ್ಲರ ದೇಹವು ಚಿನ್ಮಾತ್ರವಾದುದು. ಸಂಸಾರದಲ್ಲಿ ಬೇರೆ ದೇಹ ಬರುವುದು. ಮುಕ್ತಿಯಲ್ಲಿ ಆ ಆ ಸ್ವರೂಪವೇ ಉಳಿಯುವುದು. ಇವರಲ್ಲಿ ಸ್ಥಾವರಮುಕ್ತರಾದ ವೃಕ್ಷಜೀವರಿಗಿಂತ ಜಂಗಮಮುಕ್ತರಾದ ಪಶುಗಳು ಉತ್ತಮ. ಪಶುಗಳಿಗಿಂತ ಮನುಷ್ಯಮುಕ್ತರು. ಅವರಿಗಿಂತ ಮುಕ್ತಬ್ರಾಹ್ಮಣರು. ಅದರಲ್ಲಿಯೂ ಕೆಲವರು ವೇದ ಓದದಿರುವವರು ಕೇವಲ ವೈದಿಕ ಮಂತ್ರಾರ್ಥದ ಉಪದೇಶಪಡೆದು ಅದರ ಉಪಾಸನೆಯಿಂದ ಮುಕ್ತರಾದವರು ಉತ್ತಮರು. ಉಪದೇಶದಿಂದ ಮುಕ್ತರಾದವರಿಗಿಂತ ಯಥಾಶಕ್ತಿ ವೇದಾಧ್ಯಯನ ಮಾಡಿದವರು ಉತ್ತಮರು. ಅವರಿಗಿಂತ ಅರ್ಥ ತಿಳಿದ ಋಷಿಗಳು, ಅವರಿಗಿಂತ ಸಂಶಯ ಪರಿಹರಿಸುವ ಬೃಹಸ್ಪತಿ ಮುಂತಾದ ದೇವತೆಗಳು, ಅವರಿಗಿಂತ ಸಂಪೂರ್ಣ ತನ್ನ ಧರ್ಮ ಆಚರಿಸುವ ಇಂದ್ರನು ಉತ್ತಮನು. ಅವನಿಗಿಂತ ನಿಃಸಂಗನಾದ ಗರುಡನು, ಅವನಿಗಿಂತ ಶ್ರೀಹರಿಯಲ್ಲಿ ಭಕ್ತಿಪೂರ್ಣನಾದ ಬ್ರಹ್ಮದೇವನು ಉತ್ತಮ. ಅವನಿಗಿಂತ ಉತ್ತಮ ಜೀವರು ಮುಕ್ತಿಯಲ್ಲಿ, ಸಂಸಾರದಲ್ಲಿ ಆಗಲಿ ಬೇರೊಬ್ಬರಿಲ್ಲ. ಅರ್ಥಜ್ಞತ್ವ ಮುಂತಾದ ಗುಣಗಳು ಮನುಷ್ಯರಲ್ಲಿ ಅಸಂಭಾವಿತ. ಋಷಿ ಮುಂತಾದವರಲ್ಲೇ ಇರುವುದು ಆದ್ದರಿಂದ ಆ ಶಬ್ದದಿಂದ ಅವರನ್ನೇ ಸ್ವೀಕರಿಸಿದೆ ಎಂದು ಭಾವ. ॥೨೮॥

**ಅತ್ರಾಪಿ ಸ್ಪರ್ಶವೇದಿಭ್ಯಃ ಪ್ರವರಾ ರಸವೇದಿನಃ ।**
**ತೇಭ್ಯೋ ಗಂಧವಿದಃ ಶ್ರೇಷ್ಠಾಸ್ತತಃ ಶಬ್ದವಿದೋ ವರಾಃ ॥೨೯॥**

ಅತ್ರಾಪಿ=ಇಂದ್ರಿಯವೃತ್ತಿಯುಳ್ಳ ಪ್ರಾಣಿಗಳಲ್ಲಿಯೂ ಸ್ಪರ್ಶವೇದಿನಃ=ಸ್ಪರ್ಶ ಜ್ಞಾನವುಳ್ಳವು ಶ್ರೇಷ್ಠ ಸ್ಪರ್ಶವೇದಿಭ್ಯಃ=ಸ್ಪರ್ಶಜ್ಞಾನವುಳ್ಳವುಗಳಿಗಿಂತ ರಸವೇದಿನಃ= ಮಾಧುರ್ಯಾದಿ ರಸವನ್ನು ತಿಳಿಯುವ ಮೀನಮುಂತಾದವು ಪ್ರವರಾಃ= ಶ್ರೇಷ್ಠವಾದವು. ತೇಭ್ಯಃ=ರಸವೇದಿಗಳಿಗಿಂತ ಗಂಧವಿದಃ ಶ್ರೇಷ್ಠಾಃ=ಗಂಧಜ್ಞಾನವುಳ್ಳ ಭ್ರಮರ ಮುಂತಾದವು ಶ್ರೇಷ್ಠ ತತಃ=ಅವುಗಳಿಗಿಂತ ಶಬ್ದವಿದಃ ವರಾಃ=ಶಬ್ದವನ್ನು ತಿಳಿಯುವ ಹಾವು ಮುಂತಾದವು ಶ್ರೇಷ್ಠ ॥೨೯॥

**ರೂಪಭೇಧವಿದಸ್ತತ್ರ ತತಶ್ಚೋಭಯತೋದತಃ ।**
**ತೇಷಾಂ ಬಹುಪದಃ ಶ್ರೇಷ್ಠಾಶ್ಚತುಷ್ಪಾದಸ್ತತೋ ದ್ವಿಪಾತ್ ॥೩೦॥**

ತತ್ರ=ಅದರಲ್ಲಿಯೂ ರೂಪಭೇಧವಿದಃ=ಬಣ್ಣಗಳನ್ನು ತಿಳಿಯುವವು ತತಃ= ರೂಪತಿಳಿಯುವವುಗಳಿಗಿಂತ ಉಭಯತೋದತಃ=ಮೇಲೆ ಕೆಳಗೆ ಹಲ್ಲುವುಳ್ಳವಗಳು ಶ್ರೇಷ್ಠ ತೇಷಾಂ=ಅವುಗಳಿಗಿಂತ ಬಹುಪದಃ=ಕಾಲಿಲ್ಲದ ಹಲ್ಲುಳ್ಳವುಗಳಿಗಿಂತ ಅನೇಕ ಕಾಲುಳ್ಳ ಶರಭಮುಂತಾದವು, ಅವುಗಳಿಗಿಂತ ಚತುಷ್ಪಾದಃ=ನಾಲ್ಕುಕಾಲಿನ ಗೋಮುಂತಾದವು ಶ್ರೇಷ್ಠ ಅವುಗಳಿಗಿಂತ ದ್ವಿಪಾತ್=ಎರಡುಕಾಲಿನ ವರ್ಣಹೀನ-ನಾದ ಮನುಷ್ಯನು ಶ್ರೇಷ್ಠ ॥೩೦॥

**ತತೋ ವರ್ಣಾಶ್ಚ ಚತ್ವಾರಃ ತೇಷಾಂ ಬ್ರಾಹ್ಮಣ ಉತ್ತಮಃ ।**
**ಬ್ರಾಹ್ಮಣೇಷ್ವಪಿ ವೇದಜ್ಞೋ ಹ್ಯರ್ಥಜ್ಞೋಽಭ್ಯಧಿಕಸ್ತತಃ ॥೩೧॥**

ತತಃ=ವರ್ಣರಹಿತಮನುಷ್ಯನಿಗಿಂತ ಚತ್ವಾರಃ ವರ್ಣಾಃ=ನಾಲ್ಕುವರ್ಣದವರು ಶ್ರೇಷ್ಠರು.ತೇಷಾಂ=ಅಜ್ಞಾನಿಗಳಾದ ನಾಲ್ಕುವರ್ಣದರಿಗಿಂತ ಬ್ರಾಹ್ಮಣಃ=ಬ್ರಾಹ್ಮಣನು ಉತ್ತಮಃ=ಶ್ರೇಷ್ಠನು. (ಇವನು ವೇದಾಧ್ಯಯನ ಮಾಡದಿರುವವನು. ಗುರುಗಳು ಉಪದೇಶಮಾಡಿದ ವೈದಿಕ ಮಂತ್ರಾರ್ಥೋಪಾಸನಾಮಾತ್ರ ಜನಿತವಾದ ಅಪರೋಕ್ಷಜ್ಞಾನದಿಂದೇ ಮುಕ್ತನಾದವನು.) ಬ್ರಾಹ್ಮಣೇಷ್ವಪಿ=ಬ್ರಾಹ್ಮಣರಲ್ಲಿಯೂ ವೇದಜ್ಞಃ=ವೇದತಿಳಿದವನು (ಯಥಾಶಕ್ತಿ ವೇದಾಧ್ಯಯನ ಮಾಡಿದವನೆಂದರ್ಥ) ತತಃ=ಅವನಿಗಿಂತ ಅರ್ಥಜ್ಞಃ ಅಭ್ಯಧಿಕಃ=ಶಕ್ತ್ಯಾನುಸಾರ ವೇದಾರ್ಥತಿಳಿದ ಋಷಿಗಳು ಶ್ರೇಷ್ಠರು. ॥೩೧॥

**ಅರ್ಥಜ್ಞಾತ್ ಸಂಶಯಚ್ಛೇತ್ತಾ ತತಃ ಶ್ರೇಯಾನ್ ಸ್ವಧರ್ಮಕೃತ್ ।**
**ಮುಕ್ತಸಂಗಸ್ತತೋ ಭೂಯಾನ್ ನ ದೋಗ್ಧಾ ಧರ್ಮಮಾತ್ಮನಃ ॥**

ಅರ್ಥಜ್ಞಾತ್=ಋಷಿಗಳಿಗಿಂತ ಸಂಶಯಚ್ಛೇತ್ತಾ=ಬೃಹಸ್ಪತಿ ಮುಂತಾದ ದೇವತೆಗಳು ತತಃ=ದೇವತೆಗಳಿಗಿಂತಿತ ಸ್ವಧರ್ಮಕೃತ್=ತನಗೆ ವಿಹಿತವಾದ ಎಲ್ಲ ಧರ್ಮವನ್ನು ಆಚರಿಸುವ ಇಂದ್ರನು ಶ್ರೇಷ್ಠನು. ತತಃ=ಇಂದ್ರನಿಗಿಂತ ಮುಕ್ತಸಂಗಃ= ಸಂಗರಹಿತನಾದ ಗರುಡನು ಭೂಯಾನ್=ಶ್ರೇಷ್ಠನು. ಇವನ ಮುಕ್ತಸಂಗತ್ವವನ್ನೇ ವಿವರಿಸುವರು - ಆತ್ಮನಃ ಧರ್ಮಂ ನ ದೋಗ್ಧಾ=ತನ್ನ ಧರ್ಮಗಳನ್ನು ಭಗವಂತನ ಪ್ರೀತಿಗಲ್ಲದೇ ಇತರ ಪುರುಷಾರ್ಥಕ್ಕೆ ವ್ಯಯಮಾಡದವನು ಎಂದರ್ಥ. ॥೩೨॥

**ತಸ್ಮಾನ್ಮಯ್ಯರ್ಪಿತಾಶೇಷಕ್ರಿಯಾರ್ಥಾತ್ಮರತಿರ್ನರಃ ।**
**ಮಯ್ಯರ್ಪಿತಾತ್ಮನಃ ಪುಂಸೋ ಮಯಿ ಸಂನ್ಯಸ್ತಕರ್ಮಣಃ ।**
**ನ ಪಶ್ಯಾಮಿ ಪರಂ ಭೂತಮಕರ್ತುಃ ಸಮದರ್ಶನಾತ್ ॥೩೩॥**

ತಸ್ಮಾತ್=ಗರುಡನಿಗಿಂತ ಮಯ್ಯರ್ಪಿತಾಶೇಷಕ್ರಿಯಾರ್ಥಾತ್ಮರತಿಃ=ನನ್ನಲ್ಲಿ ಸಮರ್ಪಿಸಲ್ಪಟ್ಟ ಎಲ್ಲ ಕ್ರಿಯಾಫಲಗಳುಳ್ಳ ಇತರರಿಗಿಂತ ಪೂರ್ಣಪರಮಾತ್ಮನ ಭಕ್ತನಾದ ನರಃ=ಪರಾಂತಕಾಲದವರೆಗೂ ನಾಶಹೊಂದದ, ಭಕ್ತಿಯಿಂದ ನಾಶವಿಲ್ಲದ (ಪೂರ್ಣಭಕ್ತ ಎಂದರ್ಥ) ಬ್ರಹ್ಮನು ಉತ್ತಮನು. ಮಯ್ಯರ್ಪಿತಾತ್ಮನಃ=ನನ್ನಲ್ಲಿ ಮನಸ್ಸಿಟ್ಟು ಮಯಿ ಸನ್ನ್ಯಸ್ತಕರ್ಮಣಃ=ನನ್ನಲ್ಲಿಯೇ ಸಕಲಕರ್ಮಗಳನ್ನರ್ಪಿಸಿದ ಅಕರ್ತುಃ= ಪರಮಾತ್ಮನೇ ಕರ್ತೃವಾಗಿವುಳ್ಳ ಸಮದರ್ಶನಾತ್=ಸರ್ವವೇದೋಕ್ತ ಪರಬ್ರಹ್ಮಜ್ಞಾನಿಯಾದ ಪುಂಸಃ=ಬ್ರಹ್ಮನಿಗಿಂತ ಪರಂ=ಉತ್ತಮವಾದ ಭೂತಂ= ಪ್ರಾಣಿಯನ್ನು ನ ಪಶ್ಯಾಮಿ=ನೋಡಲಾರೆ. (ಇಲ್ಲವೆಂದರ್ಥ) ॥೩೩॥

**ಮನಸೈತಾನಿ ಭೂತಾನಿ ಪ್ರಣಮೇದ್ ಬಹುಮಾನಯನ್ ।**
**ಈಶ್ವರೋ ಜೀವಕಲಯಾ ಪ್ರವಿಷ್ಟೋ ಭಗವಾನಿತಿ ॥೩೪॥**

ಏತಾನಿ=ಹಿಂದೆ ಹೇಳಿದ ತಾರತಮ್ಯದಿಂದ ಕೂಡಿದ ಭೂತಾನಿ=ಜೀವರನ್ನು ಬಹುಮಾನಯನ್=ತಾರತಮ್ಯಾನುಸಾರವಾಗಿಯೇ ದಾನಮಾನಗಳಿಂದ ಪೂಜಿಸು- ವವನಾಗಿ ಜೀವಕಲಯಾ=ಜೀವನೆಂಬ ಭಿನ್ನಾಂಶ ಸಹಿತನಾಗಿ ಭಗವಾನ್ ಈಶ್ವರಃ ಪ್ರವಿಷ್ಟ ಇತಿ ಮನಸಾ=ಐಶ್ವರ್ಯಶಾಲಿಯಾದ ಶ್ರೀಹರಿಯು ಈ ಭೂತಗಳಲ್ಲಿ ತಾರತಮ್ಯದಿಂದಲೇ ಪ್ರವೇಶ ಮಾಡಿರುವನು ಎಂಬ ಬುದ್ಧಿಯಿಂದ ಪ್ರಣಮೇತ್= ನಮಸ್ಕರಿಸಬೇಕು. ಈಶ್ವರಾಧಿಷ್ಠಾನನಾದಜೀವನು ತನಗಿಂತ ಉತ್ತಮನಾಗಿದ್ದರೆ ಶ್ರೀಹರಿಗೂ ಜೀವನಿಗೂ ನಮಿಸಬೇಕು. ಇಲ್ಲವಾದರೆ ಕೇವಲ ಶ್ರೀಹರಿಗೆ ನಮಿಸಬೇಕು ಎಂದು ಭಾವ.

ಇಲ್ಲಿ ಜೀವಕಲಯಾ ಎಂಬುದಕ್ಕೆ ಜೀವಸ್ವರೂಪದಿಂದ ಎಂದು ಅರ್ಥ ತೋರುವುದು. ಮತ್ತು ಭೂತಾನಿ ಪ್ರಣಮೇತ್ ಎಂದು ಜೀವರಿಗೇನೇ ನಮ್ಯತ್ವ ಹೇಳಿದಂತೆ ತೋರುವುದು ಕಾರಣ ತಾತ್ಪರ್ಯ ಹೇಳುವರು –

**ಜೀವಕಲಯಾ ಸಹ ಭೂತಾನಿ ಬಹುಮಾನಯನ್ ತದಾಲಯತ್ವೇನ ಈಶ್ವರಂ ಪ್ರಣಮೇತ್ ।**

ಜೀವರಿಗೆ ದಾನಮಾನಗಳಿಂದ ಗೌರವಿಸುತ್ತ ಭೂತಾಂತರ್ಯಾಮಿಯಾದ ಭಗವಂತನನ್ನು ಭಿನ್ನಾಂಶನಾದ ಜೀವನ ಜೊತೆಗೆ ನಮಸ್ಕರಿಸಬೇಕೆಂದರ್ಥ. ಉತ್ತಮಾಧಿಷ್ಠಾನದಲ್ಲಿ ಭಗವದಧಿಷ್ಠಾನನಾದ ಜೀವನಿಗೂ ಭಗವಂತನಿಗೂ ನಮಸ್ಕಾರ. ಇಲ್ಲವಾದರೆ ಭಗವಂತನಿಗೆ ಮಾತ್ರ ಎಂದು ಭಾವ. ॥೩೪॥

**ಭಕ್ತಿಯೋಗಶ್ಚ ಯೋಗಶ್ಚ ಮಯಾ ಮಾನವ್ಯುದಿರಿತಃ ।**
**ಯಯೋರೇಕತರೇಣೈವ ಪುರುಷಃ ಪುರುಷಂ ವ್ರಜೇತ್ ॥೩೫॥**

ಹೇ ಮಾನವಿ=ಮನುಪುತ್ರಿಯಾದ ದೇವಹೂತಿಯೇ ಯೋಗಃ=ಜ್ಞಾನ-ಯೋಗವು ಭಕ್ತಿಯೋಗಶ್ಚ=ಭಕ್ತಿಯೋಗವೂ ಸಹ ಮಯಾ=ನನ್ನಿಂದ ಉದೀರಿತಃ= ಹೇಳಲ್ಪಟ್ಟಿದೆ. ಯಯೋಃ=ಯಾವ ಭಕ್ತಿಜ್ಞಾನಗಳಲ್ಲಿ ಏಕತರೇಣೈವ=ಒಂದಿದ್ದರೆ ಇನ್ನೊಂದು ಯುತವಾದುದರಿಂದ ಯಾವುದೊಂದರಿಂದಲೂ ಪುರುಷಃ=ಅಧಿ ಕಾರಿಯು ಪುರುಷಂ=ಶ್ರೀಹರಿಯನ್ನು ವ್ರಜೇತ್=ಹೊಂದುವನು ಎಂದು ಶ್ರುತಿಸ್ಮೃತಿ ಯಲ್ಲಿ ಹೇಳಿರುವುದು ಎಂದು ಭಾವ.

ಭಕ್ತಿಜ್ಞಾನಗಳ ಮಧ್ಯದಲ್ಲಿ ಒಂದೊಂದಕ್ಕೂ ಮೋಕ್ಷಹೇತತ್ವವು ''ತರತಿ ಶೋಕಂ ಆತ್ಮವಿತ್'' ''ಭಕ್ತ್ಯಾ ತ್ವನನ್ಯಯಾ ಶಕ್ಯಃ'' ಮುಂತಾಗಿ ಶ್ರುತಿ ಸ್ಮತಿಗಳಲ್ಲಿ ಹೇಳಿದೆ ಕಾರಣ ಎರಡೂ ಹೇಳಿದ್ದೇಕೆ? ಎಂದರೆ ಉತ್ತರಿಸುವರು ಯಯೋಃ ಎಂಬುದರಿಂದ. ಇದರಿಂದ ಶಂಕೆ ಹೇಗೆ ಪರಿಹೃತವಾಯಿತು ಎಂದರೆ ಏವಕಾರ ಅಭಿಪ್ರಾಯ ಹೇಳುವರು –

ಏಕತರಭಾವೇಽನ್ಯತರಸ್ಯ ನಿಯತತ್ವಾತ್ ಏಕತರೇಣೈವ ।

ಶ್ರುತಿ ಸ್ಮೃತಿಗಳಲ್ಲಿ , ಭಕ್ತಿಜ್ಞಾನಗಳಲ್ಲಿ ಯಾವುದೊಂದು ಇದ್ದರೂ ಇನ್ನೊಂದು ಇದ್ದೆ ಇರುವುದು ಎಂಬ ಅಭಿಪ್ರಾಯದಿಂದ ಒಂದೊಂದೇ ಮೋಕ್ಷಸಾಧನವೆಂದು ಹೇಳಿದೆ ಹೊರತು ಒಂದೇ ಸಾಕು ಇನ್ನೊಂದು ಬೇಡವೆಂದಲ್ಲ. ಇದರಿಂದ ಮೂಲದಲ್ಲಿ ಏಕತರೇಣೈವ ಎಂಬಲ್ಲಿ ಏವಕಾರವು ಅವಿನಾಭಾವರೂಪ ಅಯೋಗವ್ಯವಚ್ಛೇದಾ-ರ್ಥಕವೇ ಹೊರತು ಅನ್ಯಯೋಗ ವ್ಯವಚ್ಛೇದಾರ್ಥಕವಲ್ಲ ಎಂದು ಭಾವ. ॥೩೫॥

ಜೀವನಿಗೆ ಸಂಸಾರ ಮತ್ತು ಕಾಲಸ್ವರೂಪ ಹೇಳೆಂದು ಕೇಳಿದ್ದರಲ್ಲಿ ಜೀವನ ಸಂಸಾರವು ಬಹಳವಿದ್ದುದರಿಂದ ಸೂಚೀಕಟಾಹನ್ಯಾಯದಿಂದ ಕಾಲಸ್ವರೂಪವನ್ನು ಮೊದಲಿಗೆ ಹೇಳುವರು –

**ಯತ್ ತದ್ ಭಗವತೋ ರೂಪಂ ಬ್ರಹ್ಮಣಃ ಪರಮಾತ್ಮನಃ ।**
**ಪರಂ ಪ್ರಧಾನಾತ್ ಪುರುಷಾದ್ ದೈವಂ ಕರ್ಮವಿಚೇಷ್ಟಿತಂ ॥೩೬॥**

ಯತ್=ಯಾವುದು ಪ್ರಧಾನಾತ್=ಪ್ರಕೃತಿಯಿಂದ ಪುರುಷಾತ್=ಬ್ರಹ್ಮನಿಂದಲೂ ಪರಂ=ಉತ್ತಮವಾದ ದೈವಂ=ಸರ್ವದೇವೋತ್ತಮನಾದ ಕರ್ಮವಿಚೇಷ್ಟಿತಂ=ಎಲ್ಲ ಕರ್ಮಗಳು ಯಾವನ ಪ್ರೇರಣಾದಿಂದ ಆಗುವುವೋ ತತ್=ಅದು ಪರಮಾತ್ಮನಃ ಬ್ರಹ್ಮಣಃ ಭಗವತಃ ರೂಪಂ=ಐಶ್ವರ್ಯಶಾಲಿಯಾದ ಪೂರ್ಣನಾದ ಪರಮಾತ್ಮನ ಸ್ವರೂಪವು. ॥೩೬॥

**ರೂಪಭೇದಾಸ್ಪದಂ ದಿವ್ಯಂ ಕಾಲ ಇತ್ಯಭಿಧೀಯತೇ ।**
**ಭೂತಾನಾಂ ಮಹದಾದೀನಾಂ ಯತೋ ಭಿನ್ನದೃಶಾಂ ಭಯಂ ॥೩೭॥**

ಯತಃ=ಯಾವನಿಂದ ಭಿನ್ನದೃಶಾಂ=ಶ್ರೀಹರಿಗಿಂತ ಅಲ್ಪಜ್ಞಾನಿಗಳಾದ ಮಹದಾದೀನಾಂ ಭೂತಾನಾಂ=ಬ್ರಹ್ಮಾದಿ ಜೀವರಿಗೆ ಭಯಂ ಭವತಿ=ಭಯವಾಗು-ವುದೋ ಮತ್ತು ರೂಪಭೇದಾಸ್ಪದಂ=ಶುಕ್ಲ ಮುಂತಾದ ಬೇರೆ ಬೇರೆ ರೂಪಗಳುಳ್ಳ ಅಥವಾ ಬ್ರಹ್ಮಾಂಡಾದಿಪದಾರ್ಥಗಳಿಗೆ ಆಶ್ರಯನಾದ ದಿವ್ಯಂ=ಅಪ್ರಾಕೃತವಾದವನು ಕಾಲಃ ಇತಿ ಅಭಿಧೀಯತೇ=ಕಾಲ ಎಂದು ಹೇಳಲ್ಪಡುವನು. ಅಥವಾ ರೂಪಭೇದಾ-ಸ್ಪದಂ ಅಂದರೆ ಪ್ರತಿಮಾವಿಶೇಷಗಳೇ ಆಶ್ರಯವಾಗಿವುಳ್ಳ ಅಂದರೆ ಕಾಲಶಬ್ದವಾಚ್ಯ ವಾಯು ಮುಂತಾದ ಪ್ರತಿಮೆಗಳಲ್ಲಿ ಸನ್ನಿಹಿತವಾದೆಂದರ್ಥ. ಅಥವಾ ಅತೀತವರ್ತ-ಮಾನಾದಿಕಾಲವಿಶೇಷರೂಪ ಪ್ರತಿಮಾಸನ್ನಿಹಿತವಾದವನು ಪರಮಮುಖ್ಯ-ವೃತ್ತಿಯಿಂದ ಕಾಲನೆನಿಸುವನು ಎಂದು ಭಾವ.

ಭೇದಜ್ಞಾನಿಗಳಾದವರಿಗೆ ಭಯವೆಂದರ್ಥ ತೋರುವುದು, ಕಾರಣ ತಾತ್ಪರ್ಯ ಹೇಳುವರು –

**ಭಿನ್ನದೃಶಾಂ ಈಶ್ವರಾಪೇಕ್ಷಯಾ ಅಲ್ಪದೃಶಾಂ ।**
**ಭಿನ್ನಂ ಅಲ್ಪಂ ವಿಜಾನೀಯಾದಭಿನ್ನಂ ಪೂರ್ಣಮಿಷ್ಯತೇ ।**

**ಇತಿ ಶಬ್ದನಿರ್ಣಯೇ ।**

ಶ್ರೀಹರಿಗಿಂತ ಅಲ್ಪಜ್ಞಾನವುಳ್ಳ ಬ್ರಹ್ಮಾದಿಗಳಿಗೆ ಎಂದರ್ಥ.

ಭಿನ್ನ ಎಂದರೆ ಅಲ್ಪವೆಂದರ್ಥ. ಅಭಿನ್ನವೆಂದರೆ ಪೂರ್ಣವೆಂದರ್ಥವೆಂದು ಶಬ್ದ ನಿರ್ಣಯದಲ್ಲಿ ಹೇಳಿದೆ ॥೩೭॥

**ಯೋಽಂತಃ ಪ್ರವಿಶ್ಯ ಭೂತಾನಿ ಭೂತೈರತ್ತ್ಯಖಿಲಾಶ್ರಯಃ ।**
**ಸ ವಿಷ್ಣ್ವಾಖ್ಯೋ ಧಿಯಾ ಜ್ಞೇಯಃ ಕಾಲಃ ಕಲಯತಾಂ ಪ್ರಭುಃ ॥೩೮॥**

ಯಃ=ಯಾರು ಭೂತಾನಾಂ ಅಂತಃ ಪ್ರವಿಶ್ಯ=ಪ್ರಾಣಿಗಳ ಒಳಗೆ ಪ್ರವೇಶ ಮಾಡಿ ಭೂತೈಃ=ಪ್ರಾಣಿಗಳಿಂದ ಭೂತಾನಿ=ಪ್ರಾಣಿಗಳನ್ನು ಅತ್ತಿ=ಸಂಹರಿಸುವನು. ಅಖಿಲಾಶ್ರಯಃ =ಯಾವನು ಎಲ್ಲರಿಗೂ ಆಶ್ರಯನು. ಯಃ=ಯಾವನು ಕಲಯತಾಂ=ಸಂಹಾರ ಮಾಡುವ ರುದ್ರಾದಿಗಳಿಗೆ ಪ್ರಭುಃ=ಸಂಹಾರ ಮಾಡಲು ಸಮರ್ಥನು ಸಃ=ಅವನು ವಿಷ್ಣ್ವಾಖ್ಯಃ=ವಿಷ್ಣುವೆಂಬ ಕಾಲಃ=ಕಾಲನು ಧಿಯಾ=ಸಾಕ್ಷಿಜ್ಞಾನದಿಂದ ಜ್ಞೇಯಃ= ತಿಳಿಯಲ್ಪಡಬೇಕು. ॥೩೮॥

ಇತರ ಜನರಂತೆ ತನ್ನ ದ್ವೇಷಿಗಳನ್ನು ಮಾತ್ರ ಸಂಹರಿಸಿ ತನಗೆ ಪ್ರಿಯರನ್ನು ಸಂಹರಿಸಲಾರನೇ? ಎಂದರೆ ಹಾಗಲ್ಲವೆಂದು ಹೇಳುವರು –

**ನ ಚಾಸ್ಯ ಕಶ್ಚಿದ್ ದಯಿತೋ ನ ದ್ವೇಷ್ಯೋ ನ ಚ ಬಾಂಧವಃ ।**
**ಆವಿಶತ್ಯಪ್ರಮತ್ತೋಽಸೌ ಪ್ರಮತ್ತಂ ಜನಮಂತಕೃತ್ ॥೩೯॥**

ಅಸ್ಯ=ಭಗವಂತನಿಗೆ ಕಶ್ಚಿತ್=ಯಾವನು ನ ದಯಿತಃ=ಯೋಗ್ಯತಾಮೀರಿ ಪ್ರೀತ್ಯಾಸ್ಪದನಲ್ಲ ನ ದ್ವೇಷ್ಯಃ=ಯೋಗ್ಯತೆ ಮೀರಿ ದ್ವೇಷಿಯೂ ಅಲ್ಲ, ನ ಚ ಬಾಂಧವಃ=ಶರೀರ ಸಂಬಂಧಿಯು ಯಾರೂ ಇಲ್ಲ. ಅಸೌ=ಇವನು ಅಪ್ರಮತ್ತಃ= (ವಿಷಾಯಾಸಕ್ತಿ ಇಲ್ಲದೇ) ಪ್ರಮಾದರಹಿತನಾಗಿ ಪ್ರಮತ್ತಂ ಜನಂ=ವಿಷಯಾಸಕ್ತ-ನಾದವನನ್ನು ಅಂತಕೃತ್ ಆವಿಶತಿ=ಸಂಹರ್ತೃವಾಗಿ ಪ್ರವೇಶಿಸುವನು.

ಭಗವಂತನಿಗೂ ಬ್ರಹ್ಮರುದ್ರಾದಿಗಳು ಪ್ರಿಯರು, ಕಲಿಮುಂತಾದವರು ದ್ವೇಷಿಗಳೂ ಇರುವುದರಿಂದ ಯಾರು ಇಲ್ಲವೆಂದು ಹೇಳಿದ್ದು ಹೇಗೆ? ಎಂದರೆ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು –

**ಯಥಾ ಯೋಗ್ಯಾತಿರೇಕೇಣ ನ ದ್ವೇಷ್ಯಶ್ಚ ಪ್ರಿಯೋ ಹರೇಃ ।**
**ಇತಿ ಕಾಪಿಲೇಯೇ ।**

ಯಥಾ ಎಂಬುದು ಭಿನ್ನಪದ. ಯೋಗ್ಯ ಎಂದರೆ ಯೋಗ್ಯತಾ, ಯಾವನಿಗೆ ಎಷ್ಟು ದ್ವೇಷಯೋಗ್ಯತೆಯಾಗಲಿ ಪ್ರೀತಿಯೋಗ್ಯತೆಯಾಗಲಿ ಇದೆಯೋ ಅದಕ್ಕಿಂತ ಹೆಚ್ಚಿನ ದ್ವೇಷವನ್ನಾಗಲಿ ಪ್ರೀತಿಯನ್ನಾಗಲಿ ಶ್ರೀಹರಿ ಮಾಡುವುದಿಲ್ಲ ಎಂದು ಭಾವ. ॥೩೯॥

ಯತೋಭಯಂ ಎಂದು ಹೇಳಿದ್ದನ್ನು ವಿವರಿಸುವರು -

**ಯದ್ಭಯಾದ್ ವಾತಿ ವಾತೋಽಯಂ ಸೂರ್ಯಸ್ತಪತಿ ಯದ್ಭಯಾತ್।**
**ಯದ್ಭಯಾದ್ ವರ್ಷತೇ ದೇವೋ ಭಗಣೋ ಭಾತಿ ಯದ್ಭಯಾತ್ ॥**

ಯದ್ಭಯಾತ್=ಯಾವನ ಹೆದರಿಕೆಯಿಂದ ಅಯಂ ವಾತಃ ವಾತಿ=ಈ ಭೂತವಾಯು ಅಭಿಮಾನಿಯಾದ ಪ್ರವಹನು. ಬೀಸುವನು. ಯದ್ಭಯಾತ್= ಯಾವನ ಭಯದಿಂದ ಸೂರ್ಯಃ=ಸೂರ್ಯನು ತಪತಿ=ಸಂತಾಪಕೊಡುವನು, ಪ್ರಕಾಶಿಸುವನು ದೇವಃ=ಇಂದ್ರನು ಯದ್ಭಯಾತ್=ಯಾವನ ಭಯದಿಂದ ವರ್ಷತೇ=ಮಳೆಗರೆಯುವನು. ಯದ್ಭಯಾತ್=ಯಾವನ ಭಯದಿಂದ ಭಗಣಃ ಭಾತಿ=ನಕ್ಷತ್ರ ಸಮೂಹವು ಹೊಳೆಯುವುವು. ॥೪೦॥

**ಯದ್ ವನಸ್ಪತಯೋ ಭೀತಾ ಲತಾಶ್ಚೌಷಧಿಭಿಃ ಸಹ ।**
**ಸ್ವೇ ಸ್ವೇ ಕಾಲೇಽಭಿಗೃಣ್ಹಂತಿ ಪುಷ್ಪಾಣಿ ಚ ಫಲಾನಿ ಚ ॥೪೧॥**

ಯದ್ ಭೀತಾಃ=ಯಾವನಿಂದ ಭೀತವಾಗಿ ವನಸ್ಪತಯಃ ಔಷಧಿಭಿಃ ಸಹ ಲತಾಃ=ಹೂವಿಲ್ಲದೆ ಹಣ್ಣು ಬಿಡುವ ವನಸ್ಪತಿಗಳು, ಭತ್ತಮುಂತಾದ ಔಷಧಿಗಳಿಂದ ಸಹಿತವಾಗಿ ಬಳ್ಳಿಗಳು ಸ್ವೇ ಸ್ವೇ ಕಾಲೇ=ತಮ್ಮ ತಮ್ಮ ಕಾಲಗಳಲ್ಲಿ ಪುಷ್ಪಾಣಿ ಚ ಫಲಾನಿ ಚ ಗೃಣ್ಹಂತಿ=ಹೂ ಹಣ್ಣುಗಳನ್ನು ಬಿಡುವುವು (ಸ್ವೀಕರಿಸುವುವು). ॥೪೧॥

**ಸ್ರವಂತಿ ಸರಿತೋ ಭೀತಾಃ ನೋತ್ಸರ್ಪತ್ಯುದಧಿರ್ಯತಃ ।**
**ಅಗ್ನಿರಿಂಧೇ ಸಗಿರಿಭಿರ್ಭೂರ್ನ ಮಜ್ಜತಿ ಯದ್ಭಯಾತ್ ॥೪೨॥**

ಯತಃ ಭೀತಾಃ=ಯಾರಿಗೆ ಹೆದರಿ ಸರಿತಃ=ನದಿಗಳು ಸ್ರವಂತಿ=ಹರಿಯುವವು. ಉದಧಿಃ=ಸಮುದ್ರವು ನ ಉತ್ಸರ್ಪತಿ=ದಂಡೆಯನ್ನು ಮೀರಿ ಹೋಗುವುದಿಲ್ಲ. ಯದ್ಭಯಾತ್=ಯಾರ ಭಯದಿಂದ ಸಗಿರಿಭಿಃ=ಪರ್ವತ ಸಹಿತವಾಗಿ ಭೂಃ= ಭೂಮಿಯು ನ ಮಜ್ಜತಿ=ನೀರಲ್ಲಿ ಮುಳುಗುವುದಿಲ್ಲ. ಅಗ್ನಿಃ ಇಂಧೇ=ಬೆಂಕಿಯು (ಪ್ರಕಾಶಿಸುವುದು) ಸುಡುವುದು. ॥೪೨॥

**ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಾಮಾದದಃ ।**
**ಲೋಕಸ್ಯ ದೇಹಂ ತನುತೇ ಮಹಾನ್ ಸಪ್ತಭಿರಾವೃತಃ ॥೪೩॥**

ಅದಃ ನಭಃ=ಈ ಆಕಾಶವು (ಪ್ರಸಿದ್ಧವಾದ) ಯನ್ನಿಯಮಾತ್=ಯಾವನ ಶಾಸನದಿಂದ ಶ್ವಸತಾಂ=ಪ್ರಾಣಿಗಳಿಗೆ ಮಾರ್ಗಂ ದದಾತಿ=ಸಂಚರಿಸಲು ಅವಕಾಶ ನೀಡುವುದು. ಸಪ್ತಭಿಃ ಆವೃತಃ ಮಹಾನ್=ಮಹದಹಂಕಾರ ಪಂಚಭೂತಗಳಿಂದ

ಆವರಿಸಲ್ಪಟ್ಟ ಅಂದರೆ ತದಾತ್ಮಕದೇಹದಲ್ಲಿ ಅಥವಾ ಬ್ರಹ್ಮಾಂಡದಲ್ಲಿರುವ ಬ್ರಹ್ಮದೇವರು ಲೋಕಸ್ಯ=ಜನರಿಗೆ ದೇಹಂ ತನುತೇ=ಶರೀರವನ್ನು ಸೃಷ್ಟಿಸುವನು.

**ಗುಣಾಭಿಮಾನಿನೋ ದೇವಾಃ ಸರ್ಗಾದಿಷ್ವಸ್ಯ ಯದ್ಭಯಾತ್ ।**
**ವರ್ತಂತೇಽನುಯುಗಂ ಯೇಷಾಂ ವಶ ಏತಚ್ಚರಾಚರಮ್ ॥೪೪॥**

ಏತತ್ ಚರಾಚರಂ=ಈ ಚೇತನಾಚೇತನ ಪ್ರಪಂಚವು ಯೇಷಾಂ=ಯಾರ ವಶೇ ತಿಷ್ಠತಿ=ಅಧೀನವಾಗಿರುವುದೋ ತೇ=ಅಂಥಹ ಗುಣಾಭಿಮಾನಿನಃ ದೇವಾಃ= ಶಬ್ದಾದಿಗಳಿಗೆ ಅಭಿಮಾನಿಗಳಾದ ರುದ್ರಾದಿದೇವತೆಗಳು ಅನುಯುಗಂ= ಪ್ರತಿಯುಗದಲ್ಲಿಯೂ ಅಸ್ಯ=ಜಗತ್ತಿನ ಸರ್ಗಾದಿಷು=ಸೃಷ್ಟ್ಯಾದಿಗಳನ್ನು ಮಾಡುವುದ-ರಲ್ಲಿ ಯದ್ಭಯಾತ್ ವರ್ತಂತೇ=ಯಾವನ ಭಯದಿಂದ ಪ್ರವೃತ್ತರಾಗುವರೋ

**ಸೋಽನಂತೋಽಂತಕರಃ ಕಾಲೋಽನಾದಿರಾದಿಕೃದವ್ಯಯಃ ।**
**ಜನಂ ಜನೇನ ಜನಯನ್ ಮಾರಯನ್ ಮೃತ್ಯುನಾತ್ಮನಃ ॥೪೫॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ತ್ರಿಂಶೋಽಧ್ಯಾಯಃ ॥***

ಸಃ=ಅವನು ಕಾಲಃ=ಕಾಲಶಬ್ದವಾಚ್ಯನು. ಅನಂತಃ=ನಾಶರಹಿತನು ಅನಾದಿಃ= ಉತ್ಪತ್ತಿರಹಿತನು ಅವ್ಯಯಃ=ಚ್ಯುತಿರಹಿತನು. ಅಂತಕರಃ=ಎಲ್ಲರ ನಾಶಮಾಡುವ-ವನು ಆದಿಕೃತ್=ಸೃಷ್ಟಿಮಾಡುವವನು ಆತ್ಮನಃ=ತನ್ನ ಅಧೀನರಾದ ಜನೇನ= ಬ್ರಹ್ಮಾದಿಗಳಿಂದ ಜನಯನ್=ಹುಟ್ಟಿಸುವನಾಗಿ ಮೃತ್ಯುನಾ=ರುದ್ರದೇವರು ದುರ್ಗಾದೇವಿ ಮುಂತಾದವರಿಂದ ಮಾರಯನ್=ಸಂಹರಿಸುವವನಾಗಿ, ಅಂತಕೃತ್ ಆದಿಕೃತ್ ಎನಿಸುವನು.

ಇದೆಲ್ಲವೂ ಕಾಲ ಶಬ್ದದಿಂದಲೇ ಬರುವುದು. 'ಕಲಜ್ಞಾನೇ' ಎಂದು ಧಾತು ಇರುವುದರಿಂದ, ಜ್ಞಾನರೂಪನಾದ್ದರಿಂದ ಭೌತಿಕದಂತೆ ನಾಶವಿಲ್ಲ. ಕಾರಣ ಅನಂತ. 'ಕಲಭೇದನೇ' ಎಂದಿರುವುದರಿಂದ. ಭೇದನಾಖ್ಯ ಅಂತಕರನು. 'ಕಲಕಾಮಧೇನುಃ' ಎಂದಿರುವುದರಿಂದ ಕಲಧಾತುವು ಕಾಮಧೇನುವಿನಂತೆ ಅಭೀಷ್ಟವಾದ ಎಲ್ಲ ಅರ್ಥವನ್ನು ಹೇಳುತ್ತದೆ. ಆದ್ದರಿಂದ ಅವ್ಯಯ ಮುಂತಾದ ಅರ್ಥವನ್ನು ಹೇಳುತ್ತದೆ.

ಈ ವಿಧಗುಣ ವಿಶಿಷ್ಟನಾದ ಕಾಲಾತ್ಮಕ ಶ್ರೀಮನ್ನಾರಾಯಣನು ಮುಮುಕ್ಷು-ಗಳಿಂದ ಉಪಾಸ್ಯನೆಂದು ಸಿದ್ಧವಾಯಿತು ॥೪೫॥

***ಇಲ್ಲಿಗೆ ಮೂವತ್ತನೆಯ ಅಧ್ಯಾಯವು ಮುಗಿಯಿತು.***

# ಮೂವತ್ತನೆಯ ಅಧ್ಯಾಯದ ತಾತ್ಪರ್ಯ

ದೇವಹೂತಿ - ಪ್ರಭುವೇ, ಪ್ರಾಜ್ಞರು ಸಾಂಖ್ಯಶಾಸ್ತ್ರದಲ್ಲಿ ಮಹತ್ತತ್ವ ಮುಂತಾದುವು ಅವುಗಳ ಅಭಿಮಾನಿಗಳು, ಜಡ ಪ್ರಕೃತಿ ಅದಕ್ಕೆ ಅಭಿಮಾನಿಯಾದ ಚಿತ್ಪ್ರಕೃತಿ ಮತ್ತು ಸರ್ವಪುರುಷಾರ್ಥಪ್ರದನಾದ ಶ್ರೀಹರಿ ಇವರುಗಳ ಲಕ್ಷಣಗಳನ್ನು ಹೇಳಿಯಾಗಿದೆ ಎಂದು ಹೇಳುವರು. ಈ ಜ್ಞಾನವು ಪುರುಷಾರ್ಥಕ್ಕೆ ಉಪಯುಕ್ತ-ವಾದುದು. ಇದೇ ಭಕ್ತಿಯೋಗದ ಪ್ರಕಾರವೆನಿಸುವುದು. ಇದನ್ನು ಸಾಮಾನ್ಯವಾಗಿ ನೀನು ಹೇಳಿರುವೆ. ಆದರೂ ಹೆಂಗುಸಾದ ನಾನು ತಿಳಿದುಕೊಳ್ಳಲನುಕೂಲ-ವಾಗುವಂತೆ ವಿಸ್ತಾರವಾಗಿ ತಿಳಿಯಹೇಳು. ಉಪಾಸಕನು ಪ್ರಾಪಂಚಿಕ ವಿಷಯಗಳಲ್ಲಿ ವಿರಕ್ತನಾಗಬೇಕೆಂದು ಹೇಳಿದೆಯಲ್ಲವೇ ! ಅಂತಹ ವೈರಾಗ್ಯಕ್ಕೆ ಕಾರಣಗಳಾದ ಕರ್ಮಾನುಗುಣವಾದ ವಿವಿಧ ಸಾಂಸಾರಿಕ ದುಃಖಗಳನ್ನೂ ಹೇಳು. ಅವುಗಳ ಜ್ಞಾನದಿಂದ ಅವನು ವಿರಕ್ತನಾಗಿ ಹರಿಯಲ್ಲಿಯೇ ಅನುರಕ್ತನಾಗುವನು. ಅಲ್ಲದೆ ಯಾವನ ಭಯದಿಂದ ಜನರು ಶ್ರೇಯಸ್ಸಿಗೆ ಬೇಕಾದ ಕರ್ಮವನ್ನು ಮಾಡುತ್ತಿರುವರೋ ಆ ಸರ್ವೋತ್ತಮನಾದ ಶ್ರೀಹರಿಯ ಕಾಲವೆಂದು ಕರೆಸಿಕೊಳ್ಳುವ ವಿಭೂತಿಸ್ವರೂಪವನ್ನೂ ತಿಳಿಸು. ಹೆಂಗುಸೆಂದು ಉಪೇಕ್ಷಿಸಬೇಡ. ನಿನ್ನ ಅನುಗ್ರಹವಿದ್ದರೆ ಎಲ್ಲವನ್ನೂ ತಿಳಿಯಬಲ್ಲೆ. ಅವಿದ್ಯೆಯೆಂಬ ಅಂಧಕಾರವು ಅಪಾರವಾದುದು. ಮುಕ್ತಿಯೋಗ್ಯರಾದ ಜೀವರು ಈ ಅಂಧಕಾರದಲ್ಲಿ ಗಾಢನಿದ್ರೆಯಲ್ಲಿರುವರು. ಅವರಿಗೆ ಯಥಾವತ್ತಾಗಿ ಉಪದೇಶಿಸುವರಿಲ್ಲದೆ ಅನ್ಯಥಾ ಜ್ಞಾನಿಗಳಾಗಿ ಜ್ಞಾನಹರಿತರಾಗಿರುವರು. ಇದರ ಫಲವಾಗಿ ಪುಣ್ಯಪಾಪಗಳಿಗೆ ಕಾರಣಗಳಾದ ಪ್ರವೃತ್ತಿ ಕರ್ಮಗಳಲ್ಲಿ ತೊಡಗಿ ಸಂಸಾರದಲ್ಲಿ ಸಿಕ್ಕಿಬಿದ್ದು ಬಳಲಿ ಬೆಂಡಾಗಿರುವರು. ಅವರನ್ನು ಉದ್ಧರಿಸುವುದಕ್ಕಾಗಿಯೇ ಜ್ಞಾನಸೂರ್ಯನಾದ ನೀನು ಅವತರಿಸಿರುವೆ. ಇಂತಹ ನಿನ್ನನ್ನು ಬಿಟ್ಟು ಮತ್ತಾರನ್ನು ಪ್ರಶ್ನಿಸಲಿ !

ಮೈತ್ರೇಯ - ವಿದುರ, ಮೇಲೆ ಹೇಳಿದ ತಾಯಿಯ ಹಿತಕರವಾದ ಮಾತನ್ನು ಕಪಿಲ ಭಗವಂತನು ಪ್ರಶಂಸಿಸಿದನು. ಭಕ್ತಳಾದ ಆಕೆಯಲ್ಲಿ ದಯೆಯಯನ್ನು ಮಾಡುವವನಾಗಿ ಮುಂದೆ ಹೇಳುವಂತೆ ಉತ್ತರಿಸಿದನು.

ಕಪಿಲ - ತಾಯಿ ! ಭಕ್ತಿಯೋಗವು ಶಾಸ್ತ್ರದಲ್ಲಿ ಹೇಳಿರುವಂತೆ ಅನೇಕ ಪ್ರಕಾರವಾದುದು. ಜೀವರು ಸ್ವಾಭಾವಿಕವಾಗಿ ತಾಮಸ, ರಾಜಸ ಮತ್ತು ಸಾತ್ವಿಕಸ್ವಭಾವದಿಂದ ವಿಭಿನ್ನರಾಗಿರುವರು. ಅವರವರ ಭಕ್ತಿಭಾವವೂ ಇದಕ್ಕನುಗುಣವಾಗಿ ವಿಭಿನ್ನವಾಗಿರುವುದು. ಮತ್ತೊಬ್ಬರಿಗೆ ಹಿಂಸೆ ಮಾಡುತ್ತ ಧಾರ್ಮಿಕನಂತೆ ನಟಿಸಿ ಭಗವದ್ಭಕ್ತರ ಉತ್ಕರ್ಷವನ್ನು ಸಹಿಸದೆ ಮಾತ್ಸರ್ಯದಿಂದ ಗೂಢವಾಗಿ ಶ್ರೀಹರಿಯನ್ನೂ ಅವನ ಭಕ್ತರನ್ನೂ ದ್ವೇಷಿಸುತ್ತ ಮಿಥ್ಯಾಜ್ಞಾನಿಯಾಗಿ ಭಕ್ತಿಮಾಡುವ(ನಂತೆ ತೋರುವ)ವನು ತಾಮಸ(ಭಕ್ತ)ನು. ವಿಷಯಸುಖಗಳನ್ನೇ ಅಪೇಕ್ಷಿಸಿ ಕೀರ್ತಿ, ಐಶ್ವರ್ಯಗಳನ್ನು ಧ್ಯೇಯವಾಗಿಟ್ಟುಕೊಂಡು ಶ್ರೀಹರಿಯ ಅಂತರ್ಯಾಮಿರೂಪಗಳು ಪರಸ್ಪರ ಭಿನ್ನಗಳೆಂದೂ ತಿಳಿದು ಪ್ರತಿಮೆ ಮೊದಲಾದವುಗಳಲ್ಲಿ ಶ್ರೀಹರಿಯನ್ನು ಅರ್ಚಿಸುವವನೇ ರಾಜಸ(ಭಕ್ತ)ನು. ಪಾಪಕರ್ಮಗಳನ್ನು ಪರಿಹರಿಸಿಕೊಳ್ಳಲು ಮತ್ತು ಸರ್ವೋತ್ತಮನಾದ ಶ್ರೀಹರಿಗೆ ಎಲ್ಲ ಕರ್ಮಗಳನ್ನೂ ಸಮರ್ಪಿಸಲು ಉದ್ದೇಶಿಸಿ ತನ್ನ ಕರ್ತವ್ಯವೆಂದಾಗಲೀ ತಿಳಿದು ಶ್ರೀಹರಿಯನ್ನು ಸೇವಿಸುತ್ತ ಶ್ರೀಹರಿಯ ಅಂತರ್ಯಾಮಿ ರೂಪಗಳಿಗೆ ಪರಸ್ಪರ ಭೇದವಿಲ್ಲವೆಂದು ತಿಳಿದು ಪ್ರತಿಮೆ ಮೊದಲಾಗಿ ಸರ್ವತ್ರ ಶ್ರೀಹರಿಯನ್ನು ಸೇವಿಸುವವನು ಸಾತ್ವಿಕನು. ಇವನೇ ನಿಜವಾದ ಹರಿಭಕ್ತನು. ಇವನೇ ಮುಕ್ತಿಯೋಗ್ಯನು. ಈ ಮುಕ್ತಿಯೋಗ್ಯರಲ್ಲಿ ಅಪರೋಕ್ಷಜ್ಞಾನವಾದಮೇಲೆ ಮಾಡುವ ಪ್ರತಿಮಾದ್ಯರ್ಚನೆಯು ಮುಕ್ತಿಯಲ್ಲಿ ಆನಂದಾಭಿವೃದ್ಧಿಗೆ ಕಾರಣವಾಗುವುದು. ಸಮುದ್ರಕ್ಕೆ ಗಂಗಾಪ್ರವಾಹವು ತಡೆಯಿಲ್ಲದೆ ನಿರಂತರ ಬೀಳುತ್ತಿರುವಂತೆ ಶ್ರೀಹರಿಯ ಗುಣಶ್ರವಣ ಮಾತ್ರದಿಂದ ಸರ್ವಗುಣಾತ್ಮಕನಾದ ಶ್ರೀಹರಿಯಲ್ಲಿ ಯಾವಾಗಲೂ ಮನೋವ್ಯಾಪಾರವುಳ್ಳವನಾಗಿ ಭಕ್ತಿಮಾಡುವ ಸಾತ್ವಿಕೋತ್ತಮನ ಭಕ್ತಿಗೆ ನಿರ್ಗುಣಭಕ್ತಿಯೆಂದು ಹೆಸರು. ಇದಲ್ಲದೆ ಆತ್ಯಂತಿಕ (ಏಕಾಂತ) ಭಕ್ತಿಯೆಂಬುದೂ ಕೆಲವರಲ್ಲಿದೆ. ಇವರೇ ಏಕಾಂತ ಭಕ್ತರು. ಇವರು ಮಾಡುವ ಭಕ್ತಿಗೆ ಯಾವ ನಿಮಿತ್ತವೂ ಇರುವದಿಲ್ಲ. ಇದರಲ್ಲಿ ವಿಷಯೇಚ್ಛೆಯ ವ್ಯವಧಾನ-ವಿರುವುದಿಲ್ಲ. ಇವರು ಸಾಲೋಕ್ಯ, ಸಾರ್ಷ್ಟಿ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯಗಳೆಂಬ ಮುಕ್ತಿಯ ಅಪೇಕ್ಷೆಯಿಂದಲೂ ಶ್ರೀಹರಿಯನ್ನು ಸೇವಿಸುವುದಿಲ್ಲ. ಶ್ರೀಹರಿಯ ಪ್ರೀತಿಗಾಗಿಯೇ ಅವನನ್ನು ಸೇವಿಸುವರು. ಆದ್ದರಿಂದಲೇ ಇವರು ಮುಕ್ತಿಯಲ್ಲಿ ತಮ್ಮ ಚಿದಾನಂದಾತ್ಮಕದೇಹದಿಂದ ಶ್ರೀಹರಿಯು ದೇಹವನ್ನು ಪ್ರವೇಶಿಸಿ, ಸಾಯುಜ್ಯರೂಪವಾದ ಮೋಕ್ಷವನ್ನು ಹೊಂದುವರು. ಇದೇ ಉನ್ನತ ಸ್ಥಿತಿಯು. ಇಂತಹ ಏಕಾಂತ ಭಕ್ತರೇ ಬ್ರಹ್ಮಾದಿಗಳು.

ತಾಯಿ ! ಶ್ರೀಹರಿಯಲ್ಲಿ ಭಕ್ತಿಯು ಹುಟ್ಟಬೇಕಾದರೆ ಮುಂದೆ ಹೇಳುವ ಈ ಸಾಧನಗಳನ್ನು ಸಂಪಾದಿಸಿಕೊಳ್ಳಬೇಕು. ಯಾವ ಫಲವನ್ನೂ ಅಪೇಕ್ಷಿಸದೆ ಭಕ್ತಿಯಿಂದ ತಮ್ಮ ತಮ್ಮ ವರ್ಣ ಮತ್ತು ಆಶ್ರಮಗಳಿಗೆ ವಿಹಿತವಾದ ಧರ್ಮಗಳನ್ನು ಮಾಡಬೇಕು. ಶಕ್ತಿಯಿದ್ದಷ್ಟು ಭಗವತ್ಪೂಜೆ ಮಾಡಬೇಕು. ಶ್ರೀಹರಿಯ ಪ್ರತಿಮಾದರ್ಶನ, ಸ್ಪರ್ಶನ, ಪೂಜೆ, ಸ್ತೋತ್ರ ಮತ್ತು ನಮಸ್ಕಾರಗಳನ್ನು ಅಭ್ಯಾಸ ಮಾಡಬೇಕು. ಜೀವರಲ್ಲಿ ಅಂತರ್ಯಾಮಿಯಾಗಿ ಶ್ರೀಹರಿ ನೆಲಸಿರುವನೆಂದು ಉಪಾಸಿಸಬೇಕು. ಸಜ್ಜನರಿಗೆ ಹಿತವಾದ ಮಾತುಗಳನ್ನೇ ಹೇಳುತ್ತಿರಬೇಕು. ದುಷ್ಟರ ಸಹವಾಸದಿಂದ ದೂರವಾಗಿರಬೇಕು. ತನಗಿಂತ ಉತ್ತಮರನ್ನು ಗೌರವಿಸುವುದು, ಹೀನರನ್ನು ದಯೆಯಿಂದ ಕಾಣುವುದು, ಸರಿಸಮಾನರನ್ನು ಸ್ನೇಹಭಾವದಿಂದ ನೋಡುವುದು ಕರ್ತವ್ಯವೆಂದರಿತು ಅದರಂತೆ ನಡೆಯುತ್ತಿರಬೇಕು. ಅಹಿಂಸೆ ಮೊದಲಾದ ಯಮಗಳನ್ನೂ ಶೌಚ, ಸಂತೋಷ ಮೊದಲಾದ ನಿಯಮಗಳನ್ನೂ ಚೆನ್ನಾಗಿ ಅಭ್ಯಸಿಸಬೇಕು. ಇದಾದ ಮೇಲೆ ವೇದಾಂತಶಾಸ್ತ್ರವನ್ನು ಸದ್ಗುರುಗಳ ಬಳಿಯಲ್ಲಿ ಅಧ್ಯಯನ ಮಾಡಬೇಕು. ಹೀಗೆ ಶ್ರೀಹರಿಯ ಮಹಿಮೆಯನ್ನರಿತು ಭಕ್ತಿಯಿಂದ ನಾಮಸ್ಮರಣೆ ಮಾಡುವ ಅಭ್ಯಾಸ ಮಾಡಬೇಕು. ಆಗ ಮನಸ್ಸು ಶುದ್ಧವಾಗಿ ಕಪಟವಿಲ್ಲದೆ ಹೋಗುವುದು. ಅನಂತರ ಜ್ಞಾನಿಗಳ ಒಡನಾಟದಿಂದ ದೇಹಾದಿಗಳಲ್ಲಿ ಅಹಂಕಾರ ಮಮಕಾರಗಳು ಹೋಗುವುವು. ವೈಷ್ಣವದೀಕ್ಷೆಯಿಂದ (ತಪ್ತಮುದ್ರಾ ಊರ್ಧ್ವಪುಂಡ್ರ ಮುಂತಾದುವು) ದೃಢವಾದ ಉಪಾಸಕನು ಅಂತಃಕರಣಶುದ್ಧನಾಗಿ ಎಲ್ಲ ರೀತಿಯಿಂದಲೂ ನಿರ್ಮಲನಾಗುವನು. ಆಗ ನನ್ನ ಗುಣಗಳನ್ನು ದೋಷರಹಿತವಾಗಿರುವಂತೆ ಶ್ರವಣ ಮಾಡಿ ಅದರಂತೆ ಉಪಾಸಿಸಿ ಕಾಲವಿಳಂಬವಿಲ್ಲದೆ ನನ್ನನ್ನು ಕಾಣುವನು. ಹೂವಿನ ವಾಸನೆಯು ಗಾಳಿಯಿಂದ ದೂರದಲ್ಲಿರುವ ಘ್ರಾಣೇಂದ್ರಿಯವನ್ನು ಆವರಿಸಿ ಆಕರ್ಷಿಸುವಂತೆ ಶ್ರೀಹರಿಯಲ್ಲಿ ಆಸಕ್ತವಾದ ಉಪಾಸಕನ ಮನಸ್ಸು ವಿಷಯವಿಕಾರಹಿವಾಗಿ ಶ್ರೀಹರಿಯನ್ನೇ ಸೇರಿ ಅವನನ್ನು ಪ್ರಸನ್ನೀಕರಿಸಿಕೊಳ್ಳುವುದು. ಜೀವರಿಗೆ ಅವರವರ ಕರ್ಮಕ್ಕೆ ತಕ್ಕಂತೆ ಫಲವನ್ನು ಕೊಡುವುದರಿಂದ ಸ್ವಾಮಿಯಾದ ನಾನು ಎಲ್ಲ ಜೀವರಲ್ಲಿಯೂ ಯಾವಾಗಲೂ ಅಂತರ್ಯಾಮಿಯಾಗಿ ಇರುವೆನೆಂದು ತಿಳಿದು ನನ್ನನ್ನು ಉಪಾಸಿಸಬೇಕು. ತಾಮಸ, ರಾಜಸ ಜೀವರು ಹೀಗೆ ನನ್ನನ್ನು ತಿಳಿಯದೆ ಪ್ರತಿಮೆಗಳನ್ನಿಟ್ಟುಕೊಂಡು ಪೂಜಿಸುತ್ತ ವಿಡಂಬನೆಯನ್ನು ಮಾಡುವರು. ಇವರಿಬ್ಬರಲ್ಲಿ ತಾಮಸರಿಗಿಂತ ರಾಜಸರು ಉತ್ತಮರು. ಸರ್ವಜೀವರಲ್ಲಿ ಇರುವ ನನ್ನನ್ನು ಬಿಟ್ಟು ಅವಿವೇಕದಿಂದ ಪ್ರತಿಮೆಯಲ್ಲಿಯೇ ನನ್ನನ್ನು ಅರ್ಚಿಸಿದರೂ ಭಸ್ಮದಲ್ಲಿ ಹೋಮಮಾಡುವವನಿಗೆ ಮಂತ್ರೋಚ್ಚಾರಣೆಯ ಫಲವಾದರೂ

ಬರುವಂತೆ ಇವರಿಗೆ ಸ್ವಲ್ಪವಾದರೂ ಫಲಬರುವುದು. ತಾಮಸರಾದರೋ ಭಕ್ತರಲ್ಲಿ ಇರುವ ನನ್ನನ್ನು ದ್ವೇಷಿಸುತ್ತ ನನ್ನ ಅಂತರ್ಯಾಮಿ ರೂಪಗಳು ವಿಭಿನ್ನಗಳೆಂದು ಅನ್ಯಥಾ ತಿಳಿದು ವಿಷ್ಣುಭಕ್ತರಲ್ಲಿ ಕಡುವೈರವನ್ನು ಮಾಡುತ್ತ ತಾವೇ ಸ್ವತಂತ್ರರೆಂಬ ದುರಭಿಮಾನದಿಂದ ಇರುವವರಾದ್ದರಿಂದ ಅವರ ಮನಸ್ಸು ಎಂದೂ ನನ್ನಲ್ಲಿ ಆಸಕ್ತವಾಗುವುದೇ ಇಲ್ಲ. ಕಪಟವನ್ನರಿಯದ ಮನುಪುತ್ರಿ ! ಈ ತಾಮಸರು ಎಷ್ಟೋ ಉತ್ತಮ ಮತ್ತು ಅಧಮ ದ್ರವ್ಯಗಳಿಂದ ನನ್ನನ್ನು ಪ್ರತಿಮೆಗಳಲ್ಲಿ ಪೂಜಿಸಬಹುದು. ಅವರ ಈ ದೈಹಿಕ ಮತ್ತು ಮಾನಸಿಕ ವ್ಯಾಪಾರವು ನನ್ನನ್ನು ಎಂದೂ ತೃಪ್ತಿಪಡಿಸುವುದಿಲ್ಲ. ಅಂತರ್ಯಾಮಿಯಾದ ನನ್ನನ್ನು ಅವಮಾನಮಾಡಿ ಇವರು ಮಾಡುವ ಪೂಜೆಯು ಕೇವಲ ವಿಡಂಬನೆಯಲ್ಲದೆ ಮತ್ತೇನು ? ತನ್ನ ವರ್ಣ ಮತ್ತು ಆಶ್ರಮಕ್ಕೆ ವಿಹಿತವಾದ ಕರ್ಮವನ್ನು ಮಾಡವ ಉಪಾಸಕನು ತನ್ನ ಅಂತರ್ಯಾಮಿಯಾದ ಶ್ರೀಹರಿಯೇ ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ಇರುವನೆಂದು ತಿಳಿಯುವವರೆಗೂ ಪ್ರತಿಮೆ ಮೊದಲಾದವುಗಳಲ್ಲಿ ಶ್ರೀಹರಿಯನ್ನು ಅರ್ಚಿಸಬೇಕು. ಅಂತರ್ಯಾಮಿರೂಪಗಳು ಭಿನ್ನಗಳೆಂದು ತಿಳಿಯುವುದು ಅನರ್ಥಕರವು. ಸ್ವಾಭಾವಿಕವಾಗಿ ಅಭಿನ್ನಗಳಾದ ಈ ರೂಪಗಳನ್ನು ಭಿನ್ನಗಳೆಂದು ತಿಳಿಯುವವನನ್ನು ಸಂಸಾರಮೃತ್ಯುವೆನಿಸಿದ ನೃಸಿಂಹರೂಪಿಯಾದ ಶ್ರೀಹರಿಯು ನಿತ್ಯದುಃಖವಾದ ಅಂಧತಮಸ್ಸಿನಲ್ಲಿ ಹಾಕಿ ದುಃಖಪಡಿಸುವನು. ಆದ್ದರಿಂದ ಎಲ್ಲ ಜೀವರ ಅಂತರ್ಯಾಮಿಯಾಗಿ ಎಲ್ಲರಲ್ಲಿ ವಾಸಿಸುವ ನನ್ನ ರೂಪಗಳಿಗೂ ಜೀವನಿಯಾಮಕನಾದ ಬಿಂಬರೂಪಕ್ಕೂ ಭೇದವಿಲ್ಲವೆಂದು ತಿಳಿದು ದ್ರವ್ಯದಾನ ಮತ್ತು ಮಾನನೆಗಳಿಂದ ಪೂಜಿಸುವುದಲ್ಲದೆ ಶ್ರೀಹರಿಯನ್ನು ನಿರ್ವ್ಯಾಜ ಭಾವನೆಯಿಂದ ಉಪಾಸಿಸಬೇಕು.

ಶ್ರೀಹರಿಯ ಅಂತರ್ಯಾಮಿ ರೂಪಗಳು ಅಲ್ಲಲ್ಲಿ ಹೆಚ್ಚು ಸನ್ನಿಧಾನಯುಕ್ತವಾಗಿ ಕ್ಲೃಪ್ತವಾಗಿರುವುದರಿಂದ ಸನ್ನಿಧಾನಕ್ಕೆ ತಕ್ಕಂತೆ ಜೀವರಲ್ಲಿ ತಾರತಮ್ಯವೂ ಇದೆ. ಈ ತಾರತಮ್ಯಕ್ಕನುಗುಣವಾಗಿ ಜ್ಞಾನಭಕ್ತಿ ಮುಂತಾದುವು ತಾರತಮ್ಯದಿಂದ ಅವರಲ್ಲಿ ಇವೆ. ಮುಕ್ತರಾದ ಮೇಲೆಯೂ ಈ ತಾರತಮ್ಯವು ಇದ್ದೇ ಇರುತ್ತದೆ. ಸ್ವರೂಪದಲ್ಲಿಯೇ ಇರುವ ಈ ತಾರತಮ್ಯವು ಎಂದೂ ಹೋಗತಕ್ಕದ್ದಲ್ಲ. ಅಪ್ರಾಕೃತರಾದ ಜೀವರು ಸ್ವರೂಪತಃ ಸ್ಥಾವರರೆಂದೂ ಜಂಗಮರೆಂದೂ ಎರಡು ಬಗೆ. ಜಂಗಮರಲ್ಲಿಯೂ ಚೇಷ್ಟಾವಂತರೂ, ಮನೋವ್ಯಾಪಾರ ಉಳ್ಳವರೂ ಇಂದ್ರಿಯ ವ್ಯಾಪಾರವುಳ್ಳವರೂ ಇತ್ಯಾದಿ ಅನೇಕ ಬಗೆ. ಮುಕ್ತರಾದ ಸ್ಥಾವರ ಜೀವರಿಗಿಂತ ಅತಿಶಯ ಚೇಷ್ಟಾವಂತರಾದ ಜೀವರು ಉತ್ತಮ. ಇವರಿಗಿಂತ ಮನೋವ್ಯಾಪಾರಉಳ್ಳವರೂ ಅವರಿಗಿಂತ ಇಂದ್ರಿಯವ್ಯಾಪಾರವುಳ್ಳವರೂ

ಉತ್ತಮರು. ಇಂದ್ರಿಯವ್ಯಾಪಾರ ಉಳ್ಳವರಲ್ಲಿಯೂ ಸ್ಪರ್ಶವನ್ನು ತಿಳಿಯುವ ಜೀವರಿಗಿಂತ ರಸವನ್ನು ತಿಳಿಯುವವರೂ ಅವರಿಗಿಂತ ಗಂಧವನ್ನು ತಿಳಿಯುವವರೂ ಅವರಿಗಿಂತ ಶಬ್ದವನ್ನು ತಿಳಿಯುವವರೂ, ಅವರಿಗಿಂತ ರೂಪವನ್ನು ತಿಳಿಯುವವರೂ ಅವರಿಗಿಂತ ಮೇಲೂ ಕೆಳಗೂ ಹಲ್ಲುಗಳಿರುವ ಪ್ರಾಣಿಯ ರೂಪದವರೂ, ಅವರಿಗಿಂತ ಅನೇಕ ಪಾದಗಳಿರುವ ಪ್ರಾಣಿಯ ರೂಪದವರೂ, ಅವರಿಗಿಂತ ನಾಲ್ಕು ಪಾದದ ಪ್ರಾಣಿಯ ರೂಪದವರು ಅವರಿಗಿಂತ ವರ್ಣಾದಿ ವ್ಯವಸ್ಥೆಯಿಲ್ಲದ ಮನುಷ್ಯರೂಪದ ಜೀವರೂ, ಅವರಿಗಿಂತ ಶೂದ್ರವರ್ಣದ ಜೀವರೂ, ಅವರಿಗಿಂತ ವೈಶ್ಯವರ್ಣದ ಜೀವರೂ ಅವರಿಗಿಂತ ಕ್ಷತ್ರಿಯವರ್ಣದ ಜೀವರೂ, ಅವರಿಗಿಂತ ವೇದಾಭ್ಯಾಸ ಮಾಡುವ ಯೋಗ್ಯತೆಯುಳ್ಳ ಬ್ರಾಹ್ಮಣಜೀವರೂ, ಅವರಿಗಿಂತ ಉಪದೇಶಕರಾಗಿ ವೇದಾಧ್ಯಯನ ಸಂಪನ್ನರಾದವರೂ, ಅವರಿಗಿಂತ ವೇದಾರ್ಥವನ್ನು ಬಲ್ಲ ಋಷಿಜೀವರೂ, ಅವರಿಗಿಂತ ಸಂಶಯ ಪರಿಹಾರಕರಾದ ದೇವತಾಜೀವರೂ, ಅವರಿಗಿಂತ ಸ್ವಧರ್ಮಕರ್ತರೆನಿಸಿದ ಇಂದ್ರ(ಪದವಿಯ) ಜೀವರೂ, ಅವರಿಗಿಂತ ಶ್ರೀಹರಿಯ ಪ್ರಸಾದ ಮಾತ್ರಾಪೇಕ್ಷಿಗಳಾದ ಮುಕ್ತಸಂಗ-ರೆನಿಸಿದ ಗರುಡಶೇಷ (ಪದವಿಗಳ) ಜೀವರೂ, ಅವರಿಗಿಂತ ಸರ್ವಕರ್ಮಗಳನ್ನೂ ತತ್ಫಲಗಳನ್ನೂ ಶ್ರೀಹರಿಗೇ ಸಮರ್ಪಿಸಿ ಅವನಲ್ಲಿಯೇ ಅನುರಕ್ತವಾದ ಮನಸ್ಸುಳ್ಳವರಾಗಿ ಭಕ್ತಿಪೂರ್ಣರಾದ ಬ್ರಹ್ಮ (ಪದವಿಯ) ಜೀವರು ಉತ್ತಮರು. ಇವರಿಗೆ ಶ್ರೀಹರಿಯೇ ಜನಕನು. ಇವರು ನಿರ್ದೋಷ ಗುಣಪೂರ್ಣ ಪರಮಾತ್ಮ ಜ್ಞಾನಿಗಳು. ಇವರಷ್ಟು ಶಾಸ್ತ್ರಗಳನ್ನು ಸರಿಯಾಗಿ ತಿಳಿದವರು ಬೇರೆ ಯಾರೂ ಇಂತಹ ಜೀವರಿಗಿಂತ ಉತ್ತಮರಾದ ಜೀವರು ಇಲ್ಲವೇ ಇಲ್ಲ. ಮುಕ್ತರಲ್ಲಿಯೂ ಇವರೇ ಉತ್ತಮರು. ಹೀಗೆ ತಾರತಮ್ಯೋಪೇತರಾದ ಭಗವದ್ಭಕ್ತರಾದ ಈ ಜೀವರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಗೌರವಿಸಬೇಕು. ಈ ಜೀವರಲ್ಲಿ ಅನಿರುದ್ಧಾಂಶದಿಂದ ಪ್ರವಿಷ್ಟನಾಗಿ ಆಶ್ರಯನಾಗಿರುವ ಶ್ರೀಹರಿಯನ್ನು ಭಕ್ತಿಯಿಂದ ನಮಸ್ಕರಿಸಬೇಕು.

ಮನುಪುತ್ರಿ ! ಭಕ್ತಿಯೋಗ, ಜ್ಞಾನಯೋಗ ಇವುಗಳ ಅಂಗವಾಗಿ ಕರ್ಮಯೋಗ ಎಲ್ಲವನ್ನೂ ನಿನಗಾಗಿ ತಿಳಿಸಿದ್ದೇನೆ. ಇವುಗಳಲ್ಲಿ ಮುಖ್ಯವಾದುವು ಜ್ಞಾನಯೋಗ ಮತ್ತು ಭಕ್ತಿಯೋಗಗಳು. ಜ್ಞಾನವಿದ್ದಾಗ ಭಕ್ತಿಯು ಇದ್ದೇ ಇರುವುದು. ಭಕ್ತಿಯಿದ್ದಲ್ಲಿ ಜ್ಞಾನವು ಇದ್ದೇ ಇರುತ್ತದೆ. ಈ ಸಾಧನೆಯಿಂದಲೇ ಜೀವನು ಶ್ರೀಹರಿಯನ್ನು ಹೊಂದುವನು.

ತಾಯಿ ! ಕಾಲಸ್ವರೂಪವನ್ನು ತಿಳಿಸೆಂದು ಕೇಳಿದೆಯಲ್ಲವೇ ! ಗುಣ ಪೂರ್ಣನೂ ಸರ್ವಾಂತರ್ಯಾಮಿಯೂ ಆದ ಶ್ರೀಹರಿಯು ಚಿತ್ರಕೃತಿಯೆನಿಸಿದ

ರಮಾದೇವಿಗಿಂತಲೂ ಪುರುಷ ಎಂದು ಕರೆಸಿಕೊಳ್ಳುವ ನಿಮಿತ್ತವಾದ ವಿಶಿಷ್ಟ ಚೇಷ್ಟೆಯುಳ್ಳವನು. ಬಿಳುಪು ಮೊದಲಾದ ರೂಪಭೇದಗಳಿಗೂ ಬ್ರಹ್ಮಾಂಡ ಮೊದಲಾದ ಎಲ್ಲ ಪದಾರ್ಥಗಳಿಗೂ ಆಶ್ರಯನು. ಅವನ ಈ ರೂಪವೇ ಕಾಲವೆನಿಸುವುದು. ಈ ಶ್ರೀಹರಿಗಿಂತ ಅಲ್ಪಜ್ಞರೆನಿಸಿದ ಬ್ರಹ್ಮಾದಿ ಚೇತನರು ಈ ಕಾಲರೂಪಿಗೆ ಹೆದರಿ ನಡೆಯುತ್ತಿರುವರು. ಪ್ರಾಣಿಗಳ ಒಳಗೆ ಪ್ರವೇಶಿಸಿ ಪ್ರಾಣಿಗಳಿಂದ ಪ್ರಾಣಿಗಳನ್ನು ಸಂಹರಿಸುತ್ತ ಎಲ್ಲಕ್ಕೂ ಆಶ್ರಯನಾದ ಈ ಕಾಲನು ವಿಷ್ಣುವೇ ಹೊರತು ಯಮಧರ್ಮ ಮೊದಲಾದವರಲ್ಲ. ಈ ಕಾಲನನ್ನು ಸಾಕ್ಷಿಜ್ಞಾನದಿಂದ ತಿಳಿಯಬೇಕು. ಇವನು ಯಾರನ್ನೂ ಅವರವರ ಯೋಗ್ಯತೆಗಿಂತ ಹೆಚ್ಚಾಗಿ ಪ್ರೀತಿಸುವುದಿಲ್ಲ. ಅಥವಾ ಅವರ ಯೋಗ್ಯತೆ ಮೀರಿ ದ್ವೇಷಿಸುವುದಿಲ್ಲ. ಇವನಿಗೆ ಹಿತಕಾರಿಯಾದ ಬಂಧುವು ಯಾರೂ ಇಲ್ಲ. ಸರ್ವದಾ ಪ್ರಮತ್ತನಲ್ಲದ ಈ ಕಾಲರೂಪಿಯು ಪ್ರಮತ್ತರಾದ ಜನರನ್ನು ಅವರ ಮರಣಕಾಲಕ್ಕೆ ತಪ್ಪದೆ ಸೇರಿ ಸಂಹಾರ ಮಾಡುವನು. ಸರ್ವಸಂಹಾರಕನೇ ಇವನು ! ಇವನ ಆಜ್ಞೆಗೆ ಹೆದರದಿರುವವರೇ ಇಲ್ಲ. ಇವನಿಗೆ ಹೆದರಿ ಗಾಳಿಯು ಬೀಸುವುದು, ಸೂರ್ಯನು ಬಿಸಿಲು ಕಾಯುವನು, ಇಂದ್ರನು ಮಳೆಗರೆವನು, ನಕ್ಷತ್ರಗಣಗಳು ಮಿನುಗುವುವು, ವೃಕ್ಷಗಳು ಬಳ್ಳಿಗಳು ಓಷಧಗಳು ಆಯಾಯಾ ಕಾಲದಲ್ಲಿ ಹೂ ಹಣ್ಣುಗಳನ್ನು ಬಿಡುವುವು, ನದಿಗಳು ಹರಿಯುವುವು, ಸಮುದ್ರವು ಮೇರೆತಪ್ಪದಿರುವುದು, ಅಗ್ನಿಯು ಜ್ವಲಿಸುವನು, ಪರ್ವತಗಳೊಡನೆ ಭೂಮಿಯು ನೀರಿನಲ್ಲಿ ಮುಳುಗದಿರುವುದು, ಆಕಾಶವು ಪ್ರಾಣಿಗಳಿಗೆ ಮಾರ್ಗವನ್ನೀಯುತ್ತಿರುವುದು. ಇವನ ನಿಯಮಕ್ಕೆ ಒಳಪಟ್ಟೇ ಮಹತ್ತತ್ವಾಭಿಮಾನಿಯಾದ ಬ್ರಹ್ಮದೇವನು ಪ್ರಾಣಿಗಳ ದೇಹಗಳನ್ನು ಸೃಜಿಸುವನು. ಅಹಂಕಾರಾದಿ ತತ್ವಗಳಿಗೆ ಅಭಿಮಾನಿಗಳಾದ ಪ್ರಕೃತಿಬದ್ಧರಾದ ರುದ್ರಾದಿದೇವತೆಗಳು ಎಲ್ಲ ಚರಾಚರ ಜಗತ್ತಿಗೆ ನಿಯಾಮಕರೆನಿಸಿದ್ದರೂ ಈ ಕಾಲರೂಪಿಯ ಭಯದಿಂದಲೇ ಕಲ್ಪಕಲ್ಪಗಳಲ್ಲಿಯೂ ಸೃಷ್ಟ್ಯಾದಿಗಳಲ್ಲಿ ತೊಡಗಿರುವರು. ಈ ಕಾಲನು ಎಲ್ಲಕ್ಕೂ ಅಂತಕನಾಗಿದ್ದರೂ ತಾನು ಅನಂತನು; ಎಲ್ಲರಿಗೂ ಸೃಷ್ಟಿಕರ್ತನಾಗಿದ್ದರೂ ತಾನು ಅನಾದಿಯು. ಬೇಡಿದವರ ಇಷ್ಟಾರ್ಥಗಳನ್ನು ಎಷ್ಟು ಕೊಟ್ಟರೂ ಕಡಿಮೆಯಾಗದ ಮಹಿಮೋಪೇತನು. ರಾಜನಂತೆ ಇವನು ತನ್ನ ಆಜ್ಞಾವರ್ತಿಗಳಾದ ಬ್ರಹ್ಮ ಮೊದಲಾದವರಿಂದ ಸೃಷ್ಟಿ ಮಾಡಿಸುವವನೂ ದುರ್ಗಾ ರುದ್ರ ಮೊದಲಾದವರಿಂದ ಸಂಹಾರ ಮಾಡಿಸುವವನೂ ಆಗಿ ಮುಮುಕ್ಷು ಜೀವರಿಂದ ಉಪಾಸ್ಯನಾಗಿರುವನು.



## ಅಥ ಏಕತ್ರಿಂಶೋಽಧ್ಯಾಯಃ

ಭಗವದ್ಭಕ್ತಿಸಾಧನವಾದ ವೈರಾಗ್ಯ ಹುಟ್ಟಿಸಲು ವಿವಿಧವಾದ, ಕರ್ಮಾನು-ಸಾರಿಯಾದ ಜೀವನ ಜನನ-ಮರಣರೂಪ ಸಂಸಾರವನ್ನು ಹೇಳೆಂಬ ದೇವಹೂತಿಯ ಪ್ರಶ್ನೆಗೆ ಪರಿಹಾರರೂಪವಾಗಿ ಜೀವನ ಸಂಸೃತಿಯನ್ನು ನಿರೂಪಿಸುತ್ತ ಅದಕ್ಕೆ ಮೂಲ ಕಾರಣವನ್ನು ಹೇಳುವನು-

**ಭಗವಾನುವಾಚ**

**ತಸ್ಯೈತಸ್ಯ ಜನೋ ನೂನಂ ನಾಯಂ ವೇದೋರುವಿಕ್ರಮಮ್ ।**
**ಕಾಲ್ಯಮಾನೋಽಪಿ ಬಲಿನಾ ವಾಯೋರಿವ ಘನಾವಲಿಃ ॥೧॥**

ಘನಾವಲಿಃ=ಮೋಡಗಳ ಪಂಕ್ತಿಯು ವಾಯೋಃ ಇವ=ಗಾಳಿಯಿಂದ ಓಡುವಂತೆ ಬಲಿನಾ=ಬಲಿಷ್ಠನಾದ ಕಾಲನಾಮಕ ಶ್ರೀಹರಿಯಿಂದ ಕಾಲ್ಯಮಾನೋಽಪಿ= ಓಡಿಸಲ್ಪಟ್ಟರೂ ಅಯಂ ಜನಃ=ಸಂಸಾರಿಯಾದ ಮನುಷ್ಯನು ತಸ್ಯ=ಸೃಷ್ಟ್ಯಾದಿ ಕರ್ತೃವಾದ ಏತಸ್ಯ=ಕಾಲನಾಮಕನ ಉರುವಿಕ್ರಮಂ=ಅತಿಯಾದ ಸಾಮರ್ಥ್ಯವನ್ನು ನೂನಂ ನ ವೇದ=ನಿಶ್ಚಯವಾಗಿ ತಿಳಿದಿಲ್ಲ. ಇದರಿಂದ ಶ್ರೀಹರಿಯ ವಿಕ್ರಮ ತಿಳಿಯದಿರುವುದೇ ಸಂಸಾರಕ್ಕೆ ಮೂಲಕಾರಣವೆಂದು ಹೇಳಿದಂತಾಯಿತು. ॥೧॥

ಶ್ರೀಹರಿಯ ಪರಾಕ್ರಮವನ್ನೇ ವಿವರಿಸುವರು -

**ಯಂ ಯಮರ್ಥಮುಪಾದತ್ತೇ ದುಃಖೇನ ಸುಖಹೇತವೇ ।**
**ತಂ ತಂ ಧುನೋತಿ ಭಗವಾನ್ ಪುಮಾನ್ ಶೋಚತಿ ಯತ್ಕೃತೇ ॥**

ಪುಮಾನ್=ಮನುಷ್ಯನು ಸುಖಹೇತವೇ=ಸುಖಕಾರಣವಾಗಲೆಂದು ಯಂ ಯಂ ಅರ್ಥಂ=ಯಾವ್ಯಾವುದನ್ನು ದುಃಖೇನ=ಪ್ರಯಾಸದಿಂದ ಉಪಾದತ್ತೇ= ಸಂಪಾದಿಸುವನೋ ಯತ್ಕೃತೇ=ಯಾವ ಪದಾರ್ಥಕ್ಕಾಗಿ ಶೋಚತಿ=ನಾಶವಾಯಿತಲ್ಲಾ ಎಂದು ದುಃಖಪಡುವನೋ ಭಗವಾನ್=ಪರಮಾತ್ಮನು ತಂ ತಂ=ಆ ಆ ಪದಾರ್ಥವನ್ನು ಧುನೋತಿ=ನಾಶಮಾಡುವನು. ॥೨॥

ಭ್ರಾಂತಿಯು ಸಂಸಾರ ಕಾರಣವೆಂದು ತಿಳಿಸುತ್ತ ಶೋಕಕ್ಕೆ ನಿಮಿತ್ತ ಹೇಳುವರು.

**ಯದಧ್ರುವಸ್ಯ ದೇಹಸ್ಯ ಸಾನುಬಂಧಸ್ಯ ದುರ್ಮತಿಃ ।**
**ಧ್ರುವಾಣಿ ಮನ್ಯತೇ ಮೋಹಾದ್ ಗೃಹಕ್ಷೇತ್ರವಸೂನಿ ಚ ॥೩॥**

ಯತ್=ಯಾವಕಾರಣ ದುರ್ಮತಿಃ=ದುಷ್ಟಜ್ಞಾನವುಳ್ಳವನು ಅಧ್ರುವಸ್ಯ= ಅನಿತ್ಯವಾದ ದೇಹಸ್ಯ=ದೇಹ ಸಂಬಂಧಿಗಳಾದ (ಭೋಗಸಾಧನಗಳಾದ) ಸಾನುಬಂಧಸ್ಯ=ಮಡದಿಮಕ್ಕಳಿಂದ ಸಹಿತವಾದ ಗೃಹಕ್ಷೇತ್ರವಸೂನಿ ಚ=ಮನೆ, ಹೊಲ, (ಭೂಮಿ) ಹಣಗಳನ್ನು ಮೋಹಾತ್=ಅಜ್ಞಾನದಿಂದ ಧ್ರುವಾಣಿ ಮನ್ಯತೇ= ನಿತ್ಯವೆಂದು ತಿಳಿಯುವನೋ ಅವುಗಳನ್ನು ನಾಶಮಾಡುವನು ಶ್ರೀಹರಿ. ಆದ್ದರಿಂದ ದುಃಖಪಡುವನು ಎಂದು ಭಾವ. ॥೩॥

**ಜಂತುರ್ವೈ ಭವ ಏತಸ್ಮಿನ್ ಯಾಂ ಯಾಂ ಯೋನಿಮುಪವ್ರಜೇತ್ ।**
**ತಸ್ಯಾಂ ತಸ್ಯಾಂ ಸ ಲಭತೇ ನಿರ್ವೃತಿಂ ನ ವಿರಜ್ಯತೇ ॥೪॥**

ಜಂತುಃ=ಮನುಷ್ಯನು ಏತಸ್ಮಿನ್ ಭವೇ=ಈ ಸಂಸಾರದಲ್ಲಿ ಯಾಂ ಯಾಂ ಯೋನಿಂ=ಯಾವ ಯಾವ ಶರೀರವನ್ನು ಉಪವ್ರಜೇತ್=ಹೊಂದುವನೋ ತಸ್ಯಾಂ ತಸ್ಯಾಂ=ಅಲ್ಲಲ್ಲಿಯೇ ನಿರ್ವೃತಿಂ ಲಭತೇ=ವಿಷಯಭೋಗಜನ್ಯಸುಖವನ್ನು ಪುರುಷಾರ್ಥವೆಂದು ಅನುಭವಿಸುವನು, ಸಃ=ಅವನು ನ ವಿರಜ್ಯತೇ=ವಿರಕ್ತ-ನಾಗುವುದಿಲ್ಲ. ಇದು ಅಜ್ಞಾನಾತಿರೇಕವೇ ಎಂದು ಭಾವ. ॥೪॥

ವಿರಕ್ತನಾಗುವುದಿಲ್ಲ ಎಂಬುದನ್ನೇ ವಿವರಿಸುತ್ತ ಸಂಸಾರಕ್ಕೆ ಕಾರಣಾಂತರವನ್ನು ಹೇಳುವರು –

**ನರಕಸ್ಥೋಽಪಿ ದೇಹಂ ವೈ ನ ಪುಮಾಂಸ್ತ್ಯಕ್ತುಮಿಚ್ಛತಿ ।**
**ನಾರಕ್ಯಾ ನಿರ್ವೃತೌ ಸತ್ಯಾಂ ದೇವಮಾಯಾವಿಮೋಹಿತಃ ॥೫॥**

ನರಕಸ್ಥಃ ಅಪಿ ಪುಮಾನ್=ನರಕದಲ್ಲಿರುವ ವ್ಯಕ್ತಿಯೂ ಸಹ ನಾರಕ್ಯಾಂ= ನರಕದಲ್ಲಿರುವ ಆಹಾರಾದಿಗಳಿಂದುಂಟಾದ ನಿರ್ವೃತೌ ಸತ್ಯಾಂ=ಸುಖವಿರುವಾಗ ದೇವಮಾಯಾವಿಮೋಹಿತಃ=ಭಗವಂತನ ಬಂಧಕಶಕ್ತಿಯಿಂದ ಮೋಹಿತನಾಗಿ ದೇಹಂ ತ್ಯಕ್ತುಂ ನ ಇಚ್ಛತಿ ವೈ=ಆ ನರಕದಲ್ಲಿರುವ ಯಾತನಾದೇಹವನ್ನೇ ಬಿಡಲಿಚ್ಛಿಸುವುದಿಲ್ಲ. ಅಂದಮೇಲೆ ದೇವಮನುಷ್ಯಾದಿ ದೇಹದಲ್ಲಿ ವಿರಕ್ತನಾಗುವು-ದಿಲ್ಲವೆಂದೇನು ಬೇರೆ ಹೇಳಬೇಕಿಲ್ಲ. ॥೫॥

ಅಹಂ ಮಮ ಎಂಬ ಅಭಿಮಾನವೂ ಸಂಸಾರಕಾರಣವೆಂದು ಹೇಳುವರು-

**ಆತ್ಮಜಾಯಾಸುತಾಗಾರಪಶುದ್ರವಿಣಬಂಧುಷು ।**
**ನಿರೂಢಮೂಲಹೃದಯ ಆತ್ಮಾನಂ ಬಹುಮನ್ಯತೇ ॥೬॥**

ಆತ್ಮ=ತನ್ನ ಜಾಯಾ=ಮಡದಿ ಸುತಾಃ=ಮಕ್ಕಳು ಆಗಾರ=ಮನೆ ಪಶು=ಹಸು ಮುಂತಾದವು ದ್ರವಿಣ=ಸಂಪತ್ತು ಬಂಧುಷು=ದೇಹಸಂಬಂಧಿಗಳು ಇವರಲ್ಲಿ ನಿರೂಢಮೂಲಹೃದಯಃ=ಬಹಳವಾಗಿ ಬೆಳೆದ ಸ್ನೇಹಸಹಿತವಾದ ಮನಸ್ಸುಳ್ಳವ-ನಾಗಿ ಆತ್ಮಾನಂ=ತನ್ನನ್ನು ಬಹುಮನ್ಯತೇ=ಇವರೆಲ್ಲ ನನ್ನವರು, ನಾನಿವರ ರಕ್ಷಕನು ಎಂಬ ಅಭಿಮಾನಕ್ಕೆ ಒಳಗಾಗುವನು. ॥೬॥

ಈ ವಿಧ ಅಭಿಮಾನದ ಫಲ ಹೇಳುವರು –

**ಸಂದಹ್ಯಮಾನಸರ್ವಾಂಗ ಏಷಾಮುದ್ವಹನಾದಿನಾ ।**
**ಕರೋತ್ಯವಿರತಂ ಮೂಢೋ ದುರಿತಾನಿ ದುರಾಶಯಃ ॥೭॥**

ಏಷಾಂ=ಮಡದಿಮಕ್ಕಳು ಮುಂತಾದವರ ಉದ್ವಹನಾದಿನಾ=ಕಾಪಾಡುವ ಚಿಂತೆಯಲ್ಲಿ ಸಂದಹ್ಯಮಾನಸರ್ವಾಂಗಃ=ತನ್ನ ದೇಹ ಬಳಲಿಸುವನಾಗಿ ಮೂಢಃ= ಮೂರ್ಖನು ದುರಾಶಯಃ=ದುರಾಶೆಯುಳ್ಳವನು, ಅವಿರತಂ=ಸತತವಾಗಿ ದುರಿತಾನಿ ಕರೋತಿ=ಪಾಪವನ್ನು ಮಾಡುವನು. ॥೭॥

**ಆಕ್ಷಿಪ್ತಾತ್ಮೇಂದ್ರಿಯಃ ಸ್ತ್ರೀಣಾಮಸತೀನಾಂ ಚ ಮಾಯಯಾ ।**
**ರಹೋರಚಿತಸಲ್ಲಾಪೈಃ ಶಿಶೂನಾಂ ಕಲಭಾಷಣೈಃ ॥೮॥**

ಅಸತೀನಾಂ=ಸ್ವೈರಿಣಿಯರಾದ ಸ್ತ್ರೀಣಾಂ=ಸ್ತ್ರೀಯರ ರಹೋರಚಿತಸಲ್ಲಾಪೈಃ= ಏಕಾಂತದಲ್ಲಿ ನಡೆದ ಸರಸನುಡಿಗಳಿಂದಲೂ ಶಿಶೂನಾಂ=ಮಕ್ಕಳ ಕಲಭಾಷಣೈಃ= ತೊದಲು ನುಡಿಗಳಿಂದಲೂ ಮಾಯಯಾ=ಮೋಹಕಶಕ್ತಿಯಿಂದ ಆಕ್ಷಿಪ್ತಾತ್ಮೇಂದ್ರಿಯಃ =ವ್ಯಗ್ರವಾದ ಮನಸ್ಸು ಇಂದ್ರಿಯವುಳ್ಳವನಾಗಿ ॥೮॥

**ಗೃಹೇಷು ಕೂಟಧರ್ಮೇಷು ದುಃಖತಂತ್ರೇಷ್ವತಂದ್ರಿತಃ ।**
**ಕುರ್ವನ್ ದುಃಖಪ್ರತೀಕಾರಂ ಸುಖವನ್ಮನ್ಯತೇ ಗೃಹೀ ॥೯॥**

ಗೃಹೀ=ಗೃಹಸ್ಥನು ಕೂಟಧರ್ಮೇಷು=ವಂಚನೆಯೇ ಧರ್ಮವಾಗಿವುಳ್ಳ ದುಃಖತಂತ್ರೇಷು=ದುಃಖಸಾಧನಗಳಾದ ಗೃಹೇಷು=ಮನೆಮಡದಿಗಳಲ್ಲಿ ಅತಂದ್ರಿತಃ =ಆಲಸ್ಯವಿಲ್ಲದೆ ದುಃಖಪ್ರತೀಕಾರಂ ಕುರ್ವನ್=ದುಃಖವನ್ನು ತಡೆಯಲು

ಪ್ರಯತ್ನಿಸುತ್ತ ಸುಖವನ್ಮನ್ಯತೇ=ಸುಖವಾಗಿರುವನೆಂದು ಭಾವಿಸುವನು, ವಿರಕ್ತ-ನಾಗುವುದಿಲ್ಲವೆಂದು ಭಾವ. ||೯||

ಹಿಂದೆ ದುರಿತಾನಿ ಕರೋತಿ ಎಂದು ಹೇಳಿದ್ದನ್ನು ವಿವರಿಸುವರು –

**ಅರ್ಥೈರಾಪಾದಿತೈರ್ಗುರ್ವ್ಯಾ ಹಿಂಸಯೇತಸ್ತತಶ್ಚ ತಾನ್ ।**
**ಪುಷ್ಣಾತಿ ಯೇಷಾಂ ಪೋಷೇಣ ಶೇಷಭುಗ್ ಯಾತ್ಯಧಃ ಸ್ವಯಮ್ ॥**

ಗುರ್ವ್ಯಾ ಹಿಂಸಯಾ=ಪರರಿಗೆ ಬಹಳ ಅಪಕಾರಾದಿಗಳನ್ನು ಮಾಡಿ ಆಪಾದಿತೈಃ=ಸಂಪಾದಿಸಲ್ಪಟ್ಟ ಅರ್ಥೈಃ=ಹಣದಿಂದ ತಾನ್=ಹೆಂಡತಿ ಮಕ್ಕಳನ್ನು ಇತಃ ತತಃ=ಅಲ್ಲಿ ಇಲ್ಲಿ ಪುಷ್ಣಾತಿ=ರಕ್ಷಿಸುವನು ಯೇಷಾಂ=ಯಾರ ಪೋಷೇಣ=ಪೋಷಣದಿಂದ ಶೇಷಭುಕ್=ಪೋಷ್ಯ ಜನರುಂಡು ಉಳಿದಿದ್ದನ್ನು ತಿನ್ನುವ ಸ್ವಯಂ =ತಾನು ಅಧೋ ಯಾತಿ=ನರಕವನ್ನೇ ಹೊಂದುವನು. ಅಂಥವರ ಪೋಷಣೆ ಮಾಡುವನು ಎಂದು ಭಾವ.

ಇನ್ನು 'ವೃದ್ಧೌ ಚ ಮಾತಾ ಪಿತರೌ ಸಾಧ್ವೀ ಭಾರ್ಯಾ ಸುತಃ ಶಿಶುಃ। ಅಪ್ಯಕಾರ್ಯಂ ಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್'॥ ಎಂಬ ವಾಕ್ಯದಲ್ಲಿ ಏನಾದರೂ ಮಾಡಿ ಮಡದಿ ಮಕ್ಕಳನ್ನು ಸಲಹಬೇಕೆಂದಿರುವುದರಿಂದ ವಿರಕ್ತನಾದರೆ ದೋಷ ಬರುವುದೆಂದು ಶಂಕಿಸಬಾರದು. ಅಲ್ಲಿ ಹೇಳಿದ ಅಕಾರ್ಯವೆಂದರೆ ಶಾಸ್ತ್ರನಿಷಿದ್ಧ ಹಿಂಸಾದಿಗಳೆಂದರ್ಥವಲ್ಲ, ಅವುಗಳನ್ನು ಮಾಡುವುದರಿಂದ ನರಕವಾಗುವುದು. ಕಾರಣ; ಬ್ರಾಹ್ಮಣನಿಗೆ, ಸೇವಾಮಾಡುವುದು ಅಕಾರ್ಯ, ಆದರೆ ಆಪತ್ತಿನಲ್ಲಿ ಮಾಡಬಹುದು ಎಂದೂ ಹೇಳಿದೆ. ಇಂಥ ಅಕಾರ್ಯವೆಂದು ಅರ್ಥ ತಿಳಿಯಬೇಕು. ||೧೦||

**ವಾರ್ತಾಯಾಂ ಲುಪ್ಯಮಾನಾಯಾಮಾರಬ್ಧಾಯಾಂ ಪುನಃ ಪುನಃ ।**
**ಲೋಭಾಭಿಭೂತೋ ನಿಃಸತ್ತ್ವಃ ಪರಾರ್ಥೇ ಕುರುತೇ ಸ್ಪೃಹಾಂ ॥೧೧॥**

ಪುನಃ ಪುನಃ ಆರಬ್ಧಾಯಾಂ=ಮತ್ತೆ ಮತ್ತೆ ಸಾಲಮುಂತಾದವನ್ನು ಮಾಡಿ ಎತ್ತು ಮುಂತಾದ ಸಾಧನಗಳಿಂದ ಪ್ರಾರಂಭಿಸಿದ ವಾರ್ತಾಯಾಂ=ಕೃಷಿ, ವಾಣಿಜ್ಯ, ಗೋರಕ್ಷಾ ಮುಂತಾದ ಜೀವನೋಪಾಯಗಳು ಲುಪ್ಯಮಾನಾಯಾಂ=ಹಾಳಾಗು-ತ್ತಿರಲು ಲೋಭಾಭಿಭೂತಃ=ದ್ರವ್ಯದ ಆಸೆಯಿಂದ ನಿಃಸತ್ತ್ವಃ=ಸತ್ತ್ವಗುಣ ರಹಿತನಾಗಿ ಬಲಹೀನನಾಗಿ ಪರಾರ್ಥೇ=ಅನ್ಯರ ದ್ರವ್ಯದಲ್ಲಿ ಸ್ಪೃಹಾಂ ಕುರುತೇ=ಕಳ್ಳತನದಿಂದ ಪಡೆಯಲಿಚ್ಚಿಸುವನು. ||೧೧||

**ಕುಟುಂಬಭರಣಾಕಲ್ಪೋ ಮಂದಭಾಗ್ಯೋ ವೃಥೋದ್ಯಮಃ ।**
**ಶ್ರಿಯಾ ವಿಹೀನಃ ಕೃಪಣೋ ಧ್ಯಾಯನ್ ಶ್ವಸತಿ ಮೂಢಧೀಃ ॥೧೨॥**

ಕುಟುಂಬಭರಣಾಕಲ್ಪಃ=ಪರದ್ರವ್ಯ ಅಪಹಾರಮಾಡಲಾಗದಿದ್ದದ್ದರಿಂದ, ತನ್ನ ಕುಟುಂಬರಕ್ಷಣೆ ಮಾಡಲು ಅಸಮರ್ಥನಾಗಿ ಮಂದಭಾಗ್ಯಃ=ದುರ್ದೈವಿಯು ವೃಥೋದ್ಯಮಃ=ವ್ಯರ್ಥಪ್ರಯತ್ನಮಾಡಿ ಶ್ರಿಯಾ ವಿಹೀನಃ=ಸಂಪತ್ತು ಇಲ್ಲದೆ, ದೇಹಕಾಂತಿ ಇಲ್ಲದೇ ಕೃಪಣಃ=ದೀನನಾಗಿ ಮೂಢಧೀಃ=ನಾನೇ ಇವರ ಪೋಷಕನೆಂಬ ಅಭಿಮಾನವುಳ್ಳವನಾಗಿ, ಧ್ಯಾಯನ್=ಚಿಂತಿಸುತ್ತ ಶ್ವಸತಿ=ನಿಟ್ಟುಸಿರು ಬಿಡುವನು. ॥೧೨॥

**ಏವಂ ಸ್ವಭರಣಾಕಲ್ಪಂ ತತ್ಕಲತ್ರಾದಯಸ್ತದಾ ।**
**ನಾದ್ರಿಯಂತೇ ಯಥಾಪೂರ್ವಂ ಕೀನಾಶ ಇವ ಗೋಜರಮ್ ॥೧೩॥**

ಕೀನಾಶಃ=ಒಕ್ಕಲಿಗನು ಗೋಜರಂ ಇವ=ಮುದಿ ಎತ್ತನ್ನು ಹೇಗೆ ಆದರಿಸುವು-ದಿಲ್ಲವೋ, ಏವಂ=ಈ ರೀತಿ ಸ್ವಭರಣಾಕಲ್ಪಂ=ತಮ್ಮನ್ನು ರಕ್ಷಿಸಲು ಅಸಮರ್ಥ-ನಾದವನನ್ನು ತತ್ಕಲತ್ರಾದಯಃ=ಅವನ ಮಡದಿ, ಮಕ್ಕಳು ಮುಂತಾದವರು ತದಾ= ಆ ಕಾಲದಲ್ಲಿ ಯಥಾಪೂರ್ವಂ=ಮೊದಲಿನಂತೆ ನಾದ್ರಿಯಂತೇ=ಆದರಿಸುವುದಿಲ್ಲ. ॥೧೩॥

**ತತ್ರಾಪ್ಯಜಾತನಿರ್ವೇದೋ ಭ್ರಿಯಮಾಣಃ ಸ್ವಯಂಭೃತೈಃ ।**
**ಜರಯೋಪಾತ್ತವೈರೂಪ್ಯೋ ಮರಣಾಭಿಮುಖೋ ಗೃಹೇ ॥೧೪॥**

ತತ್ರಾಪಿ=ಈ ಅವಸ್ಥೆಯಲ್ಲಿಯೂ ಅಜಾತನಿರ್ವೇದಃ=ವೈರಾಗ್ಯ ಹುಟ್ಟದವನಾಗಿ ಸ್ವಯಂಭೃತೈಃ=ತನ್ನಿಂದಲೇ ರಕ್ಷಿತರಾದವರಿಂದ ಭ್ರಿಯಮಾಣಃ=ರಕ್ಷಿತನಾಗಿ ಜರಯಾ =ಮುಪ್ಪಿನಿಂದ ವೈರೂಪ್ಯಃ=ಕುರೂಪಿಯಾಗಿ ಮರಣಾಭಿಮುಖಃ ಗೃಹೇ ಆಸ್ತೇ= ಸಾಯಲು ದಾರಿನೋಡುತ್ತಾ ಮನೆಯಲ್ಲಿಯೇ ಇರುವನು. ॥೧೪॥

**ಆಸ್ತೇಽವಮತ್ಯಾಽಪತ್ಯಾದ್ಯೈರ್ಗೃಹಪಾಲ ಇವಾಹರನ್ ।**
**ಆಮಯೇನಾಪ್ರದೀಪ್ತಾಗ್ನಿರಲ್ಪಾಹಾರೋಽಲ್ಪಚೇಷ್ಟಿತಃ ॥೧೫॥**

ಅಪತ್ಯಾದ್ಯೈಃ=ಮಕ್ಕಳು ಮೊದಲಾದವರಿಂದ ಮಾಡಲ್ಪಟ್ಟ ಅವಮತ್ಯಾ= ಅಪಮಾನದಿಂದ ಹಾಕಿದ ಅನ್ನವನ್ನು ಗೃಹಪಾಲ ಇವ=ನಾಯಿಯಂತೆ ಆಹರನ್= ಸ್ವೀಕರಿಸುತ್ತ ಆಮಯೇನ=ರೋಗದಿಂದ ಅಪ್ರದೀಪ್ತಾಗ್ನಿಃ=ಜಾಠರಾಗ್ನಿಯ ಮಾಂದ್ಯದಿಂದ ಅಲ್ಪಾಹಾರಃ=ಸ್ವಲ್ಪ ಆಹಾರ ಸೇವಿಸುತ್ತ ಅಲ್ಪಚೇಷ್ಟಿತಃ ಆಸ್ತೇ=ಸ್ವಲ್ಪ ಮಾತ್ರ ವ್ಯಾಪಾರ ಮಾಡುತ್ತಿರುವನು. ॥೧೫॥

**ವಾಯುನೋತ್ಕ್ರಮತೋತ್ತಾರಕಫಸಂರುದ್ಧನಾಸಿಕಃ ।**
**ಕಾಸಶ್ವಾಸಕೃತಾಯಾಸಃ ಕಂಠೋ ಘುರುಘುರಾಯತೇ ॥೧೬॥**

ಉತ್ಕ್ರಾಮತಾ=ಹೊರಬರುವ ವಾಯುನಾ=ಶ್ವಾಸದಿಂದ ಉತ್ತಾರ ಮೇಲೆ ಬಂದ ಕಫ=ಕಫದಿಂದ ರುದ್ಧನಾಸಿಕಃ=ಮೂಗು ಕಟ್ಟಿದವನಾಗಿ ಕಾಸಶ್ವಾಸಕೃತಾ-ಯಾಸಃ=ಕೆಮ್ಮುಗಳಿಂದ ದುಃಖಪಟ್ಟು ಯಾವನ ಕಂಠಃ=ಗಂಟಲು ಘುರುಘುರಾ-ಯತೇ=ಘುರುಘುರು ಶಬ್ದ ಮಾಡುವುದೋ ಅವನು ॥೧೬॥

**ಶಯಾನಃ ಪರಿಶೋಚದ್ಭಿಃ ಪರಿವೀತಃ ಸ್ವಬಂಧುಭಿಃ ।**
**ವಾಚ್ಯಮಾನೋಽಪಿ ನ ಬ್ರೂತೇ ಕಾಲಪಾಶವಶಂಗತಃ ॥೧೭॥**

ಶಯಾನಃ=ಮಲಗಿಕೊಂಡು ಪರಿಶೋಚದ್ಭಿಃ=ದುಃಖಪಡುತ್ತಿರುವ ಸ್ವಬಂಧುಭಿಃ =ತನ್ನ ದೇಹಸಬಂಧಿಗಳಿಂದ ಪರಿವೀತಃ=ಸುತ್ತುವರೆಯಲ್ಪಟ್ಟು ವಾಚ್ಯಮಾನೋಽಪಿ= ಮಾತನಾಡಿಸುತ್ತಿದ್ದರೂ ಕಾಲಪಾಶವಶಂಗತಃ=ಮೃತ್ಯುವಿನ ಅಧೀನನಾಗಿ ನ ಬ್ರೂತೇ=ಮಾತನಾಡಲಾರನು. ಆದರೂ ವೈರಾಗ್ಯವಿಲ್ಲ ॥೧೭॥

**ಏವಂ ಕುಟುಂಬಭರಣೇ ವ್ಯಾಪೃತಾತ್ಮಾಽಜಿತೇಂದ್ರಿಯಃ ।**
**ಮ್ರಿಯತೇ ರುದತಾಂ ಸ್ವಾನಾಮುರುವೇದನಯಾಽಸ್ತಧೀಃ ॥೧೮**

ಏವಂ=ಈ ರೀತಿಯಾಗಿ, ಕುಟುಂಬಭರಣೇ=ಕುಟುಂಬವನ್ನು ರಕ್ಷಿಸುವುದರಲ್ಲಿ, ವ್ಯಾಪೃತಾತ್ಮಾ=ತೊಡಗಿದಮನಸ್ಸುಳ್ಳವನಾಗಿ, ಅಜಿತೇಂದ್ರಿಯಃ=ಇಂದ್ರಿಯಜಯ-ವಿಲ್ಲದೇ, ಸ್ವಾನಾಂ ರುದತಾಂ ಸತಾಂ=ಸ್ವಕೀಯರು ಅಳುತ್ತಿರಲು, ಉರುವೇದ-ನಯಾ=ಸಾಯುವ ಸಂಕಟದಿಂದ, ಅಸ್ತಧೀಃ=ಮತಿಗೆಟ್ಟವನಾಗಿ ಮ್ರಿಯತೇ= ಸಾಯುವನು. ॥೧೮॥

**ಯಮದೂತೌ ತದಾ ಪ್ರಾಪ್ತೌ ಭೀಮೌ ಸರಭಸೇಕ್ಷಣೌ ।**
**ಸ ದೃಷ್ಟ್ವಾ ತ್ರಸ್ತಹೃದಯಃ ಶಕೃನ್ಮೂತ್ರಂ ವಿಮುಂಚತಿ ॥೧೯॥**

ತದಾ=ಆ ಕಾಲದಲ್ಲಿ, ಭೀಮೌ=ಭಯಂಕರವಾದ, ಸರಭಸೇಕ್ಷಣೌ=ಕೋಪ ಸಹಿತವಾದ ಕಣ್ಣುಗಳುಳ್ಳ, ಪ್ರಾಪ್ತೌ=ತನ್ನನ್ನು ಸಮೀಪಿಸಿರುವ, ಯುಮದೂತೌ= ಯಮಭಟರನ್ನು, ದೃಷ್ಟ್ವಾ=ನೋಡಿ ಸಃ=ಜೀವನು ತ್ರಸ್ತಹೃದಯಃ=ಭಯಗ್ರಸ್ತ ಮನಸ್ಸುಳ್ಳವನಾಗಿ, ಶಕೃನ್ಮೂತ್ರಂ ವಿಮುಂಚತಿ=ಮಲಮೂತ್ರ ವಿಸರ್ಜಿಸುವನು. ॥೧೯॥

ವೈರಾಗ್ಯಕ್ಕೋಸ್ಕರ ನರಕಮಾರ್ಗ ನರಕಭೋಗ ಹೇಳುವರು -

**ಯಾತನಾದೇಹ ಆವೃತ್ಯ ಪಾಶೈರ್ಬಧ್ವಾ ಗಲೇ ಬಲಾತ್ ।**
**ನೀಯತೇ ದೀರ್ಘಮಧ್ವಾನಂ ದಂಡ್ಯಂ ರಾಜಭಟಾ ಯಥಾ॥೨೦॥**

ದಂಡ್ಯಂ=ಶಿಕ್ಷೆಗೆ ಗುರಿಯಾದವನನ್ನು, ರಾಜಭಟಾಃ ಯಥಾ=ರಾಜ ಭೃತ್ಯರು ಸೆಳೆದೊಯ್ಯುವಂತೆ, ಬಲಾತ್=ಬಲಾತ್ಕಾರದಿಂದ, ಪಾಶೈಃಗಲೇ ಬಧ್ವಾ=ಕುತ್ತಿಗೆಗೆ ಹಗ್ಗವನ್ನು ಕಟ್ಟಿ ಯಾತನಾದೇಹೇ ಆವೃತ್ಯ=ನರಕ ಭೋಗಕ್ಕಾಗಿಯೇ ನಿರ್ಮಿಸಿದ ಶರೀರದಲ್ಲಿ ಪ್ರವೇಶಮಾಡಿಸಿ, ದೀರ್ಘಂ ಅಧ್ವಾನಂ=ಬಹೂದೂರವಾದ ಮಾರ್ಗದಲ್ಲಿ ನೀಯತೇ=ಸೆಳೆದೊಯ್ಯಲ್ಪಡುವನು. ॥೨೦॥

**ತಯೋರ್ನಿರ್ಭಿನ್ನಹೃದಯಸ್ತರ್ಜನೈರ್ಜಾತವೇಪಥುಃ ।**
**ಪಥಿ ಶ್ವಭಿರ್ಭಕ್ಷ್ಯಮಾಣ ಆರ್ತೋಽಘಂ ಸ್ವಮನುಸ್ಮರನ್ ॥೨೧॥**

ತಯೋಃ=ಯಮದೂತರ, ತರ್ಜನೈಃ=ಝುಭರಿಸುವುದರಿಂದ, ನಿರ್ಭಿನ್ನ-ಹೃದಯಃ=ಎದೆ ಒಡೆದುಕೊಂಡು, ಜಾತವೇಪಥುಃ=ನಡುಕ ಹುಟ್ಟಿದವನಾಗಿ, ಪಥಿ=ದಾರಿಯಲ್ಲಿ ಶ್ವಭಿಃ=ನಾಯಿಗಳಿಂದ, ಭಕ್ಷ್ಯಮಾಣಃ=ಕಿತ್ತಿ ತಿನ್ನಲ್ಪಟ್ಟವನಾಗಿ, ಆರ್ತಃ=ದುಃಖಿತನಾಗಿ, ಸ್ವಂ ಅಘಂ ಸ್ಮರನ್=ತಾನು ಮಾಡಿದ ಪಾಪಗಳನ್ನು ಸ್ಮರಿಸುತ್ತ ॥೨೧॥

**ಕ್ಷುತ್ ತೃಟ್‌ಪರೀತೋಽರ್ಕದವಾನಲಾನಿಲೈಃ**
**ಸಂತಪ್ಯಮಾನಃ ಪಥಿ ತಪ್ತವಾಲುಕೇ ।**
**ಕೃಚ್ಛ್ರೇಣ ಪೃಷ್ಠೇ ಕಶಯಾ ಚ ತಾಡಿತ-**
**ಶ್ಚಲತ್ಯಶಕ್ತೋಽಪಿ ನಿರಾಶ್ರಯೋದಕೇ ॥೨೨॥**

ಕ್ಷುತ್=ಹಸಿವೆ, ತೃಟ್=ನೀರಡಿಕೆಗಳಿಂದ, ಪರೀತಃ=ಕೂಡಿದವನಾಗಿ, ಅರ್ಕ=ಸೂರ್ಯ, ದವಾನಲ=ಕಾಡುಗಿಚ್ಚು ಅನಿಲೈಃ=ಗಾಳಿಗಳಿಂದ, ಸಂತಪ್ಯಮಾನಃ=ಬಹು ತಾಪಪಡುತ್ತ, ತಪ್ತವಾಲುಕೇ=ಬಿಸಿಯಾದ ಉಸುಕುಗಳುಳ್ಳ, ನಿರಾಶ್ರ-ಯೋದಕೇ=ವಿಶ್ರಾಮಸ್ಥಾನ ನೀರುಗಳಿಲ್ಲದ , ಪಥಿ=ಮಾರ್ಗದಲ್ಲಿ ಪೃಷ್ಠೇ ಕಶಯಾ ತಾಡಿತಃ=ಬೆನ್ನ ಮೇಲೆ ಚಾವಟಿಯಿಂದ ಹೊಡೆಸಿಕೊಂಡು, ಅಶಕ್ತೋಪಿ ಕೃಚ್ಛ್ರೇಣ ಚಲತಿ=ಅಸಮರ್ಥನಾದರೂ ಕಷ್ಟದಿಂದ ನಡೆಯುವನು. ॥೨೨॥

**ತತ್ರ ತತ್ರ ಪತನ್ ಶ್ರಾಂತೋ ಮೂರ್ಛಿತಃ ಪುನರುತ್ಥಿತಃ ।**
**ತಥಾ ಪಾಪೀಯಸಾ ನೀತಸ್ತಮಸಾ ಯಮಸಾದನಮ್ ॥೨೩॥**

ತತ್ರ ತತ್ರ=ಅಲ್ಲಲ್ಲಿ, ಪತನ್=ಬೀಳುತ್ತ, ಶ್ರಾಂತಃ=ದುಃಖಿತನಾಗಿ, ಮೂರ್ಛಿತಃ= ಮೂರ್ಛೆ ಹೊಂದಿ, ಪುನಃ ಉತ್ಥಿತಃ=ಮತ್ತೆ ಎಚ್ಚೆತ್ತು, ತಥಾ=ಆ ರೀತಿಯಾಗಿ, ಪಾಪೀಯಸಾ=ಪಾಪಿಷ್ಟವಾದ, ತಮಸಾ=ಕತ್ತಲೆಯಿಂದ ಕೂಡಿದ ಮಾರ್ಗದಿಂದ, ಯಮಸಾದನಂ ನೀತಃ ಭವತಿ=ಯಮನ ಮನೆ ಅರ್ಥಾತ್ ನರಕಕ್ಕೆ ಒಯ್ಯಲ್ಪಡುವನು. ॥೨೩॥

**ಯೋಜನಾನಾಂ ಸಹಸ್ರಾಣಿ ನವತಿರ್ನವ ಚಾಧ್ವನಃ ।**
**ತ್ರಿಭಿರ್ಮುಹೂರ್ತೈರ್ದ್ವಾಭ್ಯಾಂ ವಾ ನೀತಃ ಪ್ರಾಪ್ನೋತಿ ಯಾತನಾಮ್ ॥೨೪॥**

ಅಧ್ವನಃ=ನರಕಮಾರ್ಗದ, ನವ ನವತಿಃ ಯೋಜನಾನಾಂ ಸಹಸ್ರಾಣಿ= ತೊಂಬತ್ತೊಂಬತ್ತು ಸಾವಿರಯೋಜನಗಳನ್ನು, ದ್ವಾಭ್ಯಾಂತ್ರಿಭಿರ್ವಾಮೂಹೂರ್ತೈಃ =ಬಹಳಪಾಪ ಮಾಡಿದ್ದರೆ ಎರಡು, ಇಲ್ಲವಾದರೆ ಮೂರು ಮೂಹೂರ್ತಗಳಲ್ಲಿ ನೀತಃ=ಒಯ್ಯಲ್ಪಟ್ಟು ಯಾತನಾಂ ಪ್ರಾಪ್ನೋತಿ=ದುಃಖವನ್ನು ಹೊಂದುವನು. ಯದ್ಯಪಿ ಯಮಸದನಮಾರ್ಗಸಂಬಂಧಿ ಯೋಜನೆಗಳು ಇನ್ನೂ ಹೆಚ್ಚಿವೆ. ಆದರೂ ಕಷ್ಟಕರ ಮಾರ್ಗದ ಸಂಖ್ಯೆ ಇದೆಂದು ತಿಳಿಯಬೇಕು.

ಎರಡು ಅಥವಾ ಮೂರು ಎಂದು ಹೇಳಿದ್ದು ಉಪಲಕ್ಷಣ. ಪಕ್ಷಾಂತರಗಳೂ ಉಂಟೆಂದು ಹೇಳುವರು ಆಚಾರ್ಯರು –

**ತಿಭಿರ್ಮುಹೂರ್ತೈರ್ದ್ವಾಭ್ಯಾಂ ವಾ ದಿನೈರ್ದಶಭಿರೇವ ವಾ ।**
**ಪಕ್ಷಾನ್ಮಾಸೇನ ವಾ ಯಾತಿ ಯಮಲೋಕಮಿತೋ ಗತಃ ॥**

**ಇತಿ ನಾರದೀಯೇ ।**

ಪಾಪಕ್ಕನುಗುಣವಾಗಿ, ಮೃತನಾದವನು ಇಲ್ಲಿಂದ ಹೊರಟು ಎರಡು ಮೂಹೂರ್ತ ಅಥವಾ ಮೂರು ಮೂಹೂರ್ತದಲ್ಲಿ ಅಥವಾ ಹತ್ತು ದಿನಗಳು, ಹದಿನೈದು ದಿನಗಳು ಇಲ್ಲವೇ ಒಂದು ತಿಂಗಳಲ್ಲಿ ಯಮಲೋಕ ತಲುಪುವನು, ಎಂದು ನಾರದ ಪುರಾಣದಲ್ಲಿದೆ. ॥೨೪॥

ಯಾತನೆಗಳನ್ನು ಸಂಕ್ಷೇಪವಾಗಿ ತಿಳಿಸುವರು –

**ಆದೀಪನಂ ಸ್ವಗಾತ್ರಾಣಾಂ ವೇಷ್ಟಯಿತ್ವೋಲ್ಮುಕಾದಿಭಿಃ ।**
**ಆತ್ಮಮಾಂಸಾದನಂ ಕ್ವಾಪಿ ಸ್ವಕೃತಂ ಪರತೋಽಪಿ ವಾ ॥೨೫॥**

ಉಲ್ಮುಕಾದಿಭಿಃ=ಉರಿಯುವ ಕೊಳ್ಳಿಗಳಿಂದ, ವೇಷ್ಟಯಿತ್ವಾ=ಸುತ್ತಲ್ಪಟ್ಟು ಸ್ವಗಾತ್ರಾಣಾಂ ಆದೀಪನಂ=ತನ್ನ ಅವಯವಗಳ ಉರಿಯುವಿಕೆಯನ್ನು

ಹೊಂದುವನು, ಸ್ವಕೃತಂ=ತನ್ನಿಂದಲೆ ಕತ್ತರಿಸಲ್ಪಟ್ಟ, ವಾ ಪರತಃ ಕೃತಂ=ಬೇರೆಯವ-ರಿಂದ ಕತ್ತರಿಸಿದ, ಆತ್ಮಮಾಂಸಾದನಂ=ತನ್ನ ಮಾಂಸವನ್ನೇ ಭಕ್ಷಣವನ್ನಾಗಿ, ಕ್ವಾಪಿ= ಕೆಲವು ಸಲ ಹೊಂದುವನು. ॥೨೫॥

**ಜೀವತಶ್ಚಾಂತ್ರಾಭ್ಯುದ್ಧಾರಃ ಶ್ವಗೃಧ್ರೈರ್ಯಮಸಾದನೇ ।**
**ಸರ್ಪವೃಶ್ಚಿಕದಂಶಾದ್ಯೈಃ ಸ್ಮರದ್ಭಿಶ್ಚಾತ್ಮವೈಶಸಂ ॥೨೬॥**

ಜೀವತಃ=ಬದುಕಿದಾಗಲೆ, ಆಂತ್ರಾಭ್ಯುದ್ಧಾರಃ=ಕರಳುಗಳನ್ನು ಕಿತ್ತುವುದು, ಯಮಸಾದನೇ=ನರಕದಲ್ಲಿ, ಆತ್ಮವೈಶಸಃ=ತಮ್ಮ ಜಾತಿಯ ನಾಯಿ, ಹದ್ದು ಮುಂತಾದವುಗಳಿಗೆ ಇವನು ಮಾಡಿದ ಹಿಂಸೆಯನ್ನು, ಸ್ಮರದ್ಭಿಃ=ಜ್ಞಾಪಿಸಿಕೊಳ್ಳುವ, ಶ್ವಗೃಧ್ರೈಃ=ನಾಯಿ ಹದ್ದುಗಳಿಂದಲೂ, ಸರ್ಪವೃಶ್ಚಿಕದಂಶಾದ್ಯೈಃ=ಹಾವು, ಚೇಳು, ಹುಳುಗಳು ಕಚ್ಚುವುದರಿಂದ ದುಃಖಿಸುವನು. ॥೨೬॥

**ಕೃಂತನಂ ಚಾವಯವಶೋ ಗಜಾದಿಭ್ಯೋಽಭಿದಾಪನಂ (ಭಿಧಾವನಂ) ।**
**ಪಾತನಂ ಗಿರಿಶೃಂಗೇಭ್ಯೋ ರೋಧನಂ ಬಂಧ (ಚಾಂಬು)ಗರ್ತಯೋಃ ॥೨೭॥**

ಗಜಾದಿಭ್ಯಃ=ಆನೆ ಮುಂತಾದುವುಗಳಿಂದ, ಅವಯವಶಃ ಕೃಂತನಂ= ಒಂದೊಂದೇ ಅವಯವ ಕತ್ತರಿಸುವುದು, ಗಿರಿಶೃಂಗೇಭ್ಯಃ ಪಾತನಂ=ಗುಡ್ಡದ ತುದಿಗಳಿಂದ ಕೆಡುವುದು, ಬಂಧಗರ್ತಯೋಃ ರೋಧನಂ=ಬೇಡಿಯ ಬಂಧನ, ಮಲಕೂಪದಲ್ಲಿ ತಡೆಯುವುದು, ಅಭಿದಾಪನಂ=ಸೀಳುವುದು ॥೨೭॥

**ಯಾಸ್ತಾಮಿಸ್ರಾಂಧತಾಮಿಸ್ರರೌರವಾದ್ಯಾಶ್ಚಯಾತನಾಃ ।**
**ಭುಂಕ್ತೇ ನರೋ ವಾ ನಾರೀ ವಾ ಮಿಥಃ ಸಂಗೇನ ನಿರ್ಮಿತಾಃ ॥೨೮॥**

ಮಿಥಃ=ಪರಸ್ಪರ, ಸಂಗೇನ=ಸಂಬಂಧದಿಂದ, ನಿರ್ಮಿತಾಃ=ಉಂಟಾದ, ಯಾಃ= ಯಾವ, ತಾಮಿಸ್ರಅಂಧತಾಮಿಸ್ರರೌರವಾದ್ಯಾಃ=ಈ ಹೆಸರಿನ, ಯಾತನಾಃ= ದುಃಖಗಳನ್ನು, ನರಃ ನಾರೀ ವಾ=ಪುರಷನಾಗಲಿ ಸ್ತ್ರೀಯಾಗಲಿ ಭುಂಕ್ತೇ= ಅನುಭವಿಸುವರೋ, ತಾಃ=ಅವುಗಳು ಎಂದು ಮುಂದಿನ ಶ್ಲೋಕದಲ್ಲಿ ಅನ್ವಯ

**ಅತ್ರೈವ ನರಕಃ ಸ್ವರ್ಗ ಇತಿ ಮಾತಃ ಪ್ರಚಕ್ಷತೇ ।**
**ಯಾ ಯಾತನಾ ವೈ ನಾರಕ್ಯಸ್ತಾ ಇಹಾಪ್ಯುಪಲಕ್ಷಿತಾಃ ॥೨೯॥**

ಹೇ ಮಾತಃ=ತಾಯಿಯೇ, ಅತ್ರೈವ=ಸಮೀಪದಲ್ಲಿಯೇ, ನರಕಃ ಸ್ವರ್ಗಃ = ನರಕ ಸ್ವರ್ಗ ಇವೆರಡೂ ಇವೆ, ಇತಿ=ಎಂದು, ಪ್ರಚಕ್ಷತೇ=ಹೇಳುವರು , ಅದು

ಹೇಗೆಂದರೆ : ನಾರಕ್ಯಾಃ ಯಾಃ ಯಾತನಾಃ=ನರಕದಲ್ಲಿ ಅನುಭವಿಸುವ ಸುಡುವುದೇ ಮುಂತಾದ ದುಃಖಗಳು, ಇಹ=ರಾಜಭೃತ್ಯರಿಂದ ಶಿಕ್ಷೆಗೆ ಗುರಿಯಾದವರಲ್ಲಿ ಉಪಲಕ್ಷಿತಾಃ=ಕಂಡಿವೆ ಅದರಂತೆ ಸ್ವರ್ಗದಲ್ಲಿ ಅನುಭವಿಸುವ ಭೋಗಗಳು ರಾಜರಲ್ಲಿ ಕಂಡಿವೆ.

ಈ ಶ್ಲೋಕದಲ್ಲಿ ಏವಶಬ್ದವು ಅನ್ಯನಿಷೇಧಕವೆಂದರೆ ಬಾಧಿತವಾಗುವುದು. ಕಾರಣ ಯೋಗ್ಯ ಅರ್ಥ ಹೇಳುವರು-

**ಅತ್ರೈವೇತ್ಯೇವಶಬ್ದಃ ಸಾಮಿಪ್ಯಾರ್ಥೇ ।**
**ಸಾಮೀಪ್ಯೇ ಚ ಪ್ರಧಾನೇ ಚ ಏವಶಬ್ದೋಽವಧಾರಣೇ । ಇತಿ ।**

ಏವಶಬ್ದವು ಸಾಮೀಪ್ಯ, ಪ್ರಧಾನ, ಅವಧಾರಣ ಎಂಬರ್ಥದಲ್ಲಿದೆ ಎಂದು ಶಬ್ದ ನಿರ್ಣಯದಲ್ಲಿದೆ. ಈ ಶ್ಲೋಕದಲ್ಲಿರುವ ಸ್ವರ್ಗನರಕಶಬ್ದಗಳು, ದುಃಖಸುಖಗಳನ್ನು ಹೇಳುತ್ತವೆಯೇ ಹೊರತು, ಪ್ರಸಿದ್ಧ ಸ್ವರ್ಗನರಕಗಳನ್ನಲ್ಲ. ಕಾರಣ ವಿರೋಧವಿಲ್ಲ-ವೆಂದು ಭಾವ. ॥೨೯॥

**ಏವಂ ಕುಟುಂಬಂ ಬಿಭ್ರಾಣ ಉದರಂಭರ ಏವ ವಾ ।**
**ವಿಸೃಜ್ಯೇಹೋಭಯಂ ಪ್ರೇತ್ಯ ಭುಂಕ್ತೇ ತತ್ಫಲಮೀದೃಶಮ್ ॥೩೦॥**

ಏವಂ=ಈ ರೀತಿಯಾಗಿ, ಕುಟುಂಬಂ=ತನ್ನ ಪರಿವಾರವನ್ನು, ಬಿಭ್ರಾಣಃ= ಪೋಷಿಸುವವನು, ಉದರಂಭರಃ ಏವ ವಾ=ಹೊಟ್ಟೆತುಂಬಿಕೊಳ್ಳುವವನು, ಉಭಯಂ ವಿಸೃಜ್ಯ=ಕುಟುಂಬ, ಉದರ ಇವೆರಡನ್ನು ಬಿಟ್ಟು, ಪ್ರೇತ್ಯ=ಮರಣಾನಂತರ, ಈದೃಶಂ ಫಲಂ ಭುಂಕ್ತೇ=ಈ ವಿಧವಾದ ಫಲವನ್ನು ಅನುಭವಿಸುವನು. ॥೩೦॥

ಇದನ್ನೇ ವಿವರಿಸುವರು -

**ಏಕಃ ಪ್ರಪದ್ಯತೇಽಧ್ವಾನಂ ಹಿತ್ವೇಹ ಸ್ವಕಲೇವರಂ ।**
**ಕುಶಲೇತರಪಾಥೇಯೋ ಭೂತದ್ರೋಹೇಣ ಯದ್ ಭೃತಮ್॥೩೧॥**

ಯತ್=ಯಾವುದನ್ನು ಭೂತದ್ರೋಹೇಣ=ಇತರಪ್ರಾಣಿಗಳಿಗೆ ಹಿಂಸೆಮಾಡಿ, ಭೃತಂ=ಪೋಷಿತವಾದ ಕುಟುಂಬ ಮತ್ತು, ಸ್ವಕಲೇವರಂ=ತನ್ನ ದೇಹವನ್ನು, ಇಹ= ಇಲ್ಲಿಯೇ, ಹಿತ್ವಾ=ಬಿಟ್ಟು, ಕುಶಲೇತರಪಾಥೇಯಃ=ಪಾಪವೇ ಹಾದಿಯ ಬುತ್ತಿಯಾಗಿವುಳ್ಳವನಾಗಿ, ಏಕಃ=ಒಬ್ಬನೇ, ಅಧ್ವಾನಂ ಪ್ರಪದ್ಯತೇ=ನರಕ ಮಾರ್ಗವನ್ನು ಹೊಂದುವನು. ॥೩೧॥

ಪಾಪವನ್ನು ಏಕೆ ಬಿಟ್ಟು ಹೋಗುವುದಿಲ್ಲವೆಂದರೆ ಹೇಳುವರು -

**ದೈವೇನಾಸಾದಿತಂ ತಸ್ಯ ಶಮಲಂ ನಿರಯೇ ಪುಮಾನ್ ।**
**ಭುಂಕ್ತೇ ಕುಟುಂಬಪೋಷಸ್ಯ ಹೃತವಿತ್ತ ಇವಾತುರಃ ॥೩೨॥**

ಹೃತವಿತ್ತಃ=ಶರೀರಸ್ಥಾನೀಯವಾದ ಹಣಕಳೆದುಕೊಂಡು, ಆತುರ ಇವ= ರೋಗಿಯು ಹೇಗೆ ದೈವಿಕವಾದ ವ್ಯಾಧಿಯನ್ನು ಬಿಡಲಾಗದೆ ಅನುಭವಿಸುವನೋ ಹಾಗೆಯೇ, ಪುಮಾನ್=ಅಧಿಕಾರಿಯು, ಕುಟುಂಬಪೋಷಸ್ಯ ತಸ್ಯ=ಕುಟುಂಬ ರಕ್ಷಣೆಯಲ್ಲಿ ಆಸಕ್ತನಾದ ಅವನಿಗೆ, ದೈವೇನಾಸಾದಿತಃ=ದೈವಾಧೀನವಾಗಿ ಬಂದ, ಶಮಲಂ=ಪಾಪವನ್ನು ನಿರಯೇ ಭುಂಕ್ತೇ=ನರಕದಲ್ಲಿ ಅನುಭವಿಸುವನು. ॥೩೨॥

**ಕೇವಲೇನ ಹ್ಯಧರ್ಮೇಣ ಕುಟುಂಬಭರಣೋತ್ಸುಕಃ ।**
**ಯಾತಿ ಜೀವೋಽಂಧತಾಮಿಸ್ರಂ ಚರಮಂ ತಮಸಃ ಪದಂ ॥೩೩॥**

ಕೇವಲೇನ ಅಧರ್ಮೇಣ=ಮುಖ್ಯವಾದ ಹರಿದ್ವೇಷ ಮುಂತಾದವುಗಳಿಂದ, ಕುಟುಂಬಭರಣೋತ್ಸುಕಃ=ಕುಟುಂಬರಕ್ಷಿಸುವಲ್ಲಿ ಆಸಕ್ತಿಯುಳ್ಳ, ಜೀವಃ=ಜೀವನು, ತಮಸಃ ಪದಂ=ತಮಃಪದವಾಚ್ಯವಾದ, ಚರಮಂ=ತಾಮಿಸ್ರಕ್ಕಿಂತ ಕೊನೆಯಾದಾದ, ಅಂಧತಾಮಿಸ್ರಂ=ಈ ಹೆಸರಿನ ನಿತ್ಯನರಕವನ್ನು, ಯಾತಿ=ಹೊಂದುವನು. ॥೩೩॥

**ಅಧಸ್ತಾತ್ ನರಲೋಕಸ್ಯ ಯಾವತೀರ್ಯಾತನಾಸ್ತು ತಾಃ ।**
**ಕ್ರಮಶಃ ಸಮನುಕ್ರಮ್ಯ ಪುನರತ್ರಾವ್ರಜೇಚ್ಛುಚಿಃ ॥೩೪॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಏಕತ್ರಿಂಶೋಽಧ್ಯಾಯಃ ॥*

ನರಲೋಕಸ್ಯ=ಭೂಲೋಕದ, ಅಧಸ್ತಾತ್=ಕೆಳಗೆ ಇರುವ, ಯಾವತೀಃ ಯಾತನಾಃ=ಎಷ್ಟು ನರಕಗಳಿರುವವೋ, ತಾಃ=ಅವುಗಳನ್ನು, ಕ್ರಮಶಃ=ಕ್ರಮವಾಗಿ, ಸಮನುಕ್ರಮ್ಯ=ಅನುಭವಿಸಿ, ಶುಚಿಃ=ಪಾಪಕಳೆದುಕೊಂಡು, ಪುನಃ ಅತ್ರ ಆವ್ರಜೇತ್=ಭೂಲೋಕಕ್ಕೆ (ಸ್ವರ್ಗಕ್ಕೆ) ತಿರುಗಿಬರುವನು. ಪಾಪಿಯಾದರೆ ನರಕಕ್ಕೆ ಹೋಗುವನು ಎಂದು ತಿಳಿಯಬೇಕು. ॥೩೪॥

*ಇಲ್ಲಿಗೆ ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು.*

# ಮೂವತ್ತೊಂದನೆಯ ಅಧ್ಯಾಯದ ತಾತ್ಪರ್ಯ

ಕಪಿಲ - ಕಾಲವನ್ನು ಯಾರೂ ಜಯಿಸಲಾರರು. ಪ್ರತಿಯೊಬ್ಬ ದೇಹಿಯೂ ಈ ಕಾಲರೂಪಿಯಿಂದ ಪ್ರೇರಿತನಾಗಿ ಮೃತ್ಯುವಿನೆಡೆಗೆ ಧಾವಿಸುತ್ತಿರುವನು. ಮೋಡಗಳ ಸಮೂಹವು ವಾಯುವಿನಿಂದ ಪ್ರೇರಿತವಾಗಿ ಓಡುತ್ತಿದ್ದರೂ ವಾಯುವನ್ನರಿಯ-ದಿರುವಂತೆ ಈ ಜನವು ಕಾಲರೂಪಿಯನ್ನು ಅರಿಯುತ್ತಿಲ್ಲ. ಇವನೇ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತನೆಂದೂ ಆದ್ದರಿಂದ ಅತಿ ಪರಾಕ್ರಮಿಯೆಂದೂ ತಿಳಿಯದೆ ಜೀವನು ಅಜ್ಞಾನಿಯಾಗಿರುವನು. ಅದರ ಫಲವಾಗಿ ಜನನ ಮರಣರೂಪವಾದ ಸಂಸಾರದಲ್ಲಿ ಸಿಕ್ಕಿಕೊಂಡು ದುಃಖಕ್ಕೊಳಗಾಗಿರುವನು. ಅಸ್ವತಂತ್ರನಾದ ಜೀವನು ಸುಖಿಯಾಗಬಯಸಿ ದುಃಖದಿಂದ ಅನೇಕ ಸುಖಸಾಧನಗಳನ್ನು ಸಂಪಾದಿಸುವನು. ಮಹಾಪರಾಕ್ರಮಿಯಾದ ಶ್ರೀಹರಿಯು ಅವೆಲ್ಲವನ್ನೂ ನಾಶಪಡಿಸುವನು. ಅಸಹಾಯನಾದ ಜೀವನು ಈ ಸುಖಸಾಧನಗಳಿಗಾಗಿ ಪರಿತಪಿಸುವನು. ಇಂದ್ರಿಯಗಳಿಂದ ಕೂಡಿದ ಜೀವನ (ಬಾಹ್ಯ) ದೇಹವೇ ಅನಿತ್ಯವಾದುದು. ದೇವ ಮನುಷ್ಯ ಮೊದಲಾದ ಈ ದೇಹಗಳಲ್ಲಿ ಭೋಗಿಸಲು ಅನುಕೂಲವಾದ ಮನೆ ಧನ ಮೊದಲಾದುವನ್ನು ಮೋಹದಿಂದ ಶಾಶ್ವತವೆಂದು ಬಗೆದು ಜೀವನು ದುಷ್ಟಜ್ಞಾನಿಯಾಗಿರುವನು. ಇದಕ್ಕಿಂತ ಬೇರೆ ಅಜ್ಞಾನವುಂಟೇ ! ಜೀವನು ತನ್ನ ಕರ್ಮಾನುಗುಣವಾಗಿ ವಿವಿಧ ಯೋನಿಗಳಲ್ಲಿ ಜನಿಸುವನು. ಆ ದೇಹಗಳು ಎಷ್ಟೇ ದುಃಖದಾಯಕಗಳಾಗಿದ್ದರೂ ಅವುಗಳಲ್ಲಿಯೇ ಒಂದು ಬಗೆಯ ಸಮಾಧಾನವನ್ನು ಹೊಂದಿ ಅನುರಕ್ತನಾಗುವನು. ವಿರಕ್ತಿಯನ್ನು ಹೊಂದುವುದಿಲ್ಲ. ಪರಮಾತ್ಮನ ಇಚ್ಛೆಯಿಂದ ಮೋಹಿತನಾದ ಜೀವನು ನರಕದಲ್ಲಿದ್ದರೂ ಆ ಯಾತನಾ ದೇಹದಲ್ಲಿಯೇ ಸಮಾಧಾನವನ್ನು ಹೊಂದಿ ಅದನ್ನು ಬಿಡಲು ಇಷ್ಟಪಡುವುದಿಲ್ಲ-ವೆಂದಮೇಲೆ ಮಿಕ್ಕ ದೇಹಗಳ ವಿಷಯದಲ್ಲಿ ಹೇಳತಕ್ಕದ್ದೇನಿದೆ ! ದೇಹದಲ್ಲಿ ಮಾತ್ರವೇ ಅಲ್ಲ ! ಹೆಂಡತಿ, ಮಕ್ಕಳು, ಮನೆ, ದನ,ಧನ, ಬಂಧು-ಬಳಗ ಇತ್ಯಾದಿ ವಸ್ತುಗಳಲ್ಲಿ ನಾನು ನನ್ನದು ಎಂಬ ಅಭಿಮಾನದಿಂದ ತುಂಬಿರುವ ಇವನಿಗೆ ವೈರಾಗ್ಯವಾದರೂ ಬರುವುದೆಂತು ? ಇವುಗಳಿಂದ ಕೂಡಿದ ತನ್ನನ್ನು ಬಹುವಾಗಿ ತಿಳಿದು ಮೆರೆಯುವನು. ಈ ಅಭಿಮಾನಾಸ್ಪದ ವಸ್ತುಗಳಾದರೂ ಇವನಿಗೆ ಸುಖಕ್ಕೆ ಕಾರಣವಾಗಿರುವುವೇ ? ಇಲ್ಲ. ಇವುಗಳ ರಕ್ಷಣೆ ಮುಂತಾದ ಕಾರ್ಯಗಳಲ್ಲಿ

ಪಾಪವನ್ನು ಏಕೆ ಬಿಟ್ಟು ಹೋಗುವುದಿಲ್ಲವೆಂದರೆ ಹೇಳುವರು -

**ದೈವೇನಾಸಾದಿತಂ ತಸ್ಯ ಶಮಲಂ ನಿರಯೇ ಪುಮಾನ್ ।**
**ಭುಂಕ್ತೇ ಕುಟುಂಬಪೋಷಸ್ಯ ಹೃತವಿತ್ತ ಇವಾತುರಃ ॥೩೨॥**

ಹೃತವಿತ್ತಃ=ಶರೀರಸ್ಥಾನೀಯವಾದ ಹಣಕಳೆದುಕೊಂಡು, ಆತುರ ಇವ= ರೋಗಿಯು ಹೇಗೆ ದೈವಿಕವಾದ ವ್ಯಾಧಿಯನ್ನು ಬಿಡಲಾಗದೆ ಅನುಭವಿಸುವನೋ ಹಾಗೆಯೇ, ಪುಮಾನ್=ಅಧಿಕಾರಿಯು, ಕುಟುಂಬಪೋಷಸ್ಯ ತಸ್ಯ=ಕುಟುಂಬ ರಕ್ಷಣೆಯಲ್ಲಿ ಆಸಕ್ತನಾದ ಅವನಿಗೆ, ದೈವೇನಾಸಾದಿತಃ=ದೈವಾಧೀನವಾಗಿ ಬಂದ, ಶಮಲಂ=ಪಾಪವನ್ನು ನಿರಯೇ ಭುಂಕ್ತೇ=ನರಕದಲ್ಲಿ ಅನುಭವಿಸುವನು. ॥೩೨॥

**ಕೇವಲೇನ ಹ್ಯಧರ್ಮೇಣ ಕುಟುಂಬಭರಣೋತ್ಸುಕಃ ।**
**ಯಾತಿ ಜೀವೋಽಂಧತಾಮಿಸ್ರಂ ಚರಮಂ ತಮಸಃ ಪದಂ ॥೩೩॥**

ಕೇವಲೇನ ಅಧರ್ಮೇಣ=ಮುಖ್ಯವಾದ ಹರಿದ್ವೇಷ ಮುಂತಾದವುಗಳಿಂದ, ಕುಟುಂಬಭರಣೋತ್ಸುಕಃ=ಕುಟುಂಬರಕ್ಷಿಸುವಲ್ಲಿ ಆಸಕ್ತಿಯುಳ್ಳ, ಜೀವಃ=ಜೀವನು, ತಮಸಃ ಪದಂ=ತಮಃಪದವಾಚ್ಯವಾದ, ಚರಮಂ=ತಾಮಿಸ್ರಕ್ಕಿಂತ ಕೊನೆಯಾದಾದ, ಅಂಧತಾಮಿಸ್ರಂ=ಈ ಹೆಸರಿನ ನಿತ್ಯನರಕವನ್ನು, ಯಾತಿ=ಹೊಂದುವನು. ॥೩೩॥

**ಅಧಸ್ತಾತ್ ನರಲೋಕಸ್ಯ ಯಾವತೀರ್ಯಾತನಾಸ್ತು ತಾಃ ।**
**ಕ್ರಮಶಃ ಸಮನುಕ್ರಮ್ಯ ಪುನರತ್ರಾವ್ರಜೇಚ್ಛುಚಿಃ ॥೩೪॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಏಕತ್ರಿಂಶೋಽಧ್ಯಾಯಃ ॥*

ನರಲೋಕಸ್ಯ=ಭೂಲೋಕದ, ಅಧಸ್ತಾತ್=ಕೆಳಗೆ ಇರುವ, ಯಾವತೀಃ ಯಾತನಾಃ=ಎಷ್ಟು ನರಕಗಳಿರುವವೋ, ತಾಃ=ಅವುಗಳನ್ನು, ಕ್ರಮಶಃ=ಕ್ರಮವಾಗಿ, ಸಮನುಕ್ರಮ್ಯ=ಅನುಭವಿಸಿ, ಶುಚಿಃ=ಪಾಪಕಳೆದುಕೊಂಡು, ಪುನಃ ಅತ್ರ ಆವ್ರಜೇತ್=ಭೂಲೋಕಕ್ಕೆ (ಸ್ವರ್ಗಕ್ಕೆ) ತಿರುಗಿಬರುವನು. ಪಾಪಿಯಾದರೆ ನರಕಕ್ಕೆ ಹೋಗುವನು ಎಂದು ತಿಳಿಯಬೇಕು. ॥೩೪॥

*ಇಲ್ಲಿಗೆ ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು.*

# ಮೂವತ್ತೊಂದನೆಯ ಅಧ್ಯಾಯದ ತಾತ್ಪರ್ಯ

ಕಪಿಲ – ಕಾಲವನ್ನು ಯಾರೂ ಜಯಿಸಲಾರರು. ಪ್ರತಿಯೊಬ್ಬ ದೇಹಿಯೂ ಈ ಕಾಲರೂಪಿಯಿಂದ ಪ್ರೇರಿತನಾಗಿ ಮೃತ್ಯುವಿನೆಡೆಗೆ ಧಾವಿಸುತ್ತಿರುವನು. ಮೋಡಗಳ ಸಮೂಹವು ವಾಯುವಿನಿಂದ ಪ್ರೇರಿತವಾಗಿ ಓಡುತ್ತಿದ್ದರೂ ವಾಯುವನ್ನರಿಯ-ದಿರುವಂತೆ ಈ ಜನವು ಕಾಲರೂಪಿಯನ್ನು ಅರಿಯುತ್ತಿಲ್ಲ. ಇವನೇ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತನೆಂದೂ ಆದ್ದರಿಂದ ಅತಿ ಪರಾಕ್ರಮಿಯೆಂದೂ ತಿಳಿಯದೆ ಜೀವನು ಅಜ್ಞಾನಿಯಾಗಿರುವನು. ಅದರ ಫಲವಾಗಿ ಜನನ ಮರಣರೂಪವಾದ ಸಂಸಾರದಲ್ಲಿ ಸಿಕ್ಕಿಕೊಂಡು ದುಃಖಕ್ಕೊಳಗಾಗಿರುವನು. ಅಸ್ವತಂತ್ರನಾದ ಜೀವನು ಸುಖಿಯಾಗಬಯಸಿ ದುಃಖದಿಂದ ಅನೇಕ ಸುಖಸಾಧನಗಳನ್ನು ಸಂಪಾದಿಸುವನು. ಮಹಾಪರಾಕ್ರಮಿಯಾದ ಶ್ರೀಹರಿಯು ಅವೆಲ್ಲವನ್ನೂ ನಾಶಪಡಿಸುವನು. ಅಸಹಾಯನಾದ ಜೀವನು ಈ ಸುಖಸಾಧನಗಳಿಗಾಗಿ ಪರಿತಪಿಸುವನು. ಇಂದ್ರಿಯಗಳಿಂದ ಕೂಡಿದ ಜೀವನ (ಬಾಹ್ಯ) ದೇಹವೇ ಅನಿತ್ಯವಾದುದು. ದೇವ ಮನುಷ್ಯ ಮೊದಲಾದ ಈ ದೇಹಗಳಲ್ಲಿ ಭೋಗಿಸಲು ಅನುಕೂಲವಾದ ಮನೆ ಧನ ಮೊದಲಾದುವನ್ನು ಮೋಹದಿಂದ ಶಾಶ್ವತವೆಂದು ಬಗೆದು ಜೀವನು ದುಷ್ಟಜ್ಞಾನಿಯಾಗಿರುವನು. ಇದಕ್ಕಿಂತ ಬೇರೆ ಅಜ್ಞಾನವುಂಟೇ ! ಜೀವನು ತನ್ನ ಕರ್ಮಾನುಗುಣವಾಗಿ ವಿವಿಧ ಯೋನಿಗಳಲ್ಲಿ ಜನಿಸುವನು. ಆ ದೇಹಗಳು ಎಷ್ಟೇ ದುಃಖದಾಯಕಗಳಾಗಿದ್ದರೂ ಅವುಗಳಲ್ಲಿಯೇ ಒಂದು ಬಗೆಯ ಸಮಾಧಾನವನ್ನು ಹೊಂದಿ ಅನುರಕ್ತನಾಗುವನು. ವಿರಕ್ತಿಯನ್ನು ಹೊಂದುವುದಿಲ್ಲ. ಪರಮಾತ್ಮನ ಇಚ್ಛೆಯಿಂದ ಮೋಹಿತನಾದ ಜೀವನು ನರಕದಲ್ಲಿದ್ದರೂ ಆ ಯಾತನಾ ದೇಹದಲ್ಲಿಯೇ ಸಮಾಧಾನವನ್ನು ಹೊಂದಿ ಅದನ್ನು ಬಿಡಲು ಇಷ್ಟಪಡುವುದಿಲ್ಲ-ವೆಂದಮೇಲೆ ಮಿಕ್ಕ ದೇಹಗಳ ವಿಷಯದಲ್ಲಿ ಹೇಳತಕ್ಕದ್ದೇನಿದೆ ! ದೇಹದಲ್ಲಿ ಮಾತ್ರವೇ ಅಲ್ಲ ! ಹೆಂಡತಿ, ಮಕ್ಕಳು, ಮನೆ, ದನ,ಧನ, ಬಂಧು-ಬಳಗ ಇತ್ಯಾದಿ ವಸ್ತುಗಳಲ್ಲಿ ನಾನು ನನ್ನದು ಎಂಬ ಅಭಿಮಾನದಿಂದ ತುಂಬಿರುವ ಇವನಿಗೆ ವೈರಾಗ್ಯವಾದರೂ ಬರುವುದೆಂತು ? ಇವುಗಳಿಂದ ಕೂಡಿದ ತನ್ನನ್ನು ಬಹುವಾಗಿ ತಿಳಿದು ಮೆರೆಯುವನು. ಈ ಅಭಿಮಾನಾಸ್ಪದ ವಸ್ತುಗಳಾದರೂ ಇವನಿಗೆ ಸುಖಕ್ಕೆ ಕಾರಣವಾಗಿರುವುವೇ ? ಇಲ್ಲ. ಇವುಗಳ ರಕ್ಷಣೆ ಮುಂತಾದ ಕಾರ್ಯಗಳಲ್ಲಿ

ತೊಡಗಿದ ಇವನ ಪ್ರತಿಯೊಂದು ಅವಯವವೂ ಬೆಂದು ಬೆಂಡಾಗಿ ಹೋಗುವುದು. ಆದರೂ ತಾನೇ ಇವರ ರಕ್ಷಕನೆಂಬ ದುರಭಿಮಾನ. ಇಂತಹ ಮನಸ್ಸಿನ ಇವನಿಗೆ ಕರ್ತವ್ಯತೆಯ ಅರಿವೆಲ್ಲಿ ? ಕರ್ತವ್ಯವನ್ನರಿಯದ ಇವನು ಯಾವಾಗಲೂ ಪಾಪ ಕೆಲಗಳನ್ನೇ ಮಾಡುತ್ತ ಹೋಗುವನು. ಇವನ ಸಹಚಾರಿಣಿಯರಾದ ಸ್ತ್ರೀಯರು ತ್ರಿಕರಣಶುದ್ಧರಾಗಿರದೆ ವ್ಯಭಿಚಾರಿಣಿಯರಾಗಿರುವರು. ಅವರು ತಮ್ಮಲ್ಲಿರುವ (ದೈವದತ್ತವಾದ) ಮೋಹಕಶಕ್ತಿಯಿಂದ ಏಕಾಂತ ಸಲ್ಲಾಪಗಳಿಂದ ಇವನನ್ನು ಮುಗ್ಧನನ್ನಾಗಿಸುವರು ತೊದಲು ಮಾತನಾಡುವ ಮಕ್ಕಳು ಇವನನ್ನು ಆಕರ್ಷಿಸುವರು. ಹೀಗೆ ಗೃಹಸ್ಥನಾದ ಇವನ ಇಂದ್ರಿಯಗಳು ಮತ್ತು ಮನಸ್ಸು ಕುಟುಂಬದವರಲ್ಲೇ ಆಸಕ್ತವಾಗಿರುವುದು. ವಂಚನೆ ಧರ್ಮದ ಸೋಗುಗಳಿಗೆ ಆಕರವಾದ ಮನೆಯು ದುಃಖಸಾಧನವೇ ಹೊರತು ಸುಖಸಾಧನವಲ್ಲ. ಪ್ರತಿಕ್ಷಣದಲ್ಲಿಯೂ ಅಲಸಿಕೆಯಿಲ್ಲದೆ ಇವನು ಒದಗಿಬರುವ ದುಃಖಗಳಿಗೆ ಪ್ರತೀಕಾರವನ್ನು ಮಾಡುತ್ತಲೇ ಇರಬೇಕು. ಇದನ್ನೇ ಸುಖವೆಂದು ಬಗೆದ ಇವನಿಗೆ ಸಾಂಸಾರಿಕ ದುಃಖಗಳೂ ವೈರಾಗ್ಯವನ್ನು ಹುಟ್ಟಿಸವು. 'ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾಃ' ಎಂಬ ಸ್ಮೃತಿವಾಕ್ಯಕ್ಕೆ ವಿಪರೀತಾರ್ಥವನ್ನು ಮಾಡಿಕೊಂಡು ಅಲ್ಲಲ್ಲಿ ಜನರನ್ನು ಬಹು ಹಿಂಸೆಮಾಡಿ ಹಣವನ್ನು ತಂದು ಹೆಂಡತಿ ಮಕ್ಕಳನ್ನು ಪೋಷಿಸಿ, ಅವರು ತಿಂದು ಉಳಿದುದರಿಂದ ತನ್ನನ್ನೂ ಪೋಷಿಸಿಕೊಳ್ಳುವನು. ಇದರ ಪರಿಣಾಮವಾಗಿ ನರಕಕ್ಕೆ ಗುರಿಯಾಗುವನು. (ಆದ್ದರಿಂದ ಕುಟುಂಬದಲ್ಲಿ ವಿರಕ್ತನಾಗದಿರುವುದು ಭೂಷಣವೆಂದೇ ಬಗೆಯಬಾರದು.) ಇಷ್ಟೇ ಅಲ್ಲ, ಕಾಲರೂಪಿಯ ಇಚ್ಛೆಯಿಂದ ಜೀವನವು ದುಃಸಾಧ್ಯವಾದಾಗ ವಿರಕ್ತನಾಗುವುದರ ಬದಲು ಮತ್ತಷ್ಟು ದುರ್ಮಾರ್ಗವನ್ನೇ ಅನುಸರಿಸುವನು. ಅನೇಕ ವೇಳೆ ಸಾಲಮಾಡಿ ಮತ್ತೆ ಮತ್ತೆ ವಾಣಿಜ್ಯ ಬೇಸಾಯ ಮುಂತಾದುವುಗಳಲ್ಲಿ ತೊಡಗಿದರೂ ಫಲಿಸದೆ ಹಾಳಾಗುವುದುಂಟು. ಆಗ ಸಾತ್ವಿಕ ಗುಣಹೀನನೂ ಆದ್ದರಿಂದಲೇ ದುರ್ಬಲನೂ ಆದ ಈ ದೇಹಿಯು ಮತ್ತೊಬ್ಬರ ವಡವೆಗೆ ಆಸೆಪಟ್ಟು ಕಳ್ಳತನದಿಂದ ಅದನ್ನು ಅಪಹರಿಸಲು ಪ್ರಯತ್ನಿಸುವನು.

ಅದೃಷ್ಟಹೀನನಾದ ಇವನು ಮಾಡಿದ ಉದ್ಯಮಗಳೆಲ್ಲವೂ ವ್ಯರ್ಥವಾಗಿ ಕುಟುಂಬವನ್ನು ರಕ್ಷಿಸಲೂ ಸಹ ಅಸಮರ್ಥನಾಗುವ ಅವಸ್ಥೆಯೂ ಇವನಿಗೆ ಬರುವುದು. ಆಗ ದೀನನಾದ ಇವನು ದೇಹಕಾಂತಿಯನ್ನೂ ಸಂಪತ್ತನ್ನೂ ಕಳೆದುಕೊಂಡು ಏನು ಮಾಡಬೇಕೆಂಬುದು ತೋರದೆ ತನ್ನ ಹಿಂದಿನ ಕೆಲಸಗಳನ್ನು ನೆನೆಸಿಕೊಳ್ಳುತ್ತ ಅಸಹಾಯನಾಗಿ ನಿಟ್ಟುಸಿರುಬಿಡುವನು. ಮೊದಲಿನಂತೆ ತಮ್ಮನ್ನು ರಕ್ಷಿಸಲಾಗದಿರುವ ಇವನನ್ನು ಇವನ ಹೆಂಡತಿ ಮೊದಲಾದ ಕುಟುಂಬವರ್ಗದವರು

ಹಿಂದಿನಂತೆ ಆದರದಿಂದ ಕಾಣುವುದಿಲ್ಲ. ಭೂಮಿಯನ್ನು ಉಳುವುದೇ ಮೊದಲಾದ ಕಾರ್ಯಗಳಲ್ಲಿ ಅಸಮರ್ಥವಾದ ಮುದಿಯಾದ ಎತ್ತನ್ನು ಬೇಸಾಯಗಾರನು ಆದರಿಸುವನೇ ? ಇಂತಹ ಅವಸ್ಥೆಯಲ್ಲಿಯೂ ದೇಹಿಗೆ ವೈರಾಗ್ಯವು ಹುಟ್ಟುವುದಿಲ್ಲ. ತಾನೇ ಸಲಹಿದ ಜನರಿಂದ ತಾನು ರಕ್ಷಿತನಾಗುವ ಪ್ರಸಂಗವು ಬರುವುದು. ಯವ್ವನದಲ್ಲಿ ಸುಂದರವಾಗಿದ್ದ ದೇಹವು ಮುದಿತನದಿಂದ ವಿರೂಪಗೊಳ್ಳುವುದು. ಸಾವನ್ನೇ ನಿರೀಕ್ಷಿಸುತ್ತಾ ಮನೆಯಲ್ಲಿ ಮಕ್ಕಳು ಮುಂತಾದವರು ತಿರಸ್ಕಾರ ಪೂರ್ವಕವಾಗಿ ಕೊಟ್ಟ ಆಹಾರವನ್ನೇ ನಾಯಿಯಂತೆ ತಿನ್ನುತ್ತಾ ಕಾಲ ಹಾಕುವನು. ಮರಣವು ಸಮೀಪಿಸಿದಂತೆಲ್ಲ ದೇಹದಲ್ಲಿ ರೋಗಗಳು ನೆಲಸುವುವು. ಜೀರ್ಣಶಕ್ತಿಯು ಕುಗ್ಗಿ ಆಹಾರವು ತಿನ್ನಲಾಗದೆ ಹೋಗುವುದು. ಆಹಾರವು ಅಲ್ಪವಾದಂತೆಲ್ಲ ದೇಹ ಚೇಷ್ಟೆಗಳು ಅಲ್ಪವಾಗುತ್ತ ಬರುವುವು. ಊರ್ಧ್ವ ಶ್ವಾಸವು ಹತ್ತಿ ಶ್ಲೇಷ್ಮದಿಂದ ಮೂಗುಕಟ್ಟಿ ಗಂಟಲು ಘುರ್ ಘುರ್ ಶಬ್ದಮಾಡುತ್ತಿರಲು ಉಸಿರುಬಿಡುವುದಕ್ಕೂ ಬಹಳ ಆಯಾಸಪಡುವನು. ಹಾಸಿಗೆಯನ್ನು ಬಿಟ್ಟು ಏಳಲಾಗದೆ ಮಲಗಿರುವ ಇವನನ್ನು ಆ ದೇಹದ ಬಂಧು ಬಳಗಗಳು ಸುತ್ತುಗಟ್ಟಿ ಅಳುತ್ತಾ ಮಾತನಾಡಿಸುವರು. ಮೃತ್ಯುವಿನ ಪಾಶಕ್ಕೆ ವಶನಾದ ಇವನು ಮಾನತನಾಡಲಾಗದೆ ಮೌನದಿಂದ ಇರುವನು. ಇಂತಹ ಅವಸ್ಥೆಯಲ್ಲಿಯೂ ದೇಹಿಗೆ ವೈರಾಗ್ಯವು ಹುಟ್ಟುವುದಿಲ್ಲ. ಶ್ರೀಹರಿಯ ಮೋಹಕಶಕ್ತಿಯೇ ಇಂತಹುದು. ಅದನ್ನು ಮೀರುವವರಾರು !!

ಹೀಗೆ ಕುಟುಂಬ ಭರಣದಲ್ಲಿಯೇ ಆಸಕ್ತನಾಗಿದ್ದು ಇಂದ್ರಿಯ ಲೋಲುಪನಾಗಿ ಜೀವನವನ್ನು ಸಾಗಿಸಿದ್ದ ಇವನು ಮರಣಕಾಲದಲ್ಲಿ ಅತ್ಯಂತ ವೇದನೆಗೆ ಒಳಗಾಗಿ ಬುದ್ಧಿಯ ವ್ಯಾಪಾರವೇ ಇಲ್ಲದವನಾಗಿ ತನ್ನವರು ಅಳುತ್ತಿದ್ದಂತೆಯೇ ಮೃತನಾಗುವನು. ಪಾಪಿಯಾದ ಇವನು ಸಾಯುವ ಕಾಲದಲ್ಲಿ ಭಯವನ್ನುಂಟು ಮಾಡುವ ಕೋಪದಿಂದ ಕೆಂಬಡರಿದ ಕಣ್ಣುಗಳುಳ್ಳ ಇಬ್ಬರು ಯಮದೂತರನ್ನು ಕಾಣುವನು. ಅವರನ್ನು ನೋಡಿದೊಡನೆಯೇ ಇವನ ಎದೆಯು ಝುಗ್ಗೆನ್ನುವುದು. ಭೀತನಾದ ದೇಹಿಯು ಕೂಡಲೆ ಮಲಮೂತ್ರಗಳನ್ನು ಮಾಡಿಕೊಳ್ಳುವನು.

ಯಮದೂತರು ಇವನಿಗೆ ಯಾತನಾದೇಹವನ್ನು ತೋರಿಸಿ ಅದರೊಳಗೆ ಆ ಜೀವನು ಪ್ರವೇಶಿಸುವಂತೆ ಮಾಡುವರು. ಆಗ ಅವನನ್ನು ಕುತ್ತಿಗೆಯಲ್ಲಿ ಹಗ್ಗದಿಂದ ಕಟ್ಟಿ ರಾಜಭಟರು ಅಪರಾಧಿಯನ್ನು ಎಳೆದೊಯ್ಯುವಂತೆ ಬಹುದೂರದ ನರಕಕ್ಕೆ ಎಳೆದೊಯ್ಯುವರು. ದಾರಿಯಲ್ಲಿ ಅವರ ಬೆದರಿಕೆಗಳಿಂದ ಎದೆಯೊಡೆದು ನಡುಗುತ್ತಾ ಆರ್ತನಾಗಿ ತಾನು ಮಾಡಿದ ಪಾಪಗಳನ್ನು ನೆನೆಸಿಕೊಂಡು

ಮುಂದುವರಿಯುತ್ತಿರಲು ನಾಯಿಗಳು ಇವನನ್ನು ಕಿತ್ತು ತಿನ್ನವುವು. ದಾರಿಯುದ್ದಕ್ಕೂ ಬಿಸಿಲಿನ ತಾಪ; ಕಾಡುಗಿಚ್ಚು; ಚಂಡಮಾರುತ. ಇವುಗಳಿಂದ ಸಂತಪ್ತನಾದ ಯಾತನಾದೇಹಿಯು ಹಸಿವು ಬಾಯಾರಿಕೆಗಳಿಂದ ಬಳಲಿ ಕಾದ ಮರಳಿನ ಆ ದಾರಿಯಲ್ಲಿ ಹೆಜ್ಜೆ ಇಡಲಾರದೆ ಹೆಜ್ಜೆ ಇಡುವನು. ನಿಲ್ಲಲು ನೆರಳಿಲ್ಲ. ಕುಡಿಯಲು ನೀರಿಲ್ಲ. ಬಹುಕಷ್ಟದಿಂದ 'ಅಯ್ಯೋ ! ಹಸಿವು ! ನೀರಡಿಕೆ, ನೀರು ಕೊಡಿ' ಎಂದು ಕೇಳಿಕೊಂಡ ಇವನನ್ನು ಆ ದೂತರು ಛಾವಟಿಗೆಯಿಂದ ಹೊಡೆಯುವರು. 'ನಡೆ' ಎಂದು ಗದರಿಸುವರು. ಶ್ರಾಂತನಾದ ಇವನು ಮುಗ್ಗರಿಸುವನು.; ಮೂರ್ಛೆಬೀಳುವನು; ಮತ್ತೆ ಚೇತರಿಸಿಕೊಳ್ಳುವನು. ಹೀಗೆ ಅವನನ್ನು ಪಾಪಿಗಳು ಹೋಗುವ ಆ ಕತ್ತಲೆಯ ಮಾರ್ಗದಿಂದ ಯಮಭಟರು ಯಮಪಟ್ಟಣಕ್ಕೆ ಎಳೆದೊಯ್ಯುವರು.

ತೊಂಭತ್ತೊಂಬತ್ತು ಸಾವಿರ ಯೋಜನಗಳ ಉದ್ದವಿರುವ ಆ ದೀರ್ಘ ಮಾರ್ಗವನ್ನು ಕರ್ಮಾನುಗುಣವಾಗಿ ಎರಡು ಅಥವಾ ಮೂರು ಮುಹೂರ್ತಗಳಲ್ಲಿ ಅಥವಾ ಹತ್ತು ದಿನ ಅಥವಾ ಒಂದು ಪಕ್ಷ ಅಥವಾ ಒಂದು ತಿಂಗಳಿನಲ್ಲಿ ನಡೆಯುವನಾಗಿ ನರಕ ಪ್ರದೇಶವನ್ನು ಸೇರುತ್ತಾನೆ. ಆ ನರಕದಲ್ಲಿ ಅವನವನ ಕರ್ಮಾನುಗುಣವಾಗಿ ವಿವಿಧ ಯಾತನೆಗಳನ್ನು ಅನುಭವಿಸುವನು. ಒಂದು ಕಡೆ ಮೈಗೆಲ್ಲ ಎಣ್ಣೆಯಲ್ಲಿ ತೊಯಿಸಿದ ಬಟ್ಟೆಗಳನ್ನು ಸುತ್ತಿ ಕೊಳ್ಳಿಗಳಿಂದ ಉರಿಹಚ್ಚುವರು. ಮತ್ತೊಂದು ಕಡೆ ತನ್ನ ದೇಹದ ಮಾಂಸವನ್ನು ತಾನೇ ಕಿತ್ತು ತಿನ್ನುವನು. ಇನ್ನೊಂದೆಡೆ ಇತರರು ಕಿತ್ತು ತಿನ್ನುವರು. ಬೇರೊಂದೆಡೆ ನಾಯಿ ಹದ್ದು ಮೊದಲಾದ ಪ್ರಾಣಿಗಳು ಅವನ ಯಾತನಾದೇಹದಿಂದ ನರಗಳನ್ನು ಕಿತ್ತಿ ಎಳೆಯುತ್ತಿರುವುವು. ಮತ್ತೊಂದು ನರಕದಲ್ಲಿ ತಮ್ಮ ಹಿಂದಿನ ಹಿಂಸೆಯ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ (ಎಂಬಂತೆ) ಹಾವು ಚೇಳು ತಿಗಣೆ ಮೊದಲಾದುವು ದೇಹವನ್ನು ಕಚ್ಚಿ ಚೂರು ಚೂರು ಮಾಡುವುವು. ಮತ್ತೊಂದು ಪ್ರದೇಶದಲ್ಲಿ ಆನೆ ಮೊದಲಾದ ಕ್ರೂರಪ್ರಾಣಿಗಳು ಅಟ್ಟಿಸಿಕೊಂಡು ಬರುವುವು. ಇನ್ನೊಂದು ನರಕದಲ್ಲಿ ಬೆಟ್ಟದ ಶಿಖರಗಳಿಂದ ಕೆಳಕ್ಕೆ ತಳ್ಳುವರು. ಇನ್ನೊಂದು ಸ್ಥಳದಲ್ಲಿ ಸರಪಳಿಯಿಂದ ಕಟ್ಟಿಹಾಕಿರುವರು. ಮಲಮೂತ್ರಗಳ ಹಳ್ಳಗಳಲ್ಲಿ ತಳ್ಳುವರು. ಯಾತನೆಗಳನ್ನು ಎಷ್ಟೆಂದು ಹೇಳೋಣ ! ಗಂಡುಸಾಗಲಿ, ಹೆಂಗುಸಾಗಲಿ ವಿಷಯಾಸಕ್ತರಾಗಿ ಪರಸ್ಪರ ಬೆರೆತು ತಮ್ಮ ತಮ್ಮ ಪಾಪಗಳ ಸಲುವಾಗಿ ತಮಸ್ಸು, ಅಂಧತಮಸ್ಸು, ರೌರವ ಮೊದಲಾದ ಅನೇಕ ನರಕಗಳನ್ನು ಅನುಭವಿಸುವರು. ಇವೆಲ್ಲವೂ ಪಾಪಿಗಳ ಶಿಕ್ಷೆಗಾಗಿ ಶ್ರೀಹರಿಯಿಂದ ನಿರ್ಮಿತವಾಗಿರುವುವು.

ಅಮ್ಮಾ ! ನರಕ ಸ್ವರ್ಗಗಳು ಬಹುದೂರವೆಂದು ತಿಳಿಯಬೇಡ. ನರಕದಲ್ಲಿಅನುಭವಿಸುವ ಯಾತನೆಗಳನ್ನು ಇಲ್ಲಿಯೂ ರಾಜಭಟರು ಅಪರಾಧಿಗಳನ್ನು ಶಿಕ್ಷಿಸುವಲ್ಲಿ ಕಾಣಬಹುದು. ಅಪರಾಧಿಗಳಾದ ಸ್ವರ್ಗವಾಸಿಗಳೂ ಈ ಬಗೆಯ ಶಿಕ್ಷೆಗೆ ಒಳಗಾಗುವರು. ಕುಟುಂಬವನ್ನು ತಾನೇ ರಕ್ಷಿಸುವೆನೆಂದು ತಿಳಿದಿರುವವನೂ, ತನ್ನ ಹೊಟ್ಟೆಯನ್ನು ಮಾತ್ರ ಹೊರೆದುಕೊಳ್ಳುವವನೂ ಸತ್ತಮೇಲೆ ಇವೆರಡನ್ನೂ ಇಲ್ಲಿಯೇ ಬಿಟ್ಟುಹೋಗುವರು. ಮತ್ತು ಅವುಗಳ ಫಲವಾಗಿ ಮೇಲೆ ಹೇಳಿದ ನರಕಯಾತನೆಗಳನ್ನು ಅನುಭವಿಸುವರು. ಜೊತೆಯ ಪ್ರಾಣಿಗಳನ್ನು ವಂಚಿಸಿ ಬೆಳೆಸಿಕೊಂಡ ಇವನ ದೇಹವು ಇಲ್ಲಿಯೇ ಬಿದ್ದುಹೋಗುವುದು. ಮಾಡಿದ ಪಾಪ(ಪುಣ್ಯ)ಗಳು ಮಾತ್ರ ಇವನನ್ನು ಅನುಸರಿಸುವುವು. ಕರ್ಮಫಲದಾತನಾದ ಶ್ರೀಹರಿಯು ಗಂಟುಹಾಕಿದ ಈ ಕರ್ಮಗಳನ್ನು ಬಿಟ್ಟುಹೋಗಲು ಸಾಧ್ಯವಿಲ್ಲ. ಐಹಿಕದಲ್ಲಿ ದೈವಿಕವಾಗಿ ಒದಗಿದ ದ್ರವ್ಯನಾಶ, ರೋಗ ಮುಂತಾದ ದುಃಖಗಳನ್ನು ಬಿಡದೆ ಅನುಭವಿಸುವಂತೆ ಪಾಪದ ಫಲವಾಗಿ ನರಕಗಳನ್ನೂ ಅನುಭವಿಸಲೇ ಬೇಕಾಗುವುದು.

ತಮಸ್ಸು, ಅಂಧತಮಸ್ಸು ಎಂಬೀ ನಿತ್ಯ ನರಕಗಳು. ಇಲ್ಲಿ ಎಲ್ಲಿ ನೋಡಿದರೂ ಕಗ್ಗತ್ತಲೆ. ಇಲ್ಲಿಂದ ಮತ್ತೆ ಹಿಂತಿರುಗುವ ಪ್ರಸಂಗವೇ ಇಲ್ಲ. ಸ್ವರೂಪತಃ ದೈತ್ಯರಾದ ಜೀವರು ಈ ನರಕಗಳನ್ನು ಹೊಂದಲು ಯೋಗ್ಯರು. ತಾವೇ ಸ್ವತಂತ್ರ(ಬ್ರಹ್ಮ)ರೆಂದು ತಿಳಿದು ಸಂಸಾರಾವಸ್ಥೆಯಲ್ಲಿ ಕುಟುಂಬ ಪೋಷಣೆಯಲ್ಲಿಯೇ ರತರಾಗಿ ಶ್ರೀಹರಿಯನ್ನೂ ಅವನ ಭಕ್ತರನ್ನೂ ದ್ವೇಷಿಸಿ ಪಾಪಕರ್ಮಗಳನ್ನೇ ಮಾಡುವರು. ಇವರ ಕರ್ಮಗಳಲ್ಲಿ ಭಕ್ತಿಯ ಸಂಬಂಧವೇ ಇರುವುದಿಲ್ಲ. ಇಂತಹವರಿಗೆ ಈ ಎರಡು ನರಕಗಳೇ ಗಮ್ಯಸ್ಥಳಗಳು. ಅವರಲ್ಲಿಯೂ ದ್ವೇಷದಲ್ಲಿ ತಾರತಮ್ಯವಿದೆಯಾಗಿ ಈ ನರಕಗಳ ದುಃಖಾನುಭವದಲ್ಲಿಯೂ ತಾರತಮ್ಯವುಂಟು.

ಅವನವನ ಕರ್ಮಾನುಗುಣವಾಗಿ ವಿವಿಧ ನರಕಯಾತನೆಗಳನ್ನೂ ಅನುಭವಿಸಿದ ಮೇಲೆ ಶುದ್ಧನಾದ ಜೀವನು ಮತ್ತೆ ತನ್ನ ಕರ್ಮಾನುಗುಣವಾದ ಯೋನಿಯಲ್ಲಿ ಜನಿಸುವನು. ಅಲ್ಲಿಯೂ ಪುಣ್ಯಮಾಡಿದರೆ ಸ್ವರ್ಗವನ್ನೂ ಪಾಪಮಾಡಿದರೆ ಮತ್ತೆ ನರಕವನ್ನೂ ಹೊಂದುವನು. ಹೀಗೆ ಸ್ವರ್ಗ ಭೂ ನರಕಗಳನ್ನು ಸುತ್ತುತ್ತಲೇ ಇರುವನು.



ಮುಂದುವರಿಯುತ್ತಿರಲು ನಾಯಿಗಳು ಇವನನ್ನು ಕಿತ್ತು ತಿನ್ನವುವು. ದಾರಿಯುದ್ದಕ್ಕೂ ಬಿಸಿಲಿನ ತಾಪ; ಕಾಡುಗಿಚ್ಚು; ಚಂಡಮಾರುತ. ಇವುಗಳಿಂದ ಸಂತಪ್ತನಾದ ಯಾತನಾದೇಹಿಯು ಹಸಿವು ಬಾಯಾರಿಕೆಗಳಿಂದ ಬಳಲಿ ಕಾದ ಮರಳಿನ ಆ ದಾರಿಯಲ್ಲಿ ಹೆಜ್ಜೆ ಇಡಲಾರದೆ ಹೆಜ್ಜೆ ಇಡುವನು. ನಿಲ್ಲಲು ನೆರಳಿಲ್ಲ. ಕುಡಿಯಲು ನೀರಿಲ್ಲ. ಬಹುಕಷ್ಟದಿಂದ 'ಅಯ್ಯೋ ! ಹಸಿವು ! ನೀರಡಿಕೆ, ನೀರು ಕೊಡಿ' ಎಂದು ಕೇಳಿಕೊಂಡ ಇವನನ್ನು ಆ ದೂತರು ಛಾವಟಿಗೆಯಿಂದ ಹೊಡೆಯುವರು. 'ನಡೆ' ಎಂದು ಗದರಿಸುವರು. ಶ್ರಾಂತನಾದ ಇವನು ಮುಗ್ಗರಿಸುವನು.; ಮೂರ್ಛೆಬೀಳುವನು; ಮತ್ತೆ ಚೇತರಿಸಿಕೊಳ್ಳುವನು. ಹೀಗೆ ಅವನನ್ನು ಪಾಪಿಗಳು ಹೋಗುವ ಆ ಕತ್ತಲೆಯ ಮಾರ್ಗದಿಂದ ಯಮಭಟರು ಯಮಪಟ್ಟಣಕ್ಕೆ ಎಳೆದೊಯ್ಯುವರು.

ತೊಂಭತ್ತೊಂಬತ್ತು ಸಾವಿರ ಯೋಜನಗಳ ಉದ್ದವಿರುವ ಆ ದೀರ್ಘ ಮಾರ್ಗವನ್ನು ಕರ್ಮಾನುಗುಣವಾಗಿ ಎರಡು ಅಥವಾ ಮೂರು ಮುಹೂರ್ತಗಳಲ್ಲಿ ಅಥವಾ ಹತ್ತು ದಿನ ಅಥವಾ ಒಂದು ಪಕ್ಷ ಅಥವಾ ಒಂದು ತಿಂಗಳಿನಲ್ಲಿ ನಡೆಯುವವನಾಗಿ ನರಕ ಪ್ರದೇಶವನ್ನು ಸೇರುತ್ತಾನೆ. ಆ ನರಕದಲ್ಲಿ ಅವನವನ ಕರ್ಮಾನುಗುಣವಾಗಿ ವಿವಿಧ ಯಾತನೆಗಳನ್ನು ಅನುಭವಿಸುವನು. ಒಂದು ಕಡೆ ಮೈಗೆಲ್ಲ ಎಣ್ಣೆಯಲ್ಲಿ ತೊಯಿಸಿದ ಬಟ್ಟೆಗಳನ್ನು ಸುತ್ತಿ ಕೊಳ್ಳಿಗಳಿಂದ ಉರಿಹಚ್ಚುವರು. ಮತ್ತೊಂದು ಕಡೆ ತನ್ನ ದೇಹದ ಮಾಂಸವನ್ನು ತಾನೇ ಕಿತ್ತು ತಿನ್ನುವನು. ಇನ್ನೊಂದೆಡೆ ಇತರರು ಕಿತ್ತು ತಿನ್ನುವರು. ಬೇರೊಂದೆಡೆ ನಾಯಿ ಹದ್ದು ಮೊದಲಾದ ಪ್ರಾಣಿಗಳು ಅವನ ಯಾತನಾದೇಹದಿಂದ ನರಗಳನ್ನು ಕಿತ್ತಿ ಎಳೆಯುತ್ತಿರುವುವು. ಮತ್ತೊಂದು ನರಕದಲ್ಲಿ ತಮ್ಮ ಹಿಂದಿನ ಹಿಂಸೆಯ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ (ಎಂಬಂತೆ) ಹಾವು ಚೇಳು ತಿಗಣೆ ಮೊದಲಾದುವು ದೇಹವನ್ನು ಕಚ್ಚಿ ಚೂರು ಚೂರು ಮಾಡುವುವು. ಮತ್ತೊಂದು ಪ್ರದೇಶದಲ್ಲಿ ಆನೆ ಮೊದಲಾದ ಕ್ರೂರಪ್ರಾಣಿಗಳು ಅಟ್ಟಿಸಿಕೊಂಡು ಬರುವುವು. ಇನ್ನೊಂದು ನರಕದಲ್ಲಿ ಬೆಟ್ಟದ ಶಿಖರಗಳಿಂದ ಕೆಳಕ್ಕೆ ತಳ್ಳುವರು. ಇನ್ನೊಂದು ಸ್ಥಳದಲ್ಲಿ ಸರಪಳಿಯಿಂದ ಕಟ್ಟಿಹಾಕಿರುವರು. ಮಲಮೂತ್ರಗಳ ಹಳ್ಳಗಳಲ್ಲಿ ತಳ್ಳುವರು. ಯಾತನೆಗಳನ್ನು ಎಷ್ಟೆಂದು ಹೇಳೋಣ ! ಗಂಡುಸಾಗಲಿ, ಹೆಂಗುಸಾಗಲಿ ವಿಷಯಾಸಕ್ತರಾಗಿ ಪರಸ್ಪರ ಬೆರೆತು ತಮ್ಮ ತಮ್ಮ ಪಾಪಗಳ ಸಲುವಾಗಿ ತಮಸ್ಸು, ಅಂಧತಮಸ್ಸು, ರೌರವ ಮೊದಲಾದ ಅನೇಕ ನರಕಗಳನ್ನು ಅನುಭವಿಸುವರು. ಇವೆಲ್ಲವೂ ಪಾಪಿಗಳ ಶಿಕ್ಷೆಗಾಗಿ ಶ್ರೀಹರಿಯಿಂದ ನಿರ್ಮಿತವಾಗಿರುವುವು.

ಅಮ್ಮಾ ! ನರಕ ಸ್ವರ್ಗಗಳು ಬಹುದೂರವೆಂದು ತಿಳಿಯಬೇಡ. ನರಕದಲ್ಲಿಅನುಭವಿಸುವ ಯಾತನೆಗಳನ್ನು ಇಲ್ಲಿಯೂ ರಾಜಭಟರು ಅಪರಾಧಿಗಳನ್ನು ಶಿಕ್ಷಿಸುವಲ್ಲಿ ಕಾಣಬಹುದು. ಅಪರಾಧಿಗಳಾದ ಸ್ವರ್ಗವಾಸಿಗಳೂ ಈ ಬಗೆಯ ಶಿಕ್ಷೆಗೆ ಒಳಗಾಗುವರು. ಕುಟುಂಬವನ್ನು ತಾನೇ ರಕ್ಷಿಸುವೆನೆಂದು ತಿಳಿದಿರುವವನೂ, ತನ್ನ ಹೊಟ್ಟೆಯನ್ನು ಮಾತ್ರ ಹೊರೆದುಕೊಳ್ಳುವವನೂ ಸತ್ತಮೇಲೆ ಇವೆರಡನ್ನೂ ಇಲ್ಲಿಯೇ ಬಿಟ್ಟುಹೋಗುವರು. ಮತ್ತು ಅವುಗಳ ಫಲವಾಗಿ ಮೇಲೆ ಹೇಳಿದ ನರಕಯಾತನೆಗಳನ್ನು ಅನುಭವಿಸುವರು. ಜೊತೆಯ ಪ್ರಾಣಿಗಳನ್ನು ವಂಚಿಸಿ ಬೆಳೆಸಿಕೊಂಡ ಇವನ ದೇಹವು ಇಲ್ಲಿಯೇ ಬಿದ್ದುಹೋಗುವುದು. ಮಾಡಿದ ಪಾಪ(ಪುಣ್ಯ)ಗಳು ಮಾತ್ರ ಇವನನ್ನು ಅನುಸರಿಸುವುವು. ಕರ್ಮಫಲದಾತನಾದ ಶ್ರೀಹರಿಯು ಗಂಟುಹಾಕಿದ ಈ ಕರ್ಮಗಳನ್ನು ಬಿಟ್ಟುಹೋಗಲು ಸಾಧ್ಯವಿಲ್ಲ. ಐಹಿಕದಲ್ಲಿ ದೈವಿಕವಾಗಿ ಒದಗಿದ ದ್ರವ್ಯನಾಶ, ರೋಗ ಮುಂತಾದ ದುಃಖಗಳನ್ನು ಬಿಡದೆ ಅನುಭವಿಸುವಂತೆ ಪಾಪದ ಫಲವಾಗಿ ನರಕಗಳನ್ನೂ ಅನುಭವಿಸಲೇ ಬೇಕಾಗುವುದು.

ತಮಸ್ಸು, ಅಂಧತಮಸ್ಸು ಎಂಬೀ ನಿತ್ಯ ನರಕಗಳು. ಇಲ್ಲಿ ಎಲ್ಲಿ ನೋಡಿದರೂ ಕಗ್ಗತ್ತಲೆ. ಇಲ್ಲಿಂದ ಮತ್ತೆ ಹಿಂತಿರುಗುವ ಪ್ರಸಂಗವೇ ಇಲ್ಲ. ಸ್ವರೂಪತಃ ದೈತ್ಯರಾದ ಜೀವರು ಈ ನರಕಗಳನ್ನು ಹೊಂದಲು ಯೋಗ್ಯರು. ತಾವೇ ಸ್ವತಂತ್ರ(ಬ್ರಹ್ಮ)ರೆಂದು ತಿಳಿದು ಸಂಸಾರಾವಸ್ಥೆಯಲ್ಲಿ ಕುಟುಂಬ ಪೋಷಣೆಯಲ್ಲಿಯೇ ರತರಾಗಿ ಶ್ರೀಹರಿಯನ್ನೂ ಅವನ ಭಕ್ತರನ್ನೂ ದ್ವೇಷಿಸಿ ಪಾಪಕರ್ಮಗಳನ್ನೇ ಮಾಡುವರು. ಇವರ ಕರ್ಮಗಳಲ್ಲಿ ಭಕ್ತಿಯ ಸಂಬಂಧವೇ ಇರುವುದಿಲ್ಲ. ಇಂತಹವರಿಗೆ ಈ ಎರಡು ನರಕಗಳೇ ಗಮ್ಯಸ್ಥಳಗಳು. ಅವರಲ್ಲಿಯೂ ದ್ವೇಷದಲ್ಲಿ ತಾರತಮ್ಯವಿದೆಯಾಗಿ ಈ ನರಕಗಳ ದುಃಖಾನುಭವದಲ್ಲಿಯೂ ತಾರತಮ್ಯವುಂಟು.

ಅವನವನ ಕರ್ಮಾನುಗುಣವಾಗಿ ವಿವಿಧ ನರಕಯಾತನೆಗಳನ್ನೂ ಅನುಭವಿಸಿದ ಮೇಲೆ ಶುದ್ಧನಾದ ಜೀವನು ಮತ್ತೆ ತನ್ನ ಕರ್ಮಾನುಗುಣವಾದ ಯೋನಿಯಲ್ಲಿ ಜನಿಸುವನು. ಅಲ್ಲಿಯೂ ಪುಣ್ಯಮಾಡಿದರೆ ಸ್ವರ್ಗವನ್ನೂ ಪಾಪಮಾಡಿದರೆ ಮತ್ತೆ ನರಕವನ್ನೂ ಹೊಂದುವನು. ಹೀಗೆ ಸ್ವರ್ಗ ಭೂ ನರಕಗಳನ್ನು ಸುತ್ತುತ್ತಲೇ ಇರುವನು.



# ಅಥ ದ್ವಾತ್ರಿಂಶೋಽಧ್ಯಾಯಃ

ಈ ಅಧ್ಯಾಯದಲ್ಲಿ ವೈರಾಗ್ಯ ಹುಟ್ಟಿಸಲು ಮತ್ತು ಗರ್ಭವಾಸನಿಮಿತ್ತ ದುಃಖವನ್ನು ತಿಳಿಸಲು ಮೊದಲಿಗೆ ಗರ್ಭ ಪ್ರಾಪ್ತಿಯ ಪ್ರಕಾರವನ್ನು ಹೇಳುವರು-

**ಶ್ರೀಭಗವಾನುವಾಚ -**

**ಕರ್ಮಣಾ ದೈವತಂತ್ರೇಣ ಜಂತುರ್ದೇಹೋಪಪತ್ತಯೇ ।**
**ಸ್ತ್ರಿಯಾಃ ಪ್ರವಿಷ್ಟ ಉದರಂ ಪುಂಸೋ ರೇತಃಕಣಾಶ್ರಯಃ ॥೧॥**

ನರಕದಲ್ಲಿ ಕರ್ಮಫಲವನ್ನನುಭವಿಸಿ ಮಳೆಯರೂಪದಿಂದ ಮನುಷ್ಯಲೋಕಕ್ಕೆ ಬಂದು ವ್ರೀಹಿ ಮುಂತಾದ ಇತರ ಜೀವರ ದೇಹದಲ್ಲಿ ಬಂದು, ನಂತರ ದೈವತಂತ್ರೇಣ=ಭಗವದಧೀನವಾದ, ಕರ್ಮಣಾ=ಪೂರ್ವಕರ್ಮಾನುಸಾರವಾಗಿ, ಜಂತುಃ=ಜೀವನು, ದೇಹೋಪಪತ್ತಯೇ=ಶರೀರವನ್ನು ಹೊಂದುವುದಕ್ಕಾಗಿ, ಪುಂಸಃ=ಪುರುಷನ, ರೇತಃಕಣಾಶ್ರಯಃ=ಪುರುಷನು ಉಂಡ ಅನ್ನದ ಪರಿಣಾಮವಾದ ವೀರ್ಯದ ಬಿಂದುವಿನೊಳಗಿದ್ದು(ರೇತಬಿಂದುಪ್ರವೇಶರೂಪದಿಂದ) ಋತುಕಾಲ-ದಲ್ಲಿ ಯೋನಿಯದ್ವಾರಾ, ಸ್ತ್ರಿಯಾಃ ಉದರಂ ಪ್ರವಿಷ್ಟಃ ಭವತಿ=ಸ್ತ್ರೀಯ ಉದರವನ್ನು ಪ್ರವೇಶಿಸುವನು. ॥೧॥

ಸ್ತ್ರೀಯ ಉದರವನ್ನು ಪ್ರವೇಶಿಸಿದ ರೇತಸ್ಸು ಕಾಲಕ್ರಮದಿಂದ ಶರೀರಾಕಾರವಾಗಿ ಪರಿಣಾಮವಾಗುವ ರೀತಿಯನ್ನು ಹೇಳುವರು-

**ಕಲಿಲಂ ತ್ವೇಕರಾತ್ರೇಣ ಪಂಚರಾತ್ರೇಣ ಬುದ್ಬುದಮ್ ।**
**ದಶಾಹೇನ ತು ಕರ್ಕಂಧುಃ ಪೇಶ್ಯಂಡಂ ವಾ ತತಃ ಪರಮ್ ॥೨॥**

ಏಕರಾತ್ರೇಣ ಕಲಿಲಂ=ಒಂದು ರಾತ್ರಿಯಲ್ಲಿ ಪುರುಷನ ರೇತಸ್ಸು ಸ್ತ್ರೀಯ ರಕ್ತದೊಡನೆ ಮಿಶ್ರಿತವಾಗುವುದು (ತುಶಬ್ದದಿಂದ ಬಂಜೆಯ ಶೋಣಿತಮಿಶ್ರೀ ಭಾವದಿಂದ ವಿಶೇಷ ತಿಳಿಸುವರು.) ನಿರ್ಯಾಸತುಲ್ಯವಾಗುವುದು, ಪಂಚರಾತ್ರೇಣ ಬುದ್ಬುದಂ=ಐದು ದಿನಕ್ಕೆ ವರ್ತುಲಾಕಾರವಾಗುವುದು,(ನೀರಿನಗುಳ್ಳೆಯಂತೆ) ದಶಾಹೇನ ಕರ್ಕಂಧುಃ=ಹತ್ತು ದಿನದಲ್ಲಿ ಸ್ವಲ್ಪಗಟ್ಟಿಯಾಗಿ ಬೋರೆ ಹಣ್ಣಿನಂತೆ (ಕಬ್ಬಿಣದ ಗುಂಡಿನಂತೆ) ಆಗುವುದು, ತತಃ ಪರಂ=ನಂತರ, ಪೇಶೀಭವತಿ

ಮನುಷ್ಯನಾಗುವುದಿದ್ದಾಗ ಜರಾಯುವಿನಿಂದ ಸುತ್ತಲ್ಪಡುವುದು, ಪಕ್ಷಿಯಾಗುವು- ದಿದ್ದಾಗ ಅಂಡಂ ಭವತಿ=ತತ್ತಿಯಾಗುವುದು. ಮಾಂಸಖಂಡ ಉಳ್ಳದ್ದಾಗುವುದು ಎಂದು ವಿಜಯಧ್ವಜೀಯ.

ಇಲ್ಲಿ ಮನುಷ್ಯಗರ್ಭವೇ ವಿಕಲ್ಪದಿಂದ ಅಂಡವಾಗುವುದು ಎಂದು ಹೇಳಿದಂತೆ ತೋರುವುದು. ಅದು ಸರಿಯಲ್ಲ. ಅಂಡವಾಗುವುದು ಪಕ್ಷಿಯ ಗರ್ಭ, ಆದ್ದರಿಂದ 'ಅಂಡಂ ವಾ' ಎಂದು ಪಕ್ಷಾಂತರ ಹೇಳಿದ್ದರ ಅಭಿಪ್ರಾಯ ಹೇಳುವರು –

**ನಾನಾವಿಧಾ ಗರ್ಭವೃದ್ಧಿಃ ಕರ್ಮಭೇದಾದ್ಭವಿಷ್ಯತಿ ।**
**ಅತೋ ನಾನಾವಿಧಂ ಗ್ರಂಥೇ ಗರ್ಭಸಂಸ್ಥಾನಮುಚ್ಯತೇ ॥ಇತಿ ಷಾಡ್ಗುಣ್ಯೇ**

"ಕರ್ಮವು ಬೇರೆಯಾದಂತೆ ಮನುಷ್ಯನಿಗೆ ಪಕ್ಷಿ ಮುಂತಾಗಿ ಅನೇಕ ಗರ್ಭಗಳು ಆಗುವುವು. ಆದ್ದರಿಂದ ಗ್ರಂಥಗಳಲ್ಲಿ ಅಂಡ, ಪೇಶಿ ಮುಂತಾಗಿ ಗರ್ಭವೃದ್ಧಿಯು ಹೇಳಲ್ಪಡುವುದು" ಎಂದು ಷಾಡ್ಗುಣ್ಯದಲ್ಲಿದೆ. ಕಾರಣ ಪಕ್ಷಿಯ ಗರ್ಭದದೃಷ್ಟಿಯಿಂದ ಅಂಡಂ ವಾ ಎಂದು ಪಕ್ಷಾಂತರ ಹೇಳಿರುವರು. ಕಾರಣ ವಿರೋಧವಿಲ್ಲ ಎಂದು ಭಾವ. ॥೨॥

**ಮಾಸೇನ ತು ಶಿರೋ ದ್ವಾಭ್ಯಾಂ ಬಾಹ್ವಂಘ್ರ್ಯಾದ್ಯಂಗವಿಗ್ರಹಃ ।**
**ನಖರೋಮಾಸ್ಥಿಚರ್ಮಾಣಿ ಲಿಂಗಚ್ಛಿದ್ರೋದ್ಭವಸ್ತ್ರಿಭಿಃ ॥೩॥**

ಮಾಸೇನ=ಒಂದು ತಿಂಗಳಿಂದ, ಶಿರಃ=ತಲೆಯುಂಟಾಗುವುದು, ದ್ವಾಭ್ಯಾಂ= ಎರಡು ತಿಂಗಳಾದರೆ, ಬಾಹು=ಕೈಗಳು, ಅಂಘ್ರಿ=ಕಾಲುಗಳು, ಆದಿ=ಮುಂತಾದ, ಅಂಗ=ಅವಯವವುಳ್ಳ, ವಿಗ್ರಹಃ=ದೇಹವು ಆಗುವುದು, ತ್ರಿಭಿಃ=ಮೂರು ತಿಂಗಳಾದಾಗ, ನಖ=ಉಗುರು, ರೋಮ=ಕೂದಲು, ಅಸ್ಥಿ=ಎಲುಬು, ಚರ್ಮಾಣಿ =ಚರ್ಮಗಳುಂಟಾಗವುವು, ಲಿಂಗ=ಪುರುಷ ಮತ್ತು ಸ್ತ್ರೀಚಿಹ್ನೆಗಳು, ಛಿದ್ರ=ಇಂದ್ರಿಯ ದ್ವಾರಗಳ, ಉದ್ಭವಃ=ಉತ್ಪತ್ತಿಯು ಆಗುವುದು. ॥೩॥

**ಚತುರ್ಭಿರ್ಧಾತವಃ ಸಪ್ತ ಪಂಚಭಿಃ ಕ್ಷುತ್ತೃಡುದ್ಭವಃ ।**
**ಷಡ್ಭಿರ್ಜರಾಯುಣಾ ವೀತಃ ಕುಕ್ಷೌ ಭ್ರಮತಿ ದಕ್ಷಿಣೇ ॥೪॥**

ಚತುರ್ಭಿಃ=ನಾಲ್ಕು ತಿಂಗಳಿಗೆ, ಸಪ್ತ ಧಾತವಃ=ಏಳು ಧಾತುಗಳುಂಟಾಗುವುವು, ಪಂಚಭಿಃ=ಐದು ತಿಂಗಳಾದಾಗ, ಕ್ಷುತ್=ಹಸಿವೆ, ತೃಟ್=ನೀರಡಿಕೆಯು, ಉದ್ಭವಃ= ಉತ್ಪತ್ತಿಯು ಆಗುವುದು, ಷಡ್ಭಿಃ=ಆರು ತಿಂಗಳಿಗೆ ಜರಾಯುಣಾ, ವೀತಃ=ಜರಾಯು ಎಂಬ ಚರ್ಮದ ಹೊದಿಕೆಯಿಂದ ಸುತ್ತಲ್ಪಟ್ಟವನಾಗಿ, ಕುಕ್ಷೌ=ತಾಯಿಯ ಹೊಟ್ಟೆಯಲ್ಲಿ, ದಕ್ಷಿಣೇ ಭ್ರಮತಿ=ಬಲಕ್ಕೆ ಚಲಿಸುವನು. ॥೪॥

**ಸಪ್ತಮೇ ಜನ್ಮಕರ್ಮಾಣಿ ಗತಾನಿ ಸ್ಮರತೇ ಋಷಿಃ ।**
**ಜಗತ್ಯಾಂ ಯಾನಿ ದೇವಸ್ಯ ಮಾಯಯಾ ಬಂಧಮಾತ್ಮನಃ ॥೫॥**

ಸಪ್ತಮೇ=ಏಳನೇ ತಿಂಗಳಲ್ಲಿ, ಋಷಿಃ=ಜ್ಞಾನವುಳ್ಳ ಜೀವನು, ಜಗತ್ಯಾಂ= ಕರ್ಮಭೂಮಿಯಲ್ಲಿ, ಯಾನಿ ಗತಾನಿ ಜನ್ಮಾನಿ=ಕಳೆದು ಹೋದ ಜನ್ಮಗಳನ್ನು, ಕರ್ಮಾಣಿ=ತಾನು ಮಾಡಿದ ಕರ್ಮಗಳನ್ನೂ ದೇವಸ್ಯ=ಶ್ರೀಹರಿಯ ಮಾಯಯಾ =ಇಚ್ಛೆಯಿಂದ ಆತ್ಮನಃ=ತನಗೆ ಬಂದ ಬಂಧಂ=ಸುಖದುಃಖಾನುಭವಗಳನ್ನು ಸ್ಮರತೇ=ನೆನೆಯುವನು. (ಜ್ಞಾಪಿಸಿಕೊಳ್ಳುವನು) ॥೫॥

**ಮಾತುರ್ಜಗ್ಧಾನ್ನಪಾನಾದ್ಯೈರೇಧತ್ಯಾತುರಸಮ್ಮತಃ ।**
**ಆಸ್ತೇ ವಿಣ್ಮೂತ್ರಯೋರ್ಗರ್ತೇ ಸ ಜಂತುರ್ಜಂತುಸಂಭವೇ ॥೬॥**

ಸಃ ಜಂತುಃ=ಆ ಜೀವನು, ಮಾತುಃ ಜಗ್ಧಾನ್ನಪಾನಾದ್ಯೈಃ=ತಾಯಿಯು ತಿಂದ ಅನ್ನ ಪಾನಾದಿಗಳಿಂದ, ಆತುರಸಮ್ಮತಃ=ರೋಗಿಯಂತೆ (ಅವನು ಹೇಗೆ ಬೇರೆಯವರಿಂದ ತನ್ನ ಜೀವನ ಸಾಗಿಸುವನೋ ಹಾಗೆ) ಏಧತಿ= ಬೆಳೆಯುವನು, ಜಂತುಸಂಭವೇ=ಎಲ್ಲಿ ಹುಳಗಳು ಹುಟ್ಟುವವೋ ಅಂತಹ, ವಿಣ್ಮೂತ್ರಯೋಃ ಗರ್ತೇ=ಮಲಮೂತ್ರಗಳ ಕೂಪದಲ್ಲಿ ಆಸ್ತೇ=ಇರುವನು.

ತಾಯಿಯು ತಿಂದ ಅನ್ನಾದಿಗಳು, 'ಆಪ್ಯಾಯನೀ' ಎಂಬ ನಾಡಿಯು ಹೊಕ್ಕಳಿಂದ ಹುಟ್ಟಿ ಜರಾಯು ಮತ್ತು ಉಲ್ಬಗಳನ್ನು ಭೇದಿಸಿಕೊಂಡು ಇವನ ಮುಖಕ್ಕೆ ಸಂಬಂಧವಾದ ತುಟಿಗಳಿಗೆ ಹೊಂದಿ ಕಮಲದದೇಟಿನಂತೆ ಇದ್ದು ಅದರ ದ್ವಾರಾ ಪ್ರವೇಶಿಸುವುವು. ॥೬॥

**ಕೃಮಿಭಿಃ ಕ್ಷತಕಂಡ್ವಂಗಃ ಸೌಕುಮಾರ್ಯಾತ್ ಪ್ರತಿಕ್ಷಣಂ ।**
**ಮೂರ್ಚ್ಛಾಮಾಪ್ನೋತ್ಯುರುಕ್ಲೇಶಸ್ತತ್ರತ್ಯೈಃ ಕ್ಷುಧಿತೈರ್ಮುಹುಃ ॥೭॥**

ತತ್ರತ್ಯೈಃ=ಆ ಮಲಮೂತ್ರಕೂಪದಲ್ಲಿರುವ, ಕ್ಷುಧಿತೈಃ=ಹಸಿದ, ಕೃಮಿಭಿಃ= ಹುಳಗಳಿಂದ, ಕ್ಷತಕಂಡ್ವಂಗಃ=ಗಾಯ, ತಿಂಡಿಗಳುಳ್ಳ ಅವಯವವುಳ್ಳವನಾಗಿ, ಸೌಕುಮಾರ್ಯಾತ್=ಕೋಮಲವಾದ್ದರಿಂದ, ಉರುಕ್ಲೇಶಃ=ಬಹಳ ದುಃಖವುಳ್ಳ-ವನಾಗಿ, ಪ್ರತಿಕ್ಷಣಂ=ಕ್ಷಣ ಕ್ಷಣದಲ್ಲಿಯೂ, ಮೂರ್ಚ್ಛಾಂ ಆಪ್ನೋತಿ=ಮೂರ್ಛೆ ಹೊಂದುವನು. ॥೭॥

**ಕಟುತೀಕ್ಷ್ಣೋಷ್ಣಲವಣಕ್ಷಾರಾಮ್ಲಾದಿಭಿರುಲ್ಬಣೈಃ ।**
**ಮಾತೃಭುಕ್ತೈರುಪಸ್ಪೃಷ್ಟಃ ಸರ್ವಾಂಗೋತ್ಥಿತವೇದನಃ ।೮॥**

ಮಾತೃಭುಕ್ತೈಃ=ತಾಯಿಯು ತಿಂದ, ಕಟು=ಖಾರವಾದ ಮೆಣಸಿನಕಾಯಿ ತೀಕ್ಷ್ಣ=ಸಾಸಿವೆ ಮುಂತಾದ ತೀಕ್ಷ್ಣಪದಾರ್ಥಗಳು, ಉಷ್ಣ=ಬಿಸಿಯಾದ ಪದಾರ್ಥ-ಗಳು, ಲವಣ=ಉಪ್ಪು, ಕ್ಷಾರ=ಚೂರ್ಣಮುಂತಾದವು (ದಗ್ಧಮತ್ಸ್ಯಾಸ್ಥಿ ಚೂರ್ಣ) ಆಮ್ಲ=ಹುಳಿಯಾದ ಮಾವು, ಹುಣಸೆ ಮುಂತಾದವು, ಉಲ್ಬಣೈಃ=ಕ್ರೂರವಾದ-ವುಗಳಿಂದ, ಉಪಸ್ಪೃಷ್ಟಃ=ತಗಲಿದವನಾಗಿ, ಸರ್ವಾಂಗೋತ್ಥಿತವೇದನಃ=ಎಲ್ಲ ಅವಯವಗಳಲ್ಲಿ ನೋವುಂಟಾದವನಾಗಿ, ॥೮॥

**ಉಲ್ಬೇನ ಸಂವೃತಸ್ತಸ್ಮಿನ್ನಾಂತ್ರೈಶ್ಚ ಬಹಿರಾವೃತಃ ।**
**ಆಸ್ತೇ ಕೃತ್ವಾ ಶಿರಃ ಕುಕ್ಷೌ ಭುಗ್ನಪೃಷ್ಠಶಿರೋಧರಃ ॥೯॥**

ಉಲ್ಬೇನ=ಜರಾಯುವಿನಿಂದ, ಸಂವೃತಃ=ಸುತ್ತುವರೆದು, ಬಹಿಃ=ಹೊರಗೆ, ಆಂತ್ರೈಶ್ಚ ಆವೃತಃ=ಕರಳುಗಳಿಂದ ಸುತ್ತುವರಿದು, ಭುಗ್ನಪೃಷ್ಠಶಿರೋಧರಃ= ಕುಂಡಲಾಕಾರವಾಗಿ ಮಾಡಿದ ಬೆನ್ನು ಕುತ್ತಿಗೆಗಳುಳ್ಳವನಾಗಿ, ಕುಕ್ಷೌ=ಹೊಟ್ಟೆಯಲ್ಲಿ, ಶಿರಃ ಕೃತ್ವಾ=ತನ್ನತಲೆಯನ್ನು ಇರಿಸಿ, ತಸ್ಮಿನ್ ಆಸ್ತೇ=ಗರ್ಭದಲ್ಲಿರುವನು. ॥೯॥

**ಅಕಲ್ಪಃ ಸ್ವಾಂಗಚೇಷ್ಟಾಯಾಂ ಶಕುಂತ ಇವ ಪಂಜರೇ ।**
**ತತ್ರ ಲಬ್ಧಸ್ಮೃತಿರ್ದೈವಾತ್ ಕರ್ಮ ಜನ್ಮಶತೋದ್ಭವಂ ॥**
**ಸ್ಮರನ್ ದೀರ್ಘಮನುಚ್ಛ್ವಾಸಂ ಗರ್ಭೇ ಕಿಂ ನಾಮ ವಿಂದತೇ ॥೧೦॥**

ಸ್ವಾಂಗಚೇಷ್ಟಾಯಾಂ=ತನ್ನ ಅವಯವಗಳನ್ನು ಅಲುಗಾಡಿಸಲು, ಅಕಲ್ಪಃ= ಅಸಮರ್ಥನಾಗಿ, ಪಂಜರೇ=ಪಂಜರದಲ್ಲಿ ಶಕುಂತ ಇವ=ರೆಕ್ಕ ಬರದ ಹಕ್ಕಿಯಂತೆ. (ಅರ್ಧ ಬಂದ ರೆಕ್ಕೆಯುಳ್ಳ ಪಕ್ಷಿಯಂತೆ) ದೈವಾತ್=ಪುಣ್ಯದಿಂದ, ಲಬ್ಧಸ್ಮೃತಿಃ= ಎಚ್ಚರ ಬಂದವನಾಗಿ ಜನ್ಮಶತೋದ್ಭವಂ=ನೂರು ಜನ್ಮದಲ್ಲಿ ಮಾಡಿದ, ಕರ್ಮ= ಪುಣ್ಯ ಪಾಪಸಾಧನವಾದ ಕ್ರಿಯೆಗಳನ್ನು, ಸ್ಮರನ್=ಜ್ಞಾಪಿಸಿಕೊಳ್ಳುತ್ತ, ದೀರ್ಘಂ ಅನುಶ್ವಾಸಂ ಕುರ್ವನ್=ನಿಟ್ಟುಸಿರು ಬಿಡುತ್ತ, ತತ್ರ ಗರ್ಭೇ ಕಿಂ ನಾಮ ವಿಂದತೇ=ಆ ಗರ್ಭದಲ್ಲಿ ಏನು ಸುಖವನ್ನು ಹೊಂದಿಯಾನು ? ಯಾವ ಸುಖವನ್ನೂ ಹೊಂದಲಾರನೆಂದರ್ಥ. ॥೧೦॥

**ಆರಭ್ಯ ಸಪ್ತಮಾನ್ಮಾಸಾಲ್ಲಬ್ಧಬೋಧೋಽಪಿ ವೇಪಿತಃ ।**
**ನೈಕತ್ರಾಸ್ತೇ ಸೂತಿವಾತೈರ್ವಿಷ್ಠಾಭೂರಿವ ಸೋದರಃ ॥೧೧॥**

ಲಬ್ಧಬೋಧೋಽಪಿ=ಜ್ಞಾನಪಡೆದಿದ್ದರೂ, ಸೂತಿವಾತೈಃ=ಪ್ರಸವಕಾರಣವಾದ ಗಾಳಿಯಿಂದ, ವೇಪಿತಃ=ನಡುಗಿಸಲ್ಪಟ್ಟು, ಸೋದರಃ=ಒಂದೆ ಹೊಟ್ಟೆಯಲ್ಲಿರುವ,

ವಿಷ್ಠಾಭೂರಿವ=ಮಲದಲ್ಲಿಯ ಕ್ರಿಮಿಯಂತೇ, ಸಪ್ತಮಾತ್ ಮಾಸಾತ್ ಆರಭ್ಯ=ಏಳನೇ ತಿಂಗಳಿಂದ ಆರಂಭಿಸಿ, ನ ಏಕತ್ರ ಆಸ್ತೇ=ಒಂದೆಡೆ ನಿಲ್ಲಲಾರನು. ('ಸೂದರಃ' ನನಗೆ ಏನಾದೀತು ಎಂಬ ಸಂಶಯದಿಂದ ಕೂಡಿದ ಜೀವನು ಎಂದರ್ಥ ವಿಜಯಧ್ವಜೀಯ) ॥೧೧॥

**ನಾಥಮಾನೋ ಋಷಿರ್ಭೀತಃ ಸಪ್ತವಧ್ರಿಃ ಕೃತಾಂಜಲಿಃ ।**
**ಸ್ತುವೀತ ತಂ ವಿಕ್ಲವಯಾ ವಾಚಾ ಯೇನೋದರೇಽರ್ಪಿತಃ ॥೧೨॥**

ಭೀತಃ=ಮತ್ತೆ ಗರ್ಭವಾಸ ಬರುವುದೆಂದು ಹೆದರಿದ, ಸಪ್ತವಧ್ರಿಃ=ಮನಸ್ಸು ಬುದ್ಧಿ ಸಹಿತವಾದ ಐದು ಜ್ಞಾನೇಂದ್ರಿಯಗಳುಳ್ಳ, ಋಷಿಃ=ಜ್ಞಾನಿಯು, ನಾಥಮಾನಃ=ಈ ವಿಧ ಗರ್ಭವಾಸ ಇನ್ನೊಂದು ಬಾರಿ ಬರುವುದು ಬೇಡವೆಂದು ಬೇಡಿಕೊಳ್ಳುವನಾಗಿ, ಕೃತಾಂಜಲಿಃ=ಕೈಜೋಡಿಸಿ, ವಿಕ್ಲವಯಾ ವಾಚಾ=ವ್ಯಾಕುಲವಾದ ಅಥವಾ ಕೇಳುವರಿಗೆ ಇಂಪಾದ, ವಾಚಾ=ಮಾತಿನಿಂದ, ಯೇನ=ಯಾವ ಶ್ರೀಹರಿಯಿಂದ, ಉದರೇ ಅರ್ಪಿತಃ=ಗರ್ಭದಲ್ಲಿರಿಸಲ್ಪಟ್ಟನೋ, ತಂ=ಅವನನ್ನು ಸ್ತುವೀತ=ಸ್ತೋತ್ರ ಮಾಡುವನು.

ಇಲ್ಲಿ ವಧ್ರಿಶಬ್ದಾರ್ಥ ತಿಳಿಸುವರು–

**ವಧ್ರಯಸ್ತ್ವಿಂದ್ರಿಯಾಣ್ಯಾಹುಃ ಹೃಷೀಕಾಣೀತಿ ಚೋಚ್ಯತೇ ।**
**ಇತಿ ಶಬ್ದ ನಿರ್ಣಯೇ ।**

ವಧ್ರಿ ಎಂದರೆ ಇಂದ್ರಿಯಗಳು ಎಂದು ಜ್ಞಾನಿಗಳು ಹೇಳುವರು. ಹೃಷೀಕ ಎಂದೂ ಹೇಳುವರು. ॥೧೨॥

**ಜೀವ ಉವಾಚ**

**ತಸ್ಯೋಪಸನ್ನಮವಿತುರ್ಜಗದಿಚ್ಛಯಾತ್ತ-**
**ಲೀಲಾತನೋರ್ಭುವಿ ಲಸಚ್ಚರಣಾರವಿಂದಮ್ ।**
**ಸೋಽಹಂ ವ್ರಜಾಮಿ ಶರಣಂ ನಕುತೋಭಯಂ ಮೇ**
**ಯೇನೇದೃಶೀ ಗತಿರದರ್ಶ್ಯಸತೋಽನುರೂಪಾ ॥೧೩॥**

ಸಃ ಅಹಂ=ಯಾವ ನಾನು, ಅದೃಷ್ಟವಶಾತ್=ಜ್ಞಾನಪಡೆದಿರುವೆನೊ ಅಂಥ ನಾನು, ಯೇನ=ಯಾವ ಶ್ರೀಹರಿಯಿಂದ, ಅಸತಃ ಮೇ=ಅಶುಭನಾದ ನನಗೆ, ಅನೂರೂಪಾ=ಯೋಗ್ಯವಾದ, ಈದೃಶೀ ಗತಿಃ=ಗರ್ಭವಾಸರೂಪವಾದ ಸ್ಥಿತಿಯು, ಅದರ್ಶಿ=ತೋರಿಸಲ್ಪಟ್ಟಿತೋ, ತಸ್ಯ=ಅಂಥಹ, ಉಪಸನ್ನಂ=ಶರಣಾಗತವಾದ,

ಜಗತ್=ಪ್ರಪಂಚವನ್ನು ಅವಿತುಃ=ರಕ್ಷಿಸುವ, (ಅವಿತುಂ=ರಕ್ಷಿಸಲು) ಇಚ್ಛಯಾ= ಭಕ್ತರಿಗೆ ಅನುಗ್ರಹ ಮಾಡುವ ಇಚ್ಛೆಯಿಂದ, ಭುವಿ=ಭೂಮಿಯಲ್ಲಿ ಆತ್ತ= ಸ್ವೀಕರಿಸಲ್ಪಟ್ಟ ಲೀಲಾತನೋಃ=ಲೀಲಾವತಾರವುಳ್ಳ ಭಗವಂತನ, ನಕುತೋಭಯಂ =ಯಾರಿಂದಲೂ ಭಯ ಬರದಂತೆ ಮಾಡುವ, ಲಸಚ್ಚರಣಾರವಿಂದಂ=ಶೋಭಿಸುವ ಪಾದಕಮಲಗಳನ್ನು, ಶರಣಂ ವ್ರಜೇಮ=ಮೊರೆಹೋಗುವೆನು. ॥೧೩॥

ದೂರವಿರುವ ಅವನನ್ನು ಹೇಗೆ ಶರಣು ಹೋಗುವಿ ಎಂದರೆ ಹೇಳುವನು -

**ಯಸ್ತ್ವತ್ರ ಬದ್ಧ ಇವ ಕರ್ಮಭಿರಾವೃತಾತ್ಮಾ**
**ಭೂತೇಂದ್ರಿಯಾಶಯಮಯೀಮವಲಂಬ್ಯ ಮಾಯಾಂ ।**
**ಆಸ್ತೇ ವಿಶುದ್ಧಮವಿಕಾರಮಖಂಡಬೋಧ-**
**ಮಾತಪ್ಯಮಾನಹೃದಯೇಽವಸಿತಂ ತಮೇಮಿ ॥೧೪॥**

ಯಃ=ಯಾವನು, ಭೂತ=ಪಂಚಮಹಾಭೂತಗಳು, ಇಂದ್ರಿಯ=ದಶೇಂದ್ರಿ- ಯಗಳು, ಆಶಯ=ಮನಸ್ಸು, ಮಯೀಂ=ಇವುಗಳಾಗಿ ವಿಕೃತವಾದ, ಮಾಯಾಂ= ಪ್ರಕೃತಿಯನ್ನು, ಅವಲಂಬ್ಯ=ಪ್ರವರ್ತಕವಾಗಿ ಆಶ್ರಯಿಸಿ, ಅತ್ರ= ಈಶರೀರದಲ್ಲಿ ಕರ್ಮಭಿಃ=ಪುಣ್ಯಪಾಪಗಳಿಂದ, ಆವೃತಾತ್ಮಾ=ಆವರಿಸಲ್ಪಟ್ಟ ಸ್ವರೂಪವುಳ್ಳ, ಬದ್ಧಃ ಇವ=ಸಂಸಾರಿಜೀವನಂತೆ, ಆಸ್ತೇ=ಇರುವನೋ, ತಂ=ಅಂಥ, ವಿಶುದ್ಧಂ= ಅತ್ಯಂತ ಶುದ್ಧನಾದ, ಅಖಂಡಬೋಧಂ=ಅಪರಿಚ್ಛಿನ್ನಜ್ಞಾನವುಳ್ಳ ಅವಿಕಾರಂ=ವಿಕಾರರಹಿತನಾದ, ಆತಪ್ಯಮಾನಹೃದಯೇ ಅವಸಿತಂ=ತಾಪತ್ರಯಗಳಿಂದ ಬಳಲುವ ನನ್ನ ಹೃದಯದಲ್ಲಿ ತಾಪರಹಿತನಾಗಿ ನಿಶ್ಚಿಂತನಾದ, (ಪ್ರಕಾಶಿತನಾದ) ತಂ ಏಮಿ=ಶ್ರೀಹರಿಯನ್ನು ಶರಣು ಹೋಗುವೆನು. ॥೧೪॥

ಇದನ್ನೇ ವಿವರಿಸುತ್ತ, ಪ್ರಕೃತಿ ಪುರುಷರನ್ನು ಬಿಟ್ಟು ಇವನನ್ನೇ ಏಕೆ ಸ್ತುತಿಸುವಿ? ಎಂಬ ಶಂಕೆಯನ್ನು ಪರಿಹಸುವನು -

**ಯಃ ಪಂಚಭೂತರಚಿತೇಽವಹಿತಃ ಶರೀರೇ**
**ಛನ್ನೋ ಯಥೇಂದ್ರಿಯಗುಣಾರ್ಥವಿದಾತ್ಮಕೋಽಹಂ ।**
**ತೇನಾವಿಕುಂಠಮಹಿಮಾನಮೃಷಿಂ ತಮೇನಂ**
**ವಂದೇ ಪರಂ ಪ್ರಕೃತಿಪೂರುಷಯೋಃ ಪುಮಾಂಸಂ ॥೧೫॥**

ಯಃ=ಯಾರು ಪಂಚಭೂತರಚಿತೇಶರೀರೇ=ಪಂಚಭೂತ ನಿರ್ಮಿತವಾದ ದೇಹದಲ್ಲಿ ಛನ್ನಃ ಸನ್=ಗೌಪ್ಯವಾಗಿ ಅವಹಿತಃ=ಪ್ರೇರಕನಾಗಿ ಇರುವನು ಯಥಾ=

ಯಥಾವತ್ತಾಗಿ ಇಂದ್ರಿಯಗುಣಾರ್ಥವಿತ್=ಇಂದ್ರಿಯಗಳನ್ನು, ಸತ್ವಾದಿ ಗುಣಗಳನ್ನು ಶಬ್ದಾದಿ ಅರ್ಥಗಳನ್ನು, ಪುರುಷಾರ್ಥಗಳನ್ನು ತಿಳಿದಿರುವ, ಪ್ರಕೃತಿ ಪುರುಷಯೋಃ ಪರಂ=ಶ್ರೀ, ಬ್ರಹ್ಮರಿಗಿಂತ ಉತ್ತಮನಾದ ಋಷಿಂ=ಸರ್ವಜ್ಞನಾದ ಅವಿಕುಂಠ-ಮಹಿಮಾನಂ=ಅಪ್ರತಿಹತಮಹಿಮೆಯುಳ್ಳ, ಪುಮಾಂಸಂ ತಂ ಏನಂ=ಶ್ರೀಹರಿಯನ್ನು ಆತ್ಮಕಃ ಅಹಂ=ಪರಮಾತ್ಮನ ಪ್ರತಿಬಿಂಬನಾದ ನಾನು, ಯಥಾ=ಹೇಗೆ ಶರೀರೇ ಭನ್ನಃ=ದೇಹದಲ್ಲಿರುವೆನೋ, ತಥಾ=ಹಾಗೆ, ಯಃ=ಯಾವನು, ಅವಹಿತಃ=ಪ್ರೇರಕ-ನಾಗಿರುವನೋ, ತಮೇನಂ=ಅವನನ್ನು, ತೇನ=ಹರಿಯಿಂದ ಪ್ರೇರಿತನಾಗಿ, ವಂದೇ =ಸ್ತುತಿಸುವೆನು. ॥೧೫॥

ಗರ್ಭದಿಂದ ಹೊರಬಂದು ಸಂಸಾರಮಾರ್ಗದಲ್ಲಿ ಸಂಚರಿಸುವ ನನಗೆ ಹರಿಸ್ಮೃತಿಯು ನಷ್ಟವಾಗುವುದು. ಅದು ಮತ್ತೆ ಮಹಾತ್ಮರ ಅನುಗ್ರಹದಿಂದ ಬರುವುದು. ಕಾರಣ ಮಹಾನುಭಾವರ ಅನುಗ್ರಹ ನನಗಿರಲಿ ಎಂದು ಹೇಳುವನು-

**ಯನ್ಮಾಯಯೋರುಗುಣಕರ್ಮನಿಬಂಧನೇಽಸ್ಮಿನ್**
**ಸಾಂಸಾರಿಕೇ ಪಥಿ ಚರಂಸ್ತದತಿಶ್ರಮೇಣ ।**
**ನಷ್ಟಸ್ಮೃತಿಃ ಪುನರಯಂ ಪ್ರವೃಣೀತಲೋಕೋ**
**ಯುಕ್ತ್ಯಾ ಕಯಾ ಮಹದನುಗ್ರಹಮಂತರೇಣ ॥೧೬॥**

ಯನ್ಮಾಯಯಾ=ಯಾವ ಶ್ರೀಹರಿಯ ಇಚ್ಛೆಯಿಂದ, ಉರುಗುಣಕರ್ಮ ನಿಂಬಂದನೇ=ಸತ್ವಾದಿಗುಣಗಳು ಮತ್ತು ಕರ್ಮಗಳೇ ಕಾರಣವಾಗಿವುಳ್ಳ, ಅಸ್ಮಿನ್= ಈ, ಸಂಸಾರಿಕೇ ಪಥಿ=ಸಂಸಾರಮಾರ್ಗದಲ್ಲಿ, ಚರನ್=ಸಂಚರಿಸುವ, ತದತಿಶ್ರಮೇಣ =ಸಂಸಾರಮಾರ್ಗದಿಂದುಂಟಾದ ಅತ್ಯಂತ ಕಷ್ಟದಿಂದ, ನಷ್ಟಸ್ಮೃತಿಃ=ಶ್ರೀಹರಿಯ ಜ್ಞಾನವನ್ನು ಕಳೆದುಕೊಂಡ, ಅಯಂ ಲೋಕಃ=ನಾನು, ಮಹದನುಗ್ರಹ-ಮಂತರೇಣ=ಮಹಾತ್ಮರ ಅನುಗ್ರಹದ ಹೊರತು, ಕಯಾ ಯುಕ್ತ್ಯಾ=ಯಾವ ಉಪಾಯದಿಂದ, ಪುನಃ ಪ್ರವೃತ್ತಃ=ಮತ್ತೆ ಶ್ರೀಹರಿಯ ಜ್ಞಾನವನ್ನು ಪಡದೇನು ? ಯಾವುದರಿಂದಲೂ ಪಡೆಯಲಾರೆನು. ಕಾರಣ ಮಹದನುಗ್ರಹವು ನನಗಿರಲಿ ಎಂದು ಭಾವ. ॥೧೬॥

ಎಲ್ಲ ಪುರುಷಾರ್ಥ ಸಾಧನವಾದ ಈ ಜ್ಞಾನ ಯಾರಿಂದ ನನಗೆ ಈಗ ಕೊಡಲ್ಪಟ್ಟಿದೆಯೋ ಅವನೇ ಗರ್ಭವಾಸ ನಿಮಿತ್ತವಾದ ತಾಪತ್ರಯಗಳ ಉಪಶಮನ ಮಾಡುವನು ಎಂದು ಹೇಳುವನು –

**ಜ್ಞಾನಂ ಯದೇತದದಧಾತ್ ಕತಮಃ ಸ ದೇವ-**
**ಸ್ತ್ರೈಕಾಲಿಕಂ ಸ್ಥಿರಚರೇಷ್ವನುವರ್ತಿತಾಂಶಃ ।**
**ತಂ ಜೀವಕರ್ಮಪದವೀಮನುವರ್ತಮಾನಾ-**
**ಸ್ತಾಪತ್ರಯೋಪಶಮನಾಯ ವಯಂ ಭಜೇಮ ॥೧೭॥**

ಯಃ ಕತಮಃ=ಯಾವ (ಪೂರ್ಣಸುಖನಾದ) ಸುಖಪೂರ್ಣನಾದ, ಸ್ಥಿರಚರೇಷ್ವನುವರ್ತಿತಾಂಶಃ=ಸ್ಥಾವರಜಂಗಮಗಳಲ್ಲಿ ಪ್ರೇರಣ ಮಾಡುವುದಕ್ಕಾಗಿ ಸ್ಥಾಪಿತವಾದ ರೂಪವುಳ್ಳವನೋ, ಸಃ ದೇವಃ=ಶ್ರೀಹರಿಯು, ಯತ್=ಯಾವ ಕಾರಣ, ತ್ರೈಕಾಲಿಕಂ ಏತತ್ ಜ್ಞಾನಂ ಮೇ ಅದಧಾತ್=ಅತೀತ ಜನ್ಮಾದಿ ವಿಷಯಕ ಈ ಜ್ಞಾನವನ್ನು ನನಗೆ ಇತ್ತಿರುವನೋ, ತಂ=ಪರಮೋಪಕಾರಿಯಾದ ಅವನನ್ನು, ಜೀವಕರ್ಮಪದವೀಂ ಅನುವರ್ತಮಾನಾಃ=ಜೀವರಿಗೆ ಬಂಧಕವಾದ ಪ್ರಾರಬ್ಧ ಕರ್ಮಮಾರ್ಗವನ್ನು ಅನುಸರಿಸುವ, ವಯಂ=ನಾವು, ತಾಪತ್ರಯೋಪಶಮನಾಯ=ತಾಪತ್ರಯಗಳ ನಾಶಕ್ಕಾಗಿ, ಭಜೇಮ=ಸೇವಿಸುವೆವು. ॥೧೭॥

ಗರ್ಭವಾಸವು ತಾಪತ್ರಯಸಾಧನವೆಂದು ತಿಳಿಸುತ್ತ ಗರ್ಭದಿಂದ ಹೊರಗೆ ಹಾಕೆಂದು ಪ್ರಾರ್ಥಿಸುವನು -

**ದೇಹ್ಯನ್ಯದೇಹವಿವರೇ ಜಠರಾಗ್ನಿನಾಽಸೃಗ್-**
**ವಿಣ್ಮೂತ್ರಕೂಪಪತಿತೋ ಭೃಶತಪ್ತದೇಹಃ ।**
**ಇಚ್ಛನ್ನಿತೋ ವಿವಸಿತುಂ ಗಣಯನ್ ಸ್ವಮಾಸಾನ್**
**ನಿರ್ವಾಸ್ಯತೇ ಕೃಪಣಧೀರ್ಭಗವನ್ ಕದಾ ನು ॥೧೮॥**

ದೇಹೀ=ಜೀವನು, ಅನ್ಯದೇಹವಿವರೇ=ತಾಯಿಯ ಉದರದಲ್ಲಿ, ಅಸೃಗ್-ವಿಣ್ಮೂತ್ರಕೂಪಪತಿತಃ=ರಕ್ತ ಮಲಮೂತ್ರಗಳಿಂದ ತುಂಬಿದ ಬಾವಿಯಲ್ಲಿ ಬಿದ್ದವನಾಗಿ, ಜಠರಾಗ್ನಿನಾ=ಜಠರಾಗ್ನಿಯಿಂದ, ಭೃಶತಪ್ತದೇಹಃ=ಬಹಳ ತಾಪವನ್ನು ಹೊಂದಿದ ದೇಹವುಳ್ಳವನಾಗಿ, ಕೃಪಣಧೀಃ=ದೀನವಾದ ಮನಸ್ಸುಳ್ಳವನು, ಇತಃ= ಗರ್ಭದಿಂದ, ವಿವಸಿತುಂ=ಹೊರಗೆ ಹೋಗಲು, ಇಚ್ಛನ್=ಇಚ್ಛಿಸುವನಾಗಿ, ಸ್ವಮಾಸಾನ್ ಗಣಯನ್=ತನಗೆ ಆಗಬೇಕಾದ ಹತ್ತು ತಿಂಗಳುಗಳನ್ನು, ಎಷ್ಟು ಕಳೆದವು ? ಎಷ್ಟು ಉಳಿದವು ? ಎಂದು ಲೆಕ್ಕ ಹಾಕುತ್ತ, ಹೇ ಭಗವನ್= ಸ್ವಾಮಿಯೇ, ತ್ವಯಾ=ನಿನ್ನಿಂದ, ಕದಾ ನು ನಿರ್ವಾಸ್ಯತೇ=ಯಾವಾಗ ಹೊರಗೆ ಹಾಕಲ್ಪಡುವೆನು? ಅರ್ಥಾತ್ ಶೀಘ್ರ ಹೊರಗೆ ಹಾಕಲಿ ಎಂದು ಪ್ರಾರ್ಥಿಸುವನು. ॥೧೮॥

ಯಥಾವತ್ತಾಗಿ ಇಂದ್ರಿಯಗುಣಾರ್ಥವಿತ್=ಇಂದ್ರಿಯಗಳನ್ನು, ಸತ್ವಾದಿ ಗುಣಗಳನ್ನು ಶಬ್ದಾದಿ ಅರ್ಥಗಳನ್ನು, ಪುರುಷಾರ್ಥಗಳನ್ನು ತಿಳಿದಿರುವ, ಪ್ರಕೃತಿ ಪುರುಷಯೋಃ ಪರಂ=ಶ್ರೀ, ಬ್ರಹ್ಮರಿಗಿಂತ ಉತ್ತಮನಾದ ಋಷಿಂ=ಸರ್ವಜ್ಞನಾದ ಅವಿಕುಂಠ-ಮಹಿಮಾನಂ=ಅಪ್ರತಿಹತಮಹಿಮೆಯುಳ್ಳ, ಪುಮಾಂಸಂ ತಂ ಏನಂ=ಶ್ರೀಹರಿಯನ್ನು ಆತ್ಮಕಃ ಅಹಂ=ಪರಮಾತ್ಮನ ಪ್ರತಿಬಿಂಬನಾದ ನಾನು, ಯಥಾ=ಹೇಗೆ ಶರೀರೇ ಛನ್ನಃ=ದೇಹದಲ್ಲಿರುವೆನೋ, ತಥಾ=ಹಾಗೆ, ಯಃ=ಯಾವನು, ಅವಹಿತಃ=ಪ್ರೇರಕ-ನಾಗಿರುವನೋ, ತಮೇನಂ=ಅವನನ್ನು, ತೇನ=ಹರಿಯಿಂದ ಪ್ರೇರಿತನಾಗಿ, ವಂದೇ =ಸ್ತುತಿಸುವೆನು. ॥೧೫॥

ಗರ್ಭದಿಂದ ಹೊರಬಂದು ಸಂಸಾರಮಾರ್ಗದಲ್ಲಿ ಸಂಚರಿಸುವ ನನಗೆ ಹರಿಸ್ಮೃತಿಯು ನಷ್ಟವಾಗುವುದು. ಅದು ಮತ್ತೆ ಮಹಾತ್ಮರ ಅನುಗ್ರಹದಿಂದ ಬರುವುದು. ಕಾರಣ ಮಹಾನುಭಾವರ ಅನುಗ್ರಹ ನನಗಿರಲಿ ಎಂದು ಹೇಳುವನು–

**ಯನ್ಮಾಯಯೋರುಗುಣಕರ್ಮನಿಬಂಧನೇಽಸ್ಮಿನ್**
**ಸಾಂಸಾರಿಕೇ ಪಥಿ ಚರಂಸ್ತದತಿಶ್ರಮೇಣ ।**
**ನಷ್ಟಸ್ಮೃತಿಃ ಪುನರಯಂ ಪ್ರವೃಣೀತಲೋಕೋ**
**ಯುಕ್ತ್ಯಾ ಕಯಾ ಮಹದನುಗ್ರಹಮಂತರೇಣ ॥೧೬॥**

ಯನ್ಮಾಯಯಾ=ಯಾವ ಶ್ರೀಹರಿಯ ಇಚ್ಛೆಯಿಂದ, ಉರುಗುಣಕರ್ಮ ನಿಂಬಂದನೇ=ಸತ್ವಾದಿಗುಣಗಳು ಮತ್ತು ಕರ್ಮಗಳೇ ಕಾರಣವಾಗಿವುಳ್ಳ, ಅಸ್ಮಿನ್= ಈ, ಸಂಸಾರಿಕೇ ಪಥಿ=ಸಂಸಾರಮಾರ್ಗದಲ್ಲಿ, ಚರನ್=ಸಂಚರಿಸುವ, ತದತಿಶ್ರಮೇಣ =ಸಂಸಾರಮಾರ್ಗದಿಂದುಂಟಾದ ಅತ್ಯಂತ ಕಷ್ಟದಿಂದ, ನಷ್ಟಸ್ಮೃತಿಃ=ಶ್ರೀಹರಿಯ ಜ್ಞಾನವನ್ನು ಕಳೆದುಕೊಂಡ, ಅಯಂ ಲೋಕಃ=ನಾನು, ಮಹದನುಗ್ರಹ-ಮಂತರೇಣ=ಮಹಾತ್ಮರ ಅನುಗ್ರಹದ ಹೊರತು, ಕಯಾ ಯುಕ್ತ್ಯಾ=ಯಾವ ಉಪಾಯದಿಂದ, ಪುನಃ ಪ್ರವೃತ್ತಃ=ಮತ್ತೆ ಶ್ರೀಹರಿಯ ಜ್ಞಾನವನ್ನು ಪಡದೇನು ? ಯಾವುದರಿಂದಲೂ ಪಡೆಯಲಾರೆನು. ಕಾರಣ ಮಹದನುಗ್ರಹವು ನನಗಿರಲಿ ಎಂದು ಭಾವ. ॥೧೬॥

ಎಲ್ಲ ಪುರುಷಾರ್ಥ ಸಾಧನವಾದ ಈ ಜ್ಞಾನ ಯಾರಿಂದ ನನಗೆ ಈಗ ಕೊಡಲ್ಪಟ್ಟಿದೆಯೋ ಅವನೇ ಗರ್ಭವಾಸ ನಿಮಿತ್ತವಾದ ತಾಪತ್ರಯಗಳ ಉಪಶಮನ ಮಾಡುವನು ಎಂದು ಹೇಳುವನು –

**ಜ್ಞಾನಂ ಯದೇತದದಧಾತ್ ಕತಮಃ ಸ ದೇವ-**
**ಸ್ತ್ರೈಕಾಲಿಕಂ ಸ್ಥಿರಚರೇಷ್ವನುವರ್ತಿತಾಂಶಃ ।**
**ತಂ ಜೀವಕರ್ಮಪದವೀಮನುವರ್ತಮಾನಾ-**
**ಸ್ತಾಪತ್ರಯೋಪಶಮನಾಯ ವಯಂ ಭಜೇಮ ॥೧೭॥**

ಯಃ ಕತಮಃ=ಯಾವ (ಪೂರ್ಣಸುಖನಾದ) ಸುಖಪೂರ್ಣನಾದ, ಸ್ಥಿರಚರೇಷ್ವನುವರ್ತಿತಾಂಶಃ=ಸ್ಥಾವರಜಂಗಮಗಳಲ್ಲಿ ಪ್ರೇರಣ ಮಾಡುವುದಕ್ಕಾಗಿ ಸ್ಥಾಪಿತವಾದ ರೂಪವುಳ್ಳವನೋ, ಸಃ ದೇವಃ=ಶ್ರೀಹರಿಯು, ಯತ್=ಯಾವ ಕಾರಣ, ತ್ರೈಕಾಲಿಕಂ ಏತತ್ ಜ್ಞಾನಂ ಮೇ ಅದಧಾತ್=ಅತೀತ ಜನ್ಮಾದಿ ವಿಷಯಕ ಈ ಜ್ಞಾನವನ್ನು ನನಗೆ ಇತ್ತಿರುವನೋ, ತಂ=ಪರಮೋಪಕಾರಿಯಾದ ಅವನನ್ನು, ಜೀವಕರ್ಮಪದವೀಂ ಅನುವರ್ತಮಾನಾಃ=ಜೀವರಿಗೆ ಬಂಧಕವಾದ ಪ್ರಾರಬ್ಧ ಕರ್ಮಮಾರ್ಗವನ್ನು ಅನುಸರಿಸುವ, ವಯಂ=ನಾವು, ತಾಪತ್ರಯೋಪಶಮನಾಯ=ತಾಪತ್ರಯಗಳ ನಾಶಕ್ಕಾಗಿ, ಭಜೇಮ=ಸೇವಿಸುವೆವು. ॥೧೭॥

ಗರ್ಭವಾಸವು ತಾಪತ್ರಯಸಾಧನವೆಂದು ತಿಳಿಸುತ್ತ ಗರ್ಭದಿಂದ ಹೊರಗೆ ಹಾಕೆಂದು ಪ್ರಾರ್ಥಿಸುವನು -

**ದೇಹ್ಯನ್ಯದೇಹವಿವರೇ ಜಠರಾಗ್ನಿನಾಽಸೃಗ್-**
**ವಿಣ್ಮೂತ್ರಕೂಪಪತಿತೋ ಭೃಶತಪ್ತದೇಹಃ ।**
**ಇಚ್ಛನ್ನಿತೋ ವಿವಸಿತುಂ ಗಣಯನ್ ಸ್ವಮಾಸಾನ್**
**ನಿರ್ವಾಸ್ಯತೇ ಕೃಪಣಧೀರ್ಭಗವನ್ ಕದಾ ನು ॥೧೮॥**

ದೇಹೀ=ಜೀವನು, ಅನ್ಯದೇಹವಿವರೇ=ತಾಯಿಯ ಉದರದಲ್ಲಿ, ಅಸೃಗ್-ವಿಣ್ಮೂತ್ರಕೂಪಪತಿತಃ=ರಕ್ತ ಮಲಮೂತ್ರಗಳಿಂದ ತುಂಬಿದ ಬಾವಿಯಲ್ಲಿ ಬಿದ್ದವನಾಗಿ, ಜಠರಾಗ್ನಿನಾ=ಜಠರಾಗ್ನಿಯಿಂದ, ಭೃಶತಪ್ತದೇಹಃ=ಬಹಳ ತಾಪವನ್ನು ಹೊಂದಿದ ದೇಹವುಳ್ಳವನಾಗಿ, ಕೃಪಣಧೀಃ=ದೀನವಾದ ಮನಸ್ಸುಳ್ಳವನು, ಇತಃ=ಗರ್ಭದಿಂದ, ವಿವಸಿತುಂ=ಹೊರಗೆ ಹೋಗಲು, ಇಚ್ಛನ್=ಇಚ್ಛಿಸುವನಾಗಿ, ಸ್ವಮಾಸಾನ್ ಗಣಯನ್=ತನಗೆ ಆಗಬೇಕಾದ ಹತ್ತು ತಿಂಗಳುಗಳನ್ನು, ಎಷ್ಟು ಕಳೆದವು ? ಎಷ್ಟು ಉಳಿದವು ? ಎಂದು ಲೆಕ್ಕ ಹಾಕುತ್ತ, ಹೇ ಭಗವನ್= ಸ್ವಾಮಿಯೇ, ತ್ವಯಾ=ನಿನ್ನಿಂದ, ಕದಾ ನು ನಿರ್ವಾಸ್ಯತೇ=ಯಾವಾಗ ಹೊರಗೆ ಹಾಕಲ್ಪಡುವೆನು? ಅರ್ಥಾತ್ ಶೀಘ್ರ ಹೊರಗೆ ಹಾಕಲಿ ಎಂದು ಪ್ರಾರ್ಥಿಸುವನು. ॥೧೮॥

ಭಗವಂತನ ಉಪಕಾರಕ್ಕೆ ಪ್ರತಿಯಾಗಿ ಏನೂ ಮಾಡಲು ಸಾಧ್ಯವಿಲ್ಲವೆಂದು ಹೇಳುವನು –

**ಯೇನೇದೃಶೀಂ ಮತಿಮಸೌ ದಶಮಾಸ್ಯ ಈಶ**
**ಸಂಗ್ರಾಹಿತಃ ಪುರುದಯೇನ ಭವಾದೃಶೇನ ।**
**ಸ್ವೇನೈವ ತುಷ್ಯತು ಕೃತೇನ ಸ ದೀನನಾಥಃ**
**ಕೋ ನಾಮ ತತ್ಪ್ರತಿ ವಿನಾಽಂಜಲಿಮಸ್ಯ ಕುರ್ಯಾತ್ ॥೧೯॥**

ಹೇ ಈಶ=ಎಲೋ ಸ್ವಾಮಿಯೇ, ಪುರುದಯೇನ=ಬಹಳ ಕೃಪಾಳುವಾದ, ಭವಾದೃಶೇನ=ನಿನ್ನಂತಹ, ಯೇನ=ಯಾವನಿಂದ, (ನಿನಗೆ ಸದೃಶ ನೀನೆ ಎಂದು ಭಾವ) ದಶಮಾಸ್ಯಃ ಅಸೌ=ಹತ್ತು ತಿಂಗಳಿನ ನಾನು, ಈದೃಶೀಂ=ಭಗವದ್ವಿಷಯಕ-ವಾದ, ಮತಿಂ=ಜ್ಞಾನವನ್ನು, ಸಂಗ್ರಾಹಿತಃ=ಸಂಪಾದಿಸಲ್ಪಟ್ಟನೋ, ಸಃ=ಆ, ದೀನನಾಥಃ=ದುಃಖಿತರಿಗೆ ಒಡೆಯನಾದ ಭಗವಂತನು, ಸ್ವೇನೈವ ಕೃತೇನ ತುಷ್ಯತು =ನನಗೆ ಸ್ವಾತಂತ್ರ್ಯೇಣ ಕರ್ತೃತ್ವವಿಲ್ಲದ್ದರಿಂದ ತಾನು ಮಾಡಿದ್ದರಿಂದಲೇ ತಾನು ಸಂತೋಷಿಸಲಿ, ಅಸ್ಯ=ಶ್ರೀ ಹರಿಗೆ, ಅಜಲಿಂ ವಿನಾ=ಕೈಜೋಡಿಸುವುದನ್ನು ಬಿಟ್ಟು ಬೇರೆ, ಕಃ ತತ್ಪ್ರತಿಕುರ್ಯಾತ್=ಯಾವ ಪ್ರತ್ಯುಪಕಾರವನ್ನು ಯಾವನು ಮಾಡಿಯಾನು ? ಯಾವನೂ ಮಾಡಲು ಸಮರ್ಥನಲ್ಲವೆಂದು ಭಾವ. ॥೧೯॥

ಶ್ರೀಹರಿಯಿಂದ ಅನುಗೃಹೀತಜ್ಞಾನದ ಫಲವೇನು? ಏಕೆ ಅದಕ್ಕೆ ಪ್ರತಿಕ್ರಿಯೆ ಇಲ್ಲವೆಂದು ಹೇಳುವಿ ? ಅದರ ಫಲ ಸ್ಫುಟತರದೇಹಾತ್ಮಸಾಕ್ಷಾತ್ಕಾರ, ಸರ್ವಗತ ಶ್ರೀಹರಿ ಸಾಕ್ಷಾತ್ಕಾರಗಳೆಂದು ಹೇಳುವರು –

**ಪಶ್ಯತ್ಯಯಂ ಧಿಷಣಯಾ ನನು ಸಪ್ತವಧ್ರಿಃ**
**ಶಾರೀರಭೇದಮಶರೀರವದಸ್ಯ ದೇಹೇ ।**
**ಯದ್ದತ್ತಯಾ ಸ ತಮಹಂ ಪುರುಷಂ ಪುರಾಣಂ**
**ಪಶ್ಯೇ ಬಹಿರ್ಹೃದಿ ಚ ಚೈತ್ಯಮಿವ ಪ್ರತೀತಂ ॥೨೦॥**

ಸಪ್ತವಧ್ರಿಃ ಅಯಂ=ತನಗೆ ಅನುಕೂಲಗಳಾದ ಏಳು ಜ್ಞಾನೇಂದ್ರಿಯಗಳುಳ್ಳ (ನಾನು) ಜೀವನು, ಅಸ್ಯ=ಪರಮಾತ್ಮನ ಅಧೀನವಾದ, ದೇಹೇ=ದೇಹದಲ್ಲಿ, ಅಶರೀರವತ್=ಪರಮಾತ್ಮನಿಂದ ಭೇದವನ್ನು ತಿಳಿಯುವಂತೆ, (ಪರಮಾತ್ಮ-ಪ್ರತಿಯೋಗಿಕಭೇದ) ಶಾರೀರಭೇದಂ=ಜೀವರಿಂದ, ಜಡಗಳಿಂದ ಭೇಧವನ್ನು, ಯದ್ದತ್ತಯಾ=ಯಾವ ಶ್ರೀಹರಿಯಿಂದ ಕೊಡಲ್ಪಟ್ಟ, ಧಿಷಣಯಾ=ಬುದ್ಧಿಯಿಂದ, ಪಶ್ಯತಿ=ತಿಳಿಯುವನು, ಸಃ ಅಹಂ=ಆ ನಾನು, ತಂ ಪುರಾಣ ಪುರುಷಂ=

ಶ್ರೀಹರಿಯನ್ನು, ಹೃದಿ=ಹೃದಯದಲ್ಲಿ , ಚೈತ್ಯಮಿವ=ಚಿತ್ತಾಭಿಮಾನಿ ವಿರಿಂಚನಂತೆ, ಪ್ರತೀತಂ=ತಿಳಿಯಲ್ಪಟ್ಟ ಹೃದಿ ಬಹಿಶ್ಚ=ಹೃದಯದಲ್ಲಿಯೂ, ಹೊರಗೂ, ಪಶ್ಯೇ= ನೋಡುವೆನು.

ಇದರಿಂದ ದೇಹದಲ್ಲಿ ಸ್ಫುಟತರ ಜೀವಭೇದಸಾಕ್ಷಾತ್ಕಾರ ಹಾಗೂ ಸರ್ವಗತನಾದ ಶ್ರೀಹರಿಯ ಸಾಕ್ಷಾತ್ಕಾರವು ಎಲ್ಲ ಪುರುಷಾರ್ಥ ಸಾಧಕವೆಂದು ತಿಳಿಯುವುದು.

ಈ ಶ್ಲೋಕದಲ್ಲಿಯ ಅಶರೀರವತ್ ಎಂಬ ಪದಕ್ಕೆ ಯೋಗ್ಯವಾದ ಅರ್ಥ ಹೇಳುವರು -

**ಅಶರೀರವತ್ ಪರಮಾತ್ಮವತ್ ।**

ಪ್ರಾಕೃತಶರೀರ ರಹಿತನಾದ್ದರಿಂದ ಶ್ರೀಹರಿಯು ಅಶರೀರನೆನಿಸುವನು.

'ಅಸ್ಯ ದೇಹೇ' ಎಂಬಲ್ಲಿ ಅಸ್ಯ ಎಂದು ಜೀವನನ್ನು ಪರಾಮರ್ಶ ಮಾಡುವಂತಿಲ್ಲ. ಹಾಗಿದ್ದಲ್ಲಿ ಸ್ವದೇಹೇ ಎನ್ನಬೇಕಿತ್ತು. ಇನ್ನು ಅಶರೀರಪದದಿಂದ ಹೇಳಲ್ಪಟ್ಟ ಪರಮಾತ್ಮ ಪರಾಮರ್ಶ ಎಂದರೆ, ಅಶರೀರನಿಗೆ ದೇಹವಿಲ್ಲದ್ದರಿಂದ, ಅವನ ದೇಹದಲ್ಲಿ ಎಂದರೆ ವ್ಯಾಹತಿ ಬರುವುದು. ಕಾರಣ ಆಚಾರ್ಯರು ಉಪಪತ್ತಿಯನ್ನು ಹೇಳುವರು–

**ಪರಮಾತ್ಮನಃ ಏವ ದೇಹೋಽಪಿ ತದ್ವಶತ್ವಾತ್ ।**

ಶರೀರರಹಿತನಾದ ಪರಮಾತ್ಮನಿಗೆ ಅವನ ಅಧೀನವಾದ್ದರಿಂದ ದೇಹವೂ ಇದೆ ಎಂದು ಹೇಳಲ್ಪಡುವುದು. ಅಂದರೆ ನಮ್ಮ ಕರ್ಮ ನಿರ್ಮಿತದೇಹವೂ ಅವನ ಅಧೀನವಾದ್ದರಿಂದ ಅವನದೆಂದು ಗೌಣೀವೃತ್ತಿಯಿಂದ ಹೇಳಿದೆ.

ಸರ್ವಗತನಾದ ಹರಿಯ ದರ್ಶನ ಹಾಗೂ ದೇಹಾತ್ಮವಿವೇಕಜ್ಞಾನ ಗರ್ಭಸ್ಥರಾದ ದೇವತೆಗಳಿಗೆ, ಉತ್ತಮ ಋಷಿಗಳಿಗೂ ಆಗುವುದು ಎಂಬ ಅಭಿಪ್ರಾಯದಿಂದ ಇಲ್ಲಿ ಹೇಳಿರುವರು. ಎಲ್ಲರಿಗೂ ಅಲ್ಲ ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು -

**ತತ್ವಜ್ಞಾನಂ ತು ದೇವಾನಾಂ ಗರ್ಭಸ್ಥಾನಾಂ ಭವಿಷ್ಯತಿ ।**
**ಉತ್ತಮಾನಾಮೃಷಿಣಾಂ ವಾಪ್ಯನ್ಯೇಷಾಂ ಬಹುಜನ್ಮಗಂ ॥ ಇತಿ ಸ್ಕಾಂದೇ ।**

ಗರ್ಭದಲ್ಲಿರುವ ದೇವತೆಗಳಿಗೆ ತತ್ವಜ್ಞಾನವಾಗುವುದು. ಅಪ್ರತೀಕಾಲಂಬನ-ರಾದ ಋಷಿಗಳಿಗೂ ತತ್ವಜ್ಞಾನವಾಗುವುದು. ಗರ್ಭದಲ್ಲಿರುವ ಉಳಿದವರಿಗೆ ಕಳೆದ ಅನೇಕ ಜನ್ಮ ವಿಷಯಕ ಜ್ಞಾನವಾಗುವುದು. ತತ್ವಜ್ಞಾನವಾಗಲಾರದು ಎಂದು ಭಾವ. ॥೨೦॥

ಈಗ ಗರ್ಭದಿಂದ ಹೊರಗೆ ಬಂದರೆ ಜ್ಞಾನ ನಾಶವಾಗುವುದೆಂದು ತಿಳಿದು ಅಲ್ಲೇ ಇರುವೆನು ಎಂದು ಅಪೇಕ್ಷಿಸುವನು -

**ಸೋऽಹಂ ವಸನ್ನಪಿ ವಿಭೋ ಬಹುದುಃಖವಾಸಂ**
**ಗರ್ಭಾನ್ನ ನಿರ್ಜಿಗಮಿಷೇ ಬಹಿರಂಧಕೂಪೇ ।**
**ಯತ್ರೋಪಯಾತಮುಪಸರ್ಪತಿ ದೇವಮಾಯಾ**
**ಮಿಥ್ಯಾಮತಿರ್ಯದನು ಸಂಸೃತಿಚಕ್ರಮೇತತ್ ॥೨೦॥**

ಯತ್ರ ಅಂಧಕೂಪೇ=ಕತ್ತಲೆಯ ಭಾವಿಯಂತಿರುವ, ಬಹಿಃ=ಹೊರಗೆ ಉಪಯಾತಂ=ಬಂದಿರುವ ನನ್ನನ್ನು ದೇವಮಾಯಾ ಮಿಥ್ಯಾಮತಿಃ=ಭಗವಂತನ ಬಂಧಕಶಕ್ತಿಯಿಂದ ನಿರ್ಮಿತವಾದ ನಾನು ನನ್ನದು ಎಂಬ ಸ್ವಾತಂತ್ರ್ಯಸ್ವಾಮಿತ್ವ ಭ್ರಮವು, ಉಪಸರ್ಪತಿ=ವ್ಯಾಪಿಸುವುದು, ಯದನು=ಯಾವ ಭ್ರಮದ ಉತ್ಪತ್ಯ-ನಂತರ, ಏತತ್ ಸಂಸಾರಚಕ್ರಂ=ಈ ಸಂಸಾರರದ ಪರಿವರ್ತನವು ಉಂಟಾಗುವುದು, ಆದ ಕಾರಣ ಬಹುದುಃಖವಾಸಂ ವಸನ್ ಅಪಿ=ಬಹಳ ದುಃಖದ ಸ್ಥಿತಿಯನ್ನು ಅನುಭವಿಸಿದರೂ, ಹೇ ವಿಭೋ=ಸ್ವಾಮಿಯೇ, ಸ ಅಹಂ=ನಾನು, ಗರ್ಭಾತ್ ಬಹಿಃ=ಗರ್ಭದಿಂದ ಹೊರಗೆ, ನ ನಿರ್ಜಿಗಮಿಷೇ=ಬರಲಿಚ್ಛಿಸುವುದಿಲ್ಲ. ॥೨೦॥

ಗರ್ಭದಲ್ಲಿ ಇದ್ದಾದರೂ ಏನು ಮಾಡುವಿ ? ಎಂದರೆ ಹೇಳುವನು-

**ತಸ್ಮಾದಹಂ ವಿಗತವಿಕ್ಲವ ಉದ್ಧರಿಷ್ಯೇ**
**ಆತ್ಮಾನಮಾಶು ತಮಸಃ ಸುಹೃದಾತ್ಮನೈವ ।**
**ಭೂಯೋ ಯಥಾ ವ್ಯಸನಮೇತದನೇಕರಂಧ್ರಂ**
**ಮಾ ಮೇ ಭವಿಷ್ಯದುಪಸಾದಿತವಿಷ್ಣುಪಾದಃ ॥೨೨॥**

ತಸ್ಮಾತ್=ಗರ್ಭದಿಂದ ಹೊರಗೆ ಬರುವುದು ಪುನಃ ಸಂಸಾರರೂಪ ಅನರ್ಥ ಕಾರಣವಾದುದುರಿಂದ, ಅಹಂ=ನಾನು, ವಿಗತವಿಕ್ಲವಃ=ಅಧೈರ್ಯವನ್ನು ತೊರೆದವನಾಗಿ, ಉಪಸಾದಿತವಿಷ್ಣುಪಾದಃ=ಹೃದಯಕ್ಕೆ ತಲುಪಿಸಲ್ಪಟ್ಟ ಪರಮಾತ್ಮನ ಪಾದವುಳ್ಳವನಾಗಿ, ವಿಷ್ಣುಪಾದಧ್ಯಾನಪರನಾಗಿ, ಆಶು=ಶೀಘ್ರದಲ್ಲಿ, ಆತ್ಮಾನಂ= ನನ್ನನ್ನು ತಮಸಃ=ಅಜ್ಞಾನಮೂಲಕವಾದ ಸಂಸಾರದಿಂದ, ಸುಹೃದಾತ್ಮನಾ ಏವ= ಅನಿಮಿತ್ತಬಂಧುವಾದ ಶ್ರೀಹರಿಯ ಪ್ರಸಾದದಿಂದ, ಭೂಯಃ=ಮತ್ತೆ, ಅನೇಕ-ರಂಧ್ರಂ=ಬಹಳ ಅನರ್ಥ ಮೂಲವಾದ, ವ್ಯಸನಂ=ಸಂಸಾರವು, ಮಾ ಭವಿಷ್ಯತ್ ಯಥಾ ತಥಾ=ಬರದಿರುವಂತೆ, ಉದ್ಧರಿಷ್ಯೇ=ಮೇಲೆತ್ತಿಕೊಳ್ಳುವೆ.(ಮುಕ್ತನಾಗುವೆ)

ಶ್ರೀ ಭಗವಾನುವಾಚ

**ಏವಂ ಕೃತಮತಿಂ ಗರ್ಭೇ ದಶಮಾಸ್ಯಂ ಸಪದ್ಯೃಷಿಂ ।**
**ಸದ್ಯಃ ಕ್ಷಿಪತ್ಯವಾಚೀನಂ ಪ್ರಸೂತ್ಯೈ ಸೂತಿಮಾರುತಃ ॥೨೩॥**

ಏವಂ=ಈ ರೀತಿಯಾಗಿ, ಕೃತಮತಿಂ=ನಿಶ್ಚಯಿಸಲ್ಪಟ್ಟ ಗರ್ಭೇ=ಗರ್ಭದಲ್ಲಿರುವ, ದಸಮಾಸ್ಯಂ=ಹತ್ತು ತಿಂಗಳಿನವನಾದ, ಸಪದಿ ಋಷಿಂ=ತಾತ್ಕಾಲಿಕ ಜ್ಞಾನಿಯಾದ ಜೀವನನ್ನು, ಅವಾಚೀನಂ=ತಲೆಕೆಳಗಾಗಿರುವನನ್ನು, ಸೂತಿಮಾರುತಃ=ಸೂತಿವಾತವು, ಪ್ರಸೂತ್ಯೈ=ಪ್ರಸವಕ್ಕಾಗಿ, ಸದ್ಯಃ=ತತ್‌ಕ್ಷಣದಲ್ಲಿ, ಕ್ಷಿಪತಿ=ಕೆಳಗೆ ತಳ್ಳುವುದು. ಇದರಿಂದ ಶ್ರೀಹರಿಯ ಮಹಾತ್ಮ್ಯ, ಜೀವನ ಅಸ್ವಾತಂತ್ರ್ಯ ಧ್ವನಿತವಾಗುವುದು. ॥೨೩॥

ವೈರಾಗ್ಯ ಹುಟ್ಟುವುದಕ್ಕಾಗಿ ಹುಟ್ಟುತ್ತಿರುವನ, ಹುಟ್ಟಿದವನ ದುಃಖವನ್ನು ತಿಳಿಸುವರು –

**ತೇನೋಪಸೃಷ್ಟಃ ಸಹಸಾ ಕೃತ್ವಾಽವಾಕ್‌ಶಿರ ಆತುರಃ ।**
**ವಿನಿಷ್ಕ್ರಾಮತಿ ಕೃಚ್ಛ್ರೇಣ ನಿರುಚ್ಛ್ವಾಸೋ ಗತಸ್ಮೃತಿಃ ॥೨೪॥**

ತೇನ=ಸೂತಿವಾಯುವಿನಿಂದ, ಉಪಸೃಷ್ಟಃ=ತಳ್ಳಲ್ಪಟ್ಟು, ಸಹಸಾ=ತತ್‌ಕ್ಷಣದಲ್ಲಿ, ಅವಾಕ್ ಶಿರಃ=ಕೆಳಗೆ ತಲೆ ಮಾಡಿ, ಆತುರಃ=ದುಃಖಿತನಾಗಿ, ಕೃಚ್ಛ್ರೇಣ=ಕಷ್ಟದಿಂದ, ನಿರುಚ್ಛ್ವಾಸಃ=ಉಸಿರುಗಟ್ಟಿದವನಾಗಿ, ಗತಸ್ಮೃತಿಃ=ಜನ್ಮಾಂತರ ಜ್ಞಾನವನ್ನು ಕಳೆದುಕೊಂಡು, ವಿನಿಷ್ಕ್ರಾಮತಿ=ಹೊರಗೆ ಬೀಳುವನು. ॥೨೪॥

**ಪತಿತೋ ಭುವ್ಯಸೃಙ್‌ಮೂತ್ರೇ ವಿಷ್ಠಾಭೂರಿವ ಚೇಷ್ಟತೇ ।**
**ರೋರೂಯತಿ ಗತಜ್ಞಾನೋ ವಿಪರೀತಾಂ ಗತಿಂ ಗತಃ ॥೨೫॥**

ಭುವಿ ಪತಿತಃ=ಭೂಮಿಯಲ್ಲಿ ಬಿದ್ದವನಾಗಿ, ಅಸೃಙ್‌ಮೂತ್ರೇ=ರಕ್ತ, ಮೂತ್ರಗಳಲ್ಲಿ, ವಿಷ್ಠಾಭೂರಿವ=ಮಲದಲ್ಲಿ ಹುಟ್ಟುವ ಕೃಮಿಯಂತೆ, ಚೇಷ್ಟತೇ= ಹೊರಳಾಡುವನು, ವಿಪರೀತಾಂ ಗತಿಂ ಗತಃ=ಅಜ್ಞಾನವನ್ನು ಹೊಂದಿ, ಗತಜ್ಞಾನಃ=ಜ್ಞಾನಕಳೆದು-ಕೊಂಡು, ರೋರೂಯತಿ=ಅಳುವನು. ॥೨೫॥

**ಪರಚ್ಛಂದಂ ನವಿದುಷಾ ಪುಷ್ಯಮಾಣೋ ಜನೇನ ಸಃ ।**
**ಅನಭಿಪ್ರೇತಮಾಪನ್ನಃ ಪ್ರತ್ಯಾಖ್ಯಾತುಮನೀಶ್ವರಃ ॥೨೬॥**

ಪರಚ್ಛಂದಂ=ಮತ್ತೊಬ್ಬರ ಅಭಿಪ್ರಾಯವನ್ನು, ನವಿದುಷಾ=ಅರಿಯದ, ಜನೇನ =ತಾಯಿ ಮುಂತಾದವರಿಂದ, ಪುಷ್ಯಮಾಣಃ=ಪೋಷಿಸಲ್ಪಡುವನಾಗಿ, ಸಃ= ಜೀವನು, ಅನಭಿಪ್ರೇತಂ ಆಪನ್ನಃ=ಹಸಿವೆಯಾದವನಿಗೆ ಔಷಧ, ಹೊಟ್ಟೆ

ಶೂಲೆಯಾದವನಿಗೆ ಸ್ತನ್ಯವನ್ನುಣಿಸುವುದು ಮುಂತಾದ ತನಗೆ ಬೇಡಾದ್ದನ್ನು ಹೊಂದಿ, ಪ್ರತ್ಯಾಖ್ಯಾತುಂ ಅನೀಶ್ವರಃ=ನನಗಿದು ಬೇಡವೆಂದು ಹೇಳಲೂ ಅಸಮರ್ಥನಾಗಿ, ॥೨೬॥

**ಶಾಯಿತೋಽಶುಚಿಪರ್ಯಂಕೇ ಜಂತುಃ ಸ್ವೇದಜದೂಷಿತೇ ।**
**ನೇಶಃ ಕಂಡೂಯನೇಽಂಗಾನಾಮಾಸನೋತ್ಥಾನಚೇಷ್ಟನೇ ॥೨೭॥**

ಸ್ವೇದಜದೂಷಿತೇ=ಹುಳಗಳಿಂದ ಕೂಡಿದ,ಅಶುಚಿಪರ್ಯಂಕೇ=ಮಲಮೂತ್ರ-ಗಳಿಂದ ಅಶುದ್ಧವಾದ ಮಂಚದಲ್ಲಿ, ಶಾಯಿತಃ=ಮಲಗಿಸಲ್ಪಟ್ಟು, ಜಂತುಃ=ಜೀವನು ಅಂಗಾನಾಂ ಕಂಡೂಯನೇ=ಅವಯವಗಳನ್ನು ತುರಿಸಿಕೊಳ್ಳಲು, ಆಸನ=ಕೂಡಲು, ಉತ್ಥಾನ=ಏಳಲು, ಚೇಷ್ಟನೇ=ಯಾವುದೇ ವ್ಯಾಪಾರ ಮಾಡಲು, ನ ಈಶಃ=ಅಸಮರ್ಥನಾಗಿರುವನು. ॥೨೭॥

**ತುದಂತ್ಯಾಮತ್ವಚಂ ದಂಶಾ ಮಶಕಾ ಮತ್ಕುಣಾದಯಃ ।**
**ರುದಂತಂ ವಿಗತಜ್ಞಾನಂ ಕೃಮಯಃ ಕೃಮಿಕಂ ಯಥಾ ॥೨೮॥**

ಆಮತ್ವಚಂ=ಮೃದುವಾದ ಹೊಸ ಚರ್ಮವುಳ್ಳ ಇವನನ್ನು, ದಂಶಾಃ=ದೋಮೆಗಳು, (ಸೊಳ್ಳೆ) ಮಶಕಾಃ=ನೊರಜುಗಳು, ಕೃಮಿಕಂ=ಹುಳತುಂಬಿದ ಗಾಯಗೊಂಡ ಅವಯವವನ್ನು, ಕೃಮಯಃ ಯಥಾ=ಕ್ರಿಮಿಗಳಂತೆ, ಮತ್ಕುಣಾ-ದಯಃ=ತಗಣೆ ಮುಂತಾದವು, ರುದಂತಂ=ಅಳುತ್ತಿರುವ, ವಿಗತಜ್ಞಾನಂ=ಜ್ಞಾನವನ್ನು ಕಳೆದುಕೊಂಡವನನ್ನು ತುದಂತಿ=ಕಚ್ಚುವುವು. ॥೨೮॥

**ಸ ತ್ವೇವಂ ಶೈಶವಂ ಭುಕ್ತ್ವಾ ದುಃಖಂ ಪೌಗಂಡಮೇವ ಚ ।**
**ಅಲಬ್ಧಾಭೀಪ್ಸಿತೋಽಜ್ಞಾನಾದಿದ್ಧಮನ್ಯುಃ ಶುಚಾರ್ಪಿತಃ ॥೨೯॥**

ಸಃ=ಅವನು, ಏವಂ=ಈ ರೀತಿಯಾಗಿ, ಶೈಶವಂ ಭುಕ್ತ್ವಾ=ಐದು ವರ್ಷಗಳನ್ನು ಅನುಭವಿಸಿ,ಪೌಗಂಡಮೇವ ಚ ದುಃಖಂ=ಪೌಗಂಡಾವಸ್ಥೆಯಲ್ಲಿ ಅಧ್ಯಯನಾದಿ ದುಃಖವನ್ನು ಅನುಭವಿಸಿ, ಅಲಬ್ಧಾಭೀಪ್ಸಿತಃ=ಯೌವನದಲ್ಲಿ ಕಾಮನೆಗಳನ್ನು ಹೊಂದದೆ, ಅಜ್ಞಾನಾತ್=ಶ್ರೀಹರಿಯ ಸ್ವಾತಂತ್ರ್ಯವನ್ನು ತಿಳಿಯದಿರುವುದರಿಂದ, ಶುಚಾರ್ಪಿತಃ=ದುಃಖಿತನಾಗಿ, ಇದ್ಧಮನ್ಯುಃ=ಸಿಟ್ಟಿಗೆ ಬಂದವನಾಗಿ, ॥೨೯॥

**ಸಹ ದೇಹೇನ ಮಾನೇನ ವರ್ಧಮಾನೇನ ಮನ್ಯುನಾ ।**
**ಕರೋತಿ ವಿಗ್ರಹಂ ಕಾಮೀ ಕಾಮಿಷ್ವಂತಾಯ ಚಾತ್ಮನಃ ॥೩೦॥**

ದೇಹೇನ ಸಹ ವರ್ಧಮಾನೇನ=ಶರೀರದ ಜೊತೆಗೆ ಬೆಳೆದ, ಮಾನೇನ=ಅಭಿಮಾನದಿಂದ, ಮನ್ಯುನಾ=ಕೋಪದಿಂದಲೂ, ಆತ್ಮನಃ=ತನ್ನ ಅಂತಾಯ=ನಾಶಕ್ಕಾಗಿ, ಕಾಮೀ=ವಿಷಯಾಭಿಲಾಷೆಯುಳ್ಳವನಾಗಿ, ಕಾಮಿಷು=ವಿಷಯ-ಲಾಲಸೆಯುಳ್ಳವರೊಡನೆ, ವಿಗ್ರಹಂ ಕರೋತಿ=ಜಗಳ ಮಾಡುವನು. ॥೩೦॥

**ಭೂತೈಃ ಪಂಚಭಿರಾರಬ್ಧೇ ದೇಹೇ ದೇಹ್ಯಬುಧೋಽಸಕೃತ್ ।**
**ಅಹಂ ಮಮೇತ್ಯಸದ್ಗ್ರಾಹಾಂ ಕರೋತಿ ಕುಮತಿರ್ಮತಿಮ್ ॥೩೧॥**

ಕುಮತಿಃ=ದುಷ್ಟಬುದ್ಧಿಯುಳ್ಳ, ಅಬುಧಃ=ಅಜ್ಞಾನಿಯಾದ, ದೇಹೀ=ಜೀವನು, ಅಸಕೃತ್=ಪುನಃ ಪುನಃ, ಪಂಚಭಿಃ ಭೂತೈಃ ಆರಬ್ಧೇ=ಪಾಂಚಭೌತಿಕವಾದ, ದೇಹೇ=ಶರೀರದಲ್ಲಿ, ಅಹಂ ಮಮ ಇತಿ=ನಾನು ನನ್ನದು ಎಂಬ, ಅಸದ್ಗ್ರಾಹಾಂ ಮತಿಂ=ದುರಾಗ್ರಹವುಳ್ಳ ಬುದ್ಧಿಯನ್ನು, ಕರೋತಿ=ಮಾಡುವನು. ॥೩೧॥

**ತದರ್ಥಂ ಕುರುತೇ ಕರ್ಮ ಯದ್ಬದ್ಧೋ ಯಾತಿ ಸಂಸೃತಿಂ ।**
**ತಮೋ ವಿಶತಿ ಯದ್ಬದ್ಧೋ ಯೇನಾಸೌ ಮರ್ತ್ಯಜನ್ಮನಿ ॥೩೨॥**
**ಯೇನ ಯಾತೀದೃಶಂ ಕ್ಲೇಶಮವಿದ್ಯಾಕರ್ಮಬಂಧನಂ ॥೩೩॥**

ಯದ್ಬದ್ಧಃ=ಯಾವುದರಿಂದ ಬಂಧಿತನಾಗಿ, ಸಂಸೃತಿಂ ಯಾತಿ=ಸಂಸಾರ ಹೊಂದುವನೋ, ಯದ್ಬದ್ಧಃ=ಯಾವುದರಿಂದ ಕಟ್ಟಲ್ಪಟ್ಟು, ತಮಃ ವಿಶತಿ= ತಮಸ್ಸಿಗೆ ಹೋಗುವನೋ, ತದರ್ಥಂ=ನಾನು, ನನ್ನದು ಎಂಬ ದುರಾಗ್ರಹ ದೃಢವಾಗು-ವುದಕ್ಕಾಗಿ, ಯೇನ=ಯಾವ ಕರ್ಮದಿಂದ, ಮರ್ತ್ಯಜನ್ಮನಿ=ಮರಣ ಶೀಲವಾದ ದೇಹದಲ್ಲಿ, ಬದ್ಧಃ=ಕಟ್ಟಲ್ಪಟ್ಟಿರುವನೋ, ಅಂತಹ ಕರ್ಮ=ಕಾರ್ಯಗಳನ್ನು ಅಸೌ=ಇವನು ಕುರುತೇ=ಮಾಡುವನು. ॥೩೨॥

ಯೇನ=ಯಾವುದರಿಂದ, ಈದೃಶಂ=ನರಕಮುಂತಾದ, ಕ್ಲೇಶಂ=ಕಷ್ಟವನ್ನು ಅವಿದ್ಯಾಕರ್ಮಬಂಧನಂ ಚ ಯಾತಿ=ಅವಿದ್ಯಾ-ಕರ್ಮಬಂಧನವನ್ನೂ ಹೊಂದುವನು. ॥೩೩॥

ಮನುಷ್ಯಜನ್ಮ ಪುರುಷಾರ್ಥಸಾಧನವಾಗಿದೆ. ಸನ್ಮಾರ್ಗದಲ್ಲಿ ನಿರತನಾಗಿ, ಆತ್ಮೋದ್ಧಾರ ಮಾಡಿಕೊಂಡರೆ ಉದ್ಧಾರವಾಗುವುದು, ಇಲ್ಲವಾದರೆ ಮತ್ತೆ ಸಂಸಾರಪ್ರಾಪ್ತಿಯೇ ಎಂದು ಹೇಳುವರು -

**ಯದ್ಯಸದ್ಭಿಃ ಪಥಿ ಪುನಃ ಶಿಶ್ನೋದರಕೃತೋದ್ಯಮೈಃ ।**
**ಆಸ್ಥಿತೋ ರಮತೇ ಜಂತುಸ್ತಮೋ ವಿಶತಿ ಪೂರ್ವವತ್ ॥೩೪॥**

ಶೂಲೆಯಾದವನಿಗೆ ಸ್ತನ್ಯವನ್ನುಣಿಸುವುದು ಮುಂತಾದ ತನಗೆ ಬೇಡಾದ್ದನ್ನು ಹೊಂದಿ, ಪ್ರತ್ಯಾಖ್ಯಾತುಂ ಅನೀಶ್ವರಃ=ನನಗಿದು ಬೇಡವೆಂದು ಹೇಳಲೂ ಅಸಮರ್ಥನಾಗಿ, ॥೨೬॥

**ಶಾಯಿತೋಽಶುಚಿಪರ್ಯಂಕೇ ಜಂತುಃ ಸ್ವೇದಜದೂಷಿತೇ ।**
**ನೇಶಃ ಕಂಡೂಯನೇಽಂಗಾನಾಮಾಸನೋತ್ಥಾನಚೇಷ್ಟನೇ ॥೨೭॥**

ಸ್ವೇದಜದೂಷಿತೇ=ಹುಳಗಳಿಂದ ಕೂಡಿದ,ಅಶುಚಿಪರ್ಯಂಕೇ=ಮಲಮೂತ್ರ-ಗಳಿಂದ ಅಶುದ್ಧವಾದ ಮಂಚದಲ್ಲಿ ಶಾಯಿತಃ=ಮಲಗಿಸಲ್ಪಟ್ಟು, ಜಂತುಃ=ಜೀವನು ಅಂಗಾನಾಂ ಕಂಡೂಯನೇ=ಅವಯವಗಳನ್ನು ತುರಿಸಿಕೊಳ್ಳಲು, ಆಸನ=ಕೂಡಲು, ಉತ್ಥಾನ=ಏಳಲು, ಚೇಷ್ಟನೇ=ಯಾವುದೇ ವ್ಯಾಪಾರ ಮಾಡಲು, ನ ಈಶಃ=ಅಸಮರ್ಥನಾಗಿರುವನು. ॥೨೭॥

**ತುದಂತ್ಯಾಮತ್ವಚಂ ದಂಶಾ ಮಶಕಾ ಮತ್ಕುಣಾದಯಃ ।**
**ರುದಂತಂ ವಿಗತಜ್ಞಾನಂ ಕೃಮಯಃ ಕೃಮಿಕಂ ಯಥಾ ॥೨೮॥**

ಆಮತ್ವಚಂ=ಮೃದುವಾದ ಹೊಸ ಚರ್ಮವುಳ್ಳ ಇವನನ್ನು, ದಂಶಾಃ=ದೋಮೆಗಳು, (ಸೊಳ್ಳೆ) ಮಶಕಾಃ=ನೊರಜುಗಳು, ಕೃಮಿಕಂ=ಹುಳತುಂಬಿದ ಗಾಯಗೊಂಡ ಅವಯವವನ್ನು, ಕೃಮಯಃ ಯಥಾ=ಕ್ರಿಮಿಗಳಂತೆ, ಮತ್ಕುಣಾ-ದಯಃ=ತಗಣೆ ಮುಂತಾದವು, ರುದಂತಂ=ಅಳುತ್ತಿರುವ, ವಿಗತಜ್ಞಾನಂ=ಜ್ಞಾನವನ್ನು ಕಳೆದುಕೊಂಡವನನ್ನು ತುದಂತಿ=ಕಚ್ಚುವುವು. ॥೨೮॥

**ಸ ತ್ವೇವಂ ಶೈಶವಂ ಭುಕ್ತ್ವಾ ದುಃಖಂ ಪೌಗಂಡಮೇವ ಚ ।**
**ಅಲಬ್ಧಾಭೀಪ್ಸಿತೋಽಜ್ಞಾನಾದಿದ್ಧಮನ್ಯುಃ ಶುಚಾರ್ಪಿತಃ ॥೨೯॥**

ಸಃ=ಅವನು, ಏವಂ=ಈ ರೀತಿಯಾಗಿ, ಶೈಶವಂ ಭುಕ್ತ್ವಾ=ಐದು ವರ್ಷಗಳನ್ನು ಅನುಭವಿಸಿ,ಪೌಗಂಡಮೇವ ಚ ದುಃಖಂ=ಪೌಗಂಡಾವಸ್ಥೆಯಲ್ಲಿ ಅಧ್ಯಯನಾದಿ ದುಃಖವನ್ನು ಅನುಭವಿಸಿ, ಅಲಬ್ಧಾಭೀಪ್ಸಿತಃ=ಯೌವನದಲ್ಲಿ ಕಾಮನೆಗಳನ್ನು ಹೊಂದದೆ, ಅಜ್ಞಾನಾತ್=ಶ್ರೀಹರಿಯ ಸ್ವಾತಂತ್ರ್ಯವನ್ನು ತಿಳಿಯದಿರುವುದರಿಂದ, ಶುಚಾರ್ಪಿತಃ=ದುಃಖಿತನಾಗಿ, ಇದ್ಧಮನ್ಯುಃ=ಸಿಟ್ಟಿಗೆ ಬಂದವನಾಗಿ, ॥೨೯॥

**ಸಹ ದೇಹೇನ ಮಾನೇನ ವರ್ಧಮಾನೇನ ಮನ್ಯುನಾ ।**
**ಕರೋತಿ ವಿಗ್ರಹಂ ಕಾಮೀ ಕಾಮಿಷ್ವಂತಾಯ ಚಾತ್ಮನಃ ॥೩೦॥**

ದೇಹೇನ ಸಹ ವರ್ಧಮಾನೇನ=ಶರೀರದ ಜೊತೆಗೆ ಬೆಳೆದ, ಮಾನೇನ=ಅಭಿಮಾನದಿಂದ, ಮನ್ಯುನಾ=ಕೋಪದಿಂದಲೂ, ಆತ್ಮನಃ=ತನ್ನ ಅಂತಾಯ=ನಾಶಕ್ಕಾಗಿ, ಕಾಮೀ=ವಿಷಯಾಭಿಲಾಷೆಯುಳ್ಳವನಾಗಿ, ಕಾಮಿಷು=ವಿಷಯ-ಲಾಲಸೆಯುಳ್ಳವರೊಡನೆ, ವಿಗ್ರಹಂ ಕರೋತಿ=ಜಗಳ ಮಾಡುವನು. ॥೩೦॥

**ಭೂತೈಃ ಪಂಚಭಿರಾರಬ್ಧೇ ದೇಹೇ ದೇಹ್ಯಬುಧೋಽಸಕೃತ್ ।**
**ಅಹಂ ಮಮೇತ್ಯಸದ್ಗ್ರಾಹಾಂ ಕರೋತಿ ಕುಮತಿರ್ಮತಿಮ್ ॥೩೧॥**

ಕುಮತಿಃ=ದುಷ್ಟಬುದ್ಧಿಯುಳ್ಳ, ಅಬುಧಃ=ಅಜ್ಞಾನಿಯಾದ, ದೇಹೀ=ಜೀವನು, ಅಸಕೃತ್=ಪುನಃ ಪುನಃ, ಪಂಚಭಿಃ ಭೂತೈಃ ಆರಬ್ಧೇ=ಪಾಂಚಭೌತಿಕವಾದ, ದೇಹೇ=ಶರೀರದಲ್ಲಿ, ಅಹಂ ಮಮ ಇತಿ=ನಾನು ನನ್ನದು ಎಂಬ, ಅಸದ್‌ಗ್ರಾಹಾಂ ಮತಿಂ=ದುರಾಗ್ರಹವುಳ್ಳ ಬುದ್ಧಿಯನ್ನು, ಕರೋತಿ=ಮಾಡುವನು. ॥೩೧॥

**ತದರ್ಥಂ ಕುರುತೇ ಕರ್ಮ ಯದ್ಬದ್ಧೋ ಯಾತಿ ಸಂಸೃತಿಂ ।**
**ತಮೋ ವಿಶತಿ ಯದ್ಬದ್ಧೋ ಯೇನಾಸೌ ಮರ್ತ್ಯಜನ್ಮನಿ ॥೩೨॥**
**ಯೇನ ಯಾತೀದೃಶಂ ಕ್ಲೇಶಮವಿದ್ಯಾಕರ್ಮಬಂಧನಂ ॥೩೩॥**

ಯದ್ಬದ್ಧಃ=ಯಾವುದರಿಂದ ಬಂಧಿತನಾಗಿ, ಸಂಸೃತಿಂ ಯಾತಿ=ಸಂಸಾರ ಹೊಂದುವನೋ, ಯದ್ಬದ್ಧಃ=ಯಾವುದರಿಂದ ಕಟ್ಟಲ್ಪಟ್ಟು, ತಮಃ ವಿಶತಿ= ತಮಸ್ಸಿಗೆ ಹೋಗುವನೋ, ತದರ್ಥಂ=ನಾನು, ನನ್ನದು ಎಂಬ ದುರಾಗ್ರಹ ದೃಢವಾಗು-ವುದಕ್ಕಾಗಿ, ಯೇನ=ಯಾವ ಕರ್ಮದಿಂದ, ಮರ್ತ್ಯಜನ್ಮನಿ=ಮರಣ ಶೀಲವಾದ ದೇಹದಲ್ಲಿ, ಬದ್ಧಃ=ಕಟ್ಟಲ್ಪಟ್ಟಿರುವನೋ, ಅಂತಹ ಕರ್ಮ=ಕಾರ್ಯಗಳನ್ನು ಅಸೌ=ಇವನು ಕುರುತೇ=ಮಾಡುವನು. ॥೩೨॥

ಯೇನ=ಯಾವುದರಿಂದ, ಈದೃಶಂ=ನರಕಮುಂತಾದ, ಕ್ಲೇಶಂ=ಕಷ್ಟವನ್ನು, ಅವಿದ್ಯಾಕರ್ಮಬಂಧನಂ ಚ ಯಾತಿ=ಅವಿದ್ಯಾ-ಕರ್ಮಬಂಧನವನ್ನೂ ಹೊಂದುವನು. ॥೩೩॥

ಮನುಷ್ಯಜನ್ಮ ಪುರುಷಾರ್ಥಸಾಧನವಾಗಿದೆ. ಸನ್ಮಾರ್ಗದಲ್ಲಿ ನಿರತನಾಗಿ, ಆತ್ಮೋದ್ಧಾರ ಮಾಡಿಕೊಂಡರೆ ಉದ್ಧಾರವಾಗುವುದು, ಇಲ್ಲವಾದರೆ ಮತ್ತೆ ಸಂಸಾರಪ್ರಾಪ್ತಿಯೇ ಎಂದು ಹೇಳುವರು –

**ಯದ್ಯಸದ್ಭಿಃ ಪಥಿ ಪುನಃ ಶಿಶ್ನೋದರಕೃತೋದ್ಯಮೈಃ ।**
**ಆಸ್ಥಿತೋ ರಮತೇ ಜಂತುಸ್ತಮೋ ವಿಶತಿ ಪೂರ್ವವತ್ ॥೩೪॥**

ಪಥಿ=ಮನುಷ್ಯಜನ್ಮದಲ್ಲಿ ಸನ್ಮಾರ್ಗದಲ್ಲಿ, ಆಸ್ಥಿತಃ=ಇರುವ, ಜಂತುಃ=ಜೀವನು, ಶಿಶ್ನೋದರಕೃತೋದ್ಯಮೈಃ=ಗುಹ್ಯೇಂದ್ರಿಯತೃಪ್ತಿ ಮತ್ತು ಉದರಂಭರಣಕ್ಕಾಗಿಯೇ ಪ್ರಯತ್ನಮಾಡುವ, ಅಸದ್ಭಿಃ=ದುಷ್ಟಜನರಿಂದ ಕೂಡಿಕೊಂಡು, ಯದಿ=ಒಂದುವೇಳೆ ಪುನಃ ರಮತೇ=ಮತ್ತೆ ಸಂತೋಷಿಸುವನೋ, ಆಗ ಪೂರ್ವವತ್ ತಮಃ ವಿಶತಿ= ಹಿಂದೆ ಹೇಳಿದಂತೆ ನರಕಕ್ಕೆ ಹೋಗುವನು. ॥೩೪॥

ಒಳ್ಳೆಯ ಗುಣಗಳಿದ್ದ ಮೇಲೆ ಅಸಜ್ಜನರಸಂಗದಿಂದ ತಮಸ್ಸಿಗೆ ಹೇಗೆ ಹೋಗುವನು ಎಂದರೆ ಹೇಳವರು –

**ಸತ್ಯಂ ಶೌಚಂ ದಯಾ ಮೌನಂ ಬುದ್ಧಿಃ ಶ್ರೀರ್ಹ್ರೀರ್ಯಶಃ ಕ್ಷಮಾ ।**
**ಶಮೋ ದಮೋ ಭಗಶ್ಚೇತಿ ಯತ್ಸಂಗಾದ್ ಯಾತಿ ಸಂಕ್ಷಯಂ ॥೩೫॥**

ಸತ್ಯಂ=ಸಜ್ಜನಹಿತಕರನುಡಿಯು, ಶೌಚಂ=ಹೊರ, ಒಳಗಿನ ಶುದ್ಧಿ, ದಯಾ= ಪ್ರಾಣಿಗಳಲ್ಲಿ ದಯಾ, ಮೌನಂ=ಅನುಪಯುಕ್ತ ಮಾತನಾಡದಿರುವುದು, ಬುದ್ಧಿಃ= ಪುರುಷಾರ್ಥಸಾಧಕವಾದ ಜ್ಞಾನ, ಶ್ರೀಃ=ಭಗವದ್ಭಕ್ತಿರೂಪ ಸಂಪತ್ತು, ಹ್ರೀಃ= ಮಾಡಬಾರದ್ದನ್ನು ಮಾಡಲು ನಾಚಿಕೆ, ಯಶಃ=ಕೀರ್ತಿಯು ಕ್ಷಮಾ=ಅಪರಾಧ- ಮಾಡಿದ ವೈಷ್ಣವರ ವಿಷಯದಲ್ಲಿ ಸಹನಶೀಲತೆ ಶಮಃ=ಬಾಹ್ಯೇಂದ್ರಿಯ ನಿಗ್ರಹ ದಮಃ=ಅಂತಃಕರಣನಿಗ್ರಹವು ಅಥವಾ ಭಗವನ್ನಿಷ್ಠೆ ಭಗಃ=ಐಶ್ವರ್ಯ ಇವುಗಳು ಯತ್ಸಂಗಾತ್=ಯಾರ ಸಹವಾಸದಿಂದ ಸಂಕ್ಷಯಂ ಯಾತಿ=ನಾಶ ಹೊಂದುವುವೋ

**ತೇಷ್ವಶಾಂತೇಷು ಮೂಢೇಷು ಖಂಡಿತಾತ್ಮಾವಸಾಯಿಷು ।**
**ಸಂಗಂ ನ ಕುರ್ಯಾಚ್ಛೋಚ್ಯೇಷು ಯೋಷಿತ್‌ಕ್ರೀಡಾಮೃಗೇಷು ಚ ॥೩೬॥**

ತೇಷು=ಹಿಂದೆ ಹೇಳಿದಂತಹ, ಅಶಾಂತೇಷು=ಭಗವನ್ನಿಷ್ಠೆ ಇಲ್ಲದ, ಮೂಢೇಷು=ಅವಿವೇಕಿಗಳಾದ ಖಂಡಿತಾತ್ಮಾವಸಾಯಿಷು=ಪರಿಚ್ಛಿನ್ನನಾದ ಜೀವನು ಮಾತ್ರ ಈ ಶರೀರದಲ್ಲಿರುವನು ಅಪರಿಚ್ಛಿನ್ನನಾದ ಪರಮಾತ್ಮನಿಲ್ಲವೆಂದು ತಿಳಿಯುವ ಯೋಷಿತ್‌ಕ್ರೀಡಾಮೃಗೇಷು=ಸ್ತ್ರೀಯರ ಆಟದ ಮಂಗನಂತಿರುವ ಶೋಚ್ಯೇಷು= ಶೋಚನೀಯರಾದ ಜನರಲ್ಲಿ ಸಂಗಂ=ಸ್ನೇಹವನ್ನು ನ ಕುರ್ಯಾತ್=ಮಾಡಬಾರದು.

ಇಲ್ಲಿ 'ಖಂಡಿತಾತ್ಮಾವಸಾಯಿಷು' ಎಂಬುದಕ್ಕೆ ಕೇವಲ ಜೀವನ ನಿಶ್ಚಯ ಉಳ್ಳವರೆಂದು ಅರ್ಥ ಮಾಡಿದರೆ ನಿಂದೆಯಾಗುವುದಿಲ್ಲ. ಕಾರಣ ಅದನ್ನು ಅನುವಾದ ಮಾಡಿ ''ಅಸಾಧಾರಣ್ಯೇನ ವ್ಯಪದೇಶಾಃ ಭವಂತಿ'' ಎಂಬ ನ್ಯಾಯದಿಂದ ಅರ್ಥ ಬರೆಯುವರು –

**ಖಂಡಿತಾತ್ಮಾವಸಾಯಿಷು ಜೀವಮಾತ್ರಜ್ಞಾನಿಷು ।**

ಈ ದೇಹದಲ್ಲಿ ಜೀವನು ಮಾತ್ರ ಇರುವನು ಪರಮಾತ್ಮನಿಲ್ಲವೆಂದು ತಿಳಿಯುವರೆಂದರ್ಥ. ॥೩೬॥

**ನ ತಥಾಸ್ಯ ಭವೇನ್ಮೋಹೋ ಬಂಧಶ್ಚಾನ್ಯಪ್ರಸಂಗತಃ ।**
**ಯೋಷಿತ್ಸಂಗಾತ್ ಯಥಾ ಪುಂಸಾಂ ಯಥಾ ತತ್ಸಂಗಿಸಂಗತಃ ॥೩೭॥**

ಯಥಾ=ಹೇಗೆ ತತ್ಸಂಗಿಸಂಗತಃ=ಭಗವಂತನ ಅನ್ಯಥಾ ಜ್ಞಾನವುಳ್ಳವರ, ಸಂಗವುಳ್ಳವರ ಸಂಗದಿಂದ ಮೋಹ ಬರುವದೋ ತಥಾ=ಹಾಗೆ ಯೋಷಿತ್ಸಂಗಾತ್=ದುಷ್ಟಸ್ತ್ರೀಸಂಗಮಾಡುವುದರಿಂದ ಮೋಹಃ ಬಂಧಃ ಚ ಸ್ಯಾತ್=ಮೋಹ ಬಂಧುಗಳಾಗುವುವು. ತಥಾ=ಹಾಗೆ ಅನ್ಯಪ್ರಸಂಗತಃ=ಪ್ರಾಕೃತರ ಸಂಗದಿಂದ ಅಸ್ಯ=ಜೀವನಿಗೆ ನ ಭವೇತ್=ಅಷ್ಟು ಮೋಹ ಆಗಲಾರದು. (ಜೀವೇಶ್ವರ ಅಭೇದ ತಿಳಿಯುವರ ಸಂಗದಂತೆ ದುಷ್ಟಸ್ತ್ರೀ ಸಂಗವೂ ದುಃಖಕರವೆಂದು ಭಾವ.)ಅಥವಾ ಯೋಷಿತ್ಸಂಗಾತ್=ದುಷ್ಟಸ್ತ್ರೀಸಂಗಮಾಡುವುದರಿಂದ ಯಥಾ ಮೋಹಃ ಭವೇತ್=ಹೇಗೆ ಮೋಹ ಬರುವದೊ, ತಥಾ=ಹಾಗೆ ತತ್ಸಂಗಿಸಂಗತಃ=ದುಷ್ಟಸ್ತ್ರೀಸಂಗ-ಮಾಡಿದವರ ಸಂಗದಿಂದಲೂ, ಮೋಹಃ ಭವೇತ್=ಮೋಹವಾಗುವುದು. ॥೩೭॥

ಸ್ತ್ರೀ ಸಂಗವು ಮೋಹಕವೆನ್ನಲು ಕೈಮುತ್ಯ ಹೇಳುವರು -

**ಪ್ರಜಾಪತಿರ್ದುಹಿತರಂ ದೃಷ್ಟ್ವಾ ತದ್ರೂಪಧರ್ಷಿತಃ ।**
**ರೋಹಿದ್‌ಭೂತಾಂ ಸೋಽನ್ವಧಾವದ್ ಋಷ್ಯರೂಪೀ ಗತತ್ರಪಃ ॥೩೮॥**

ಪ್ರಜಾಪತಿಃ=ಬ್ರಹ್ಮದೇವರು ದುಹಿತರಂ=ಮಗಳನ್ನು ದೃಷ್ಟ್ವಾ=ನೋಡಿ ತದ್ರೂಪಧರ್ಷಿತಃ=ಅವಳ ರೂಪಕ್ಕೆ ಮೋಹಿತನಾಗಿ ರೋಹಿದ್ಭೂತಾಂ= ಹೆಣ್ಣು ಜಿಂಕೆಯಾದ ಅವಳನ್ನು ಸಃ=ಬ್ರಹ್ಮದೇವನು ಗತತ್ರಪಃ=ನಿರ್ಲಜ್ಜನಾಗಿ ಋಷ್ಯರೂಪೀ =ಗಂಡು ಜಿಂಕೆಯಾಗಿ ಅನ್ವಧಾವತ್=ಬೆನ್ನಟ್ಟಿದನು. ಸ್ತ್ರೀಯರು ಅತಿಮೋಹಕರೆಂದು ತಿಳಿಸಲು, ದುಷ್ಟಜನಮೋಹನಕ್ಕಾಗಿಯೂ ತೋರಿದ ವ್ಯಾಪಾರವನ್ನು ಹೇಳಿರುವರೆಂದು ತಿಳಿಯಬೇಕು. ಇಲ್ಲವಾದರೆ ''ನ ಕರ್ಹಿಚಿನ್ಮೇ ಮನಸೋ ವೃಥಾಗತಿಃ'' ಎಂಬ ವಾಕ್ಯವಿರೋಧ ಬರುವುದು. ಋಜುಗಳಾದ ಅವರಿಗೆ ದೋಷ ಸಂಬಂಧವೇ ಇಲ್ಲ. ॥೩೮॥

**ತತ್ಸೃಷ್ಟಿಸೃಷ್ಟಸೃಷ್ಟೇಷು ಕೋನ್ವಖಂಡಿತಧೀಃ ಪುಮಾನ್ ।**
**ಋಷಿಂ ನಾರಾಯಣಮೃತೇ ಯೋಷಿನ್ಮಯ್ಯೇಹ ಮಾಯಯಾ ॥೩೯॥**

ತತ್ಸೃಷ್ಟಿ=ಬ್ರಹ್ಮನಸೃಷ್ಟಿಯಲ್ಲಿ ಸೃಷ್ಟ=ಉತ್ಪನ್ನರಾದ ಮರೀಚಿ ಮುಂತಾದವರು ಅವರಿಂದ ಸೃಷ್ಟೇಷು=ಉತ್ಪನ್ನರಾದ ಕಶ್ಯಪಾದಿಗಳಲ್ಲಿ ಅಥವಾ ಬ್ರಹ್ಮನಿಂದ ಸೃಷ್ಟರಾದ, ಸ್ವಾಯಂಭುವಾದಿಗಳಿಂದ ಸೃಷ್ಟರಾದ ಪ್ರಿಯವ್ರತಾದಿಗಳು, ಉತ್ತಮಾದಿಗಳು ಇವರಲ್ಲಿ ಋಷಿಂ=ಸರ್ವಜ್ಞನಾದ ನಾರಾಯಣಂ ಋತೇ=ನಾರಾಯಣನನ್ನು ಬಿಟ್ಟು ಕಃ ಪುಮಾನ್=ಯಾವ ಮನುಷ್ಯನು ಇಹ=ಜಗತ್ತಿನಲ್ಲಿ ಯೋಷ್ಟಿನ್ಮಯ್ಯಾ=ಸ್ತ್ರೀರೂಪ-ವಾದ ಮಾಯಯಾ=ಭಗವದಧೀನವಾದ ಬಂಧಕಶಕ್ತಿಯಿಂದ ಅಖಂಡಿತಧೀಃ =ಆಕರ್ಷಿತನಾಗದವನು? ಎಲ್ಲರೂ ಆಕರ್ಷಿತರೇ.

ಮಾಯಾಶಬ್ದಾರ್ಥ ಹೇಳುವರು –

**ಮಯಃ ಪ್ರಧಾನ ಉದ್ದಿಷ್ಟೋ ಮಾಯಾ ತದ್ವಶ ಉಚ್ಯತೇ ।**

'ಮಯ ಎಂದರೆ ಪ್ರಧಾನನಾದ ಶ್ರೀಹರಿಯು. ಅವನ ಅಧೀನವಾದ ಬಂಧಕ ಶಕ್ತಿಯು ಮಾಯಾ ಎನಿಸುವುದು' ಎಂದು ಭಾವ. ॥೩೯॥

ಸ್ತ್ರೀರೂಪಮಾಯೆಯು ಬೇರೆಯವರಿಂದ ಗೆಲ್ಲಲಸಾಧ್ಯವೆಂದು ಹೇಳುವರು–

**ಬಲಂ ಮೇ ಪಶ್ಯ ಮಾಯಾಯಾಃ ಸ್ತ್ರೀಮಯ್ಯಾ ಜಯಿನೋ ದಿಶಾಮ್ ।**
**ಯಾ ಕರೋತಿ ನಿಜಾಯತ್ತಾನ್ ಭ್ರೂವಿಜೃಂಭೇಣ ಕೇವಲಮ್ ॥೪೦॥**

ಮೇ=ನನ್ನ ಅಧೀನವಾದ ಸ್ತ್ರೀಮಯ್ಯಾಃ ಮಯಾಯಾಃ=ಸ್ತ್ರೀರೂಪ ಬಂಧಕ ಶಕ್ತಿಯ ಬಲಂ=ಸಾಮರ್ಥ್ಯವನ್ನು ಪಶ್ಯ=ನೋಡು. ಯಾ=ಯಾವಳು ಕೇವಲಂ ಭ್ರೂವಿಜೃಂಭೇಣ=ತನ್ನ ಹುಬ್ಬು ಹಾರಿಸುವ ಮಾತ್ರದಿಂದ ದಿಶಾಂ ಜಯಿನಃ= ದಿಕ್ಕುಗಳನ್ನು ಗೆಲ್ಲುವ ಶೂರರನ್ನೂ ನಿಜಾಯತ್ತಾನ್ ಕರೋತಿ=ಸ್ವಾಧೀನ ಮಾಡಿಕೊಳ್ಳುವಳು. ॥೪೦॥

ಇಂತಹ ಸ್ತ್ರೀಜಯಕ್ಕೆ ಉಪಾಯವೆಂದರೆ ಅವಳ ಸಂಗತ್ಯಾಗವೇ ಎಂದು ಹೇಳುವರು –

**ಸಂಗಂ ನ ಕುರ್ಯಾತ್ ಪ್ರಮದಾಸು ಜಾತು**
**ಯೋಗಸ್ಯ ಪಾರಂ ಪರಮಾರುರುಕ್ಷುಃ ।**
**ಮತ್ಸೇವಯಾ ಪ್ರತಿಲಬ್ಧಾತ್ಮಲಾಭೋ**
**ವದಂತಿ ಯಾಂ ನಿರಯದ್ವಾರಮಸ್ಯ ॥೪೦॥**

ಅಸ್ಯ=ಸ್ತ್ರೀಯಲ್ಲಿ ಆಸಕ್ತನಾದವನಿಗೆ ಯಾಂ=ಯಾವಳನ್ನು ನಿರಯದ್ವಾರಂ ವದಂತಿ=ನರಕಮಾರ್ಗವೆಂದು ಹೇಳುವರೋ ತಾಸು ಪ್ರಮದಾಸು=ಅಂತಹ ಪ್ರಕೃಷ್ಟಮದಜನಕರಾದ, ತತ್ವವಿಸ್ಮರಣಕಾರಣರಾದ್ದರಿಂದ ಪ್ರಮಾಖಂಡನ ಸಾಧನರಾದ್ದರಿಂದ ಪ್ರಮದಾ ಎನಿಸಿಕೊಳ್ಳುವ ಸ್ತ್ರೀಯರಲ್ಲಿ, ಯೋಗಸ್ಯ ಪರಂ ಪಾರಂ ಆರುರುಕ್ಷುಃ=ಭಗವತ್‌ಜ್ಞಾನರೂಪಯೋಗದ ಕೊನೆಯ ಹಂತವನ್ನು ಪಡೆಯಲಿಚ್ಛಿಸುವವನು ಮತ್ಸೇವಯಾ=ನನ್ನ ಸೇವೆಯಿಂದ ಪ್ರತಿಲಬ್ಧಾತ್ಮಲಾಭಃ= ಸ್ವರೂಪಾನಂದ ಪಡೆದವನಾಗಿ ಜಾತು=ಯಾವ ಕಾಲದಲ್ಲಿಯೂ ಸಂಗಂ= ಸ್ನೇಹವನ್ನು ನ ಕುರ್ಯಾತ್=ಮಾಡಬಾರದು. (ವೇದಾಂತಾದಿ ಶಾಸ್ತ್ರ ಶ್ರವಣ-ರೂಪವಾದ ಸೇವೆಯಿಂದ, ವಿಷಯತ್ಯಾಗ ಮಾಡುವುದರಿಂದ ಸ್ವರೂಪಾನಂದ ಉಳ್ಳವನು, ಇಂದ್ರಿಯಗಳನ್ನು ಗೆದ್ದವನಾದ್ದರಿಂದ ಸ್ವರೂಪಾನಂದ ಸಂತುಷ್ಟನಾದ-ವನೆಂದರ್ಥ.) ಸುಖದಾಯಕಳಾದ ಅವಳನ್ನು ಬಿಡುವುದು ಹೇಗೆ? ಎಂಬ ಶಂಕೆಗೆ, ಅವಳನ್ನು ತ್ಯಾಗ ಮಾಡುವುದರಿಂದ ಅವಳಿಂದಾಗುವ ಸುಖಕ್ಕಿಂತ ಹೆಚ್ಚಿನದಾದ ಸ್ವರೂಪಸುಖ ದೊರೆಯುವುದೆಂದು ಉತ್ತರಿಸಿದಂತಾಯಿತು. 'ಪ್ರತಿಲಬ್ಧಾತ್ಮಭಾವಃ' ಎಂಬ ಪಾಠದಲ್ಲಿ ಭಕ್ತಿಯನ್ನು ಹೊಂದಿದವನಾಗಿ ಎಂದರ್ಥ.

ತನಗೆ ಜ್ಞಾನದಾನ ಮಾಡುವ ಪುರುಷರಸಂಗ ಯುಕ್ತವೇ. ಮತ್ತು ನಿಯತಭಾರ್ಯಾ ಸಂಗವೂ ಯುಕ್ತವೇ. ಇತರ ಸಂಗವು ವರ್ಜನೀಯವೆಂದು ಭಾವ. ''ಸತ್ಪುಂಸು ಚ ತಥಾ ಸ್ತ್ರೀಷು ನ ಸಂಗೋ ದೋಷಮಾವಹೇತ್। ಯಥಾ ಯೋಗ್ಯಗುಣಾಯ್ಯೈವ ದೋಷಕೃದ್ ದುಷ್ಟ ಜಂತುಷು'' ಎಂದು ಹೇಳಿರುವುದು.

ಸ್ತ್ರೀ ಸಂಗ ವರ್ಜನೀಯವೆಂದೂ ಹೇಳಿರುವರು -

**ಅಂಗಾರಸದೃಶೀ ನಾರೀ ಘೃತಕುಂಭಸಮಃ ಪುಮಾನ್ ।**
**ತಸ್ಮಾನ್ನಾರೀಷು ಸಂಸರ್ಗಂ ದೂರತಃ ಪರಿವರ್ಜಯೇತ್ ॥**

ಹೆಣ್ಣು ಕೆಂಡವಿದ್ದಂತೆ. ಗಂಡು ತುಪ್ಪದ ಕೊಡವಿದ್ದಂತೆ ಹತ್ತಿರ ಹೋದರೆ ಕರಗುವನು. ಕಾರಣ ದೂರದಿಂದಲೇ ತ್ಯಜಿಸಬೇಕು.

**ಗೌಡೀ ಮಾಧ್ವೀ ತಥಾ ಪೈಷ್ಟೀ ವಿಜ್ಞೇಯಾ ತ್ರಿವಿಧಾ ಸುರಾ ।**
**ಚತುರ್ಥೀ ಪ್ರಮದಾ ಜ್ಞೇಯಾ ಯಯೇದಂ ಮೋಹಿತಂ ಜಗತ್ ॥**
**ಮಾದ್ಯತಿ ಪ್ರಮದಾಂ ದೃಷ್ಟ್ವಾ ಸುರಾಂ ಪೀತ್ವೈವ ಮಾದ್ಯತಿ ।**
**ಯಸ್ಮಾದ್ ದೃಷ್ಟಿಮದಾ ನಾರೀ ತಸ್ಮಾತ್ತಾಂ ನಾವಲೋಕಯೇತ್ ॥**

ಬೆಲ್ಲದಿಂದ ತಯಾರಿಸಿದ್ದು, ಹಣ್ಣುಗಳಿಂದ ತಯಾರಿಸಿದ್ದು, ಹಿಟ್ಟಿನಿಂದ ತಯಾರಿಸಿದ್ದು ಹೀಗೆ ಮೂರು ವಿಧವಾದದ್ದು ಮದ್ಯವು. ನಾಲ್ಕನೆಯದ್ದು ಎಂದರೆ ಪ್ರಮದಾ. ಯಾವಳಿಂದ ಜಗತ್ತೇ ಮೋಹಿತವಾಗಿದೆ. ಉಳಿದ ಮದ್ಯಗಳನ್ನು ಪಾನ ಮಾಡಿದರೆ ಮದ ಬರುವುದಾದರೆ, ಪ್ರಮದೆಯನ್ನು ನೋಡವ ಮಾತ್ರದಿಂದಲೇ ಮದಬರುವುದು. ಕಾರಣ ಸ್ತ್ರೀಯರನ್ನು ಕಣ್ಣೆತ್ತಿ ನೋಡಲೂ ಬಾರದು ಎಂದು ಭಾವ. ॥೪೧॥

ಮುಂದೆ ಹೇಳುವ ಕಾರಣದಿಂದಲೂ ದುಷ್ಟಸ್ತ್ರೀಸಂಗವು ತ್ಯಾಜ್ಯವೆಂದು ಹೇಳುವರು –

**ಯೋಪಯಾತಿ ಶನೈರ್ಮಾಯಾ ಯೋಷಿದ್ ದೇವವಿನಿರ್ಮಿತಾ ।**
**ತಾಮೀಕ್ಷೇತಾತ್ಮನೋ ಮೃತ್ಯುಂ ತೃಣೈಃ ಕೂಪಮಿವಾವೃತಮ್ ॥೪೨॥**

ದೇವನಿರ್ಮಿತಾ=ಭಗವಂತನಿಂದ ಸೃಷ್ಟಿಸಿದ ಯೋಷಿತ್=ಸ್ತ್ರೀಯೆಂಬ ಮಾಯಾ =ಯಾವ ಬಂದಕಶಕ್ತಿಯು ಶನೈಃ=ಮೆಲ್ಲನೆ ಸೇವೆ ಮುಂತಾದ ನೆಪದಿಂದ ಉಪಯಾತಿ=ಹತ್ತಿರ ಬರುವಳೋ ತಾಂ ಅವಳನ್ನು ತೃಣೈಃ=ಹುಲ್ಲಿನಿಂದ ಆವೃತಂ =ಮುಚ್ಚಲ್ಪಟ್ಟ ಕೂಪಂ ಇವ=ಭಾವಿಯಂತೆ ಆತ್ಮನಃ=ತನಗೆ ಮೃತ್ಯುಂ ಈಕ್ಷೇತ್= ಮೃತ್ಯು ಸಮಾನವೆಂದು ತಿಳಿಯಬೇಕು. ಅನರ್ಥಪ್ರದಳೆಂದು ಭಾವ. ॥೪೨॥

ಇಲ್ಲಿಯವರೆಗೆ ಪರಸ್ತ್ರೀಸಂಗ ಅನರ್ಥಪ್ರದವೆಂದು ಹೇಳಿ ಸ್ವಸ್ತ್ರೀಸಂಗವೂ ಅನರ್ಥಪ್ರದ ಎಂದು ಹೇಳುವರು–

**ಯಾಂ ಮನ್ಯತೇ ಪತಿರ್ಮೋಹಾನ್ಮನ್ಮಾಯಾಮೃಷಭಾಯತೀಮ್ ।**
**ಸ್ತ್ರೀತ್ವಂ ಸ್ತ್ರೀಸಂಗತಃ ಪ್ರಾಪ್ತಾಂ ವಿತ್ತಾಪತ್ಯಗೃಹಪ್ರದಾಮ್ ॥೪೩॥**

ಪತಿಃ=ಗಂಡನು ಸ್ತ್ರೀಸಂಗತಃ=ಪೂರ್ವದೇಹವನ್ನು ಬಿಡುವಾಗ ಸ್ತ್ರೀಧ್ಯಾನ ಮಾಡಿದ್ದರಿಂದ ಸ್ತ್ರೀತ್ವಂ ಪ್ರಾಪ್ತಾಂ=ಹೆಣ್ಣಾಗಿರುವ ಋಷಭಾಯತೀಂ=ಪುರುಷ-ನಂತಾಚರಿಸುವ ಎಲ್ಲ ಕಾರ್ಯನಿರ್ವಹಿಸುವ ಯಾಂ ಮನ್ಮಾಯಾಂ=ಯಾವ ನನ್ನ ಬಂದಕಶಕ್ತಿಯಾದ ಸ್ತ್ರೀಯನ್ನು ಮೋಹಾತ್=ಭ್ರಮದಿಂದ ವಿತ್ತಾಪತ್ಯಗೃಹಪ್ರದಾಂ ಮನ್ಯತೇ=ದ್ರವ್ಯ, ಪುತ್ರ, ಮನೆ ಮುಂತಾದುವನ್ನು ಕೊಡುವವಳೆಂದು ಮನ್ಯತೇ= ತಿಳಿಯುವನು. ॥೪೩॥

ಪ್ರಾಸಂಗಿಕವಾಗಿ ಭೃತ್ಯಾದಿಸಂಗವೂ ಅನರ್ಥವೆಂದು ಹೇಳುವರು –

**ತಮಾತ್ಮನೋ ವಿಜಾನೀಯಾದ್ ಭೃತ್ಯಾಪತ್ಯಗೃಹಾತ್ಮಕಮ್ ।**
**ದೈವೋಪಸಾದಿತಂ ಮೃತ್ಯುಂ ಮೃಗಯೋರ್ಗಾಯನಂ ಯಥಾ ॥**

ದೈವೋಪಸಾದಿತಂ=ತನ್ನ ಕರ್ಮಾನುಸಾರ ದೊರೆತ ಭೃತ್ಯ=ಸೇವಕ ಅಪತ್ಯ= ಮಕ್ಕಳು ಗೃಹ=ಮನೆ ಮುಂತಾದವನ್ನು ಮೃಗಯೋಃ ಗಾಯನಂ ಯಥಾ= ಬೇಟೆಗಾರನ ಗಾಯನವು ಇಂಪಾದರೂ ಮೃಗಗಳ ಮೃತ್ಯುವಿಗೆ ಕಾರಣವಾಗುವಂತೆ ಆತ್ಮನಃ ಮೃತ್ಯುಂ ವಿಜಾನೀಯಾತ್=ತನಗೆ ಮಾರಕವೆಂದು ತಿಳಿಯಬೇಕು.

ಈ ಪ್ರಕರಣದಲ್ಲಿ ಸ್ತ್ರೀಸಂಗವಾಗಲಿ, ಸ್ತ್ರೀಸಂಗಿಸಂಗವಾಗಲಿ ಸರ್ವಾತ್ಮನಾ ಮಾಡಬಾರದು ಎಂದು ತೋರುವುದು ಅದು ಸರಿಯಲ್ಲ. ಸ್ತ್ರೀಸಂಗಿಗಳಾದ ವಸಿಷ್ಠಾದಿಗಳ ಸಂಗವನ್ನು ಮತ್ತು ಗೃಹಸ್ಥಾಶ್ರಮವನ್ನು ಮುಮುಕ್ಷುಗಳು ಅನುಷ್ಠಾನ ಮಾಡಬಾರದು ಎಂದಾಗುವುದು. ಕಾರಣ ಇಲ್ಲಿ ವಿವಕ್ಷಿತ ತಾತ್ಪರ್ಯ ಹೇಳುವರು –

**ಸತ್ ಪುಂಸು ಚ ತಥಾ ಸ್ತ್ರೀಷು ನ ಸಂಗೋ ದೋಷಮಾವಹೇತ್ ।**
**ಯಥಾ ಯೋಗ್ಯಂ ಗುಣಾಯೈವ ದೋಷಕೃದ್ದುಷ್ಟಜಂತುಷು ॥**

**ಇತಿ ವಾರಾಹೇ ।**

ಸತ್ಪುರುಷರ ಹಾಗು ಸತ್‌ಸ್ತ್ರೀಯರ(ಪತ್ನಿ)ಸಂಗವು ದೋಷಾಪಾದಕವಲ್ಲ. ಸಜ್ಜನರ ಸಹವಾಸ ಜ್ಞಾನಾದಿ ಗುಣಲಾಭಕ್ಕೆ ಕಾರಣ. ನಿಷೇಧಮಾಡಿದ್ದು ದುಷ್ಟರಾದ ಸ್ತ್ರೀಸಂಗಿಗಳ ಹಾಗು ದುಷ್ಟಸ್ತ್ರೀಯರ ಸಂಗ ಮಾಡಬಾರದು ಎಂಬ ಅಭಿಪ್ರಾಯ-ದಿಂದ ಎಂದು ಭಾವ. ॥೪೪॥

ಇಲ್ಲಿವರೆಗೆ ದುಷ್ಟಸ್ತ್ರೀಸಂಗ ತತ್ಸಂಗಿಸಂಗ ಅನರ್ಥ ಕಾರಣವೆಂದು ಹೇಳಿ "ತದರ್ಥಂ ಕುರುತೇ ಕರ್ಮ ಯದ್ಬದ್ಧೋ ಯಾತಿ ಸಂಸೃತಿಂ" ಎಂದು ಹೇಳಿದ ಕರ್ಮಪರಂಪರೆಯು ಸಂಸಾರಪರಂಪರಾಕಾರಣವಾದದ್ದನ್ನು ವಿವರಿಸುವರು–

**ದೇಹೇನ ಜೀವಭೂತೇನ ಲೋಕಾಲ್ಲೋಕಮನುವ್ರಜನ್ ।**
**ಭುಂಜಾನ ಏವ ಕರ್ಮಾಣಿ ಕರೋತ್ಯವಿರತಂ ಪುಮಾನ್ ॥೪೫॥**

ಜೀವಭೂತೇನ=ಜೀವನ ಪೂರ್ವಕರ್ಮಾರ್ಜಿತವಾದ ದೇಹೇನ=ಯಾತನಾ ಕಾರಣವಾದ ಅಥವಾ ತೇಜೋಮಯವಾದ ಶರೀರದಿಂದ ಜೀವನು ಲೋಕಾತ್= ಈ ಲೋಕವನ್ನು ಬಿಟ್ಟು ಲೋಕಂ=ನರಕವನ್ನೋ ಸ್ವರ್ಗವನ್ನೋ ಅನುವ್ರಜನ್= ಹೋಗುವನಾಗಿ ತತ್ರ=ಅಲ್ಲಿ ಕರ್ಮಾಣಿ ಭುಂಜಾನಃ=ಕರ್ಮಫಲವನ್ನನುಭವಿಸುತ್ತ

ಬೆಲ್ಲದಿಂದ ತಯಾರಿಸಿದ್ದು, ಹಣ್ಣುಗಳಿಂದ ತಯಾರಿಸಿದ್ದು, ಹಿಟ್ಟಿನಿಂದ ತಯಾರಿಸಿದ್ದು ಹೀಗೆ ಮೂರು ವಿಧವಾದದ್ದು ಮದ್ಯವು. ನಾಲ್ಕನೆಯದ್ದು ಎಂದರೆ ಪ್ರಮದಾ. ಯಾವಳಿಂದ ಜಗತ್ತೇ ಮೋಹಿತವಾಗಿದೆ. ಉಳಿದ ಮದ್ಯಗಳನ್ನು ಪಾನ ಮಾಡಿದರೆ ಮದ ಬರುವುದಾದರೆ, ಪ್ರಮದೆಯನ್ನು ನೋಡವ ಮಾತ್ರದಿಂದಲೇ ಮದಬರುವುದು. ಕಾರಣ ಸ್ತ್ರೀಯರನ್ನು ಕಣ್ಣೆತ್ತಿ ನೋಡಲೂ ಬಾರದು ಎಂದು ಭಾವ. ॥೪೧॥

ಮುಂದೆ ಹೇಳುವ ಕಾರಣದಿಂದಲೂ ದುಷ್ಟಸ್ತ್ರೀಸಂಗವು ತ್ಯಾಜ್ಯವೆಂದು ಹೇಳುವರು –

**ಯೋಪಯಾತಿ ಶನೈರ್ಮಾಯಾ ಯೋಷಿದ್ ದೇವವಿನಿರ್ಮಿತಾ ।**
**ತಾಮೀಕ್ಷೇತಾತ್ಮನೋ ಮೃತ್ಯುಂ ತೃಣೈಃ ಕೂಪಮಿವಾವೃತಮ್ ॥೪೨॥**

ದೇವನಿರ್ಮಿತಾ=ಭಗವಂತನಿಂದ ಸೃಷ್ಟಿಸಿದ ಯೋಷಿತ್=ಸ್ತ್ರೀಯೆಂಬ ಮಾಯಾ =ಯಾವ ಬಂದಕಶಕ್ತಿಯು ಶನೈಃ=ಮೆಲ್ಲನೆ ಸೇವೆ ಮುಂತಾದ ನೆಪದಿಂದ ಉಪಯಾತಿ=ಹತ್ತಿರ ಬರುವಳೋ ತಾಂ ಅವಳನ್ನು ತೃಣೈಃ=ಹುಲ್ಲಿನಿಂದ ಆವೃತಂ =ಮುಚ್ಚಲ್ಪಟ್ಟ ಕೂಪಂ ಇವ=ಭಾವಿಯಂತೆ ಆತ್ಮನಃ=ತನಗೆ ಮೃತ್ಯುಂ ಈಕ್ಷೇತ್= ಮೃತ್ಯು ಸಮಾನವೆಂದು ತಿಳಿಯಬೇಕು. ಅನರ್ಥಪ್ರದಳೆಂದು ಭಾವ. ॥೪೨॥

ಇಲ್ಲಿಯವರೆಗೆ ಪರಸ್ತ್ರೀಸಂಗ ಅನರ್ಥಪ್ರದವೆಂದು ಹೇಳಿ ಸ್ವಸ್ತ್ರೀಸಂಗವೂ ಅನರ್ಥಪ್ರದ ಎಂದು ಹೇಳುವರು–

**ಯಾಂ ಮನ್ಯತೇ ಪತಿರ್ಮೋಹಾನ್ಮನ್ಮಾಯಾಮೃಷಭಾಯತೀಮ್ ।**
**ಸ್ತ್ರೀತ್ವಂ ಸ್ತ್ರೀಸಂಗತಃ ಪ್ರಾಪ್ತಾಂ ವಿತ್ತಾಪತ್ಯಗೃಹಪ್ರದಾಮ್ ॥೪೩॥**

ಪತಿಃ=ಗಂಡನು ಸ್ತ್ರೀಸಂಗತಃ=ಪೂರ್ವದೇಹವನ್ನು ಬಿಡುವಾಗ ಸ್ತ್ರೀಧ್ಯಾನ ಮಾಡಿದ್ದರಿಂದ ಸ್ತ್ರೀತ್ವಂ ಪ್ರಾಪ್ತಾಂ=ಹೆಣ್ಣಾಗಿರುವ ಋಷಭಾಯತೀಂ=ಪುರುಷ-ನಂತಾಚರಿಸುವ ಎಲ್ಲ ಕಾರ್ಯನಿರ್ವಹಿಸುವ ಯಾಂ ಮನ್ಮಾಯಾಂ=ಯಾವ ನನ್ನ ಬಂದಕಶಕ್ತಿಯಾದ ಸ್ತ್ರೀಯನ್ನು ಮೋಹಾತ್=ಭ್ರಮದಿಂದ ವಿತ್ತಾಪತ್ಯಗೃಹಪ್ರದಾಂ ಮನ್ಯತೇ=ದ್ರವ್ಯ, ಪುತ್ರ, ಮನೆ ಮುಂತಾದುವನ್ನು ಕೊಡುವವಳೆಂದು ಮನ್ಯತೇ= ತಿಳಿಯುವನು. ॥೪೩॥

ಪ್ರಾಸಂಗಿಕವಾಗಿ ಭೃತ್ಯಾದಿಸಂಗವೂ ಅನರ್ಥವೆಂದು ಹೇಳುವರು -

**ತಮಾತ್ಮನೋ ವಿಜಾನೀಯಾದ್ ಭೃತ್ಯಾಪತ್ಯಗೃಹಾತ್ಮಕಮ್ ।**
**ದೈವೋಪಸಾದಿತಂ ಮೃತ್ಯುಂ ಮೃಗಯೋರ್ಗಾಯನಂ ಯಥಾ ॥**

ದೈವೋಪಸಾದಿತಂ=ತನ್ನ ಕರ್ಮಾನುಸಾರ ದೊರೆತ ಭೃತ್ಯ=ಸೇವಕ ಅಪತ್ಯ= ಮಕ್ಕಳು ಗೃಹ=ಮನೆ ಮುಂತಾದವನ್ನು ಮೃಗಯೋಃ ಗಾಯನಂ ಯಥಾ= ಬೇಟೆಗಾರನ ಗಾಯನವು ಇಂಪಾದರೂ ಮೃಗಗಳ ಮೃತ್ಯುವಿಗೆ ಕಾರಣವಾಗುವಂತೆ ಆತ್ಮನಃ ಮೃತ್ಯುಂ ವಿಜಾನೀಯಾತ್=ತನಗೆ ಮಾರಕವೆಂದು ತಿಳಿಯಬೇಕು.

ಈ ಪ್ರಕರಣದಲ್ಲಿ ಸ್ತ್ರೀಸಂಗವಾಗಲಿ, ಸ್ತ್ರೀಸಂಗಿಸಂಗವಾಗಲಿ ಸರ್ವಾತ್ಮನಾ ಮಾಡಬಾರದು ಎಂದು ತೋರುವುದು ಅದು ಸರಿಯಲ್ಲ. ಸ್ತ್ರೀಸಂಗಿಗಳಾದ ವಸಿಷ್ಠಾದಿಗಳ ಸಂಗವನ್ನು ಮತ್ತು ಗೃಹಸ್ಥಾಶ್ರಮವನ್ನು ಮುಮುಕ್ಷುಗಳು ಅನುಷ್ಠಾನ ಮಾಡಬಾರದು ಎಂದಾಗುವುದು. ಕಾರಣ ಇಲ್ಲಿ ವಿವಕ್ಷಿತ ತಾತ್ಪರ್ಯ ಹೇಳುವರು -

**ಸತ್ ಪುಂಸು ಚ ತಥಾ ಸ್ತ್ರೀಷು ನ ಸಂಗೋ ದೋಷಮಾವಹೇತ್ ।**
**ಯಥಾ ಯೋಗ್ಯಂ ಗುಣಾಯೈವ ದೋಷಕೃದ್ದುಷ್ಟಜಂತುಷು ॥**

**ಇತಿ ವಾರಾಹೇ ।**

ಸತ್ಪುರುಷರ ಹಾಗು ಸತ್‌ಸ್ತ್ರೀಯರ(ಪತ್ನಿ)ಸಂಗವು ದೋಷಾಪಾದಕವಲ್ಲ. ಸಜ್ಜನರ ಸಹವಾಸ ಜ್ಞಾನಾದಿ ಗುಣಲಾಭಕ್ಕೆ ಕಾರಣ. ನಿಷೇಧಮಾಡಿದ್ದು ದುಷ್ಟರಾದ ಸ್ತ್ರೀಸಂಗಿಗಳ ಹಾಗು ದುಷ್ಟಸ್ತ್ರೀಯರ ಸಂಗ ಮಾಡಬಾರದು ಎಂಬ ಅಭಿಪ್ರಾಯ-ದಿಂದ ಎಂದು ಭಾವ. ॥೪೪॥

ಇಲ್ಲಿವರೆಗೆ ದುಷ್ಟಸ್ತ್ರೀಸಂಗ ತತ್ಸಂಗಿಸಂಗ ಅನರ್ಥ ಕಾರಣವೆಂದು ಹೇಳಿ "ತದರ್ಥಂ ಕುರುತೇ ಕರ್ಮ ಯದ್ಬದ್ಧೋ ಯಾತಿ ಸಂಸೃತಿಂ" ಎಂದು ಹೇಳಿದ ಕರ್ಮಪರಂಪರೆಯು ಸಂಸಾರಪರಂಪರಾಕಾರಣವಾದದ್ದನ್ನು ವಿವರಿಸುವರು-

**ದೇಹೇನ ಜೀವಭೂತೇನ ಲೋಕಾಲ್ಲೋಕಮನುವ್ರಜನ್ ।**
**ಭುಂಜಾನ ಏವ ಕರ್ಮಾಣಿ ಕರೋತ್ಯವಿರತಂ ಪುಮಾನ್ ॥೪೫॥**

ಜೀವಭೂತೇನ=ಜೀವನ ಪೂರ್ವಕರ್ಮಾರ್ಜಿತವಾದ ದೇಹೇನ=ಯಾತನಾ ಕಾರಣವಾದ ಅಥವಾ ತೇಜೋಮಯವಾದ ಶರೀರದಿಂದ ಜೀವನು ಲೋಕಾತ್= ಈ ಲೋಕವನ್ನು ಬಿಟ್ಟು ಲೋಕಂ=ನರಕವನ್ನೋ ಸ್ವರ್ಗವನ್ನೋ ಅನುವ್ರಜನ್= ಹೋಗುವನಾಗಿ ತತ್ರ=ಅಲ್ಲಿ ಕರ್ಮಾಣಿ ಭುಂಜಾನಃ=ಕರ್ಮಫಲವನ್ನನುಭವಿಸುತ್ತ

ಕರ್ಮಶೇಷದಿಂದ ಪುನಃ=ಈ ಲೋಕಕ್ಕೆ ಬಂದು, ಇಲ್ಲಿಯೂ ಪೂರ್ವಕರ್ಮ-ಫಲವನ್ನನುಭವಿಸುತ್ತ ಮತ್ತೆ ಪುಮಾನ್=ಜೀವನು ಅವಿರತಂ ಕರ್ಮಾಣಿ ಕರೋತಿ=ಮುಗಿಯದಿರುವಂತೆ ಕರ್ಮಮಾಡುವನು.

ಇಲ್ಲಿ ಜೀವಾಭಿನ್ನವಾದ ದೇಹದಿಂದ ಎಂದರ್ಥ ತೋರುವುದು, ಕಾರಣ ವ್ಯಾಖ್ಯಾನಿಸುವರು–

**ಜೀವಭೂತೇನ ಜೀವಕರ್ಮಭೂತೇನ ।**

ಇದರಿಂದ ಜೀವದಪವು ಜೀವಕರ್ಮೋಪಲಕ್ಷಕ, ಜೀವಕರ್ಮಭೂತಂ ಎಂದು ಮಧ್ಯಮಪದಲೋಪಿ ಸಮಾಸ. ಪೂರ್ವಕರ್ಮನಿರ್ಮಿತವಾದ ಎಂದರ್ಥ. ॥೪೫॥

''ಭೂತಬಂಧಸ್ತು ಸಂಸಾರಃ ಮುಕ್ತಿಸ್ತೇಭ್ಯೋ ವಿಮೋಚನಂ'' ಎಂದಿರುವುದ-ರಿಂದ ಭೂತೇಂದ್ರಿಯಗಳ ಸಂಬಂಧವೇ ಜೀವನಿಗೆ ಬಂಧ. ಇವುಗಳು ಮರಣ-ವಾದಾಗಲೇ ಬಿಟ್ಟು ಹೋಗುವುವು. ಅಂದಮೇಲೆ ಅವನು ಮುಕ್ತನಾದಂತೆಯೆ. ಆದ ಕಾರಣ ಮುಕ್ತನಿಗೆ ನರಕಾದಿಗಳು ಹೇಗಾಗುವುವು ಎಂದು ಈ ಶ್ಲೋಕದಲ್ಲಿ ಹೇಳುವರು –

**ಜೀವೋ ಯಸ್ಯಾನುಗೋ ದೇಹೋ ಭೂತೇಂದ್ರಿಯಮನೋಮಯಃ ।**
**ತನ್ನಿರೋಧೋऽಸ್ಯ ಮರಣಮಾವಿರ್ಭಾವಸ್ತು ಸಂಭವಃ ॥೪೬॥**

ಭೂತೇಂದ್ರಿಯಮನೋಮಯಃ=ಪಂಚಭೂತಗಳು, ದಶೇಂದ್ರಿಯಗಳು ಮನಸ್ಸು ಈ ರೀತಿ ಷೋಡಶಕಲೆಗಳಿಂದ ಕೂಡಿದ ದೇಹಃ=ಲಿಂಗದೇಹವು ಯಸ್ಯ ಅನುಗಃ=ಯಾವನನ್ನು ಅನುಸರಿಸಿ ಬರುವುದೋ ಅವನು ಜೀವಃ=ಜೀವನು ಅಸ್ಯ=ಜೀವನಿಗೆ ತನ್ನಿರೋಧಃ=ಸ್ಥೂಲದೇಹದ ನಾಶವೇ ಮರಣಂ=ಮೃತನೆಂಬ ವ್ಯವಹಾರಕ್ಕೆ ಕಾರಣವು. ಅವಿರ್ಭಾವಸ್ತು=ಭೂತಗಳ ವಿಶೇಷ ಸಂಯೋಗವೇ ಸಂಭವಃ=ಉತ್ಪತ್ತಿ ವ್ಯವಹಾರ ಕಾರಣವು. ಪ್ರಸಿದ್ಧವಾದ ಮರಣವಾದಾಗ ಎಲ್ಲ ಭೂತೇಂದ್ರಿಯಸಂಬಂಧ ಪೂರ್ಣವಾಗಿ ಹೋಗುವುದಿಲ್ಲ, ಹಾಗಿದ್ದಲ್ಲಿ ಮುಕ್ತಿ-ಯಾಗುತ್ತಿತ್ತು. ಆದರೆ ಲಿಂಗಶರೀರರೂಪದಿಂದ ಭೂತೇಂದ್ರಿಯಗಳು ಜೀವನ ಹಿಂದೆ ಬರುವುವು. ಸ್ಥೂಲವಾಗಿ ಪರಿಣತವಾದ ಭಾಗಗಳು ಮಾತ್ರ ಸರಿಯುವುವು. ಸ್ಥೂಲದೇಹದ ನಾಶವೇ ಮರಣ, ಸ್ಥೂಲದೇಹಪ್ರಾಪ್ತಿಯೇ ಜನನವಾದ್ದರಿಂದ ಮುಕ್ತನಲ್ಲದ್ದರಿಂದ ನರಕಾದಿಗಳು ಯುಕ್ತವೇ. ॥೪೬॥

ಸುಡುವುದಕ್ಕಿಂತ ಮೊದಲು, ಶವರೂಪದಿಂದ ಸ್ಥೂಲದೇಹವಿರುವಾಗಲೂ ಮೃತನೆಂದು ವ್ಯವಹಾರ ಮಾಡುವುದು ಕಂಡಿದೆಯಾದ್ದರಿಂದ,ಸ್ಥೂಲದೇಹನಾಶವೇ ಮರಣವೆಂದು ಹೇಳುವುದು ಸರಿಯಲ್ಲ ಎಂಬುದಕ್ಕೆ ಮೂಲಕಾರರೇ ಉತ್ತರಿಸುವರು -

**ದ್ರವ್ಯೋಪಲಬ್ಧಿಸ್ಥಾನಸ್ಯ ದ್ರವ್ಯೇಕ್ಷಾಽಯೋಗ್ಯತಾ ಯದಾ ।**
**ತತ್ ಪಂಚತ್ವಮಹಂಮಾನಾದುತ್ಪತ್ತಿರ್ದ್ರವ್ಯದರ್ಶನಂ ॥೪೭॥**

ದ್ರವ್ಯೋಪಲಬ್ಧಿಸ್ಥಾನಸ್ಯ=ಜೀವನಿಗೆ ಪದಾರ್ಥಗಳನ್ನು ಕಾಣಲು ಅವಚ್ಛೇದಕವಾದ ದೇಹಕ್ಕೆ, ದ್ರವ್ಯೇಕ್ಷಾಽಯೋಗ್ಯತಾ ಯದಾ=ಯಾವಾಗ ಪದಾರ್ಥಗಳನ್ನು ನೋಡುವ ಯೋಗ್ಯತೆಯು ಹೋಗುವುದೋ ತತ್=ಅದೇ ಪಂಚತ್ವಂ=ಮರಣವು ಹೊರತು ದೇಹದ ಸ್ವರೂಪನಾಶವಲ್ಲ. ಈ ವಿಧವಾದ ಮರಣವು ದೇಹಕ್ಕೆ ಶವವಾದಾಗಲೂ ಇದ್ದೇ ಇದೆ, ಆದ ಕಾರಣ ದೋಷವಿಲ್ಲ. ಅಹಂಮಾನಾತ್ ದ್ರವ್ಯದರ್ಶನಂ ಉತ್ಪತ್ತಿಃ=ಪದಾರ್ಥದರ್ಶನಸಮರ್ಥವಾದ ದೇಹಕ್ಕೆ, ನಾನೇ ಕರ್ತಾ ಎಂಬ ಅಭಿಮಾನದಿಂದ ಪದಾರ್ಥದರ್ಶನ ಯೋಗ್ಯತೆ ಬರುವುದೇ, ಉತ್ಪತ್ತಿಃ= ಜನ್ಮವು ಎಂದು ಭಾವ. ಜ್ಞಾನವಿಲ್ಲದಿರುವುದೇ ಮರಣವೆಂದು ಹೇಳಿದರೆ, ಮಲಗಿದಾಗಲೂ ಮೃತನೆಂದು ವ್ಯವಹರಿಸ ಬೇಕಾಗುವುದು. ಕಾರಣ ಯೋಗ್ಯತೆ ಹೋಗುವುದು ಎಂದಿರುವರು. ಜಡಪದಾರ್ಥಗಳಿಗೆ ದರ್ಶನಯೋಗ್ಯತೆ ಇರುವುದಿಲ್ಲ, ಕಾರಣ ಅಲ್ಲಿಯೂ ಮೃತವೆಂದು ವ್ಯವಾಹರ ಮಾಡಬೇಕಾಗುವುದು ಕಾರಣ ಪದಾರ್ಥದರ್ಶನಸ್ಥಾನವಾದ ಎಂದಿರುವರು. ॥೪೭॥

ಮೇಲೆ ಹೇಳಿದ ದರ್ಶನಯೋಗ್ಯತೆ, ಅಯೋಗ್ಯತೆಗಳೆಂಬ ಜನನ ಮರಣಗಳು ದೇಹದಲ್ಲಿರುವವು. ಅಂದಮೇಲೆ ಜೀವನು ಉತ್ಪನ್ನ, ಮೃತ ಎಂಬ ವ್ಯವಹಾರ ಹೇಗೆ? ಎಂಬ ಶಂಕೆಗೆ ಉತ್ತರವನ್ನು, ದೃಷ್ಟಾಂತ ಕೊಟ್ಟು ತಿಳಿಸುವರು-

**ಯಥಾಕ್ಷ್ಣೋರ್ದ್ರವ್ಯಾವಯವದರ್ಶನಾಯೋಗ್ಯತಾ ಯದಾ ।**
**ತದೈವ ಚಕ್ಷುಷೋ ದ್ರಷ್ಟುರ್ದ್ರಷ್ಟೃತ್ವಂ ಯೋಗ್ಯತಾನಯೋಃ ॥೪೮॥**

ಯಥಾ=ಹೇಗೆ ಚಕ್ಷುಷಃ=ಚಕ್ಷುರಿಂದ್ರಿಯಕ್ಕೆ, ದ್ರವ್ಯಾವಯವದರ್ಶನಾಯೋಗ್ಯತಾ ಯದಾ=ಯಾವಾಗ ಮರಣಕಾಲದಲ್ಲಿ ದ್ರವ್ಯಗಳು, ಅವುಗಳ ಅವಯವಗಳು ಅಂತು ಚಕ್ಷುರಿಂದ್ರಿಯಗೋಚರ ಎಲ್ಲ ಪದಾರ್ಥಗಳ ಜ್ಞಾನವನ್ನು ಹುಟ್ಟಿಸುವ ಯೋಗ್ಯತೆ ಇಲ್ಲದಾಗುವುದೋ ತದಾ ಏವ=ಆವಾಗಲೇ ಅಕ್ಷ್ಣೋಃ= ಗೋಲಕಗಳಿಗೂ ಅಯೋಗ್ಯತೆ ಬರುವುದು, ಎಂದು ವ್ಯವಹರಿಸುವರೋ ಹೇಗೆ

ಚಕ್ಷುಷಃ=ಕಣ್ಣಿನಿಂದ ದ್ರಷ್ಟುಃ=ನೋಡುವ ಜೀವನಿಗೆ ದ್ರಷ್ಟೃತ್ವಂ=ಅಂದರೆ ಚಕ್ಷುರಿಂದ್ರಿಯಕ್ಕೆ ಜೀವನು ನೋಡುವ ಪದಾರ್ಥಗಳ ಜ್ಞಾನಜನಕಯೋಗ್ಯತೆ ಬರುವುದೋ ತದೈವ=ಆಗಲೇ ಅನಯೋಃ ಅಕ್ಷ್ಣೋಃ=ಗೋಲಕಗಳಿಗೂ ಯೋಗ್ಯತಾ =ಜ್ಞಾನಮಾಡಿಕೊಡುವ ಯೋಗ್ಯತೆಯು ಬರುವುದು ಎಂದು ವ್ಯವಹರಿಸುವರೋ, ಅದೇ ರೀತಿ ದೇಹಧರ್ಮವಾದ ಯೋಗ್ಯತೆ, ಅಯೋಗ್ಯತೆ ಎಂಬ ಜನನ ಮರಣ ವ್ಯವಹಾರ ಜೀವನಲ್ಲಿ ಮಾಡುವರು ಎಂದು ಭಾವ. ॥೪೮॥

ಚಕ್ಷುಷಃ ದ್ರಷ್ಟುಃ ಎಂಬುವುದಕ್ಕೆ ಸಮಾನಾಧಿಕರಣ್ಯ (ವಿಶೇಷಣವಿಶೇಷ್ಯಭಾವ ಕಾಣುವುದು ಅದನ್ನು ನಿವಾರಿಸಲು ವ್ಯಾಖ್ಯಾನಿಸುವರು-

**ಚಕ್ಷುಃ ಸಕಾಶಾತ್ ದ್ರಷ್ಟುಃ ದ್ರಷ್ಟುತ್ವಂ ಅಕ್ಷ್ಣೋಃ ಯೋಗ್ಯತಾ ।**

ಹೇಗೆ ಜೀವನಿಗೆ ಕಣ್ಣಿನಿಂದ ಪದಾರ್ಥಗಳನ್ನು ನೋಡುವ ಶಕ್ತಿ ಬರುವುದೋ, ಅಂದರೆ ಇಂದ್ರಿಯಕ್ಕೆ ಜ್ಞಾನ ಹುಟ್ಟಿಸುವ ಯೋಗ್ಯತೆ ಬಂದಾಗ ಗೋಲಕಗಳಿಗೂ ಯೋಗ್ಯತೆ ಬಂತು ಎಂದು ವ್ಯವಹರಿಸುವರೆಂದರ್ಥ. ॥೪೮॥

''ಮಮೈವಾಂಶೋ ಜೀವಲೋಕೇ'' ಮುಂತಾಗಿ ಜೀವನು ಭಗವಂತನ ಅಂಶವೆಂದು ತಿಳಿದು ಬರುವುದರಿಂದ ಭಗವಂತನ ಅಂಶರಾದ ಮತ್ಸ್ಯಾದಿಗಳಂತೆ, ಜೀವನಿಗೂ ವಾಸ್ತವವಾಗಿ ಸಂಸಾರ ಬರಲಾರದು. ಅದು ಸುಳ್ಳು. ಎಂದರೆ ಹೇಳುವರು-

**ಪುಂಸೋ ಯಥೈವೇಂದ್ರಿಯಾಣಿ ವಿಂದಂತಿ ಸ್ವಗತಂ ಪರಂ ।**
**ಸುಖಂ ದುಃಖಂ ನಾನ್ಯಗತಂ ತಥೇಶಾಂಶಾಃ ಪೃಥಕ್ಕಲಾಃ ॥೪೯॥**

ಯಥಾ=ಹೇಗೆ ಇಂದ್ರಿಯಾಣಿ=''ಷೋಡಕಲಾ ಪುರುಷಃ'' ಮುಂತಾದ ಸ್ಥಳದಲ್ಲಿ ಜೀವನ ಅಂಶವೆಂದು ಹೇಳಿದ್ದರೂ ಇಂದ್ರಿಯಗಳು ಪುಂಸಃ=ಜೀವನ ಪೃಥಕ್ ಕಲಾಃ=ಬಿನ್ನಾಂಶಗಳೂ ತಥಾ=ಹಾಗೆ ಈಶಾಂಶಾಃ=ಶ್ರೀಹರಿಯ ಅಂಶವೆಂದು ಹೇಳಲ್ಪಟ್ಟ ಜೀವರೂ ಸಹ, ಪೃಥಕ್ ಕಲಾಃ=ಭಿನ್ನಾಂಶರೇ. ಆದ್ದರಿಂದ ಜೀವಗತ ಸಂಸಾರ ವಾಸ್ತವಿಕವೆ. ಇನ್ನು ಜೀವರು ಚೇತನರು, ಇಂದ್ರಿಯಗಳು ಜಡವಾದವು-ಗಳು. ಕಾರಣ ಅವುಗಳು ಭಿನ್ನಾಂಶವೆಂದೇ ಹೇಳಬೇಕು. ನಿಜ,ಆದರೆ ಅದರಂತೆ ಜೀವಪರಮಾತ್ಮರಿಗೆ ಭೇದಸಾಧಕವಿಲ್ಲವಲ್ಲ, ಎಂದರೆ ಹೇಳುವರು ಯತಃ=ಯಾವ ಕಾರಣ ಜೀವಾಃ=ಜೀವರುಗಳು ಪರಂ=ಕೇವಲ ಸ್ವಗತಂ=ತನ್ನಲ್ಲಿರುವ ಸುಖಂ ದುಃಖಂ=ಸುಖದುಃಖವನ್ನು ವಿಂದಂತಿ=ತಿಳಿಯುವರು ನ ಅನ್ಯಗತಂ=ಈಶ್ವರನಲ್ಲಿ-

ರುವ ಸುಖ, ಮತ್ತೊಬ್ಬ ಜೀವನಲ್ಲಿರುವ ಸುಖದುಃಖವೆರಡನ್ನೂ ತಿಳಿಯುವದಿಲ್ಲ. ಆದ್ದರಿಂದ ಭಿನ್ನಾಂಶರು. ಇದರಿಂದ 'ಜೀವಾ ನ ಈಶ್ವರಾದ್ಯಭಿನ್ನಾಃ ತದ್ಗತ ಸುಖದುಃಖಾನುಸಂಧಾನಶೂನ್ಯತ್ವಾತ್' ಎಂಬ ಯುಕ್ತಿಯು ಭೇದಸಾಧಕ-ವಾದದ್ದು ಇದೆ ಎಂದು ತಿಳಿಸಿದಂತಾಯಿತು. ದುಃಖವನ್ನೂ ಹೇಳಿದ್ದರಿಂದ ಜೀವಾಂತರಭೇದವನ್ನೂ ಸಾಧಿಸಬಹುದು ಎಂದು ಸೂಚಿಸಿರುವರು. ಕಾರಣ ಜೀವನೊಬ್ಬನೇ ಎಂಬ ವಾದವು ನಿರಾಕೃತವಾಯಿತು.

ವಿಜಯಧ್ವಜರ ಪ್ರಕಾರ:- ಪುಂಸಃ ಇಂದ್ರಿಯಾಣಿ ಯಥಾ ಪರಂ ಸ್ವಗತಂ ವಿಂದಂತಿ ನ ಅನ್ಯಗತಂ ಅತಃ ತಥಾ ಈಶಾಂಶಾಃ ಭಿನ್ನಾಃ ಎಂದನ್ವಯ. ಅರ್ಥ:- ಪುರುಷನ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಮಾತ್ರ ತಿಳಿಸುವುದರಿಂದ ಪರಸ್ಪರ ಭಿನ್ನವಾದವುಗಳೋ, ಹಾಗೆಯೇ ಜೀವರು ಪರಸ್ಪರವಾಗಿಯೂ, ಈಶ್ವರನಿಂದಲೂ ಭಿನ್ನರು ಎಂದು ಭಾವ. ॥೪೯॥

ಸಂಸಾರವು ಸತ್ಯವಾದರೆ ಅದರ ನಿವೃತ್ತಿ ಹೇಗೆಂದರೆ ಹೇಳುವರು -

**ಆತ್ಮನಃ ಕೇವಲಂ ಜ್ಞಾನಮರ್ಥೋ ದೇಹಾದ್ಯಸಂಗಿನಃ ।**
**ಸುಖದುಃಖಾದಯೋ ಭಾವಾ ನ ದೇಹಸ್ಯ ನ ಚಾತ್ಮನಃ ॥೫೦॥**

ಆತ್ಮನಃ=ಪರಮಾತ್ಮನ ಅಥವಾ ಜೀವನ, ಕೇವಲಂ ಜ್ಞಾನಂ=ಇವರ ಸ್ವರೂಪ ಜ್ಞಾನವು ಅರ್ಥಃ=ಪುರುಷಾರ್ಥ ಸಾಧನವು. ದೇಹಾದ್ಯಸಂಗಿನಃ=ದೇಹಾಭಿಮಾನ-ವಿಲ್ಲದ ಆತ್ಮನಃ ಚ=ಜೀವನಿಗೆನೇ ಸುಖದುಃಖಾದಯಃ ನ=ಸುಖದುಃಖಗಳಾಗುವು-ದಿಲ್ಲ, ಅಂದ ಮೇಲೆ, ದೇಹಸ್ಯ ನ ಇತಿ ಕಿಮು=ಜಡವಾದ ದೇಹಕ್ಕಿಲ್ಲವೆಂದೇನು ಹೇಳುವುದು.

ಇಲ್ಲಿ ಕೇವಲಪದಕ್ಕೆ ಆತ್ಮಪದದಿಂದ ಅನ್ವಯವಲ್ಲವೆಂದು ತಿಳಿಸುತ್ತ, ಅರ್ಥಶಬ್ದದ ಪ್ರಕೃತೋಪಯುಕ್ತ ಅರ್ಥ ಹೇಳುವರು. ಮತ್ತು ದೇಹಾದ್ಯಸಂಗಿನಃ ಎಂಬುದರ ಅಭಿಪ್ರಾಯವನ್ನೂ ತಿಳಿಸುವರು -

**ಕೇವಲಂ ಜ್ಞಾನಂ ಪುರುಷಾರ್ಥಃ । ದೇಹಾದಿಷ್ವಸಂಗಿನಃ ಜೀವಸ್ಯ ತನ್ನಿಮಿತ್ತ ಸುಖದುಃಖಾದಯಃ ನ ಸಂತಿ ಕಿಮುತ ದೇಹಸ್ಯ ಅಚೇತನತ್ವಾತ್ ॥**

ಸುಖದುಃಖರೂಪವಾದ ಸಂಸಾರವು ದೇಹವಿಶಿಷ್ಟ ಜೀವನಿಗೆ ಬರುವುದು. ಅದಕ್ಕೆ ಕಾರಣ ದೇಹಾಭಿಮಾನ. ಆ ದೇಹಾಭಿಮಾನಕ್ಕೆ ಕಾರಣ ಜೀವೇಶ್ವರ ಸ್ವರೂಪದ ಅಜ್ಞಾನವು. ಆದ್ದರಿಂದ ಜೀವೇಶ್ವರಸ್ವರೂಪಜ್ಞಾನ ಮಾಡಿಕೊಂಡರೆ,

ದೇಹಾಭಿಮಾನ ಕಡಮೆಯಾಗಿ, ತನ್ನಿಮಿತ್ತ ಸುಖದುಃಖಾದಿಗಳು ದೇಹವಿಶಿಷ್ಟ ಜೀವನಿಗೆ ಆಗಲಾರದು. ವಿಶೇಷಣವಾದ ದೇಹಕ್ಕೂ "ವಿಶಿಷ್ಟಸ್ಯ ಯದ್ಭವತಿ ವಿಶೇಷಣಸ್ಯಾಪಿ" ಎಂಬ ನ್ಯಾಯದಿಂದ ಸಂಸಾರ ಪ್ರಸಕ್ತವಾದರೂ, ದೇಹ ಅಚೇತನವಾದ್ದರಿಂದ ಆಗಲಾರದು. ಹೀಗೆ ಜೀವನಲ್ಲಿರುವ ಸಂಸಾರ ಸತ್ಯವಾದರೂ ನಿವೃತ್ತವಾಗುವುದು ಎಂದು ಭಾವ. ॥೫೦॥

**ತಸ್ಮಾನ್ನ ಕಾರ್ಯಃ ಸಂತ್ರಾಸೋ ನ ಕಾರ್ಪಣ್ಯಂ ನ ಸಂಭ್ರಮಃ ।**
**ಬುದ್ಧ್ವಾ ಜೀವಗತಿಂ ಧೀರೋ ಮುಕ್ತಸಂಗಶ್ಚರೇದಿಹ ॥೫೧॥**

ತಸ್ಮಾತ್=ಸಂಸಾರವು ಜೀವಸ್ವರೂಪದ ಅಜ್ಞಾನನಿಮಿತ್ತಕವಾದ್ದರಿಂದ, ಅಸ್ವಾಭಾವಿಕವಾಗಿರುವುದರಿಂದ, ಸಂತ್ರಾಸಃ ನ ಕಾರ್ಯಃ=ಭಯಪಡಬಾರದು, ಕಾರ್ಪಣ್ಯಂ ನ ಕಾರ್ಯಂ=ಕೃಪಣತೆಯನ್ನು ಮಾಡಬಾರದು. ಸಂಭ್ರಮಃ ನ ಕಾರ್ಯಃ=ಉತ್ಸಾಹ ಪಡಬಾರದು(?) ಜೀವಗತಿಂ ಬುಧ್ವಾ=ಜೀವನ ನಿಜಸ್ವರೂಪನ್ನು ತಿಳಿದು ಧೀರಃ=ಶ್ರೀಹರಿಜ್ಞಾನಿಯು ಮುಕ್ತಸಂಗಃ= ದೇಹಾದ್ಯ-ಭಿಮಾನ ರಹಿತನಾಗಿ ಇಹ=ತನಗೆ ಉಚಿತವಾದ ಲೋಕದಲ್ಲಿ ಚರೇತ್=ಇರಬೇಕು.

ಹೇಳಿದ್ದನ್ನೇ ವಿಶದಪಡಿಸುತ್ತ ಈ ರೀತಿ ಇರುವವನನ್ನು ಸ್ತುತಿಸುವರು–

**ಸಮ್ಯಗ್‌ದರ್ಶನಯಾ ಬುದ್ಧ್ಯಾ ಯೋಗವೈರಾಗ್ಯಯುಕ್ತಯಾ ।**
**ಮಾಯಾವಿರಚಿತೇ ಲೋಕೇ ಚರೇದ್ ಯಸ್ಯ ಕಲೇವರಮ್ ॥೫೨॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ದ್ವಾತ್ರಿಂಶೋಽಧ್ಯಾಯಃ ॥*

ಸಮ್ಯಗ್‌ದರ್ಶನಯಾ=ಯಥಾರ್ಥಜ್ಞಾನಸಾಧನವಾದ ಯೋಗವೈರಾಗ್ಯ-ಯುಕ್ತಯಾ=ಭಕ್ತಿವೈರಾಗ್ಯಗಳಿಂದ ಕೂಡಿದ ಬುಧ್ಯಾ=ಬುದ್ಧಿಯಿಂದ ಜೀವಗತಿಂ ಬುಧ್ವಾ=ಜೀವಸ್ವರೂಪವನ್ನು ತಿಳಿದು ಮಾಯಾವಿರಚಿತೇ=ಶ್ರೀಹರಿಯ ಇಚ್ಛೆಯಿಂದ ನಿರ್ಮಿತವಾದ ಲೋಕೇ=ಭೂಲೋಕಾದಿಗಳಲ್ಲಿ ಯಸ್ಯ=ಯಾವನ ಕಲೇವರಂ= ದೇಹವು ಚರೇತ್=ಇರುವುದೋ ಸಃ= ಅವನು ಧೀರಃ=ಜ್ಞಾನಿಯು ಎಂದು ಭಾವ ॥೫೨॥

*ಇಲ್ಲಿಗೆ ಮೊವತ್ತೆರಡನೆಯ ಅಧ್ಯಾಯ ಮುಗಿಯಿತು.*

# ಮೊವತ್ತೆರಡನೆಯ ಅಧ್ಯಾಯದ ತಾತ್ಪರ್ಯ

ಕಪಿಲ - ತಾಯಿ, ಕರ್ಮಫಲವನ್ನು ಅನುಭವಿಸಿದ ಜೀವನು ಮಳೆಯ ಮೂಲಕ ಭೂಲೋಕಕ್ಕೆ ಬಂದು ಮತ್ತೊಬ್ಬ ಜೀವನ ಕರ್ಮಾನುಗುಣದೇಹವಾದ ಧಾನ್ಯದಲ್ಲಿ ಸೇರಿಕೊಂಡಿರುವನು. ಅದೃಷ್ಟನಿಯಾಮಕನಾದ ಶ್ರೀಹರಿಯು ಇವನ ಕರ್ಮಕ್ಕೆ ಅನುಗುಣವಾದ ದೇಹವನ್ನು ಕೊಡುವುದಕ್ಕಾಗಿ ಇವನನ್ನು ಆಹಾರದ ಮೂಲಕ ಪುರುಷದೇಹದಲ್ಲಿ ಸೇರಿಸಿ ರೇತಸ್ಸಿನಲ್ಲಿ ಅಡಗಿಸಿಡುವನು. ಈ ರೇತಸ್ಸಿನ ಮೂಲಕ ಹೆಂಗುಸಿನ ಯೋನಿಯನ್ನು ಹೊಕ್ಕು ಗರ್ಭಕೋಶವನ್ನು ಪ್ರವೇಶಿಸಿಸುವಂತೆ ಮಾಡುವನು. ಅಲ್ಲಿ ರೇತಃಕಣದೊಂದಿಗೆ ಶೋಣಿತವನ್ನೂ ಸೇರಿಸಿ ಒಂದು ರಾತ್ರಿಯಲ್ಲಿ ಗಟ್ಟಿಯಾದ ಗಂಜಿಯಂತೆಯೂ, ಐದು ರಾತ್ರಿಗಳಲ್ಲಿ ಗುಂಡಗೆ ಗುಳ್ಳೆಯಾಗಿಯೂ, ಹತ್ತು ರಾತ್ರಿಗಳಲ್ಲಿ ಸ್ವಲ್ಪಗಟ್ಟಿಯಾದ ಪಿಂಡವಾಗಿಯೂ ಅನಂತರ (ಆಯಾಯಾ ಯೋನಿಗೆ ತಕ್ಕಂತೆ) ಮಾಂಸದ ಮುದ್ದೆ ಅಥವಾ ಮೊಟ್ಟೆಯಾಗಿಯೂ ಆಗುವಂತೆ ಶ್ರೀಹರಿಯು ಮಾಡುವನು. ಒಂದು ತಿಂಗಳಿನಲ್ಲಿ ತಲೆ, ಎರಡು ತಿಂಗಳುಗಳಲ್ಲಿ ತೋಳು, ಕಾಲು ಮೊದಲಾದ ಅವಯವಗಳು, ಮೂರು ತಿಂಗಳುಗಳಲ್ಲಿ ಉಗುರು, ಕೂದಲು, ಮೂಳೆ, ಚರ್ಮ ಮತ್ತು ಪುಂಸ್ತ್ರೀ ಚಿಹ್ನೆ ಮತ್ತು ಇಂದ್ರಿಯ ಸ್ಥಾನಗಳಾದ ರಂಧ್ರಗಳೂ ಹುಟ್ಟುವುವು. ನಾಲ್ಕನೆಯ ತಿಂಗಳಿನಲ್ಲಿ ಸಪ್ತಧಾತುಗಳೂ, ಐದನೆಯದರಲ್ಲಿ ಹಸಿವೆ ನೀರಡಿಕೆಗಳೂ, ಆರನೆಯ ತಿಂಗಳಲ್ಲಿ ಜರಾಯುವೆಂಬ ಚರ್ಮಚೀಲದ ಆವರಣವೂ ಉತ್ಪತ್ತಿಯಾಗುವುವು. ಆಗ ಮಗುವು ತಾಯಿಯ ಹೊಟ್ಟೆಯ ಬಲಭಾಗದಲ್ಲಿ ಚಲಿಸಲು ಪ್ರಾರಂಭಿಸುವುದು. ಆಯಾಯಾ ಜೀವನ ಕರ್ಮಾನುಗುಣವಾಗಿ ಏಳನೆಯ ತಿಂಗಳಲ್ಲಿ ಮಗುವಿಗೆ ಹಿಂದಿನ ಜನ್ಮಗಳ ಮತ್ತು ಅವುಗಳಲ್ಲಿ ಮಾಡಿದ ಕರ್ಮಗಳ ಜ್ಞಾನವು ಬರುವುದು. ಶ್ರೀಹರಿಯ ಇಚ್ಛೆಯಿಂದ ತನಗೆ ಬಂದಿರುವ ಸಂಸಾರ ಬಂಧವನ್ನೂ ಜ್ಞಾನಿಯಾದ ಗರ್ಭವು ಸ್ಮರಿಸಿಕೊಳ್ಳುವುದು. ಅಯೋಗ್ಯ ಜೀವನಾಗಿದ್ದಲ್ಲಿ ಎಲ್ಲವೂ ಮರೆತು ಹೋಗುವುದು. ರೋಗಿಯು ಮತ್ತೊಬ್ಬರು ಕೊಡುವ ಆಹಾರದಿಂದಲೇ ಬೆಳೆಯುವಂತೆ ಈ ಗರ್ಭವು ತಾಯಿಯು ತಿಂದ ಆಹಾರ ನೀರಿನಿಂದಲೇ ಬೆಳೆಯುವುದು. ಗರ್ಭದಲ್ಲಿ ಕ್ರಿಮಿಗಳ ಉತ್ಪತ್ತಿಗೆ ಆಕರವಾದ ಮಲಮೂತ್ರಗಳ

ಆಶ್ರಯ ಸ್ಥಳದಲ್ಲಿ ಎಷ್ಟೋ ಕೃಮಿಗಳೊಂದಿಗೆ ಈ ಗರ್ಭವು ಬೆಳೆಯುವುದು. ಆ ಕೃಮಿಗಳು ಹಸಿದವಾಗಿ ಕೋಮಲ ಚರ್ಮದ ಈ ಮಗುವನ್ನು ಪ್ರತಿಕ್ಷಣದಲ್ಲಿಯೂ ಕಚ್ಚಿ ಗಾಯಗೊಳಿಸುವುವು. ಈ ಬಗೆಯ ಅತಿಯಾದ ನೋವನ್ನು ಸಹಿಸಲಾರದೆ ಆಗಾಗ ಗರ್ಭವು ಮೂರ್ಛೆಗೊಳ್ಳುವುದು. ತಾಯಿಯು ತಿಂದ ಅತಿಯಾದ ಖಾರ, ತೀಕ್ಷ್ಣ, ಉಷ್ಣ, ಉಪ್ಪು, ಕ್ಷಾರ ಮತ್ತು ಹುಳಿ ರಸಗಳಿಂದ ಈ ಗರ್ಭಸ್ಥ ಶಿಶುವಿಗೆ ತಾಪವಾಗುವುದು. ಎಲ್ಲ ಅವಯವಗಳಲ್ಲಿಯೂ ಒಟ್ಟಿಗೆ ವೇದನೆಯನ್ನು ಅನುಭವಿಸಬೇಕಾಗುವುದು. ಒಳಗೆ ಗರ್ಭಕೋಶ, ಹೊರಗೆ ತಾಯಿಯ ಕರುಳು ಮುಂತಾದ ನರಗಳು. ಈ ತೆಕ್ಕೆಯಲ್ಲಿ ಸಿಕ್ಕಿಬಿದ್ದಿರುವ ಗರ್ಭವು ಬೆನ್ನು ಕತ್ತುಗಳನ್ನು ಬಗ್ಗಿಸಿಕೊಂಡು ಹೊಟ್ಟೆಯಮೇಲೆ ತಲೆಯನ್ನಿಟ್ಟು ಕೆಳಮುಖವಾಗಿ (ಚೀಲದಲ್ಲಿ ಕಟ್ಟಿ ಹಾಕಿದಂತೆ) ಗರ್ಭದಲ್ಲಿ ಇರುವುದು. ರೆಕ್ಕೆಯು ಹುಟ್ಟದಿರುವ ಅಥವಾ ಅರ್ಧ ಹುಟ್ಟಿರುವ ಹಕ್ಕಿಯು ಬಲೆಯಲ್ಲಿ ಸಿಕ್ಕಿ ನರಳುವಂತೆ ಈ ಗರ್ಭವು ಅಂಗಚೇಷ್ಟೆ-ಯಲ್ಲಿಯೂ ಅಸಮರ್ಥವಾಗಿ ಇರುವುದು. ಆಗ ಗರ್ಭವು ಉತ್ತಮ ಜೀವಿಯಾಗಿದ್ದಲ್ಲಿ ಶ್ರೀಹರಿಯು ಹಿಂದಿನ ನೂರಾರು ಜನ್ಮಗಳ ಮತ್ತು ಆಯಾಯಾ ಕರ್ಮಗಳ ನೆನಪನ್ನು ಕೊಡುವನು. ಅದನ್ನು ನೆನೆಸುತ್ತಾ ಗರ್ಭವು ನೀಳವಾದ ಉಸಿರುಬಿಡುತ್ತಾ ದುಃಖವನ್ನು ಹೊಂದುವುದು. ಆಯಾಯಾ ಯೋನಿಯ ಹೆಸರು ಗರ್ಭಕ್ಕೆ ಬಂದೇ ಬರುವುದು. ಏಳನೆಯ ತಿಂಗಳಿನಿಂದ ಹಿಡಿದು ಜ್ಞಾನಯುಕ್ತವಾದ ಗರ್ಭವು ಗರ್ಭದಲ್ಲಿರುವ ಸೂತಿಕಾಗಾಳಿಯಿಂದ ನಡುಗುತ್ತಾ ಮುಂದೇನು ಗತಿ ! ಎಂದು ಸಂಶಯಗೊಂಡು ಕೃಮಿಯಂತೆ ಒಂದೆಡೆ ನಿಲ್ಲದೆ ಚಲಿಸುತ್ತಿರುವುದು. ಸಪ್ತೇಂದ್ರಿಯಗಳಿಂದ ಕೂಡಿದ ಈ ಜ್ಞಾನಿಯಾದ ಗರ್ಭ ತನ್ನನ್ನು ತಾಯಿಯ ಉದರಕ್ಕೆ ತಂದು ಸೇರಿಸಿದ ಶ್ರೀಹರಿಯನ್ನೇ ನೆನೆಸಿಕೊಂಡು ಮತ್ತೆ ಈ ಗರ್ಭವಾಸವು ಬೇಡವೆಂದು ಅವನನ್ನು ಬೇಡುತ್ತಾ ಕೈ ಮುಗಿದು ದೈನ್ಯಪೂರ್ಣವಾಣಿಯಿಂದ ಸ್ತೋತ್ರಮಾಡಲಾರಂಭಿಸುವುದು.

'ಶ್ರೀಹರಿಯೇ, ಪಾಪಕಾರ್ಯಗಳನ್ನೇ ಮಾಡಿದ ನಾನು ಪಾಪಿಯು. ಆ ನನ್ನ ಕರ್ಮಕ್ಕೆ ಅನುಗುಣವಾದ ಈ ಗರ್ಭವಾಸ ದುಃಖವನ್ನು ನನಗೆ ಕೊಟ್ಟಿರುವೆ. ಶರಣುಹೊಂದಿದವರನ್ನು ರಕ್ಷಿಸುವವನು ನೀನು. ಭಕ್ತರನ್ನು ಕಾಪಾಡಲೆಂದೇ ನೀನು ಅವತರಿಸುವೆ. ನಿನಗೆ ಯಾವ ಭಯವೂ ಇಲ್ಲ. ನಿನ್ನ ಪಾದಾರವಿಂದಗಳನ್ನು ಶರಣುಹೊಂದಿದವರಿಗೂ ಯಾವ ಭಯವೂ ಇರುವುದಿಲ್ಲ. ಈ ದೇಹವು ಪಾಂಚಭೌತಿಕವು. ಇದರಲ್ಲಿ ಮನಸ್ಸು ಮೊದಲಾಗಿ ಏಕಾದಶೇಂದ್ರಿಯಗಳಿವೆ. ಕರ್ಮಬದ್ಧನಾದ ಜೀವನು ಈ ದೇಹದಲ್ಲಿ ಅಭಿಮಾನಿಯಾಗಿ ಇರುವನು.

ಅವನೊಂದಿಗೆ ನೀನೂ ಈ ಪ್ರಕೃತಿಯ ವಿಕಾರವಾದ ದೇಹದಲ್ಲಿ ಇರುವೆ. ಆದರೆ ನೀನು ಬದ್ಧನಲ್ಲ, ಜನನ-ಮರಣ ವಿಕಾರವಂತನಲ್ಲ. ಅಪರಿಚ್ಛಿನ್ನವಾದ ಜ್ಞಾನಸ್ವರೂಪಿಯೇ ನೀನು. ಈ ದೇಹದಲ್ಲಿ ಪ್ರವರ್ತಕನಾಗಿ ನೀನಿರುವೆ. ತಾಪತ್ರಯತಪ್ತನಾದ ಜೀವನ ಹೃದಯದಲ್ಲಿ ನಿರ್ದುಃಖನಾದ ನೀನು ಇರುವೆಯೆಂದು ಪ್ರಮಾಣಗಳು ಸಾರುತ್ತಿವೆ. ಜೀವನಾದರೋ ನಿನ್ನ ಪ್ರತಿಬಿಂಬನು. ಇಂದ್ರಿಯಗಳನ್ನೂ ಪ್ರಕೃತಿಯ ಗುಣಗಳನ್ನೂ ಮತ್ತು ಶಬ್ದ ಮೊದಲಾದುವು ಉಪಭೋಗ್ಯ ವಿಷಯಗಳೆಂಬುದನ್ನೂ ತಿಳಿದಿರುವನು. ಈ ಪಾಂಚಭೌತಿಕ ದೇಹದಲ್ಲಿ ಬಾಹ್ಯಚಕ್ಷುಸ್ಸಿಗೆ ವಿಷಯನಾಗದೆ ವಾಸಿಸುತ್ತಿರುವನು. ಹಾಗೆಯೇ ಪರಮಾತ್ಮನೇ, ನೀನೂ ಇಲ್ಲೇ ವಾಸಿಸುತ್ತಿರುವೆ. ಆದರೆ ಇವುಗಳ ತತ್ತ್ವಜ್ಞನು ನೀನು. ಗೂಢನಾಗಿದ್ದರೂ ಯಾವ ಸಂಬಂಧವೂ ಇಲ್ಲದವನಾಗಿರುವೆ. ನಿನ್ನಿಂದ ಪ್ರೇರಿತನಾಗಿಯೇ ಜೀವನು ನಿನ್ನ ಮಹಿಮೆಯನ್ನರಿತು ಸ್ತೋತ್ರ ಮಾಡುವನು. ನಿನ್ನ ಮಹಿಮೆಯು ಎಂದೂ ಕುಂಠಿತವಾಗುವುದಿಲ್ಲ. ನೀನು ಸರ್ವಜ್ಞನು; ಲಕ್ಷ್ಮೀ ಬ್ರಹ್ಮಾದಿಗಳಿಗಿಂತ ಉತ್ತಮನು. ಉತ್ತಮನಾದ ಜೀವಿಗೆ ಗರ್ಭದಲ್ಲಿ ಕಾಣಿಸುವೆ. ನಿನ್ನ ಇಚ್ಛೆಯಿಂದಲೇ ನಿನ್ನ ಅಧೀನವಾದ ಪ್ರಕೃತಿಯಿಂದ ಗುಣಕರ್ಮಗಳಿಂದ ಬದ್ಧನಾಗಿ ಈ ಸಂಸಾರದ ಮಾರ್ಗದಲ್ಲಿ ಜೀವನು ಸಂಚರಿಸುವನು. ಮೇಲಿಂದ ಮೇಲೆ ಉಂಟಾಗುವ ತಾಪತ್ರಯಗಳಿಗೆ ಒಳಗಾಗಿ ಮುಮುಕ್ಷುಜೀವನೂ ನಿನ್ನನ್ನು ಮರೆಯುವನು. ನಿನ್ನ ಅನುಗ್ರಹವಿಲ್ಲದೆ ಅವನು ನಿನ್ನನ್ನು ಮತ್ತೆ ಯಾವ ಉಪಾಯದಿಂದಲೂ ಶರಣು ಹೊಂದಲಾರ. ನಿನ್ನನ್ನು ಶರಣು ಹೋಗುವ ಬುದ್ಧಿಯನ್ನು ಪ್ರೇರಿಸುವವನೂ ನೀನೇ ! ಸ್ಥಾವರ ಜಂಗಮ ಪದಾರ್ಥಗಳಲ್ಲಿ ನೀನು ಅಂತರ್ಯಾಮಿಯಾಗಿ ಅನೇಕ ರೂಪಗಳಿಂದ ಇರುವೆ. ನೀನು ಯಾವಾಗಲೂ ಅತ್ಯಂತ ಸುಖಸ್ವರೂಪಿ. ಪರಿಪೂರ್ಣನು. ಉತ್ತಮ ಜೀವನಿಗೆ ಈ ಹಿಂದಣ ಜನ್ಮಗಳ ನೆನಪನ್ನು ಕೊಡುವವನೂ ನೀನೇ. ನೀನೇ ಅತ್ಯಂತ ಪ್ರಿಯನು. ಕರ್ಮಾನುಸಾರವಾಗಿ ಸಂಸಾರವನ್ನು ಅನುಭವಿಸುವ ಜೀವರಾದ ನಾವು ನಮ್ಮ ದುಃಖದ ಶಮನಕ್ಕಾಗಿ ನಿನ್ನನ್ನೇ ಸೇವಿಸುವೆವು. ತಾಯಿಯ ಉದರವು ರಕ್ತಮಲಮೂತ್ರಗಳ ಮಡುವು. ಅದರಲ್ಲಿ ವಾಸಿಸುವ ಗರ್ಭನಾದ ಜೀವನು ತಾಯಿಯ ಜಠರಾಗ್ನಿಯಿಂದ ನೊಂದ ದೇಹನಾಗಿ 'ಎಂದಿಗೆ ಹೊರಗೆ ಹೋದೇನು'? ಎಂದು ತಿಂಗಳುಗಳನ್ನು ಎಣಿಸುತ್ತಿರುವನು. ನೀನೇ ಅವನನ್ನು ಹೊರಕ್ಕೆ ಹಾಕಬೇಕು. ಹೇ ಸರ್ವನಿಯಾಮಕ ! ಹತ್ತು ತಿಂಗಳುಗಳಕಾಲ ಗರ್ಭದಲ್ಲಿ ವಾಸಿಸಬೇಕಾದ ಈ ಜೀವನಿಗೆ ದಯಾಮಯನಾದ ನೀನು ನಿನ್ನ ಜ್ಞಾನವನ್ನು ಅನುಗ್ರಹಿಸಿರುವೆ. ದೀನರಕ್ಷಕನಾದ

ನಿನಗೆ ಪ್ರತ್ಯುಪಕಾರಮಾಡುವುದು ಯಾವನಿಂದಲೂ ಸಾಧ್ಯವಿಲ್ಲ. ನಿನ್ನ ಕೆಲಸದಿಂದ ನೀನೇ ತೃಪ್ತನಾಗಬೇಕು. ಜೀವರಾದ ನಾವು ನಿನಗೆ ಮಾಡುವ ಉಪಕಾರವೆಂದರೆ ಭಕ್ತಿಯಿಂದ ಕೈಮುಗಿಯುವುದು. ಪ್ರಾಕೃತ ಶರೀರರಹಿತನಾದ ನೀನು ತಿಳಿದಿರುವಂತೆಯೇ ಈ ಏಳು ಜ್ಞಾನೇಂದ್ರಿಯಯುಕ್ತನಾದ ಜೀವನೂ ಈ ಜಡದೇಹವು ನಿನ್ನ ಅಧೀನವೆಂದೂ, ದೇಹಕ್ಕೂ ಜೀವನಿಗೂ ಮತ್ತು ಜೀವ ಜೀವರಿಗೂ ಜಡಜಡಗಳಿಗೂ ಅವುಗಳಿಂದ ನಿನಗೂ ಭೇದವಿದೆಯೆಂದೂ ನೀನು ಅನುಗ್ರಹಿಸಿದ ಜ್ಞಾನದಿಂದಲೇ ತಿಳಿದಿರುವನು. ಈ ಜ್ಞಾನವು ಪ್ರಮಾಣವೆಂದೂ ಅವನಿಗೆ ತಿಳಿಸಿರುವೆಯಲ್ಲದೆ ದೃಢವಾಗಿರುವಂತೆ ಅನುಗ್ರಹಿಸಿರುವೆ. ಹೀಗೆ ಅನುಗ್ರಹಮಾಡುವ ನಿನ್ನನ್ನು ಹೃದಯದ ಒಳಗೂ ಹೊರಗೂ ಚಿತ್ತಾಭಿಮಾನಿಯಾದ ಬ್ರಹ್ಮದೇವರನ್ನು ಕಾಣುವಂತೆ ಕಾಣುವನು ಉತ್ತಮಜೀವಿ. ಸ್ವಾಮಿನ್, ಇಷ್ಟೊಂದು ದುಃಖಪೂರ್ಣವಾದ ಈ ಗರ್ಭದಲ್ಲಿ ವಾಸಿಸುತ್ತಿದ್ದರೂ ನಿನ್ನಿಂದ ಜ್ಞಾನವನ್ನು ಹೊಂದಿದ ನಾನು ಈ ಗರ್ಭದಿಂದ ಹೊರಗೆ ಹೋಗಲು ಇಷ್ಟಪಡುತ್ತಿಲ್ಲ. ಹೊರಗಣ ಪ್ರಪಂಚವು ಒಂದು ಅಜ್ಞಾನದ ಬಾವಿ. ಅದರಲ್ಲಿ ಬಿದ್ದ ಕೂಡಲೇ ನಿನ್ನ ಇಚ್ಛೆಯಂತೆ ನನ್ನನ್ನು ಮಿಥ್ಯಾಜ್ಞಾನವು ಆವರಿಸುವುದು. ಈ ದೇಹದಲ್ಲಿ 'ನಾನು' 'ನನ್ನದು' ಎಂಬ ಮಮತೆಯು ಹುಟ್ಟುವುದು. ಅದರ ಫಲವಾಗಿ ಸಂಸಾರಚಕ್ರವು ಬೆಳೆಯುತ್ತ ಹೋಗುವುದು. ಆದ್ದರಿಂದ ಜ್ಞಾನಿಯಾದ ನಾನು ಈ ಗರ್ಭದಲ್ಲಿಯೇ ಇರಬಯಸುತ್ತೇನೆ. ಆದರೆ ಇದು ಸಾಧ್ಯವಿಲ್ಲ. ನಾನು ಹೊರಗೆ ಹೋಗಲೇಬೇಕು. ನಿನ್ನ ಪಾದಗಳನ್ನೇ ಹೊಂದಿರುವೆನು. ಅವೇ ನನಗೆ ಬಲ. ಅನಿಮಿತ್ತ ಸ್ನೇಹಿತನಾದ ನೀನು ಅನುಗ್ರಹಮಾಡುವೆ. ನನ್ನ ದುಃಖಗಳು ಪರಿಹಾರವಾಗುವುವು. ಮತ್ತೆ ನನಗೆ ಈ ಬಗೆಯ ದುಃಖವು ಬರುವ ಸಂಭವವಿಲ್ಲ. ಈ ನರಕದಿಂದ ನಾನು ಉದ್ಧೃತನಾಗುವೆನು. ನಿನಗೆ ವಂದನೆಗಳು' ಎಂದು ಗರ್ಭಸ್ಥ(ಜ್ಞಾನಿ)ಶಿಶುವು ಶ್ರೀಹರಿಯನ್ನು ಸ್ತೋತ್ರ ಮಾಡುವುದು.

ಕಪಿಲ – ಹೀಗೆ ಉತ್ತಮ ಕುಲದಲ್ಲಿ ಹುಟ್ಟುವ ಶಿಶುವು ಜ್ಞಾನವನ್ನು ಹೊಂದುವುದು. ಹತ್ತು ತಿಂಗಳ ವಯಸ್ಸಿನ ಆ ಗರ್ಭಸ್ಥ ಶಿಶುವನ್ನು ಸೂತಿಕಾವಾಯುವು ಗರ್ಭದಿಂದ ಹೊರಗೆ ಹಾಕಲು ಕ್ಷಣಮಾತ್ರದಲ್ಲಿ ತಲೆಕೆಳಗು ಮಾಡುವುದು. ದೇಹಾಭಿಮಾನದಿಂದ ಕೂಡಿದ ಆ ದೇಹಿಯನ್ನು ವಾಯುವು ಗರ್ಭದಿಂದ ಹೊರತಳ್ಳುವ ಆ ಸಂದರ್ಭದಲ್ಲಿ ಬಹು ದುಃಖವಾಗಿ ಉಸಿರು ಆಡಿಸುವುದೂ ಕಷ್ಟವಾಗಿ ಜೀವನಿಂದ ಬಂದಿದ್ದ ಸ್ಮೃತಿಯೂ ತಪ್ಪಿ ಹೋಗುವುದು. ಹೀಗೆ ಬಹಳ ಪ್ರಯಾಸದಿಂದ ಶಿಶುವು ತಾಯಿಯ ಉದರದಿಂದ ಹೊರಕ್ಕೆ

ಬರುವುದು. ರಕ್ತ ಮೂತ್ರಗಳ ಮಧ್ಯದಲ್ಲಿ ಹೊರಗೆ ಭೂಮಿಯ ಮೇಲೆ ಬಿದ್ದ ಆ ಶಿಶುವು ಕೃಮಿಯಂತೆ ಬಿದ್ದಿರುವುದು. ಆಗ ಅದಕ್ಕೆ ಗರ್ಭದಲ್ಲಿ ಇದ್ದ ಉತ್ತಮ ಜ್ಞಾನಕ್ಕಿಂತ ವಿರುದ್ಧವಾದ ಮನುಷ್ಯವಾಸನೆಯು ಆವರಿಸಿ ಶಿಶುವು ಅಳುವುದ-ಕ್ಕಾರಂಭಿಸುವುದು. ಆ ಮಗುವನ್ನು ಸಾಕುವ ತಾಯಿ ಮೊದಲಾದ ಜನರಿಗೆ ಮಗುವಿನ ಇಷ್ಟವೇನೆಂಬುದು ತಿಳಿಯದೆ ತಮ್ಮ ಇಷ್ಟದಂತೆ ಅದನ್ನು ಪೋಷಿಸುವರು. ಆ ಅವಸ್ಥೆಯಲ್ಲಿ ದೇಹಿಯು ತನಗೆ ಅನಿಷ್ಟವಾದುದು ಆಗುತ್ತಿದ್ದರೂ ಅದನ್ನು ತಪ್ಪಿಸಿಕೊಳ್ಳಲು ಅಸಮರ್ಥನಾಗಿ ದುಃಖಪಡುವನು. ಮಗುವನ್ನು ಮಲಗಿಸುವ ಹಾಸಿಗೆಯೂ ಮಲಮೂತ್ರಗಳಿಂದ ಅಶುದ್ಧವಾಗಿರುವುದು. ಜೊತೆಗೆ ತಿಗಣೆ, ಹೇನು ಮೊದಲಾದ ಕಚ್ಚುವ ಪ್ರಾಣಿಗಳು ಬೇರೆ ಹಾಸಿಗೆಯಲ್ಲಿ ಸೇರಿಕೊಂಡು ತೊಂದರೆಪಡಿಸುವುವು. ಅವಯವಗಳನ್ನು ನವೆಯಾದಕಡೆ ತುರಿಸಿಕೊಳ್ಳುವುದ-ಕ್ಕಾಗಲೀ ಎದ್ದು ಕೂತುಕೊಳ್ಳುವುದಕ್ಕಾಗಲೀ ಆಗದೆ ಶಿಶುವು ದುಃಖಪಡುವುದು. ಆ ಮಗುವಿನ ಎಳೆಯ ಚರ್ಮವನ್ನು ಸೊಳ್ಳೆ, ತಿಗಣೆ ಮೊದಲಾದುವು ಹುಳುಗಳು ಮಣಿಕೀಟವನ್ನು ಕಚ್ಚುವಂತೆ ಕಚ್ಚುತ್ತಿದ್ದರೆ ಆ ಶಿಶುವು ಅಳುತ್ತಾ ನೋವಿನಿಂದ ಪ್ರಜ್ಞೆತಪ್ಪಿ ಮಲಗುವುದು. ಹೀಗೆ ದೇಹಿಯ ಶೈಶವಾವಸ್ಥೆಯು ದುಃಖಮಯವಾಗಿರುವುದು.

ಕೌಮಾರಾವಸ್ಥೆಯಲ್ಲಿಯೂ ದೇಹಿಗೆ ಸುಖವಿಲ್ಲ. ತನ್ನ ಇಷ್ಟದಂತೆ ಕೆಲಸಗಳು ನಡೆಯುವುದಿಲ್ಲ. ಹತ್ತು ವರ್ಷದವನಾದರೂ ತನಗೆ ಬೇಕಾದದ್ದು ದೊರೆಯದೆ, ತನ್ನ ಇಷ್ಟಕ್ಕೆ ಅಡ್ಡಬಂದವರಾರೆಂಬುದನ್ನೂ ತಿಳಿಯದೆ ಕೋಪಮಾಡಿಕೊಳ್ಳುವನೇ ಹೊರತು ಪ್ರತೀಕರಿಸಲಾರ. ಹೀಗಾಗಿ ಆಗಲೂ ದುಃಖವೇ ಆಗುವುದು. ದೇಹವು ಬೆಳೆದಂತೆಲ್ಲ ದೇಹಾಭಿಮಾನವೂ ಬೆಳೆಯುತ್ತಲೇ ಹೋಗುವುದು. ಅದರೊಂದಿಗೆ ಕೋಪವೂ ಅಭಿವೃದ್ಧಿಯಾಗುವುದು. ಬರಬರುತ್ತ ವಿಷಯಾಸಕ್ತನಾಗುತ್ತ ತನ್ನಂತೆಯೇ ವಿಷಯಾಸಕ್ತರಾದ ಇತರರೊಂದಿಗೆ ಸಖ್ಯ ಬೆಳೆಸುವನು. ಇದೇ ಇವನ ದೇಹದ ಅವಸಾನಕ್ಕೆ ಕಾರಣವಾಗುವುದು. ಪಂಚಭೂತಗಳಿಂದ ಬಂದಿರುವ ದೇಹದಲ್ಲಿ ಮೇಲಿಂದ ಮೇಲೆ ನಾನು, ನನ್ನದು ಎಂಬ ದುರಭಿಮಾನವನ್ನೇ ಬೆಳೆಸುವನು. ಆದ್ದರಿಂದ ಇವನು ಅಜ್ಞಾನಿ ಮತ್ತು ಕುತ್ಸಿತಮತಿಯೆನಿಸಿಕೊಳ್ಳುವನು. ಈ ಜೀವಿಯನ್ನು ಸಂಸಾರಬದ್ಧನನ್ನಾಗಿ ಮಾಡಿದುದೇ ಇವನ ಕರ್ಮ. ಮನುಷ್ಯ ಜನ್ಮದಲ್ಲಿಯೂ ಬಂಧಕ ಕರ್ಮಗಳನ್ನು ಮಾಡಿ ನರಕಕ್ಕೆ ದಾರಿ ಮಾಡಿಕೊಳ್ಳುವನು. ಇವನ ಈ ಬಗೆಯ ಪುಣ್ಯ ಪಾಪಕರ್ಮಗಳು ಮತ್ತು 'ನಾನು ನನ್ನದು' ಎಂಬ ದುರಭಿಮಾನವನ್ನೇ ಬೆಳೆಸುವುವು. ಅಲ್ಲದೆ ನರಕಾದಿ ದುಃಖಗಳಿಗೂ ಈ ಕರ್ಮಗಳೇ ಕಾರಣವಾಗುವುವು. ಇವನ ಅವಿದ್ಯಾ ಮತ್ತು ಕರ್ಮದ ಫಲವಾಗಿ

ಬಂದ ಸಂಸಾರ ಬಂಧವು ಮತ್ತಷ್ಟು ದೃಢವಾಗುವುದು. ಈ ಮನುಷ್ಯ ಜನ್ಮವೂ ಒಂದು ಸಾಧನೆಯ ಮಾರ್ಗ. ಅದರಲ್ಲಿಯೂ ಇವನು ಸ್ತ್ರೀರತಿಯಲ್ಲಿಯೇ ಆಸಕ್ತರೂ ಉದರಂಭರಿಗಳೂ ಜೀವಬ್ರಹ್ಮರೊಂದೇ ಎಂಬುವರೂ ಆದ ಅಸುರ ಸ್ವಭಾವದವರೊಂದಿಗೆ ಸೇರಿ ಆಯುಸ್ಸನ್ನು ಕಳೆಯುವುದಾದರೆ ಮತ್ತೆ ನರಕವನ್ನೇ ಪ್ರವೇಶಿಸುವನು. ಇಂತಹ ಅಸಜ್ಜನರ ಸಹವಾಸವು ಇವನಲ್ಲಿರುವ ಸಾಧನೆಗೆ ಅವಶ್ಯಕಗಳಾದ ಸತ್ಯ, ಶೌಚ, ದಯೆ, ಮೌನ, ಸದ್ಬುದ್ಧಿ, ಭಕ್ತಿಸಂಪತ್ತು, ನಾಚಿಕೆ, ಭಕ್ತಿಯುಕ್ತನೆಂಬ ಯಶಸ್ಸು, ಸಹನೆ, ಶಮ, ದಮ, ಇವುಗಳ ಫಲವಾದ ಐಶ್ವರ್ಯ ಇವೆಲ್ಲವನ್ನೂ ಸಂಪೂರ್ಣವಾಗಿ ನಾಶಮಾಡುವುದು. ಹರಿಭಕ್ತಿರಹಿತರೂ, ವಿವೇಕ ಜ್ಞಾನಹೀನರೂ, ಜೀವಮಾತ್ರಜ್ಞಾನಿಗಳೂ, ಸ್ತ್ರೀಯರ ಕ್ರೀಡಾಮೃಗದಂತೆ ವಿಷಯಾಸಕ್ತರೂ ಆದ ಈ ದುಷ್ಟಸ್ವಭಾವದವರೊಂದಿಗೆ ಎಂದೂ ಸಹವಾಸ ಮಾಡಬಾರದು. ಇವರು ದುಃಖಮಯವಾದ ತಮಸ್ಸಿಗೇ ಯೋಗ್ಯರು.

ತಮೋಯೋಗ್ಯರ ಸಹವಾಸವನ್ನಷ್ಟೇ ಅಲ್ಲ, ಸಜ್ಜೀವಿಯು ದುಷ್ಟಸ್ತ್ರೀಯರ ಸಹವಾಸವನ್ನೂ ಮಾಡಬಾರದು. ದುಷ್ಟಸ್ತ್ರೀಯರು ಮತ್ತು ಅವರ ಸಹವಾಸದಲ್ಲಿಯೇ ಇರುವ ಕಾಮಿಜನರು ಇವರ ಸಹವಾಸದಿಂದ ಜೀವಿಯು ಬಂಧಕ್ಕೂ ಮೋಹಕ್ಕೂ ಒಳಗಾಗುವಷ್ಟು ಬೇರೆ ಯಾವ ಪಾಮರಜನ ಸಹವಾಸದಿಂದಲೂ ಒಳಗಾಗುವುದಿಲ್ಲ. ಎಂದೂ ತಪ್ಪುದಾರಿಗೆ ಹೋಗದೆ ಇರುವ ಮನಸ್ಸುಳ್ಳ ಬ್ರಹ್ಮದೇವರೂ ಸಹ ಮೃಗೀರೂಪದಲ್ಲಿದ್ದ ತಮ್ಮ ಮಗಳನ್ನೇ ಮೃಗಾಕಾರರಾಗಿ ತಾವು ಕಾಮಿಸಿದಂತೆ ತೋರಿಸಿ ದುಷ್ಟ ಜನರನ್ನು ಮೋಹಗೊಳಿಸಿದ್ದರೂ ಇದರಿಂದ ಎಂತಹವನೂ ಸ್ತ್ರೀಯರ ಸೌಂದರ್ಯಕ್ಕೆ ವಿಕೃತನಾಗದೆ ಹೋಗುವುದಿಲ್ಲ-ವೆಂಬ ನೀತಿಯನ್ನು ಜಗತ್ತಿಗೆ ತಿಳಿಸಿಕೊಟ್ಟಿರುವರು. ಆದ್ದರಿಂದ 'ನಾನು ವಿಕೃತನಾಗದೆ ಇರುತ್ತೇನೆ' ಎಂಬ ಹೆಮ್ಮೆಯಿಂದ ಯಾರೂ ಸ್ತ್ರೀಸಹವಾಸದಲ್ಲಿ ಆಸಕ್ತರಾಗಬಾರದು. ಬ್ರಹ್ಮದೇವರ ಮಕ್ಕಳಾದ ಮನುರಾಜರ ಮಕ್ಕಳು ಪ್ರಿಯವ್ರತ ಮೊದಲಾದವರಲ್ಲಿ ಯಾಗಲೀ, ಬ್ರಹ್ಮದೇವರ ಮಕ್ಕಳಾದ ಮರೀಚಿಋಷಿಗಳ ಮಕ್ಕಳಾದ ಕಶ್ಯಪರ ವಂಶದಲ್ಲಿ ಬಂದವರಲ್ಲಿಯಾಗಲೀ ಸ್ತ್ರೀರೂಪಪ್ರಧಾನವಾದ ನನ್ನ ಮೋಹಕಶಕ್ತಿಗೆ ಒಳಗಾಗದಿರುವ ಒಬ್ಬನೇ ಒಬ್ಬ ವ್ಯಕ್ತಿಯೆಂದರೆ ನಾರಾಯಣ ಋಷಿ.ತ್ರಿಕಾಲ ಜ್ಞಾನಿಯಾದ ಆತನು ನಾನೇ ಆದ್ದರಿಂದ ನಾನೊಬ್ಬನೇ (ಶ್ರೀಹರಿಯೊಬ್ಬನೇ) ಸ್ತ್ರೀವಿಕಾರರಹಿತನು. ಈ ನನ್ನ ಸ್ತ್ರೀಪ್ರಧಾನವಾದ ಮೋಹಕಶಕ್ತಿಯು ಕೇವಲ ಹುಬ್ಬು ಹಾರಿಸುವ ಮಾತ್ರದಿಂದ ಎಂತೆಂತಹ ದಿಗ್ಜಯಿಗಳಾದ ಭೂಪಾಲಕರನ್ನೂ ತನ್ನ ಅಧೀನಮಾಡಿಕೊಂಡಿರುವುದು. ಅಂದಮೇಲೆ ಅದರ ಬಲವೆಂತಹುದು ! ನೋಡು

ಪ್ರಮದೆಯರ ಸಹವಾಸವು ತತ್ವವನ್ನು ಮರೆಸುವುದು. ಯಥಾರ್ಥ ಜ್ಞಾನವನ್ನು ನಾಶಪಡಿಸುವುದು; ಹೆಚ್ಚಾದ ಮದಕ್ಕೆ ಕಾರಣವಾಗುವುದು. ಹೀಗಾಗಿ ದುಷ್ಟಸ್ತ್ರೀಯರು ನರಕದ ದ್ವಾರವೆನಿಸುವರು. ಯಾವ ಮುಕ್ತಿಯೋಗ್ಯನು ವೇದಾಂತಾದಿ ಶಾಸ್ತ್ರಶ್ರವಣ ಮಾಡಿ ವೈರಾಗ್ಯಯುಕ್ತನಾಗಿ ಸ್ವರೂಪಾನಂದವನ್ನು ಸಂಪಾದಿಸಿಕೊಂಡಿರುವನೋ, ಶ್ರೀಹರಿಯಾದ ನನ್ನಲ್ಲಿ ಭಕ್ತಿಯನ್ನು ಹೊಂದಿರುವನೋ ಮತ್ತು ತನ್ನ ಯೋಗ್ಯತೆಗೆ ತಕ್ಕಂತೆ ಭಕ್ತಿಯ ಪೂರ್ಣತೆಯನ್ನು ಹೊಂದಲಪೇಕ್ಷಿಸುವನೋ ಅವನ ಹಾಸ್ಯಕ್ಕಾಗಿಯೂ ದುಷ್ಟಸ್ತ್ರೀಯರ ಸಹವಾಸವನ್ನು ಮಾಡಬಾರದು. ಆದರೆ ಯೋಗ್ಯರಾದ ನಿಯತಪತ್ನಿಯರಲ್ಲಿ ಅವನು ಮಾಡುವ ಅನುರಾಗವು ಜ್ಞಾನಸಾಧನೆಗೆ ಕಾರಣವಾದ್ದರಿಂದ ಅದು ಎಂದೂ ಬಂಧಕವಲ್ಲ. ದುಷ್ಟಸ್ತ್ರೀಯು ದೈವಿಕವಾಗಿ ತನ್ನ ಹೆಂಡತಿಯಾಗಿದ್ದಲ್ಲಿ ಮುಮುಕ್ಷುವು ಅವಳನ್ನು ತನ್ನ ಮೃತ್ಯುವೆಂದೇ ತಿಳಿಯಬೇಕು. ಹಸುರು ಹಚ್ಚೆಗಳು ಬೆಳೆದು ಮುಚ್ಚಿಹೋಗಿರುವ ಬಾವಿಯೇ ಅದು. ಮೈಮರೆತು ಹೆಜ್ಜೆ ಇಟ್ಟರೆ ಅಧಃಪಾತವು ತಪ್ಪಿದ್ದಲ್ಲ. ದುಷ್ಟ ಸ್ತ್ರೀಯು ವಿಷಯಾಸಕ್ತಿಯಿಂದ ಸ್ತ್ರೀಯಾಗಿದ್ದರೂ ರತಿಯಲ್ಲಿ ಪುರುಷಭಾವವನ್ನು ಹೊಂದಿ 'ಪುರುಷಾಯಿತ'ದಲ್ಲಿ ತೊಡಗುವಳು. ನನ್ನ ಅಧೀನವಾದ ಮೋಹಕ ಶಕ್ತಿಯೇ ಈ ಸ್ತ್ರೀ. ಗಂಡನೊಂದುವೇಳೆ ಮೋಹದಿಂದ ಇವಳನ್ನು ತನ್ನ ಹೆಂಡತಿಯೆಂದೂ, ತನ್ನ ಹಣ, ಮಕ್ಕಳು, ಮನೆ ಮೊದಲಾದವುಗಳಿಗೆ ಕಾರಣಳೆಂದೂ ತಿಳಿದಲ್ಲಿ ಅದು ತಪ್ಪಾಗುವುದು. ಬೇಟೆಗಾರನು ಮೃಗವನ್ನು ಕೊಲ್ಲಲು ಗಾಯವನ್ನು ಸಾಧನಮಾಡಿಕೊಳ್ಳುವಂತೆ ವಿಷ್ಣುಭಕ್ತಿ ಮೊದಲಾದ ಗುಣರಹಿತನಾದ ಪತಿಯನ್ನು ಮಕ್ಕಳು, ಮನೆ ಮೊದಲಾದುವಕ್ಕೆ ಯಜಮಾನನನ್ನು ತನ್ನ ಗಂಡನನ್ನಾಗಿ ಮಾಡಿ ದೈವವು ನರಕಕ್ಕೆ ದಾರಿ ಮಾಡಿರುವುದೆಂದು ತಿಳಿದು ಉತ್ತಮ ಸ್ತ್ರೀಯೂ ಅಯೋಗ್ಯ ಪತಿಯಲ್ಲಿ ಹೆಚ್ಚು ಅನುರಾಗಯುಕ್ತಳಾಗಬಾರದು.

ಈ ದೇಹವು ಜೀವನಿಗೆ ಅವನ ಕರ್ಮದ ಫಲವಾಗಿ ಬಂದಿರುವುದು. ಹೀಗೆ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಅವನು ಹೋಗುತ್ತಲೇ ಇರುವನು. ತನ್ನ ಕರ್ಮಫಲವನ್ನು ಈ ರೀತಿಯಲ್ಲಿ ಅವನು ಅನುಭವಿಸುತ್ತಿರುವಾಗಲೇ ಮುಂದಿನ ದೇಹಗಳಿಗೆ ಕಾರಣಗಳಾದ ಕರ್ಮಗಳನ್ನು ತಪ್ಪದೆ ಮಾಡುತ್ತ ಹೋಗುವನು. ಅಯೋಗ್ಯ ಹೆಂಡತಿ ಅಥವಾ ಗಂಡನು ದೊರೆಯುವುದು ಈ ಕರ್ಮದ ಫಲವಾಗಿಯೇ. ಹೀಗಾಗಿ ಜ್ಞಾನವಿಲ್ಲದೆ ಕರ್ಮಕ್ಷಯಕ್ಕೆ ಅವಕಾಶವೇ ಇಲ್ಲ. ಭೂತಗಳು, ಇಂದ್ರಿಯಗಳು ಮತ್ತು ಮನಸ್ಸನ್ನು ಹೊಂದಿದ ಈ ದೇಹದೊಂದಿಗೆ ಹುಟ್ಟಿದನು, ಸತ್ತನು ಎಂಬ ವ್ಯವಹಾರಕ್ಕೆ ವಿಷಯನಾದವನೇ ಜೀವನು. ಈ ದೇಹದ

ಅವಸಾನವೇ ಅವನ ಸಾವು. ಈ ದೇಹದ ಸಂಯೋಗವೇ ಅವನಿಗೆ ಉತ್ಪತ್ತಿಯು. ಆದ್ದರಿಂದ ಉತ್ಪತ್ತಿ ನಾಶಗಳು ದೇಹಕ್ಕೇ ಹೊರತು ಜೀವನಿಗಲ್ಲ. ಅವನು ನಿತ್ಯನು. ಈ ದೇಹವಿದ್ದೂ ಯಾವಾಗ ಪ್ರಾಪಂಚಿಕ ಪದಾರ್ಥಗಳನ್ನು ತಿಳಿಯಲಾಗದೆ ಹೋಗುವುದೋ ಆಗಲೇ ಅದು ಸತ್ತಿತೆಂದು ಹೇಳುವರು. ಯಾವಾಗ ಜೀವನು ದೇಹವೇ ನಾನೆಂಬ ಅಭಿಮಾನದಿಂದ ಪದಾರ್ಥಗಳನ್ನು ತಿಳಿಯಬಲ್ಲನೋ ಆಗಲೇ ದೇಹಕ್ಕೆ ಉತ್ಪತ್ತಿಯು. ಯಾವಾಗ ಕಣ್ಣು ಕಾಮಾಲೆ ಮೊದಲಾದ ದೋಷಗಳಿಂದ ರೂಪಿದ್ರವ್ಯವನ್ನು ನೋಡುವ ಸಾಮರ್ಥ್ಯವನ್ನು ಕಳೆದುಕೊಳ್ಳುವುದೋ ಆಗಲೇ ಜೀವನು ನೋಡುವವನೆಂಬ ವ್ಯವಹಾರವನ್ನೂ ಕಳೆದುಕೊಳ್ಳುವನು. ಕಣ್ಣುಗಳು ನೋಡಲು ಸಮರ್ಥವಾದಾಗ ಜೀವನು ನೋಡುವವನೆಂಬ ವ್ಯವಹಾರಕ್ಕೆ ವಿಷಯನಾಗುವನು. ಕಣ್ಣು ತನಗೆ ವಿಷಯವಾದ ಬಿಳುಪು ಕಪ್ಪು ಮೊದಲಾದ ಬಣ್ಣಗಳನ್ನೂ ತನ್ನಿಮಿತ್ತಕವಾದ ಸುಖ ಅಥವಾ ದುಃಖವನ್ನೂ ತಿಳಿಸುವುದು. ಹಾಗೆಯೇ ಕಿವಿ ತನ್ನ ವಿಷಯವಾದ ಶಬ್ದ, ಮೂಗು ತನ್ನ ವಿಷಯವಾದ ವಾಸನೆ, ನಾಲಿಗೆ ತನ್ನ ವಿಷಯವಾದ ರಸ, ಚರ್ಮ ತನ್ನ ವಿಷಯವಾದ ಸ್ಪರ್ಶ ಇವುಗಳನ್ನು ತಿಳಿಸಬಲ್ಲವೇ ಹೊರತು ಒಂದು ಮತ್ತೊಂದರ ವಿಷಯವನ್ನು ತಿಳಿಯಲಾರವು ಅಥವಾ ತಿಳಿಸಲಾರವು. ಆದ್ದರಿಂದ ಅವು ಒಂದಕ್ಕೊಂದು ಭಿನ್ನವೆನಿಸುವುವು. ಇದರಂತೆಯೇ ಜೀವರು ಪರಮಾತ್ಮನ ಭಿನ್ನಾಂಶರು ಮತ್ತು ಪರಸ್ಪರ ಭಿನ್ನರು. ಆದ್ದರಿಂದ ಪರಬ್ರಹ್ಮನು ಎಂದೂ ಜೀವನಾಗುವುದಿಲ್ಲ. ಇದಕ್ಕೆ ವಿರುದ್ಧವಾಗಿ ಹೇಳುವವರು ಎಂದೂ ತತ್ತ್ವವಾದಿಗಳಲ್ಲ.

ಜೀವನು ದೇಹಾಭಿಮಾನವನ್ನು ಬಿಡಬೇಕು. 'ಶ್ರೀಹರಿಯು ಒಬ್ಬನೇ. ಅವನಲ್ಲಿ ಭೇದವೇ ಇಲ್ಲ' ಎಂದು ತಿಳಿಯಬೇಕು. ಇದೇ ಪುರುಷಾರ್ಥ. ಸುಖಸ್ವರೂಪನಾದ ಜೀವನಿಗೆ ಹೊರಗಣ ಸುಖದುಃಖಗಳು ಇಲ್ಲ. ಅಚೇತನವಾದ ದೇಹಕ್ಕಂತೂ ಇಲ್ಲವೇ ಇಲ್ಲ. ಜೀವನಿಗೆ ಈ ಹೊರಗಣ ಸುಖದುಃಖಗಳು ದೇಹಾಭಿಮಾನದಿಂದಲೇ ಬಂದವು. ಆದ್ದರಿಂದ ದೇಹಾಭಿಮಾನ ಬಿಟ್ಟವನು ಭಯಪಡುವುದಿಲ್ಲ; ದೈನ್ಯಯುಕ್ತನಾಗುವುದಿಲ್ಲ; ಗಾಬರಿ ಪಡುವುದಿಲ್ಲ. ಶ್ರೀಹರಿಯನ್ನು ಅಪರೋಕ್ಷೀ-ಕರಿಸಿಕೊಂಡ ಇವನು ಪ್ರಾರಬ್ಧಕರ್ಮಾನುಗುಣವಾಗಿ ಬಂದ ದೇಹವು ಬಿದ್ದು ಹೋಗುವವರೆಗೂ ಶ್ರೀಹರಿಯ ಇಚ್ಛೆಯಿಂದ ನಿರ್ಮಿತವಾದ ಈ ಕರ್ಮ ಭೂಮಿಯಲ್ಲಿ ದೇಹಯುಕ್ತನಾಗಿ ಚರಿಸುವನು. ಆದರೆ ಲೌಕಿಕ ವಿಷಯಗಳಲ್ಲಿ ಆಸಕ್ತನಾಗಿರುವುದಿಲ್ಲ. ಗಂಭೀರನೂ ಜ್ಞಾನಿಯೂ ಆದ ಇವನು ತನಗೆ ಉಂಟಾಗಿರುವ ಸಮೀಚೀನ ಜ್ಞಾನದಿಂದ ಭಕ್ತಿಯೋಗ ಮತ್ತು ವೈರಾಗ್ಯಗಳನ್ನು

ಹೆಚ್ಚಿಸಿಕೊಂಡು ವಿಶೇಷ ಜ್ಞಾನವನ್ನು ಪಡೆದು ಅದರಿಂದ ಜೀವರು ಹೊಂದುವ ಸ್ವರ್ಗ, ನರಕ ಮೊದಲಾದ ವಿಷಯಗಳನ್ನೂ (ಅಂದರೆ ಅವುಗಳ ಯಥಾರ್ಥ ರೂಪವನ್ನೂ) ತಿಳಿದು ಮುಕ್ತಾಮುಕ್ತ ಜೀವರಿಗೆ ಆಶ್ರಯನಾದ ಶ್ರೀಹರಿಯನ್ನು ತನ್ನ ಯೋಗ್ಯತೆಗೆ ತಕ್ಕಂತೆ ಹೆಚ್ಚು ಹೆಚ್ಚಾಗಿ ತಿಳಿಯುತ್ತಾ ಅವನನ್ನೇ ಸೇವಿಸುತ್ತಾ ಸಂಚರಿಸುವನು. ಹೀಗೆ ಇರಬೇಕಾದದ್ದು ಅಗತ್ಯವು.



# ಅಥ ತ್ರಯಸ್ತ್ರಿಂಶೋಽಧ್ಯಾಯಃ

ಈ ಅಧ್ಯಾಯದಲ್ಲಿ ನಿವೃತ್ತಕರ್ಮಾನುಷ್ಠಾನ ಮಾಡುವವರಿಗೆ, ಭಕ್ತ್ಯತಿಶಯ-ವುಳ್ಳವರಿಗೆ ಪುನರಾವೃತ್ತಿ ಇಲ್ಲದ ಲೋಕಪ್ರಾಪ್ತಿಯೇ ಫಲವೆಂದು ತಿಳಿಸಲು, ನಿವೃತ್ತ ಕರ್ಮದಲ್ಲಿ ಶ್ರದ್ಧೆಯನ್ನು ಹುಟ್ಟಿಸಲು, ಪ್ರವೃತ್ತ ಕರ್ಮ ಮಾಡುವವರಿಗೆ ಪುನರಾವೃತ್ತಿಯುಳ್ಳ ಲೋಕಪ್ರಾಪ್ತಿಯಾಗುವುದು ಎಂದು ತಿಳಿಸುವರು -

**ಶ್ರೀಭಗವಾನುವಾಚ**

**ಅಥ ಯೋ ಗೃಹಮೇಧೀಯಾನ್ ಧರ್ಮಾನೇವಾವಸನ್ ಗೃಹೇ ।**
**ಕಾಮಮರ್ಥಂ ಚ ಧರ್ಮಂ ಚ ದೋಗ್ಧಿ ಭೂಯಃ ಪಿಪರ್ತಿ ತಾನ್ ॥**

ಅಥ=ಪ್ರವೃತ್ತಕರ್ಮದ ಫಲಹೇಳಲು ಪ್ರಾರಂಭಿಸುವರು. ಯಃ=ಯಾರು, ಗೃಹೇ ಏವ ಆವಸನ್=ಮನೆಯಲ್ಲಿಯೇ ಇದ್ದು (ಗೃಹಸ್ಥಾಶ್ರಮದಲ್ಲಿಯೇ ಇದ್ದು) ಗೃಹಮೇಧೀಯಾನ್=ಗೃಹಸ್ಥಾಶ್ರಮಕ್ಕೆ ಉಚಿತವಾದ ಧರ್ಮಗಳನ್ನೇ, ಆವಸನ್=ಮಾಡುತ್ತ, ಕಾಮಂ, ಅರ್ಥಂ, ಧರ್ಮಂ ಚ ದೋಗ್ಧಿ=ಧರ್ಮ ಅರ್ಥ ಕಾಮಗಳನ್ನು ಪಡೆಯುವವನು, ತಾನ್=ಅವುಗಳನ್ನು, ಭೂಯಃ=ಮತ್ತೆ, ಪಿಪರ್ತಿ=ಮಕ್ಕಳಿಗೆ ಉಪದೇಶ ಮಾಡುವನು, ತಾನು ಅನುಷ್ಠಾನ ಮಾಡುವ ಮೂಲಕ ರಕ್ಷಿಸುವನು ಎಂದು ಭಾವ. ॥೧॥

ಕಾಮ್ಯಕರ್ಮಾನುಷ್ಠಾನವನ್ನು ವಿಶದ ಪಡಿಸುತ್ತ, ಕಾಮ್ಯಕರ್ಮ-ಮಾಡುವರನ್ನು ನಿಂದಿಸುವರು -

**ಸ ಚಾಪಿ ಭಗವದ್ಧರ್ಮಾತ್ ಕಾಮಮೂಢಃ ಪರಾಙ್ಮುಖಃ ।**
**ಯಜತೇ ಕ್ರತುಭಿರ್ದೇವಾನ್ ಪಿತೄಂಶ್ಚ ಶ್ರದ್ಧಯಾನ್ವಿತಃ ॥೨॥**

ಸಃ=ಗೃಹಸ್ಥನು, ಚ=ಯಾವಕಾರಣ, ಭಗವದ್ಧರ್ಮಾತ್ ಅಪಿ=ಕೇವಲ ಹಿಂದೆ ಹೇಳಿದ ಭಕ್ತಿಯಿಂದ ಮಾತ್ರವಲ್ಲ ಭಗವಂತನ ಆರಾಧನದಿಂದಲೂ, ಪರಾಙ್ಮು-ಮುಖಃ=ವಿಮುಖನಾಗಿ ಧರ್ಮಾರ್ಥಕಾಮಗಳನ್ನು ಪಾಲಿಸುವನು. (ಏಕೆಂದರೆ) ಕಾಮಮೂಢಃ=ವಿಷಯಾಭಿಲಾಷೆಯಿಂದ ಮೋಹಿತನಾಗಿ, ಕ್ರತುಭಿಃ=ಯಜ್ಞಗಳಿಂದ

ದೇವಾನ್=ದೇವತೆಗಳನ್ನು ಶ್ರಾದ್ಧಾದಿಗಳಿಂದ ಪಿತೄನ್ ಪಿತೃಗಳನ್ನೂ, ಶ್ರದ್ಧಯಾನ್ವಿತಃ =ಶ್ರದ್ಧೆಯಿಂದ, ಯಜತೇ=ಪೂಜಿಸುವನು. ॥೨॥

**ತಚ್ಛ್ರದ್ಧಯಾಽಽಕ್ರಾಂತಮತಿಃ ಪಿತೃದೇವವ್ರತಃ ಪುಮಾನ್ ।**
**ಗತ್ವಾ ಚಾಂದ್ರಮಸಂ ಲೋಕಂ ಸೋಮಪಾಃ ಪುನರೇಷ್ಯತಿ ॥೩॥**

ತಚ್ಛ್ರದ್ಧಯಾ=ಪಿತೃಗಳ ಮತ್ತು ದೇವತೆಗಳ ಶ್ರದ್ಧೆಯಿಂದ, ಆಕ್ರಾಂತ=ವ್ಯಾಪ್ತ-ವಾದ, ಮತಿಃ=ಬುದ್ಧಿಯುಳ್ಳವನು, ಪಿತೃದೇವವ್ರತಃ=ಪಿತೃದೇವತೆಗಳ ಪ್ರೀತ್ಯರ್ಥ-ವಾಗಿ ವ್ರತವನ್ನಾಚರಿಸುವ, ಪುಮಾನ್=ಮನುಷ್ಯನು, ಸೋಮಪಾಃ=ಸೋಮ-ಯಾಗ ಮಾಡುವವನು, ಚಾಂದ್ರಮಸಂ ಲೋಕಂ ಗತ್ವಾ=ಚಂದ್ರನಿಂದ ಅಧಿಷ್ಠಿತ-ವಾದ ಲೋಕವನ್ನು (ಸ್ವರ್ಗದ ಒಂದು ಭಾಗವನ್ನು) ಗತ್ವಾ=ಹೊಂದಿ, ಪುನಃ ಏಷ್ಯತಿ=ತಿರುಗಿ ಬರುವನು. ಶ್ರಾದ್ಧಾದಿ ಕರ್ಮ ಮಾಡುವವನು ಪಿತೃಲೋಕಕ್ಕೆ ಹೋಗಿ ಪುನಃ ಇಲ್ಲಿಗೆ ಬರುವನು ಎಂದೂ ಇಟ್ಟುಕೊಳ್ಳಬೇಕು. ಅಂತು ಪುನರಾವೃತ್ತಿಯುಳ್ಳ ಲೋಕಸಾಧನ ಕರ್ಮ ಮಾಡುವುದರಿಂದ, ಮೋಕ್ಷಸಾಧನ ಕರ್ಮಗಳಿಂದ ವಿಮುಖನೆಂದು ಭಾವ.

ಇಲ್ಲಿ ಸರ್ವಥಾ ಭಗವದ್ ಭಕ್ತಿ ಇಲ್ಲದವರಿಗೆ ಸ್ವರ್ಗಪ್ರಾಪ್ತಿಯಾಗುವುದೆಂದು ಹೇಳಿದಂತೆ ತೋರುವುದು ಅದು ಸರಿಯಲ್ಲ, ಸಾಧ್ಯವೂ ಇಲ್ಲ. ಏಕೆಂದರೇ ''ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತ್ಯೈಃ ಕೃತೋ ಹರೇಃ'' ಎಂದಿರುವುದರಿಂದ. ಆದ್ದರಿಂದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

**ಈಷದ್ಭಕ್ತೋ ಭಗವತಿ ಸುಕರ್ಮಾ ಸ್ವರ್ಗಮೇಷ್ಯತಿ ।**
**ಅಭಕ್ತೋ ನಿರಯಂ ಯಾತಿ ಸುಕರ್ಮಾಽಪಿ ನ ಸಂಶಯಃ ॥ಇತಿ ವಾಮನೇ ।**

''ಭಗವಂತನಲ್ಲಿ ಸ್ವಲ್ಪ ಭಕ್ತಿಯುಳ್ಳವನು, ವೇದವಿಹಿತ ಯಜ್ಞಾದಿಕರ್ಮಗಳನ್ನು ಮಾಡಿದರೆ, ಸ್ವರ್ಗಸಾಧನವಾದ ಕರ್ಮದಿಂದಾಗುವ ಭಗವಂತನ ಅಧಮ ಪ್ರಸಾದದಿಂದ ಸ್ವರ್ಗವನ್ನು ಪಡೆಯುವನು. ಸರ್ವಥಾ ಭಕ್ತಿ ಇಲ್ಲದವನು, ವಿಹಿತಕರ್ಮ ಮಾಡಿದರೂ ನರಕಕ್ಕೆ ಹೋಗುವನು. ಇದರಲ್ಲಿ ಸಂಶಯವಿಲ್ಲ-ವೆಂದು'' ವಾಮನ ಪುರಾಣದಲ್ಲಿದೆ. ಸ್ವಲ್ಪ ಭಕ್ತಿಯುಳ್ಳವನ ಅಭಿಪ್ರಾಯದಿಂದಲೇ ಈ ಶ್ಲೋಕವೆಂದು ಭಾವ. ॥೩॥

ಲೋಕಗಳಿದ್ದರೂ ಪುಣ್ಯನಾಶವಾದ್ದರಿಂದ ಅಲ್ಲಿಂದ ತಿರುಗಿ ಬರುವರೆಂದು ಹೇಳಿ, ಈಗ ಆ ಲೋಕಗಳ ನಾಶದ ಅವಧಿಯನ್ನೂ ಹೇಳುವರು -

# ಅಥ ತ್ರಯಸ್ತ್ರಿಂಶೋಧ್ಯಾಯಃ

ಈ ಅಧ್ಯಾಯದಲ್ಲಿ ನಿವೃತ್ತಕರ್ಮಾನುಷ್ಠಾನ ಮಾಡುವವರಿಗೆ, ಭಕ್ತ್ಯತಿಶಯವುಳ್ಳವರಿಗೆ ಪುನರಾವೃತ್ತಿ ಇಲ್ಲದ ಲೋಕಪ್ರಾಪ್ತಿಯೇ ಫಲವೆಂದು ತಿಳಿಸಲು, ನಿವೃತ್ತ ಕರ್ಮದಲ್ಲಿ ಶ್ರದ್ಧೆಯನ್ನು ಹುಟ್ಟಿಸಲು, ಪ್ರವೃತ್ತ ಕರ್ಮ ಮಾಡುವವರಿಗೆ ಪುನರಾವೃತ್ತಿಯುಳ್ಳ ಲೋಕಪ್ರಾಪ್ತಿಯಾಗುವುದು ಎಂದು ತಿಳಿಸುವರು –

**ಶ್ರೀಭಗವಾನುವಾಚ**

**ಅಥ ಯೋ ಗೃಹಮೇಧೀಯಾನ್ ಧರ್ಮಾನೇವಾವಸನ್ ಗೃಹೇ ।**
**ಕಾಮಮರ್ಥಂ ಚ ಧರ್ಮಂ ಚ ದೋಗ್ಧಿ ಭೂಯಃ ಪಿಪರ್ತಿ ತಾನ್ ॥**

ಅಥ=ಪ್ರವೃತ್ತಕರ್ಮದ ಫಲಹೇಳಲು ಪ್ರಾರಂಭಿಸುವರು. ಯಃ=ಯಾರು, ಗೃಹೇ ಏವ ಆವಸನ್=ಮನೆಯಲ್ಲಿಯೇ ಇದ್ದು (ಗೃಹಸ್ಥಾಶ್ರಮದಲ್ಲಿಯೇ ಇದ್ದು) ಗೃಹಮೇಧೀಯಾನ್=ಗೃಹಸ್ಥಾಶ್ರಮಕ್ಕೆ ಉಚಿತವಾದ ಧರ್ಮಗಳನ್ನೇ, ಆವಸನ್= ಮಾಡುತ್ತ, ಕಾಮಂ, ಅರ್ಥಂ, ಧರ್ಮಂ ಚ ದೋಗ್ಧಿ=ಧರ್ಮ ಅರ್ಥ ಕಾಮಗಳನ್ನು ಪಡೆಯುವನು, ತಾನ್=ಅವುಗಳನ್ನು, ಭೂಯಃ=ಮತ್ತೆ, ಪಿಪರ್ತಿ=ಮಕ್ಕಳಿಗೆ ಉಪದೇಶ ಮಾಡುವನು, ತಾನು ಅನುಷ್ಠಾನ ಮಾಡುವ ಮೂಲಕ ರಕ್ಷಿಸುವನು ಎಂದು ಭಾವ. ॥೧॥

ಕಾಮ್ಯಕರ್ಮಾನುಷ್ಠಾನವನ್ನು ವಿಶದ ಪಡಿಸುತ್ತ, ಕಾಮ್ಯಕರ್ಮಮಾಡುವವರನ್ನು ನಿಂದಿಸುವರು –

**ಸ ಚಾಪಿ ಭಗವದ್ಧರ್ಮಾತ್ ಕಾಮಮೂಢಃ ಪರಾಙ್ಮುಖಃ ।**
**ಯಜತೇ ಕ್ರತುಭಿರ್ದೇವಾನ್ ಪಿತೄಂಶ್ಚ ಶ್ರದ್ಧಯಾನ್ವಿತಃ ॥೨॥**

ಸಃ=ಗೃಹಸ್ಥನು, ಚ=ಯಾವಕಾರಣ, ಭಗವದ್ಧರ್ಮಾತ್ ಅಪಿ=ಕೇವಲ ಹಿಂದೆ ಹೇಳಿದ ಭಕ್ತಿಯಿಂದ ಮಾತ್ರವಲ್ಲ ಭಗವಂತನ ಆರಾಧನದಿಂದಲೂ, ಪರಾಙ್ಮುಖಃ=ವಿಮುಖನಾಗಿ ಧರ್ಮಾರ್ಥಕಾಮಗಳನ್ನು ಪಾಲಿಸುವನು. (ಏಕೆಂದರೆ) ಕಾಮಮೂಢಃ=ವಿಷಯಾಭಿಲಾಷೆಯಿಂದ ಮೋಹಿತನಾಗಿ, ಕ್ರತುಭಿಃ=ಯಜ್ಞಗಳಿಂದ

ದೇವಾನ್=ದೇವತೆಗಳನ್ನು, ಶ್ರಾದ್ಧಾದಿಗಳಿಂದ ಪಿತೃನ್ ಪಿತೃಗಳನ್ನೂ, ಶ್ರದ್ಧಯಾನ್ವಿತಃ =ಶ್ರದ್ಧೆಯಿಂದ, ಯಜತೇ=ಪೂಜಿಸುವನು. ॥೨॥

**ತಚ್ಛ್ರದ್ಧಯಾಽಽಕ್ರಾಂತಮತಿಃ ಪಿತೃದೇವವ್ರತಃ ಪುಮಾನ್ ।**
**ಗತ್ವಾ ಚಾಂದ್ರಮಸಂ ಲೋಕಂ ಸೋಮಪಾಃ ಪುನರೇಷ್ಯತಿ ॥೩॥**

ತಚ್ಛ್ರದ್ಧಯಾ=ಪಿತೃಗಳ ಮತ್ತು ದೇವತೆಗಳ ಶ್ರದ್ಧೆಯಿಂದ, ಆಕ್ರಾಂತ=ವ್ಯಾಪ್ತ-ವಾದ, ಮತಿಃ=ಬುದ್ಧಿಯುಳ್ಳವನು, ಪಿತೃದೇವವ್ರತಃ=ಪಿತೃದೇವತೆಗಳ ಪ್ರೀತ್ಯರ್ಥ-ವಾಗಿ ವ್ರತವನ್ನಾಚರಿಸುವ, ಪುಮಾನ್=ಮನುಷ್ಯನು, ಸೋಮಪಾಃ=ಸೋಮ-ಯಾಗ ಮಾಡುವವನು, ಚಾಂದ್ರಮಸಂ ಲೋಕಂ ಗತ್ವಾ=ಚಂದ್ರನಿಂದ ಅಧಿಷ್ಠಿತ-ವಾದ ಲೋಕವನ್ನು (ಸ್ವರ್ಗದ ಒಂದು ಭಾಗವನ್ನು) ಗತ್ವಾ=ಹೊಂದಿ, ಪುನಃ ಏಷ್ಯತಿ=ತಿರುಗಿ ಬರುವನು. ಶ್ರಾದ್ಧಾದಿ ಕರ್ಮ ಮಾಡುವವನು ಪಿತೃಲೋಕಕ್ಕೆ ಹೋಗಿ ಪುನಃ ಇಲ್ಲಿಗೆ ಬರುವನು ಎಂದೂ ಇಟ್ಟುಕೊಳ್ಳಬೇಕು. ಅಂತು ಪುನರಾವೃತ್ತಿಯುಳ್ಳ ಲೋಕಸಾಧನ ಕರ್ಮ ಮಾಡುವುದರಿಂದ, ಮೋಕ್ಷಸಾಧನ ಕರ್ಮಗಳಿಂದ ವಿಮುಖನೆಂದು ಭಾವ.

ಇಲ್ಲಿ ಸರ್ವಥಾ ಭಗವದ್ ಭಕ್ತಿ ಇಲ್ಲದವರಿಗೆ ಸ್ವರ್ಗಪ್ರಾಪ್ತಿಯಾಗುವುದೆಂದು ಹೇಳಿದಂತೆ ತೋರುವುದು ಅದು ಸರಿಯಲ್ಲ. ಸಾಧ್ಯವೂ ಇಲ್ಲ. ಏಕೆಂದರೇ ''ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತ್ಯೈಃ ಕೃತೋ ಹರೇಃ'' ಎಂದಿರುವುದರಿಂದ. ಆದ್ದರಿಂದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

**ಈಷದ್ಭಕ್ತೋ ಭಗವತಿ ಸುಕರ್ಮಾ ಸ್ವರ್ಗಮೇಷ್ಯತಿ ।**
**ಅಭಕ್ತೋ ನಿರಯಂ ಯಾತಿ ಸುಕರ್ಮಾಽಪಿ ನ ಸಂಶಯಃ ॥ಇತಿ ವಾಮನೇ ।**

''ಭಗವಂತನಲ್ಲಿ ಸ್ವಲ್ಪ ಭಕ್ತಿಯುಳ್ಳವನು, ವೇದವಿಹಿತ ಯಜ್ಞಾದಿಕರ್ಮಗಳನ್ನು ಮಾಡಿದರೆ, ಸ್ವರ್ಗಸಾಧನವಾದ ಕರ್ಮದಿಂದಾಗುವ ಭಗವಂತನ ಅಧಮ ಪ್ರಸಾದದಿಂದ ಸ್ವರ್ಗವನ್ನು ಪಡೆಯುವನು. ಸರ್ವಥಾ ಭಕ್ತಿ ಇಲ್ಲದವನು, ವಿಹಿತಕರ್ಮ ಮಾಡಿದರೂ ನರಕಕ್ಕೆ ಹೋಗುವನು. ಇದರಲ್ಲಿ ಸಂಶಯವಿಲ್ಲ-ವೆಂದು'' ವಾಮನ ಪುರಾಣದಲ್ಲಿದೆ. ಸ್ವಲ್ಪ ಭಕ್ತಿಯುಳ್ಳವನ ಅಭಿಪ್ರಾಯದಿಂದಲೇ ಈ ಶ್ಲೋಕವೆಂದು ಭಾವ. ॥೩॥

ಲೋಕಗಳಿದ್ದರೂ ಪುಣ್ಯನಾಶವಾದ್ದರಿಂದ ಅಲ್ಲಿಂದ ತಿರುಗಿ ಬರುವರೆಂದು ಹೇಳಿ, ಈಗ ಆ ಲೋಕಗಳ ನಾಶದ ಅವಧಿಯನ್ನೂ ಹೇಳುವರು –

**ಯದಾ ಚಾಹೀಂದ್ರಶಯ್ಯಾಯಾಂ ಶೇತೇಽನಂತಾಸನೋ ಹರಿಃ ।**
**ತದಾ ಲೋಕಾ ಲಯಂ ಯಾಂತಿ ತ ಏತೇ ಗೃಹಮೇಧಿನಾಂ ॥೪॥**

ಯದಾ=ಯಾವಾಗ, ಅಹೀಂದ್ರಶಯ್ಯಾಯಾಂ=ಸರ್ಪರಾಜನಾದ ಶೇಷನೆಂಬ ಹಾಸಿಗೆಯಲ್ಲಿ, ಅನಂತಾಸನಃ ಹರಿಃ ಶೇತೇ=ಅನಂತನೆಂಬ ಹರಿಯು ಮಲಗುವನೊ, ತದಾ=ಆಗ ಅಂದರೆ ದೈನಂದಿನ ಪ್ರಲಯದಲ್ಲಿ, ಲೋಕಾಃ=ಲೋಕಗಳು, ಲಯಂ ಯಾಂತಿ=ನಾಶ ಹೊಂದುವುವು, ತೇ ಏತೇ=ಅಂಥ ನಶ್ವರವಾದ ಲೋಕಗಳೇ, ಗೃಹಮೇಧಿನಾಂ=ಸಕಾಮ ಕರ್ಮ ಮಾಡುವವರಿಗೆ ಆಗುವವು. ಕಾರಣ ಪ್ರವೃತ್ತಕರ್ಮದಲ್ಲಿ ಆಸಕ್ತನಾಗಬಾರದು. ॥೪॥

ನಿವೃತ್ತ ಕರ್ಮಮಾಡುವರಿಗೆ ಭಗವಲ್ಲೋಕ ಪ್ರಾಪ್ತಿಯನ್ನು ತಿಳಿಸುವರು-

**ಯೇ ಸ್ವಧರ್ಮಂ ನ ದುಹ್ಯಂತಿ ಧೀರಾಃ ಕಾಮಾರ್ಥಹೇತವೇ ।**
**ನಿಃಸಂಗಾ ನ್ಯಸ್ತಕರ್ಮಾಣಃ ಪ್ರಶಾಂತಾಃ ಶುದ್ಧಚೇತಸಃ ॥೫॥**

ಯೇ=ಯಾರು, ಸ್ವಧರ್ಮಂ=ತನಗೆ ವಿಹಿತವಾದ ಧರ್ಮವನ್ನು, ಕಾಮಾರ್ಥಹೇತವೇ=ಅರ್ಥಕಾಮಗಳಿಗೆ, ನ ದುಹ್ಯಂತಿ=ದೋಹನ ಮಾಡುವುದಿಲ್ಲ, ಉಪಯೋಗಪಡಿಸುವುದಿಲ್ಲವೋ, ನಿಃಸಂಗಾಃ=ಫಲಕಾಮನೆ ಇಲ್ಲದವರು, ನ್ಯಸ್ತಕರ್ಮಾಣಃ=ಭಗವಂತನಲ್ಲಿಯೇ ಕರ್ಮಗಳನ್ನು ಸಮರ್ಪಿಸಿದವರು, ಪ್ರಶಾಂತಾಃ=ಒಳ್ಳೆ ಭಗವನ್ನಿಷ್ಠೆವುಳ್ಳವರು, ಶುದ್ಧಚೇತಸಃ=ನಿರ್ಮಲ ಅಂತಃಕರಣವುಳ್ಳವರು, ॥೫॥

**ನಿವೃತ್ತಿಧರ್ಮನಿರತಾ ನಿರ್ಮಮಾ ನಿರಹಂಕೃತಾಃ ।**
**ಸ್ವಧರ್ಮಾಖ್ಯೇನ ಸತ್ವೇನ ಪರಿಶುದ್ಧೇನ ಚೇತಸಾ ॥೬॥**

ನಿವೃತ್ತಿಧರ್ಮನಿರತಾಃ=ವಿಷಯವೈರಾಗ್ಯವೆಂಬಧರ್ಮದಲ್ಲಿ ಅತ್ಯಂತ ಆಸಕ್ತಿಯುಳ್ಳವರಾದ, ನಿರ್ಮಮಾಃ=ಮಮತೆ ಇಲ್ಲದಿರುವ (ಸ್ವಾಮಿತ್ವಾಭಿಮಾನ ರಹಿತರಾದ), ನಿರಹಂಕೃತಾಃ=ಅಹಂಕಾರವಿಲ್ಲದ (ಕರ್ತೃತ್ವಾಭಿಮಾನರಹಿತರಾದ) ವರು, ಸ್ವಧರ್ಮಾಖ್ಯೇನ=ತನ್ನ ಸ್ವರೂಪಭೂತ ಧರ್ಮರೂಪವಾದ, ಸತ್ವೇನ=ಮೋಕ್ಷಯೋಗ್ಯತ್ವರೂಪವಾದ ಅಪ್ರತಿಕಾಲಂಬನತ್ವದಿಂದ, ಪರಿಶುದ್ಧೇನ ಚೇತಸಾ=ಅತ್ಯಂತ ಶುದ್ಧವಾದ ಮನಸ್ಸಿನಿಂದ, ॥೬॥

**ಸೂರ್ಯದ್ವಾರೇಣ ತೇ ಯಾಂತಿ ಪುರುಷಂ ವಿಶ್ವತೋಮುಖಂ ।**
**ಪರಾವರೇಶಂ ಪ್ರಕೃತಿಮಸ್ಯೋತ್ಪತ್ತ್ಯಂತಭಾವನಮ್ ॥೭॥**

ಪರಾವರೇಶಂ=ಮುಕ್ತಾಮುಕ್ತನಿಯಾಮಕನಾದ, ಪ್ರಕೃತಿಂ=ಪ್ರಕೃಷ್ಟಕೃತಿಯುಳ್ಳ, (ಮೂಲಕಾರಣನಾದ) ಅಸ್ಯ=ಈ ಜಗತ್ತಿಗೆ, ಉತ್ಪತ್ತ್ಯಂತಭಾವನಂ=ಸೃಷ್ಟಿ ಸಂಹಾರ ಕಾರಣನಾದ, ವಿಶ್ವತೋಮುಖಂ=ಸರ್ವಜ್ಞನಾದ, ಪುರುಷಂ=ಪರಮಾತ್ಮನನ್ನು ಕುರಿತು, ತೇ=ಹಿಂದೆ ಹೇಳಿದ ಅಧಿಕಾರಿಗಳು, ಸೂರ್ಯದ್ವಾರೇಣ= ಸೂರ್ಯನ ಮುಖಾಂತರ, ಯಾಂತಿ=ಹೋಗುವರು.

ಇದು ಉಪಲಕ್ಷಣ, ಬ್ರಹ್ಮನಾಡಿಯಿಂದ ಉತ್ಕ್ರಾಂತರಾದವರು ಅರ್ಚಿರಾದಿ ಮುಖ್ಯವಾಯುವಿನವರೆಗಿನ ಮಾರ್ಗದಿಂದ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಕಾರ್ಯಬ್ರಹ್ಮನನ್ನೋ, ಪರಬ್ರಹ್ಮನನ್ನೋ ಹೊಂದುವರು. ಬೇರೆ ನಾಡಿಯಿಂದ ಉತ್ಕ್ರಾಂತರಾದವರು ಮಹರಾದಿಲೋಕದಲ್ಲಿರುವ ಬ್ರಹ್ಮನನ್ನು ಹೊಂದುವರು. ಇದನ್ನು ಸೂಚಿಸಲೆಂದೇ 'ಸ್ವಧರ್ಮಾಖ್ಯೇನ' ಎಂದಿದ್ದಾರೆ. ವಿಜಯಧ್ವಜೀಯರೀತ್ಯಾ, 'ಪುರುಷಂ' ಎಂದರೆ ಮಾನವನಾಮಕಪುರುಷನನ್ನು ಅರ್ಥಾತ್ ಮುಖ್ಯವಾಯುವನ್ನು ಹೊಂದುವನು. ನಂತರ 'ಪುರುಷೇಣ ವಿಶ್ವತೋಮುಖಂ' ಮುಖ್ಯಪ್ರಾಣನಿಂದ, ಅಪ್ರತಿಕಾಲಂಬನರೂ ಸಹ ಶ್ರೀಹರಿಯನ್ನು ಹೊಂದುವರು. ಅಂದರೆ ಪ್ರತಿಕಾಲಂಬನರು, ಅಪ್ರತಿಕಾಲಂಬನರು, ಇಬ್ಬರೂ ವಿಷ್ಣುವನ್ನು ಹೊಂದಿ ಮಾನವಪುರುಷನಿಂದ ಕಾರ್ಯಬ್ರಹ್ಮನನ್ನು ಹೊಂದಿ ಅವನ ಸಮೀಪದಲ್ಲಿರುವರು ಎಂದು ಭಾವ. ॥೭॥

**ದ್ವಿಪರಾರ್ಧಾವಸಾನೇ ಯಃ ಪ್ರಲಯೋ ಬ್ರಹ್ಮಣಸ್ತು ತೇ ।**
**ತಾವದಧ್ಯಾಸತೇ ಲೋಕೇ ಪರಸ್ಯ ಪರಿಚಿಂತಕಾಃ ॥೮॥**

ದ್ವಿಪರಾರ್ಧಾವಸಾನೇ=ಎರಡು ಪರಾರ್ಧಗಳ ಕೊನೆಗೆ (ಅಂದರೆ ಬ್ರಹ್ಮದೇವರ ಒಂದುನೂರು ವರ್ಷ ಮುಗಿದ ಮೇಲೆ) ಬ್ರಹ್ಮಣಃ ಯಃ ಪ್ರಲಯಃ= ಬ್ರಹ್ಮಪ್ರಲಯವೇನಿದೆಯೋ ತಾವತ್=ಅಲ್ಲಿಯವರೆಗೆ (ಮಹಾಪ್ರಲಯದವರೆಗೆ) ತೇ=ಜ್ಞಾನಿಗಳು ಲೋಕೇ=ವೈಕುಂಠಾದಿಗಳಲ್ಲಿ ಪರಸ್ಯ=ಪರಮಾತ್ಮನ ಪರಿಚಿಂತಕಾಃ= ಉಪಾಸನೆ ಮಾಡುವರಾಗಿ (ಸತ್ಯಲೋಕದಲ್ಲಿ) ಅಧ್ಯಾಸತೇ=ಮುಕ್ತರಂತೆ ವಾಸಿಸುವರು. ॥೮॥

ಇವರಿಗೆ ಪರಮಮುಕ್ತಿ ಯಾವಾಗ, ಎಂದರೆ ಬ್ರಹ್ಮದೇವರ ಜೊತೆಗೆ ಎಂದು ಹೇಳುವರು–

**ಕ್ಷ್ಮಾಂಭೋನಲಾನಿಲವಿಯನ್ಮನ ಇಂದ್ರಿಯಾರ್ಥ-**
**ಭೂತಾದಿಭಿಃ ಪರಿವೃತಃ ಪ್ರತಿಸಂಜಿಹೀರ್ಷುಃ ।**

**ಅವ್ಯಾಕೃತಂ ವಿಶತಿ ಯರ್ಹಿ ಗುಣತ್ರಯಾತ್ಮಾ**
**ಕಾಲಂ ಪರಂ ಸ್ವಮನುಭೂಯ ಪರಃ ಸ್ವಯಂಭೂಃ ॥೯॥**

ಗುಣತ್ರಯಾತ್ಮಾ=ಸತ್ವಾದಿಗುಣಗಳನ್ನು ಸ್ವೀಕರಿಸುವ( ಗುಣತ್ರಯಗಳಿಗೆ ಅಭಿಮಾನಿಯಾದ), ಪರಃ=ಸರ್ವಜೀವೋತ್ತಮರಾದ, (ಕ್ಷ್ಮಾದಿಗಳಿಂದ ಉತ್ತಮನಾದ) ಸ್ವಯಂಭೂಃ=ಬ್ರಹ್ಮದೇವರು, ಪರಂ=ದ್ವಿಪರಾರ್ಧಾಖ್ಯವಾದ, ಸ್ವಂ ಕಾಲಂ=ತಮ್ಮ ಆಯುರ್ಮಾನವಾದ ಕಾಲವನ್ನು, ಅನುಭೂಯ=ಅನುಭವಿಸಿ, ಪ್ರತಿಸಂಜಿಹೀರ್ಷುಃ=ತನ್ನಿಂದ ಸೃಷ್ಟವಾದ ಜಗತ್ತನ್ನು ಸಂಹರಿಸುವ ಇಚ್ಛೆಯುಳ್ಳ-ವರಾಗಿ, ಯರ್ಹಿ=ಯಾವಾಗ, ಕ್ಷ್ಮಾ=ಪೃಥಿವಿ, ಅಂಭ=ನೀರು, ಅನಿಲ=ವಾಯು, ಅನಲ=ತೇಜಸ್ಸು, ವಿಯತ್=ಆಕಾಶ, ಮನಃ=ಮನಸ್ಸು, ಇಂದ್ರಿಯ=ದಶ ಇಂದ್ರಿಯಗಳು, ಅರ್ಥ=ವಿಷಯಗಳು, ಭೂತಾದಿಭಿಃ=ತಾಮಸ ಅಹಂಕಾರ ತದುಪಲಕ್ಷಿತ ತ್ರಿವಿಧ ಅಹಂಕಾರ ಇವುಗಳಿಂದ, ಅಂದರೆ ಪಂಚಮಹಾಭೂತಗಳು, ಅರ್ಥ, ಮನಸ್ಸು, ಹತ್ತು ಇಂದ್ರಿಯಗಳು, ಐದು ವಿಷಯಗಳು, ಭೂತಾದಿ-ಪದೋಪಲಕ್ಷಿತ ತ್ರಿವಿಧ ಅಹಂಕಾರ ಇವುಗಳ ಅಭಿಮಾನದೇವತೆಗಳಿಂದ, ಪರಿವೃತಃ=ತಮ್ಮ ತಮ್ಮ ಬಿಂಬದ್ವಾರಾ ಗರುಡಶೇಷಮಾರ್ಗಗಳಿಂದ ತನ್ನನ್ನು ಪ್ರವೇಶಿಸಿದವರಿಂದ ಕೂಡಿಕೊಂಡು ಅವ್ಯಾಕೃತಂ=ಪರಮಾತ್ಮನನ್ನು ವಿಶತಿ= ಲಕ್ಷ್ಮೀದೇವಿಗೆ ನಮಸ್ಕರಿಸಿ ಪ್ರವೇಶಿಸುವನು. ॥೯॥

**ಏವಂ ಪರೇತ್ಯ ಭಗವಂತಮನುಪ್ರವಿಷ್ಟಾ**
**ಯೇ ಯೋಗಿನೋ ಜಿತಮರುನ್ಮನಸೋ ವಿರಾಗಾಃ ।**
**ತೇನೈವಸಾಕಮಮೃತಂ ಪುರುಷಂ ಪುರಾಣಂ**
**ಬ್ರಹ್ಮ ಪ್ರಧಾನಮುಪಯಾಂತ್ಯಗತಾಭಿಮಾನಾಃ ॥೧೦॥**

ಏವಂ=ಈ ರೀತಿಯಾಗಿ, ತದಾ=ಆವಾಗ, ಪರೇತ್ಯ=ಯೋಗದಿಂದ ದೇಹವನ್ನು ತ್ಯಜಿಸಿ, ಭಗವಂತಂ=ವೈಕುಂಠನಾಥನಾದ ಬ್ರಹ್ಮನನ್ನು ಪ್ರವಿಷ್ಟಾಃ=ಪ್ರವೇಶಿಸಿದ, ಜಿತಮರುನ್ಮನಸಃ=ವಾಯುಜಯ ಮನೋಜಯವನ್ನು ಪಡೆದ ಆದ್ದರಿಂದಲೇ, ವಿರಾಗಾಃ=ವಿಷಾಯಾಭಿಲಾಷೆಯಿಲ್ಲದ, ಯೇ=ಯಾವ, ಯೋಗಿನಃ=ಜ್ಞಾನಿ-ಗಳಿರುವರೋ, ತೇ=ಅವರು, (ತಮ್ಮ ಬಿಂಬದ್ವಾರಾ ಬ್ರಹ್ಮನನ್ನು ಪ್ರವೇಶಿಸಿಸುವರು.) ತೇನೈವ ಸಾಕಂ=ಬ್ರಹ್ಮದೇವರಿಂದ ಕೂಡಿಕೊಂಡು ಅಮೃತಂ=ನಿತ್ಯಮುಕ್ತನಾದ ಪುರುಷಂ=ಪೂರ್ಣಷಡ್ಗುಣನಾದ; ವಾಸುದೇವನಾಮಕನಾದ ಪುರಾಣಂ= ಅನಾದಿಯಾದ ಪ್ರಧಾನಂ=ಬ್ರಹ್ಮ ಸರ್ವೋತ್ತಮನಾದ ಶ್ರೀಹರಿಯನ್ನು

ಅಗತಾಭಿಮಾನಾಃ=ಜೀವಭಾವವನ್ನು ಬಿಡದೇ ಉಪಯಾತಿ=ಹೊಂದುವರು. ಲಿಂಗದೇಹಭಂಗರೂಪಮುಕ್ತಿಯನ್ನು ಹೊಂದುವರು ಎಂದು ಭಾವ. ॥೧೦॥

ಈ ರೀತಿ ಜ್ಞಾನಿಗಳಿಂದ ಸಹಿತನಾಗಿ ಪರಮಾತ್ಮನನ್ನು ಪ್ರವೇಶಿಸಿದ ಬ್ರಹ್ಮನು ಮೊದಲಿನಂತೆ ತಾರತಮ್ಯ. ಭಾವದಿಂದಿರುವುದನ್ನು, ಸೃಷ್ಟಿಕಾಲದಲ್ಲಿ ಮತ್ತೆ ಹೊರಗೆ ಬರುವುದನ್ನು ತಿಳಿಸುವರು -

**ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ ।**
**ಯೋಗೇಶ್ವರೈಃ ಕುಮಾರಾದ್ಯೈಃ ಸಿದ್ಧೈರ್ಯೋಗಪ್ರವರ್ತಕೈಃ ॥೧೧॥**

ಸ್ಥಿರಚರಾಣಾಂ=ಸ್ಥಾವರ ಜಂಗಮಗಳಿಗೆ, ಆದ್ಯಃ=ಮೊದಲಿಗನಾದ, ಪೂರ್ವದಲ್ಲಿ ಜನಿಸಿದ ವೇದಗರ್ಭಃ=ಬ್ರಹ್ಮದೇವರು, ಋಷಿಭಿಃ=ಮನುಷ್ಯೋತ್ತಮರಿಂದ ಆರಂಭಿಸಿ ಸರಸ್ವತಿಯ ಪರ್ಯಂತರಾದ ಜ್ಞಾನಿಗಳಿಂದ, ಸಿದ್ಧೈಃ=ಸ್ವಯೋಗ್ಯ ಸಾಧನ ಸಂಪೂರ್ಣರಾದವರಿಂದ, ಯೋಗೇಶ್ವರೈಃ=ಯೋಗಿಶ್ರೇಷ್ಠರಾದ, ಕುಮಾರಾದ್ಯೈಃ= ಸನಕಾದಿಗಳಿಂದಲೂ, ಯೋಗಪ್ರವರ್ತಕೈಃ=ಯೋಗಾಚಾರ್ಯರಿಂದಲೂ ಸಹ ಕೂಡಿಕೊಂಡು ॥೧೧॥

**ಭೇದದೃಷ್ಟ್ಯಾಭಿಮಾನೇನ ನಿಃಸಂಗೇನಾಪಿ ಕರ್ಮಣಾ ।**
**ಕರ್ತೃತ್ವಾತ್ ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಮ್ ॥೧೨॥**

**ಸ ಸಂಗತ್ಯ ಪುನಃ ಕಾಲೇ ಕಾಲೇನೇಶ್ವರಮೂರ್ತಿನಾ ।**
**ಜಾತೇಽಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ॥೧೩॥**

ಭೇದದೃಷ್ಟ್ಯಾ=ಪಂಚವಿಧ ಭೇದಜ್ಞಾನದಿಂದ, ಅಭಿಮಾನೇನ=ಮುಕ್ತಿಗೆ ಬೇಕಾಗುವಷ್ಟು ಪೂರ್ಣಜ್ಞಾನದಿಂದ, ನಿಃಸಂಗೇನ=ಫಲೇಚ್ಛೆಯಿಂದ ರಹಿತವಾದ, ಕರ್ಮಣಾ ಅಪಿ=ಜ್ಞಾನಾನಂತರ ಮಾಡಿದ ಕರ್ಮದಿಂದಲೂ, ಕರ್ತೃತ್ವಾತ್= ಜಗತ್ತಿನ ಸೃಷ್ಟ್ಯಾದಿಕರ್ತೃವಾದದ್ದರಿಂದ, ಸಗುಣಂ=ಜ್ಞಾನ, ಐಶ್ವರ್ಯ ಮೊದಲಾದ ಗುಣಗಳಿಂದ ಕೂಡಿದ, ಪುರುಷಂ=ಭಕ್ತರ ಮೇಲಿನ ದಯೆಯಿಂದ ಪುರುಷಾಕಾರ-ವನ್ನು ಸ್ವೀಕರಿಸಿದ, ಪುರುಷರ್ಷಭಂ=ಕ್ಷರಾಕ್ಷರ ಪುರುಷರಿಂದಲೂ ಉತ್ತಮನಾದ, ಬ್ರಹ್ಮ=ಶ್ರೀಹರಿಯನ್ನು ಪ್ರವೇಶಿಸುವನು. (ಸಂಗತೋಭವತಿ) ॥೧೨॥

ಸಃ=ಬ್ರಹ್ಮದೇವನು (ಬ್ರಹ್ಮಾದಿಜೀವಸಂಘವು) ಅಗುಣವ್ಯತಿಕರೇ=ಪ್ರಲಯ-ಕಾಲದಲ್ಲಿ ಸಂಗತ್ಯ=ಶ್ರೀಹರಿಯನ್ನು ಪ್ರವೇಶ ಮಾಡಿ ಪುನಃ=ಮತ್ತೆ, ಈಶ್ವರ-ಮೂರ್ತಿನಾ=ನಿಯಾಮಕನಾದ ಶ್ರೀಹರಿಯಿಂದ, ಕಾಲೇನ=ಕೆಲವು ಕಾಲವು

ಪರಿವರ್ತಿತವಾದಾಗ, ಕಾಲೇ=ಸೃಷ್ಟಿಕಾಲವು ಬಂದಾಗ, ಅಗುಣವ್ಯತಿಕರೇ= ಗುಣವಿಕಾರಶೂನ್ಯವಾದ, ಅಪ್ರಾಕೃತವಾದ ಶ್ವೇತದ್ವೀಪವು, ಬಹಿಃಜಾತೇ= ಪ್ರಾದುರ್ಭಾವವಾಗುತ್ತಿರಲು, ನಿರ್ಗಚ್ಛತಿ=ಹೊರಗೆ ಬರುವನು, ಯಥಾಪೂರ್ವಂ ಪ್ರಜಾಯತೇ=ಸಂಸಾರದಲ್ಲಿ ಯಾವ ತಾರತಮ್ಯದಿಂದ ಇದ್ದನೋ ಹಾಗೆಯೇ ಹೊರಗೆ ಬರುವನು ಎಂದು ಭಾವ.

೧೨ನೇ ಶ್ಲೋಕದಲ್ಲಿಯ ಅಭಿಮಾನೇನ ಎಂಬುದಕ್ಕೆ ಪ್ರಕೃತೋಪಯುಕ್ತ ಅರ್ಥ ಹೇಳುವರು–

**ಅಭಿಮಾನೇನ ಪೂರ್ಣಜ್ಞಾನೇನ ।**

ಇದರಿಂದ 'ಸ್ವಸ್ವರೂಪಾಭಿವ್ಯಕ್ತಿಂ ಅಭಿ ವಿದ್ಯಮಾನಂ ಜ್ಞಾನಂ ಅಭಿಮಾನಂ' ಎಂದು ನಿರುಕ್ತಿ ತಿಳಿಸಿದಂತಾಯಿತು. ತನ್ನ ಮುಕ್ತಿಗೆ ಬೇಕಾಗುವ ಜ್ಞಾನದಿಂದ ಎಂದರ್ಥ.

ಪುರುಷಂ ಸಂಗತ್ಯ ಎಂಬುದರ ಅರ್ಥ ತಿಳಿಸುವರು–

**ಸಂಗತ್ಯ ಲಯೇ ಪರಮೇಶ್ವರಂ ಪ್ರವಿಶ್ಯ ।**

'ಅಗುಣವ್ಯತಿಕರೇ' ಎಂಬುದು ಇಲ್ಲಿಯೂ ಅನ್ವಯಿಸುವುದು ಎಂದಿಟ್ಟು- ಕೊಂಡು ಅದರರ್ಥವನ್ನೇ 'ಲಯೇ' ಎಂದು ಹೇಳಿರುವರು. 'ಪುರುಷರ್ಷಭಂ' ಎಂಬುದರ ಅರ್ಥವೇ 'ಪರಮೇಶ್ವರಂ' ಎಂಬುದು. ಪ್ರಲಯಕಾಲದಲ್ಲಿ ಪರಮಾತ್ಮನನ್ನು ಪ್ರವೇಶಿಸಿ ಎಂದರ್ಥ.

'ಯಥಾಪೂರ್ವಂ ಪ್ರಜಾಯತೇ' ಎಂಬುದಕ್ಕೆ ಮೊದಲಿನಂತೆ ಜನ್ಮ ಹೊಂದುವನು ಎಂಬರ್ಥವನ್ನು ನಿರಾಕರಿಸಲು ಅರ್ಥ ಹೇಳುವರು.

**ಯಥಾಪೂರ್ವಂ ಪ್ರಜಾಯತೇ ಉಚ್ಚನೀಚಾದಿಭಾವೇನ ಜಾಯತೇ ।**

ಮೊದಲು ಯಾರಿಂದ ನಿಚೋಚ್ಚತೆಯಿತ್ತೋ ಹಾಗೆಯೇ ಪ್ರಾದುರ್ಭೂತನಾಗುವನು.

'ಜಾತೇಗುಣವ್ಯತಿಕರೇ' ಎಂಬುವಲ್ಲಿ ಬೇಕಾದ ಪದವಿಭಾಗ, ಅಧ್ಯಾಹಾರ- ವನ್ನೂ ತಿಳಿಸುತ್ತ ವ್ಯಾಖ್ಯಾನಿಸುವರು–

**ಅಗುಣವ್ಯತಿಕರೇ ಬಹಿಃ ಶ್ವೇತದ್ವೀಪೇ ನಿರ್ಗಚ್ಛತಿ ।**

ಸತ್ವಾದಿಗುಣವಿಕಾರವಿಲ್ಲದ, ಭಗವಂತನ ಉದರದ ಹೊರಗಿರುವ ಶ್ವೇತದ್ವೀಪದಲ್ಲಿ ಭಗವಂತನ ಉದರದಿಂದ ಹೊರ ಬರುವನು ಎಂದು ಭಾವ.

'ಯಥಾಪೂರ್ವಂ ಪ್ರಜಾಯತೇ' ಎಂಬುದಕ್ಕೆ ತಾವು ಹೇಳಿದ ಅರ್ಥದಲ್ಲಿ ಪ್ರಮಾಣ ನೀಡುವರು -

**ಗುಣವ್ಯತಿಕರಾಭಾವೇಽಪ್ಯುಚ್ಚನೀಚಾದಿ ಪೂರ್ವವತ್ ।**
**ವಿಷ್ಣೋಶ್ಚೈವ ವಿಮುಕ್ತಾನಾಂ ನ ಕದಾಚನ ಗಚ್ಛತಿ ॥ ಇತಿ ಗಾರುಡೇ ।**

"ಸಂಸಾರದಲ್ಲಿ ಇದ್ದಂತೆಯೇ ಮುಕ್ತ್ಯವಸ್ಥೆಯಲ್ಲಿಯೂ ನೀಚತ್ವಉಚ್ಚತ್ವಗಳು ಇರುವುವು. ವಿಷ್ಣುವಿಗಾಗಲಿ ಮುಕ್ತರಿಗಾಗಲಿ ಯಾವ ಕಾಲದಲ್ಲಿಯೂ ಹೋಗುವುದಿಲ್ಲವೆಂದು" ಗರುಡ ಪುರಾಣದಲ್ಲಿದೆ. ॥೧೧-೧೨-೧೩॥

ಮುಕ್ತರಿಗೆ ಆ ಶ್ವೇತದ್ವೀಪದಲ್ಲಿ ಅಪೇಕ್ಷಿತ ವಿಷಯಭೋಗ ಮಾಡಿದನಂತರ, ಮತ್ತೆ ಪ್ರಲಯದಲ್ಲಿ ಪರಮಾತ್ಮನ ಪ್ರವೇಶ ಹೇಳುವರು -

**ಐಶ್ವರ್ಯಂ ಪಾರಮೇಷ್ಠ್ಯಂ ಯತ್ ತೇಽಪಿ ಧರ್ಮವಿನಿರ್ಮಿತಮ್ ।**
**ನಿಷೇವ್ಯ ಪುನರಾಯಾಂತಿ ಗುಣವ್ಯತಿಕರೇಽಸತಿ ॥೧೪॥**

ತೇ ಅಪಿ=ಯಾರು ಶ್ವೇತದ್ವೀಪದಲ್ಲಿರುವರೋ ಆ ಬ್ರಹ್ಮಾದಿ ಮುಕ್ತ ದೇವತೆಗಳು, ಧರ್ಮವಿನಿರ್ಮಿತಂ=ಅಪರೋಕ್ಷಜ್ಞಾನಾಂತರ ಮಾಡಿದ ಕರ್ಮಗಳಿಂದುಂಟಾದ, ಯತ್=ಯಾವ, ಪಾರಮೇಷ್ಠ್ಯಂ=ಸರ್ವೋತ್ತಮನಾದ ಭಗವಂತನ ಪ್ರಸಾದಿಂದ ಲಭಿಸಿದ, ಐಶ್ವರ್ಯಂ=ನಾನಾವಿಧ ವಿಷಯಾಧಿಪತ್ಯ ಉಂಟೋ, ತದಪಿ=ಅದನ್ನೂ, ನಿಷೇವ್ಯ=ಅನುಭವಿಸಿ (ಜ್ಞಾನ ಮಾತ್ರದಿಂದ ಬಂದ ಸ್ವರೂಪಸುಖವನ್ನು ಸಮುಚ್ಚಯ ಮಾಡಲು ಅಪಿಶಬ್ದವಿದೆ) ಗುಣವ್ಯತಿಕರೇ ಅಸತಿ=ಪ್ರಪಂಚವು ನಾಶವಾಗುತ್ತಿರಲು, (ಪ್ರಲಯ ಬಂದಾಗ ಎಂದರ್ಥ) ಪುನಃ ಪರಮೇಶ್ವರಂ ಆಯಾಂತಿ=ಪರಮಾತ್ಮನನ್ನು ಪ್ರವೇಶ ಮಾಡುವರು. ಅಲ್ಲಿ ಕೇವಲ ಸ್ವರೂಪ ಸುಖವನ್ನನುಭವಿಸುವರು. ಇದೇ ರೀತಿ ಪ್ರತಿಯೊಂದು ಸೃಷ್ಟಿಕಾಲದಲ್ಲಿ ಶ್ವೇತದ್ವೀಪಾದಿಗಳಲ್ಲಿ ಪರಮಾತ್ಮನ ಉದರದಿಂದ ಹೊರಗೆ ಬಂದು, ಅಲ್ಲಿದ್ದು ಜ್ಞಾನ ಮತ್ತು ಧರ್ಮಗಳಿಂದ ಸಂಪಾದಿತವಾದ ವಿಷಯಗಳನ್ನು ಅನುಭವಿಸಿ, ಮತ್ತೆ ಪ್ರತಿಯೊಂದು ಪ್ರಲಯದಲ್ಲಿಯೂ ಪರಮೇಶ್ವರನನ್ನು ಪ್ರವೇಶಿಸಿ, ಅಲ್ಲಿ ಜ್ಞಾನ ಫಲವಾದ ಸ್ವರೂಪಸುಖವನ್ನು ಅನುಭವಿಸುವರು ಎಂದು ಭಾವ.

ಇಲ್ಲಿ 'ಗುಣವ್ಯತಿಕರೇ ಸತಿ' ಎಂಬಲ್ಲಿ ವಿವಕ್ಷಿತವಾದ ಪದಚ್ಛೇದವನ್ನೂ, ಅರ್ಥವನ್ನೂ ತಿಳಿಸುತ್ತ 'ಪುನರಾಯಾಂತಿ' ಎಂಬಲ್ಲಿ ಅಪೇಕ್ಷಿತವಾದ ಕರ್ಮವಾಚಕ ಪದವನ್ನು ತುಂಬುವರು-

**ಗುಣವ್ಯತಿಕರೇ ಅಸತಿ । ಪ್ರಲಯೇ ಪ್ರಾಪ್ತೇ ಪುನಃ ಪರಮೇಶ್ವರಂ ಆಯಾಂತಿ ।**

'ಗುಣವ್ಯತಿಕರೇ ಅಸತಿ' ಎಂಬ ಎರಡೂ ಪದಗಳಿಂದ ಲಬ್ಧವಾದ ಅರ್ಥ ಪ್ರಲಯೇ ಪ್ರಾಪ್ತೇ ಎಂಬುದು. 'ಪರಮೇಶ್ವರಂ' ಎಂಬುದು ಕರ್ಮವಾಚಕ ಪದವು. ಪ್ರಲಯಕಾಲದಲ್ಲಿ ಪರಮಾತ್ಮನನ್ನು ಪ್ರವೇಶಿಸುವುರು ಎಂದರ್ಥ.

'ಆದ್ಯಃ ಸ್ಥಿರಚರಾಣಾಂ' ಮುಂತಾದ ನಾಲ್ಕು ಶ್ಲೋಕಗಳಲ್ಲಿ ಹೇಳಿದ ಅರ್ಥದಲ್ಲಿ ಪ್ರಮಾಣಗಳ ಸಂವಾದ ತೋರಿಸುವರು–

**''ಬ್ರಹ್ಮಾ ದೇವೈಃ ಪರಿವೃತಃ ಪ್ರಲಯೇ ಪರಮೇಶ್ವರಂ ।**
**ಪ್ರವಿಶ್ಯ ಸರ್ಗೇ ತು ಪುನಃ ಶ್ವೇತದ್ವೀಪೇ ಪ್ರಮೋದತೇ ।**
**ಜ್ಞಾನಧರ್ಮಫಲಾಂಸ್ತತ್ರ ಭೋಗಾನ್ ಭುಕ್ತ್ವಾ ಲಯೇ ಪುನಃ ।**
**ನಾರಾಯಣಂ ಸಮಾವಿಶ್ಯ ಜ್ಞಾನವ್ಯಕ್ತಂ ನಿಜಂ ಸುಖಂ ।**
**ಭುಂಜತೇ ತ್ವೇವಮೇವೈಷಾಂ ಕಾಲೇ ಸಂಸರ್ಗನಿರ್ಗಮೌ ।**
**ನಿತ್ಯೌ ನಿತ್ಯಸುಖಂ ಚೈವ ಸೃಷ್ಟೌ ಭೋಗಾಸ್ತಥೋತ್ತಮಾಃ ।**
**ಯಥಾಪೂರ್ವಂ ಹರೇಃ ಸರ್ವಗುಣೈರ್ನೀಚೋಚ್ಚತಾ ತಥಾ ।**
**ಬ್ರಹ್ಮಣಶ್ಚ ತಥಾಽನ್ಯೇಷಾಮನ್ಯೇಷಾಂ ಚ ಯಥಾಪದಂ''॥ ಇತಿ ಸ್ಕಾಂದೇ ।**

ಬ್ರಹ್ಮದೇವರು ದೇವತೆಗಳಿಂದ ಕೂಡಿಕೊಂಡು (ಇದು 'ಆದ್ಯಃ' ಎಂಬ ಶ್ಲೋಕ ತಾತ್ಪರ್ಯ) ಪ್ರಲಯಕಾಲದಲ್ಲಿ ಪರಮಾತ್ಮನನ್ನು ಪ್ರವೇಶ ಮಾಡಿ (ಇದು 'ಸ ಸಂಗತ್ಯ' ಎಂಬುದರ ಅರ್ಥ) ಸೃಷ್ಟಿಕಾಲದಲ್ಲಿ ಶ್ವೇತದ್ವೀಪದಲ್ಲಿ ಸಂತೋಷ ಪಡುವನು. (ಇದು 'ಜಾತೇಽಗುಣವ್ಯತಿಕರೇ' ಎಂಬುದರ ಅರ್ಥ) ಅಲ್ಲಿ ಜ್ಞಾನ ಮತ್ತು ಧರ್ಮ ಇವೆರಡರ ಫಲವಾದ ಭೋಗಗಳನ್ನು ಅನುಭವಿಸಿ ಪ್ರಲಯದಲ್ಲಿ ಮತ್ತೆ ನಾರಾಯಣನಲ್ಲಿ ಪ್ರವೇಶಿಸಿ ಜ್ಞಾನದಿಂದ ವ್ಯಕ್ತವಾದ ಸ್ವರೂಪಸುಖವನ್ನು ಅನುಭವಿಸುವನು (ಇದು ೧೪ನೇ ಶ್ಲೋಕದಲ್ಲಿ ನಿಷೇವ್ಯ ಎನ್ನುವ ವರೆಗಿನ ತಾತ್ಪರ್ಯ). ಇದೇ ರೀತಿ ಇವರಿಗೆ ಪ್ರಲಯಕಾಲದಲ್ಲಿ ಪ್ರವೇಶರೂಪಸಂಸರ್ಗ, ಸೃಷ್ಟಿಕಾಲದಲ್ಲಿ ಹೊರಗೆ ಬರುವುದು ಎಂಬ ನಿರ್ಗಮ ಇವೆರಡೂ ಪ್ರವಾಹತಃ ನಿತ್ಯವಾಗಿವೆ. ಪ್ರಲಯದಲ್ಲಿ ನಿತ್ಯಸುಖವು ಮಾತ್ರವಿರುವುದು. ಸೃಷ್ಟಿಕಾಲದಲ್ಲಿ ಉತ್ತಮವಾದ ಭೋಗಗಳೂ ಇರುವುವು.

ಬ್ರಹ್ಮದೇವರಿಗೆ, (ಮೊದಲು) ಹೇಗೆ ಶ್ರೀಹರಿಯಿಂದ ಎಲ್ಲ ಗುಣಗಳಿಂದ ನೀಚತೆಯು, ಸರಸ್ವತಿ ಮುಂತಾದ ಇತರರಿಂದ ಉಚ್ಚತೆಯು ಇರುವುದೋ, ಅದರಂತೆ ಶೇಷಾದಿಗಳಿಗೆ ಮೊದಲಿಗೆ ತರತಮಭಾವದಿಂದ ಕೂಡಿದ, ತಮ್ಮ

ಪದಗಳಿಗೆ ತಕ್ಕಂತೆ ನಿಚೋಚ್ಚತೆ ಇರುವುದೋ, ಮುಕ್ತಿಯ ನಂತರವೂ ಅದೇ ರೀತಿ ನಿಚೋಚ್ಚತೆ ಇರುವುದು ಎಂದು ಸ್ಕಂದಪುರಾಣದಲ್ಲಿದೆ. ಇಲ್ಲಿ ಜ್ಞಾನಧರ್ಮ-ಫಲಾನ್ ಎಂದದ್ದರಿಂದ ಜ್ಞಾನಧರ್ಮ ಎರಡೂ ಸೇರಿಯೇ ಭೋಗಕಾರಣವೆಂದು ಸೂಚಿತವಾಗುವುದು. ಜ್ಞಾನವ್ಯಕ್ತಂ ಎಂದದ್ದರಿಂದ ಪ್ರಲಯಕಾಲದಲ್ಲಿ ಅಭಿವ್ಯಕ್ತವಾಗುವ ಸ್ವರೂಪಸುಖಕ್ಕೆ ಕೇವಲ ಜ್ಞಾನವೇ ಕಾರಣ ಹೊರತು ಭೋಗಾಭಿವ್ಯಕ್ತ ಸುಖದಂತೆ ಧರ್ಮವೂ ಕಾರಣವಲ್ಲ ಎಂದೂ ಸೂಚಿತವಾಗುವುದು. ||೧೪||

ಪುರುಷರಾದ ಬ್ರಹ್ಮಾದಿಗಳಿಗೆ ಶ್ರೀಹರಿಯ ಪ್ರಸಾದದಿಂದ ಮುಕ್ತಿಯಾಗಲಿ, ಹೆಣ್ಣಾದ ನನಗೆ (ದೇವಹೂತಿ) ಹೇಗಾದೀತು ? ಎಂದು ಶಂಕಿಸಿ, ಹಾಗೇನಿಲ್ಲ ಎಲ್ಲರಿಗೂ ತಮ್ಮ ಯೋಗ್ಯತಾನುಸಾರ ಸೇವಾ ಮಾಡಿದ್ದಾದರೆ, ಮುಕ್ತಿಯಾಗುವುದು ಎಂಬ ಅಭಿಪ್ರಾಯದಿಂದ ಸೇವೆ ಮಾಡಲು ಹೇಳುವನು ಕಪಿಲನಾಮಕ ಶ್ರೀಹರಿಯು -

**ಅಥ ತಂ ಸರ್ವಭೂತಾನಾಂ ಹೃತ್ಪದ್ಮೇಷು ಕೃತಾಲಯಮ್ ।**
**ಶ್ರುತಾನುಭಾವಂ ಶರಣಂ ವ್ರಜ ಭಾವೇನ ಭಾಮಿನಿ ।।೧೫।।**

ಅಥ=ಭಗವಂತನನನ್ನು ಉಪಾಸನೆ ಮಾಡುವವರಿಗೆ ಮುಕ್ತಿಪ್ರಾಪ್ತಿ-ಯಾಗುವುದರಿಂದ, ಮುಕ್ತಿಗಾಗಿ ತಂ=ಬ್ರಹ್ಮಾದಿಗಳಿಗೆ ಮುಕ್ತಿಪ್ರದನಾದ ಸರ್ವಭೂತಾನಾಂ=ಎಲ್ಲ ಪ್ರಾಣಿಗಳ, ಹೃತ್ಪದ್ಮೇಷು=ಹೃದಯಕಮಲದಲ್ಲಿ, ಕೃತಾಲಯಂ=ಮನೆ ಮಾಡಿದ, ಶ್ರುತಾನುಭಾವಂ=ನೀನು ಕೇಳಿದ ಮಹಾತ್ಮ್ಯವುಳ್ಳ ಭಗವಂತನನ್ನು, ಹೇ ಭಾಮಿನಿ=ಮಂಗಳಕರಳಾದ ದೇವಹೂತಿಯೇ, ಭಾವೇನ=ಭಕ್ತಿಯಿಂದ, ಶರಣಂ ವ್ರಜ=ಮೊರೆ ಹೋಗು. ||೧೫||

ಇಲ್ಲಿಯವರೆಗೆ ಮುಕ್ತಿ ಸ್ವರೂಪವನ್ನು ಹೇಳಿ ಅದಕ್ಕೆ ಅಯೋಗ್ಯರನ್ನು ಹೇಳುವರು. ನಿಷ್ಕಾಮಕರ್ಮವನ್ನು ವಿಧಾನ ಮಾಡಲು ಕಾಮ್ಯಕರ್ಮಿಗಳನ್ನು ಆರು ಶ್ಲೋಕಗಳಿಂದ ನಿಂದಿಸುವರು.

**ಯೇ ತ್ವಿಹಾಸಕ್ತಮನಸಃ ಕರ್ಮಸು ಶ್ರದ್ಧಯಾನ್ವಿತಾಃ ।**
**ಕುರ್ವಂತ್ಯಪ್ರತಿಷಿದ್ಧಾನಿ ನಿತ್ಯಾನ್ಯಪಿ ಚ ಕೃತ್ಸ್ನಶಃ ।।೧೬।।**

ಇಹ=ಮನುಷ್ಯಾದಿಗಳಲ್ಲಿ, ಯೇ ತು=ಮುಕ್ತಿಮಾರ್ಗದಲ್ಲಿರುವವರಿಂದ ಅತ್ಯಂತ ವಿಲಕ್ಷಣರಾದ ಯಾರು ಇಹ=ಸ್ವರ್ಗಾದಿಗಳಲ್ಲಿ ಆಸಕ್ತಮನಸಃ=ಅಪೇಕ್ಷೆವುಳ್ಳವರು ಕರ್ಮಸು=ಯಜ್ಞಾದಿಕರ್ಮಗಳಲ್ಲಿ ಶ್ರದ್ಧಯಾನ್ವಿತಾಃ=ಶ್ರದ್ಧೆಯಿಂದ ಕೂಡಿದವರು

(ಇದರಿಂದ ನನಗೆ ಪ್ರಯೋಜನ ಉಂಟೆಂದು ತಿಳಿದವರು) ಅಪ್ರತಿಷಿದ್ಧಾನಿ=ನಿಷೇಧ ಮಾಡದಿರುವ ಅರ್ಥಾತ್ ವಿಹಿತವಾದ ಜ್ಯೋತಿಷ್ಟೋಮಾದಿಗಳನ್ನೂ ನಿತ್ಯಾನಿ ಅಪಿ= ಸಂಧ್ಯಾವಂದನಾದಿಗಳನ್ನು ಕೃತ್ಸ್ನಶಃ=ಒಂದನ್ನೂ ಬಿಡದೇ ಎಲ್ಲವನ್ನೂ ಕುರ್ವಂತಿ= ಮಾಡುವರು.

**ರಜಸಾ ಕುಂಠಮನಸಃ ಕಾಮಾತ್ಮಾನೋಽಜಿತೇಂದ್ರಿಯಾಃ ।**
**ಪಿತೃನ್ ಯಜಂತ್ಯನುದಿನಂ ಗೃಹೇಷ್ವಭಿರತಾಶಯಾಃ ॥೧೭॥**

ರಜಸಾ=ರಜೋಗುಣದಿಂದ ಕುಂಠಮನಸಃ=ಮೋಕ್ಷವಿಷಯದಲ್ಲಿ ಪ್ರತಿಬದ್ಧ-ವಾದ ಮನಸುಳ್ಳವರು ಆದ್ದರಿಂದಲೇ ಕಾಮಾತ್ಮಾನಃ=ವಿಷಯಾಸಕ್ತ ಮನಸ್ಸಿನವರು ಆದ್ದರಿಂದಲೇ ಅಜಿತೇಂದ್ರಿಯಾಃ=ಇಂದ್ರಿಯಜಯವಿಲ್ಲದವರು ಆದ್ದರಿಂದಲೇ ಗೃಹೇಷು=ಮನೆ ಮಡದಿಯಲ್ಲಿ ಅಭಿರತಾಃ=ಯಾವಾಗಲೂ ವಿಶೇಷವಾಗಿ ಆಸಕ್ತರು ಅನುದಿನಂ=ಪ್ರತಿನಿತ್ಯವೂ ಪಿತೃನ್=ಪಿತೃಗಳನ್ನು ದೇವತೆ ಮುಂತಾದುವರನ್ನೂ ಯಜಂತಿ=ಪೂಜಿಸುವರು ಯೇ ಯಾರೋ- ॥೧೭॥

**ತ್ರೈವರ್ಗಿಕಾಸ್ತೇ ಪುರುಷಾ ವಿಮುಖಾ ಹರಿಮೇಧಸಃ ।**
**ಕಥಾಯಾಂ ಕಥನೀಯೋರುವಿಕ್ರಮಸ್ಯ ಮಧುದ್ವಿಷಃ ॥೧೮॥**

ತೇ=ಅವರು ತ್ರೈವರ್ಗಿಕಾಃ=ಅಲ್ಪಭಕ್ತಿಯುಳ್ಳವರು, ಮೋಕ್ಷಾತಿರಿಕ್ತ ಪುರುಷಾರ್ಥಗಳಾದ ಧರ್ಮಾರ್ಥಕಾಮಗಳನ್ನು ಹೊಂದಲು ಯೋಗ್ಯರು ಅಲ್ಲ, ಮುಕ್ತಿಯೋಗ್ಯರಲ್ಲ. ಏಕೆಂದರೆ ಕಥನೀಯೋರುವಿಕ್ರಮಸ್ಯ=ಅವಶ್ಯ ಹೇಳಲೇ ಬೇಕಾದ ಮಹಾಪರಾಕ್ರಮ ಉಳ್ಳ ಮಧುದ್ವಿಷಃ=ಶ್ರೀಹರಿಯ ಕಥಾಯಾಂ= ಕಥೆಯಲ್ಲಿ ವಿಮುಖಾಃ=ಆಸಕ್ತಿಯಿಲ್ಲದವರು. ಕಾರಣ ಮುಕ್ತಿಯೋಗ್ಯರಲ್ಲ, ಹರಿಮೇಧಸಃ=ಸೂರ್ಯನಂತೆ ವರ್ಚಸ್ಸುಳ್ಳವರು. ನಿತ್ಯಸಂಸಾರಿಗಳು. ॥೧೮॥

**ನೂನಂ ದೈವೇನ ವಿಹತಾ ಯೇ ತ್ವಚ್ಯುತಕಥಾಸುಧಾಂ ।**
**ಹಿತ್ವಾ ಶೃಣ್ವಂತ್ಯಸದ್ಗಾಥಾಃ ಪುರೀಷಮಿವ ವಿಡ್ಭುಜಃ ॥೧೯॥**

ಯೇ=ಯಾವ ತ್ರೈವರ್ಗಿಕರು ಅಚ್ಯುತಕಥಾಸುಧಾಂ=ಪರಮಾತ್ಮನ ಕಥಾ-ಮೃತವನ್ನು ಹಿತ್ವಾ=ಬಿಟ್ಟು ಅಸದ್ಗಾಥಾಃ ಕುತ್ಸಿತ ಶಾಸ್ತ್ರಗಳನ್ನು ವಿಡ್‌ಭುಜಃ=ಹಂದಿ ಮುಂತಾದವುಗಳು ಪುರೀಷಂ ಇವ=ಅಮೇಧ್ಯವನ್ನು (ಮಲ)ತಿಂದಂತೆ ಶೃಣ್ವಂತಿ= ಕೇಳುವರೋ ನೂನಂ=ನಿಶ್ಚಯವಾಗಿ ದೈವೇನ ವಿಹತಾಃ=ಶ್ರೀಹರಿಯ ಕೋಪಕ್ಕೊಳ-ಗಾಗಿ ನರಕಕ್ಕೆ ಹೋಗುವರು. ॥೧೯॥

**ದಕ್ಷಿಣೇನ ಪಥಾಽರ್ಯಮ್ಣಃ ಪಿತೃಲೋಕಂ ವ್ರಜಂತಿ ತೇ ।**
**ಪ್ರಜಾಯಾಂ ತು ಪ್ರಜಾಯಂತೇ ಶ್ಮಶಾನಾಂತಕ್ರಿಯಾಕೃತಃ ॥೨೦॥**

**ತತಸ್ತೇ ಕ್ಷೀಣಸುಕೃತಾಃ ಪುನರ್ಲೋಕಮಿಮಂ ಸತಿ ।**
**ಪತಂತಿ ವಿವಶಾ ದೇವೈಃ ಸದ್ಯೋ ವಿಭ್ರಂಶಿತೋದಯಾಃ ॥೨೧॥**

ತೇ=ತ್ರೈವರ್ಗಿಕರೇ ಮೋಕ್ಷಯೋಗ್ಯರಾಗಿದ್ದರೆ ಅರ್ಯಮ್ಣಃ=ಸೂರ್ಯನ ದಕ್ಷಿಣೇನ=ದಕ್ಷಿಣಾಯನವೆಂದು ಕರೆಸಿಕೊಳ್ಳುವ ಪಥಾ=ಮಾರ್ಗದಿಂದ ಪಿತೃಲೋಕಂ =ಪಿತೃಲೋಕಕ್ಕೆ, ಉಪಲಕ್ಷಣಯಾ ಚಾಂದ್ರಮಸಃ=ಚಂದ್ರನಿಂದ ಅಧಿಷ್ಠತವಾದ ಲೋಕಕ್ಕೆ ವ್ರಜಂತಿ=ಹೋಗುವರು. ಭೋ ಸತಿ=ಹೇ ತಾಯಿಯೇ ತತಃ=ನಂತರ ಕ್ಷೀಣಸುಕೃತಾಃ ಸಂತಃ=ಪುಣ್ಯತೀರಿದವರಾಗಿ ದೇವೈಃ=ದೇವದೂತರಿಂದ ವಿಭ್ರಂಶಿತೋದಯಾಃ=ನಾಶಗೊಳಿಸಲ್ಪಟ್ಟ ಭೋಗಸಾಧನಗಳುಳ್ಳವರಾಗಿ ಪುನಃ ಇಮಂ ಲೋಕಂ ಪತಂತಿ=ಮತ್ತೆ ಈ ಲೋಕಕ್ಕೆ ಬರುವರು. ತತಃ=ನಂತರ ಪ್ರಜಾಯಾಂ ತು=ತಮ್ಮ ಸಂತಾನದಲ್ಲಿಯೇ ಪ್ರಜಾಯಂತೇ=ಜನಿಸುವರು. ತತ್ರ= ಅಲ್ಲಿ ಶ್ಮಶಾನಾಂತಕ್ರಿಯಾಕೃತಃ=ಗರ್ಭಾಧಾನವನ್ನಾರಂಭಿಸಿ ಅಂತ್ಯಕ್ರಿಯೆಯವರೆಗೆ ಎಲ್ಲ ವಿಹಿತಕರ್ಮ ಮಾಡುವರು. ಮತ್ತೆ ಪಿತೃಲೋಕಕ್ಕೆ ಹೋಗುವರು. ಪುಣ್ಯತೀರಿದ ಮೇಲೆ ಮತ್ತೆ ಈ ಲೋಕಕ್ಕೆ ಬರುವರು ತನ್ನ ಸಂತಾನದಲ್ಲಿ ಜನಿಸುವನು ಎಂದು ಆವೃತ್ತಿ ಮಾಡಿ ಅರ್ಥ ಮಾಡಬೇಕು ಆದ್ದರಿಂದ ಪ್ರಮಾಣದಲ್ಲಿ ಪುನಃ ಪುನಃ ಎಂದಿದೆ.

೨೦ನೇ ಶ್ಲೋಕದಲ್ಲಿ 'ಪಿತೃಲೋಕಂ ವ್ರಜಂತಿ ತೇ' ಎಂದಾಗ ಸ್ವಲ್ಪವೂ ಹರಿಭಕ್ತಿ ಇಲ್ಲದವನೂ ಪಿತೃಲೋಕಕ್ಕೆ ಹೋಗುವನೆಂದು ತೋರುವುದು ಕಾರಣ ಇಲ್ಲಿ ವಿವಕ್ಷಿತ ತಾತ್ಪರ್ಯ ಹೇಳುವರು –

**''ಅತ್ಯಲ್ಪಭಕ್ತಾ ವಿಷ್ಣೌ ಚ ಸದಾ ಶ್ರಾದ್ಧಾದಿಕಾರಿಣಃ ।**
**ಪಿತೃಲೋಕಂ ಸಮಾವಿಶ್ಯ ಸ್ವಸಂತಾನೇ ಪುನಃ ಪುನಃ ।**
**ಕ್ಷಿಪ್ರಮೇವ ಪ್ರಜಾಯಂತೇ ಯೇ ತು ಭಕ್ತಿವಿವರ್ಜಿತಾಃ ।**
**ಅನ್ಯಸಾಮಾನ್ಯವೇತ್ತಾರಃ ತದನ್ಯೋತ್ತಮವೇದಿನಃ ।**
**ತದ್ಭಕ್ತನಿಂದಕಾಶ್ಚೈವ ಯಾಂತ್ಯೇವ ನಿರಯಂ ಧ್ರುವಮ್'' ॥**
**ಅಪಿ ಧರ್ಮೈಕ (ನಿಯಮಾ) ನಿಲಯಾ ನಾತ್ರ ಕಾರ್ಯಾ ವಿಚಾರಣಾ ।**
**ಇತಿ ಚ ।**

**ಮುಕ್ತಿಯೋಗ್ಯಾಸ್ತು ದೇವಾದ್ಯಾ ಮಾನುಷಾ ಯಜ್ಞಭೋಗಿನಃ ।**
**ಮನುಷ್ಯಭೇದಾಃ ಶ್ರಾದ್ಧಾದಿಕೃತೋ ವಿದ್ವೇಷಿಣೋಽಸುರಾಃ ॥ ಇತಿ ಚ ।**

ಮೋಕ್ಷಭಿನ್ನ ಪುರುಷಾರ್ಥಸಾಧನ ಮಾಡುವವರು ತ್ರೈವರ್ಗಿಕರು. ತ್ರೈವರ್ಗಿಕರೇ ಮೂರು ವಿಧರು. ೧) ಇವರಲ್ಲಿ ಯಾರು ವಿಷ್ಣುವಿನಲ್ಲಿ ಅತ್ಯಲ್ಪ ಭಕ್ತಿಯುಳ್ಳವರು ಅಂದರೆ ಶ್ರೀಹರಿಯ ಅಧಮಪ್ರಸಾದಜನಕ ಭಕ್ತಿಯುಳ್ಳವರು. ಸದಾ ಶ್ರಾದ್ಧಾದಿಗಳನ್ನು ಮಾಡುವವರು. ವಿಹಿತಕರ್ಮ ಮಾಡುವವರು ಪಿತೃಲೋಕಕ್ಕೆ ಹೋಗಿ ಪುಣ್ಯ ತೀರಿದಾಗ ಕೆಳಗೆ ಬಂದು ತಮ್ಮ ಸಂತಾನದಲ್ಲಿ ಮೇಲಿಂದ ಮೇಲೆ ಶೀಘ್ರದಲ್ಲಿ ಜನಿಸುವರು. (೨ನೇ ಶ್ಲೋಕ ತಾತ್ಪರ್ಯ). ೨)ಯಾರು ಭಕ್ತಿಯಿಲ್ಲದವರು, ಶ್ರೀಹರಿಗೆ ಅನ್ಯರ ಸಾಮ್ಯ ತಿಳಿಯುವರು, ಶ್ರೀಹರಿಯಿಂದ ಭಿನ್ನರಾದವರನ್ನು ಉತ್ತಮರೆಂದು ತಿಳಿಯುವವರು, ಶ್ರೀಹರಿಯ ಭಕ್ತರನ್ನು ನಿಂದಿಸುವವರು, ಕೇವಲ ವಿಹಿತಕರ್ಮ ಮಾಡಿದರೂ ನಿಶ್ಚಯವಾಗಿ ನರಕಕ್ಕೆ ಹೋಗುವವರು. ಈ ವಿಷಯದಲ್ಲಿ ವಿಚಾರ ಮಾಡಬೇಕಿಲ್ಲ.

ಮುಕ್ತಿಯೋಗ್ಯರು ದೇವತೆಗಳು. ಅಂದರೆ ಯಾರು ವಸ್ತುತಃ ಮುಕ್ತಿಯೋಗ್ಯರು ಅತಾತ್ವಿಕದೇವತೆಗಳೇ ಮೊದಲಾದವರು ಸಾದಿಯೋಗಿಗಳು, ಮೊದಲು ಯಾವಾಗ ಮನುಷ್ಯರಾಗಿರುವರೋ ಆಗ ಅತ್ಯಲ್ಪ ಭಕ್ತಿವುಳ್ಳವರಾಗಿ ಯಜ್ಞಾದಿಗಳನ್ನು ಮಾಡಿ ಅದರ ಫಲವಾದ ಸ್ವರ್ಗಾದಿಗಳನ್ನು ಪಡೆಯುವರು ಎಂದು ಭಾವ. (ಇದರಿಂದ ಪಿತೃಲೋಕಂ ವ್ರಜಂತಿ ಎಂಬುದರ ಅರ್ಥ ಹೇಳಿದಂತಾಯಿತು). ಇನ್ನು ಯಾರು ಕೇವಲ ಶ್ರಾದ್ಧಾದಿಗಳನ್ನು ಮಾಡುವರು ಶ್ರೀಹರಿಯಲ್ಲಿ ಭಕ್ತಿ ಇಲ್ಲ. ಇವರು ಮನ್ಯುಷ್ಯಪ್ರಭೇದರು ಅಂದರೆ ನರಕಕ್ಕೆ ಹೋಗುವ ಮನುಷ್ಯರೆಂದರ್ಥ. ೩)ಇನ್ನು ಯಾರು ಶ್ರೀಹರಿಯ ದ್ವೇಷ ಮಾಡುವರು ಶ್ರಾದ್ಧಾದಿಗಳನ್ನು ಮಾಡುವರೋ ಅವರು ಅಸುರರು ತಮೋಯೋಗ್ಯರೆಂದರ್ಥ.ಇದರಿಂದ ವಿಮುಖಾ ಹರಿಮೇಧಸಃ ಎಂಬುದರ ತಾತ್ಪರ್ಯ ಹೇಳಿದಂತಾಯಿತು 'ಧ್ರುವಂ ನಿರಯಂ ಯಾಂತಿ' ಎಂದನ್ವಯಮಾಡಿ ನಿತ್ಯ ನರಕವೆಂದರೆ ತಮಸ್ಸೆಂದು ಅರ್ಥ ತಿಳಿಯಬೇಕು. ॥೨೧॥

**ತಸ್ಮಾತ್ ತ್ವಂ ಸರ್ವಭಾವೇನ ಭಜಸ್ವ ಪರಮೇಷ್ಠಿನಮ್ ।**
**ತದ್ಗುಣಾಶ್ರಯಯಾ ಭಕ್ತ್ಯಾ ಭಜನೀಯಪದಾಂಬುಜಂ ॥೨೨॥**

ತಸ್ಮಾತ್=ಇತರ ಪುರುಷಾರ್ಥಗಳನ್ನು ಇಚ್ಛಿಸುವವರಿಗೆ ಮೋಕ್ಷವು ದೊರೆಯದಿರುವುದರಿಂದ ಮೋಕ್ಷಕ್ಕಾಗಿ ತ್ವಂ=ನೀನು ಸರ್ವಭಾವೇನ=ಎಲ್ಲ ರೀತಿಯಿಂದ ಭಜನೀಯಪದಾಂಬುಜಂ=ಸೇವಿಸಲು ಯೋಗ್ಯವಾದ ಪಾದಕಮಲ-ಗಳುಳ್ಳ ಪರಮೇಷ್ಠಿನಂ=ಸರ್ವೋತ್ತಮನಾದ ಶ್ರೀಹರಿಯನ್ನು ತದ್ಗುಣಾಶ್ರಯಯಾ= ಅವನ ಗುಣಗಳನ್ನು ಕೇಳುವುದರಿಂದುಂಟಾದ ಭಕ್ತ್ಯಾ=ಭಕ್ತಿಯಿಂದ ಭಜಸ್ವ= ಸೇವಿಸು.

ಭಕ್ತಿಯು ಸಾಕ್ಷಾತ್ ಮೋಕ್ಷಸಾಧನವೇ ಅಲ್ಲವೆಂದು ಹೇಳುವರು -

**ವಾಸುದೇವೇ ಭಗವತಿ ಭಕ್ತಿಯೋಗಃ ಪ್ರಚೋದಿತಃ ।**
**ಜನಯತ್ಯಾಶು ವೈರಾಗ್ಯಂ ಜ್ಞಾನಂ ಯದ್ ಬ್ರಹ್ಮದರ್ಶನಮ್ ॥೨೩॥**

ವಾಸುದೇವೇ ಭಗವತಿ=ಷಡ್ಗುಣೈಶ್ವರ್ಯ ಸಂಪನ್ನನಾದ ವಸುದೇವಪುತ್ರನಾದ ಶ್ರೀಕೃಷ್ಣನಲ್ಲಿ ಪ್ರಚೋದಿತಃ=ಮಾಡಲ್ಪಟ್ಟ ಭಕ್ತಿಯೋಗಃ=ಭಕ್ತಿ (ಸ್ನೇಹ) ರೂಪ ಉಪಾಯವು ಆಶು=ಬೇಗನೇ ವೈರಾಗ್ಯಂ ಜನಯತಿ=ಅತಿಶಯ ವೈರಾಗ್ಯ ಹುಟ್ಟಿಸುವುದು. ಯತ್=ಯಾವುದು ಬ್ರಹ್ಮದರ್ಶನಂ=ಬ್ರಹ್ಮಾಪರೋಕ್ಷಜ್ಞಾನ ಸಾಧನವೋ ಅಂಥ ಜ್ಞಾನಂ=ಅಂದರೆ ಧ್ಯಾನವನ್ನು ಜನಯತಿ=ಹುಟ್ಟಿಸುವುದು. ॥೨೩॥

ವೈರಾಗ್ಯಾದಿಸಾಧನಸಂಪನ್ನನಾದ ಉಪಾಸಕನಿಗೆ ಅಪರೋಕ್ಷಜ್ಞಾನವಾಗುವ ಸಮಯ ಹೇಳುವರು -

**ಯದಾಽಸ್ಯ ಚಿತ್ತಮರ್ಥೇಷು ಸಮೇಷ್ವಿಂದ್ರಿಯವೃತ್ತಿಭಿಃ ।**
**ನ ವಿಗೃಹ್ಣಾತಿ ವೈಷಮ್ಯಂ ಪ್ರಿಯಮಪ್ರಿಯಮಪ್ಯುತ ॥೨೪॥**

ಯದಾ=ಯಾವಾಗ ಅಸ್ಯ=ಉಪಾಸಕನ ಚಿತ್ತಂ=ಮನಸ್ಸು ಸಮೇಷು ಅರ್ಥೇಷು=ಬಂಧಕತ್ವೇನ ಸಮಾನವಾದ ಶಬ್ದಾದಿವಿಷಯಗಳಲ್ಲಿ ಇಂದ್ರಿಯ-ವೃತ್ತಿಭಿಃ=ಇಂದ್ರಿಯಗಳಿಂದ ಜ್ಞಾನ ಬಂದಾಗ ಪ್ರಿಯಂ=ಇದು ನನಗೆ ಇಷ್ಟ ಅಪ್ರಿಯಂ=ಇದು ಕಷ್ಟ ಉತ=ಎಂದು ವೈಷಮ್ಯಂ=ವಿಷಮತೆಯನ್ನು ನ ಗೃಹ್ಣಾತಿ=ತಿಳಿಯಲಾರನು. ಅಂದರೆ ಎಲ್ಲ ವಿಷಯಗಳು ಬಂಧಕವಾದ್ದರಿಂದ ನನಗೆ ಅಪ್ರಿಯಗಳೇ ಶ್ರೀಹರಿಯೊಬ್ಬನೇ ಪರಮಪ್ರಿಯನು ಎಂದು ತಿಳಿಯುವನೆಂದು ಭಾವ. ॥೨೪॥

**ಸ ತದೈವಾತ್ಮನಾಽಽತ್ಮಾನಂ ನಿಃಸಂಗಂ ಸಮದರ್ಶಿನಮ್ ।**
**ಹೇಯೋಪಾದೇಯರಹಿತಮಾರೂಢಪದಮೀಕ್ಷತೇ ॥೨೫॥**

ಸಃ=ಉಪಾಸಕನು ತದಾ ಏವ=ಅವಾಗಲೇ ಆತ್ಮನಾ=ಸ್ವರೂಪಮನಸ್ಸಿನಿಂದ ಮಿಶ್ರವಾದ ಜಡಮನಸ್ಸಿನಿಂದ ನಿಃಸಂಗಂ=ಅಸಂಗನಾದ ಸಮದರ್ಶಿನಂ=ಯಥಾರ್ಥ ಜ್ಞಾನಿಯಾದ ಹೇಯೋಪಾದೇಯರಹಿತಂ=ಹೇಯತ್ವ ಸಹಿತ ಉಪಾದೇಯತ್ವವಿಲ್ಲದ ಅತ್ಯುಪಾದೇಯನಾದ ಎಂದರ್ಥ. ಆರೂಢಪದಂ=ತನ್ನ ಚಿತ್ತದಲ್ಲಿ ಆರೂಢವಾದ ಸ್ವರೂಪವುಳ್ಳ ತನ್ನಧ್ಯಾನದಲ್ಲಿ ವಿಷಯನಾದ ಆತ್ಮಾನಂ=ಬಿಂಬರೂಪವನ್ನು ಈಕ್ಷತೇ=ನೋಡುವನು. ॥೨೫॥

ದೃಶ್ಯ, ಸ್ಪರ್ಶ್ಯ ಮುಂತಾದ ಅನೇಕ ವಸ್ತುಗಳಲ್ಲಿರುವ ಭಗವಂತನೂ ಭಿನ್ನನೇ. ಆದ್ದರಿಂದ ಅನೇಕ ಜನರಿಗೆ ಪರಮೈಶ್ವರ್ಯ ಅಸಂಭಾವಿತವಾದ್ದರಿಂದ ಅವನಲ್ಲಿ ಅತಿಶಯಭಕ್ತಿ ಮಾಡುವುದು ಸಾಧ್ಯವಿಲ್ಲ ಎಂಬ ಶಂಕೆಗೆ, ಎಲ್ಲ ಕಡೆಯಲ್ಲಿ ಇರುವವನೂ ಒಬ್ಬನೇ ಭಗವಂತ ಎಂದು ಸಯುಕ್ತಿಕವಾಗಿ ಹೇಳುವರು –

**ಜ್ಞಾನಮಾತ್ರಂ ಪರಂ ಬ್ರಹ್ಮ ಪರಮಾತ್ಮೇಶ್ವರಃ ಪುಮಾನ್ ।**
**ದೃಶ್ಯಾದಿಭಿಃ ಪೃಥಗ್ಭಾವೈರ್ಭಗವಾನೇಕ ಈಯತೇ ॥೨೬॥**

ಏಕಃ ಏವ=ಭಗವಾನ್=ಒಬ್ಬನೇ ಶ್ರೀಹರಿಯು ದೃಶ್ಯಾದಿಭಿಃ ಭಾವೈಃ=ಅಧಿಷ್ಠಾನಗಳಾದ ದೃಶ್ಯಾದಿ ಪದಾರ್ಥಗಳಿಂದ ಪೃಥಕ್ ಈಯತೇ=ಭಿನ್ನನೆಂದು ಭ್ರಾಂತಿಯಿಂದ ತಿಳಿಯಲ್ಪಡುವನು. ಏಕೆಂದರೆ ಜ್ಞಾನಮಾತ್ರಂ, ಪರಂಬ್ರಹ್ಮ ಪರಮಾತ್ಮಾ ಈಶ್ವರಃ ಪುಮಾನ್=ಮುಂತಾದ ವೈದಿಕ ಶಬ್ದವಾಚ್ಯನಾಗಿದ್ದಾನೆ. ಈ ಎಲ್ಲ ಶಬ್ದವಾಚ್ಯತ್ವವು ಅನೇಕರಿಗೆ ಬರಲಾರವೆಂದು ಭಾವ. ವಿಜಯಧ್ವಜರ ಪ್ರಕಾರ – ಆ ವಾದಿಗಳು ಬೇರೆ ಬೇರೆ ಹೆಸರಿನಿಂದ ಕರೆಯುವುದೂ ಇವನನ್ನೇ ಬೇರೆನನ್ನೂ ಅಲ್ಲ . ಎಂದು ಈ ಶ್ಲೋಕದಲ್ಲಿ ಹೇಳುವರು–

ಬೌದ್ಧರು ಜ್ಞಾನವೇ ತತ್ವವೆಂದು ಹೇಳುವರು. ಬ್ರಹ್ಮ ಪರಬ್ರಹ್ಮನೆಂದು ವೇದಾಂತಿಗಳು. ಪರಮಾತ್ಮಾ ಎಂದು ಯೋಗಿಗಳು. ಈಶ್ವರನೆಂದು ವೈಶೇಷಿಕರು ಮತ್ತು ಪಾಶುಪತರು ಪುಮಾನ್ ಎಂದು ಸಾಂಖ್ಯರು. ಭಗವಾನ್ ಎಂದು ಪೌರಾಣಿಕರು ಹೇಳುವರು. ಆದರೆ ಈ ಎಲ್ಲ ಶಬ್ದದಿಂದ ಒಬ್ಬನೇ ತಿಳಿಯುವನು.

ಬ್ರಹ್ಮನು ತತ್ವಗಳಲ್ಲಿ ಪರಂ ಉತ್ತಮನಾದ್ದರಿಂದ ಪರಂಬ್ರಹ್ಮ ಆತ್ಮೇಭ್ಯಃಪರಃ ಪರಮಾತ್ಮಾ ಜೀವರಿಂದ ಉತ್ತಮನೆಂದರ್ಥ. ನಿಯಮನ ಮಾಡುವ (ಈಶನ) ಶಕ್ತಿ ಇದ್ದುದರಿಂದ ಈಶ್ವರನು. ಅವ್ಯಾಹತ ಪುಂಶಕ್ತಿಯಿರುವುದರಿಂದ ಪುಮಾನ್. ಐಶ್ವರ್ಯಾದಿಗುಣವಿರುವುದರಿಂದ ಭಗವಾನ್ ಎಂದು ಕರೆಯಲ್ಪಡುವನು. ಇವನು 'ದೃಶ್ಯಾದಿಭಿಃ ಸ್ಪಶ್ಯಾದಿಭಿಃ ಪೃಥಗ್ ಈಯತೇ' ಅಂದರೆ ಘಟಪಟಾದಿ ವಸ್ತುಗಳು ಜಡಮೂರ್ತಗಳಾದ್ದರಿಂದ ದೃಶ್ಯಸ್ಪ್ರಶ್ಯವಾಗಿವೆ. ಶ್ರೀಹರಿಯು ಜಡನೂ ಅಲ್ಲ , ಮೂರ್ತನೂ ಅಲ್ಲ ಕಾರಣ ಇವನು ದೃಶ್ಯನೂ ಅಲ್ಲ ಸ್ಪ್ರಶ್ಯನೂ ಅಲ್ಲ ಎಂದು ತಿಳಿಯುವನು. ॥೨೬॥

ಇಲ್ಲಿ ಹೇಳಿದ ಭಕ್ತಿಯೋಗಕ್ಕೆ ಎಲ್ಲದರಲ್ಲಿಯೂ ವೈರಾಗ್ಯವೇ ಸಾಕ್ಷಾತ್ ಫಲವೆಂಬುದನ್ನು ಪ್ರಮಾಣಪ್ರಸಿದ್ಧಿಯಿಂದ ಹೇಳುವರು –

**ಏತಾವಾನೇವ ಯೋಗೇನ ಸಮಗ್ರೇಣೇಹ ಯೋಗಿನಃ ।**
**ಯುಜ್ಯತೇಽಭಿಮತೋ ಹ್ಯರ್ಥೋ ಯದಸಂಗಸ್ತು ಕೃತ್ಸ್ನಶಃ ॥೨೭॥**

ಇಹ=ಅಧಿಕಾರಿಗಳಾದ ಉಪಾಸಕರ ಮಧ್ಯದಲ್ಲಿ ಯೋಗಿನಃ=ಮೋಕ್ಷೋಪಾಯವಾದ ಭಕ್ತಿಯೋಗವನ್ನು ಅನುಷ್ಠಾನ ಮಾಡುವನಿಗೆ ಸಮಗ್ರೇಣ ಯೋಗೇನ =ಅಷ್ಟಾಂಗೋಪೇತ ಭಕ್ತಿಯೋಗದಿಂದ ಯತ್ ಕೃತ್ಸ್ನಶಃ=ಎಲ್ಲ ವಿಷಯದಲ್ಲಿ ಅಸಂಗಃ=ಅನಾಸಕ್ತಿ ಏನಿದೆಯೋ ಏತಾವಾನೇವ=ಇಷ್ಟೇ ಅಭಿಮತಃ ಅರ್ಥಃ= ಸಾಕ್ಷಾತ್‌ಫಲವು ಯುಜ್ಯತೇ=ಯುಕ್ತವಾಗುವುದು. (ವಿಜಯಧ್ವಜೀಯದ ಪ್ರಕಾರ ಕೃತ್ಸ್ನಶಃ ಅಸಂಗಃ ಎಂದರೆ ಲಿಂಗಶರೀರ ಸಂಬಂಧ ಹೋಗುವುದು ಎಂದರ್ಥ. ಹಿ= ಪ್ರಸಿದ್ಧ. ॥೨೭॥

ಹಿಂದೆ ಜ್ಞಾನಮಾತ್ರ ಎಂದು ಜ್ಞಾನಾನಂದಾದಿರೂಪತ್ವವನ್ನು ಭಗವಂತನಿಗೆ ಹೇಳಿದೆ ಅದು ಸರಿಯಲ್ಲ. ಭಗವಂತನ ಅವತಾರವಾದ ಮತ್ಸ್ಯಾದಿಗಳಿಗೆ ಭೌತಿಕ ರೂಪ ಕಂಡು ಬರುವುದು ಎಂದರೆ ಉತ್ತರಿಸುವರು- ಮತ್ಸ್ಯಾದಿ ಅವತಾರಗಳು ಅಪ್ರಾಕೃತ ದೇಹವುಳ್ಳವುಗಳು ಎಂದೇ ಮುಮುಕ್ಷುಗಳು ತಿಳಿಯಬೇಕು ಅನ್ಯಥಾ ತಿಳಿದರೆ ತಮಸ್ಸಾಗುವುದು ಎಂದು ಹೇಳುವರು-

**ಜ್ಞಾನಮೇಕಂ ಪರಾಚೀನೈರಿಂದ್ರಿಯೈರ್ಬ್ರಹ್ಮ ನಿರ್ಗುಣಂ ।**
**ಅವಭಾತ್ಯರ್ಥರೂಪೇಣ ಭ್ರಾಂತ್ಯಾ ಶಬ್ದಾದಿಧರ್ಮಿಣಾಮ್ ॥೨೮॥**

ಯತ್=ಯಾವುದು ಏಕಂ ಜ್ಞಾನಂ=ಕೇವಲ ಜ್ಞಾನಾನಂದಾದ್ಯಾತ್ಮಕವೋ ಏಕಂ=ಸರ್ವೋತ್ತಮವು, ಸ್ವಗತಭೇದವರ್ಜಿತವು ಜ್ಞಾನಂ=ಜ್ಞಾನಾನಂದರೂಪವು ನಿರ್ಗುಣಂ=ಸತ್ವಾದಿಗುಣವಿಕಾರಶೂನ್ಯವು ಬ್ರಹ್ಮ=ಆನಂದಾದಿ ಗುಣಪೂರ್ಣವೂ ಆದ ಮತ್ಸ್ಯಕೂರ್ಮಾದಿಗಳ ರೂಪವೋ, ತತ್=ಅದು ಶಬ್ದಾದಿಧರ್ಮಿಣಾಂ=ಶಬ್ದ ಮುಂತಾದ ವಿಷಾಯಾಸಕ್ತರಾದವರಿಗೆ ಪರಾಚೀನೈಃ=ಬಹಿರ್ಮುಖಗಳಾದ ಇಂದ್ರಿಯೈಃ=ಇಂದ್ರಿಯಗಳಿಂದ ಅರ್ಥರೂಪೇಣ=ಭೌತಿಕ ಶರೀರವೆಂದು ಭ್ರಾಂತ್ಯಾ ಅವಭಾತಿ=ಭ್ರಾಂತಿಯಿಂದ ತೋರುವುದು, ವಾಸ್ತವಿಕವಾಗಿಲ್ಲ. ಆದ ಕಾರಣ ಜ್ಞಾನ ಮಾತ್ರವೆಂದು ಹೇಳಿದ್ದು ಯುಕ್ತವೇ.

ಈ ಶ್ಲೋಕದ ತಾತ್ಪರ್ಯ ಹೇಳುವರು -

**ಮತ್ಸ್ಯಕೂರ್ಮಾದಿರೂಪಂ ಚ ವಿಷ್ಣೋರ್ಜ್ಞಾನೈಕಮಾತ್ರಕಮ್ ।**
**ತನ್ಮನ್ಯಂತೇ ಭೌತಿಕಂ ತು ಯೇ ಗಚ್ಛಂತ್ಯಧರಂ ತಮಃ ॥ ಇತಿ ಬ್ರಾಹ್ಮೇ ।**

ವಾಸ್ತವಿಕವಾಗಿ ಕೇವಲ ಜ್ಞಾನಾತ್ಮಕವಾಗಿದ್ದರೂ ವಿಷ್ಣುವಿನ ಮತ್ಸ್ಯಕೂರ್ಮಾದಿ-ರೂಪಗಳನ್ನು ಯಾರು ಭೌತಿಕವೆಂದು ತಿಳಿಯುವರೋ ಅವರು ಅಂಧತಮಸ್ಸಿಗೆ ಹೋಗುವರು ಆದ್ದರಿಂದ ಅವರ ಜ್ಞಾನವು ಭ್ರಮವೆಂದರ್ಥ. ॥೨೮॥

ಈ ವಿಧವಾಧ ಭ್ರಾಂತಿಯು ಜನರಿಗೆ ಹೇಗೆ ಬರುವುದು ? ಎಂದರೆ ದೃಷ್ಟಾಂತದಿಂದ ಉಪಪಾದಿಸುವರು –

**ಯಥಾ ಮಹಾನಹಂಕಾರಸ್ತ್ರಿವೃತ್ ಪಂಚವಿಧಃ ಸ್ವರಾಟ್ ।**
**ಏಕಾದಶವಿಧಸ್ತಸ್ಯ ವಪುರಂಡಂ ಜಗದ್ ಯತಃ ॥೨೯॥**

ಯಥಾ=ಹೇಗೆ ಸ್ವರಾಟ್=ಬ್ರಹ್ಮದೇವರು ಮಹಾನ್ ಇತಿ=ಮಹತ್ತತ್ವಾತ್ಮಕ-ರೆಂದು ಸ್ವರಾಟ್=ರುದ್ರದೇವರು ತ್ರಿವೃತ್=ಮೂರು ವಿಧ ಅಹಂಕಾರಾತ್ಮಕರೆಂದು ಸ್ವರಾಟ್=ಇಂದ್ರನು ಪಂಚವಿಧಃ=ಪಂಚ ಭೂತಾತ್ಮಕನು ಏಕಾದಶವಿಧಃ=ಹನ್ನೊಂದು ಇಂದ್ರಿಯಾತ್ಮಕನು ಬ್ರಹ್ಮಾಂಡಾತ್ಮಕನು ಜಗದಾತ್ಮಕನು ಎಂದು. ಭ್ರಾಂತ್ಯಾ= ಭ್ರಾಂತಿಯಿಂದ ಅವಭಾತಿ=ವಿಷಯಾಸಕ್ತರಿಗೆ ತೋರುವುದೋ ತಥಾ=ಹಾಗೆ ಮತ್ಸ್ಯಾದಿರೂಪನಾದ ಪರಬ್ರಹ್ಮನು ಜ್ಞಾನರೂಪನಾಗಿದ್ದರೂ ಪ್ರಾಕೃತ ದೇಹವುಳ್ಳವನೆಂದು ತೋರುವನು.

ಇದು ಭ್ರಾಂತಿ ಏಕೆ ? ಎಂದರೆ

ತಸ್ಯ=ಇಂದ್ರನಿಗೆ ಅಂಡಂ=ಬ್ರಹ್ಮಾಂಡವು ತಸ್ಥಂ ಜಗತ್=ಬ್ರಹ್ಮಾಂಡದಲ್ಲಿರುವ ಜಗತ್ತು ಯತಃ=ಯಾವ ಕಾರಣ ವಪುಃ=ಅಭಿಮನ್ಯಮಾನವಾದ್ದರಿಂದ ಶರೀರವಿದ್ದಂತೆ. ಕಾರಣ ಅವರಿಂದ ಭಿನ್ನವೆಂದು ಪ್ರಮಾಣ ಪ್ರಸಿದ್ಧವಾಗಿದೆ. ಉಪಲಕ್ಷಣವಿದು. ತಸ್ಯ=ಬ್ರಹ್ಮದೇವರಿಗೆ ಮಹಾನ್ ವಪುಃ=ಮಹತ್ತತ್ವವು ಶರೀರವು ತಸ್ಯ=ರುದ್ರನಿಗೆ ಅಹಂಕಾರವು ವಪುಃ=ಶರೀರವು, ತಸ್ಯ=ಇಂದ್ರನಿಗೆ ಇಂದ್ರಿಯಗಳು ಪಂಚಭೂತಗಳು ಅಭಿಮನ್ಯಮಾನಗಳಾದ್ದರಿಂದ ಶರೀರವಿದ್ದಂತೆ.

ಹೇಗೆ ಭಿನ್ನವೆಂದು ಪ್ರಮಾಣಪ್ರಸಿದ್ಧವಾದ ಮಹತ್ತತ್ವಬ್ರಹ್ಮಾಂಡಾದಿಗಳು ಅಜ್ಞಾನಿಗಳಿಗೆ ಅಭಿನ್ನವೆಂದು ತೋರುವವೋ ಹಾಗೆ ''ಪೂರ್ಣ ಮದಃ ಪೂರ್ಣಮಿದಂ'' ಎಂಬ ಪ್ರಮಾಣದಿಂದ ಅಭಿನ್ನವೆಂದು ಪ್ರಸಿದ್ಧವಾದ ಮೂಲರೂಪ ಅವತಾರ ರೂಪಗಳು ಜ್ಞಾನಾತ್ಮಕವಾಗಿದ್ದರೂ ಭ್ರಾಂತಿಯಿಂದ ಜಡದೇಹವುಳ್ಳವುಗಳೆಂದು ತೋರುವುವು.

ಈ ಶ್ಲೋಕವನ್ನು ಅರ್ಥವಾಗದ ಕಾರಣ ವ್ಯಾಖ್ಯಾನಿಸುವರು -

**ಏಕಾದಶೇಂದ್ರಿಯಾತ್ಮಾ ಚ ಪಂಚಭೂತಾತ್ಮಕಸ್ತಥಾ ।**
**ಸರ್ವಾಭಿಮಾನೀ ಭಗವಾನ್ ಸ್ವರಾಡಿಂದ್ರಃ ಪುರಂದರಃ ॥**
**ಇದಮಂಡಂ ಜಗತ್ಸರ್ವಂ ಶಕ್ರದೇಹಂ ವಿದುರ್ಬುಧಾಃ ।**
**ತತ್ಪತಿಸ್ತ್ರಿಗುಣೋ ರುದ್ರಃ ತಸ್ಯ ಬ್ರಹ್ಮಾ ತತೋ ಹರಿಃ । ಇತಿ ವಾಮನೇ ।**

**ಯಥಾ ಏತಾನ್ ಪಶ್ಯಂತಿ ತದ್ವದೇವ ಜ್ಞಾನಾತ್ಮಕಂ ಮತ್ಸ್ಯಾದಿರೂಪಂ ಗುಣಮಯಂ ಪಶ್ಯಂತಿ ಅಜ್ಞಾಃ ॥**

ಶ್ಲೋಕದಲ್ಲಿಯ 'ಏಕಾದಶವಿಧಃ' ಎಂಬುದರ ತಾತ್ಪರ್ಯ ಏಕಾದಶೇಂದ್ರಿಯಾತ್ಮಾ ಎಂಬುದು. 'ಪಂಚವಿಧಃ' ಎಂಬುದರ ವ್ಯಾಖ್ಯಾನ ಪಂಚಭೂತಾತ್ಮಕಃ ಎಂಬುದು. ತಥಾಶಬ್ದದಿಂದ ಅಂಡಾತ್ಮಕ, ಜಗದಾತ್ಮಕ ಎಂದು ಅಜ್ಞಾನಿಗಳು ಭ್ರಾಂತಿಯಿಂದ ತಿಳಿಯುವರು ಎಂದು ತಾತ್ಪರ್ಯಯದಲ್ಲಿ ಶೇಷ ಮಾಡಬೇಕು. ಭ್ರಾಂತಿ ಎಂದು ತಿಳಿಸಲು ಎಲ್ಲಕ್ಕೂ ಅಂದರೆ ಇಂದ್ರಿಯಗಳಿಗೆ ಪಂಚಭೂತಗಳಿಗೆ ಬ್ರಹ್ಮಾಂಡಕ್ಕೆ ಅದರಲ್ಲಿಯೂ ಜಗತ್ತಿಗೆ ಅಭಿಮಾನಿಯು ಸ್ವರ್ಗಾಧಿಪತಿ ಇಂದ್ರನು. ಬೇರೆ ಇಂದ್ರರನ್ನು ವ್ಯಾವೃತ್ತಿ ಮಾಡಲು ಪುರಂದರಃ ಎಂದಿರುವರು. ಅಂಡಾತ್ಮಕ, ಜಗದಾತ್ಮಕವೆಂಬುದು ಭ್ರಮೆ ಎಂದು ತಿಳಿಸಲು, ಜ್ಞಾನಿಗಳು ಬ್ರಹ್ಮಾಂಡವನ್ನು ಜಗತ್ತನ್ನು ಇಂದ್ರನ ದೇಹವೆಂದು ಅಭಿಮನ್ಯಮಾನವೆಂದು ತಿಳಿಯುವರು ಎಂದು ಹೇಳಿರುವರು. ಇವುಗಳಿಂದ ಭಿನ್ನನೆಂದು ಭಾವ. 'ತಸ್ಯ ವಪುರಂಡಂ ಜಗದ್ಯತಃ' ಎಂಬುದನ್ನು ವ್ಯಾಖ್ಯಾನಿಸಿದಂತಾಯಿತು. ಸ್ವರಾಟ್ ಎಂಬುದಕ್ಕೆ ಮಹಾನ್ ಎಂಬುದಕ್ಕೂ ವಿಶೇಷಣವಿಶೇಷ್ಯಭಾವ ಉಂಟು ಎಂದಿಟ್ಟುಕೊಂಡು ವ್ಯಾಖ್ಯಾನಿಸಿರುವರು. ಇಂದ್ರನಿಗೆ ಸ್ವಾಮಿಯು ರುದ್ರನು. ರುದ್ರನಿಗೆ ಬ್ರಹ್ಮನು ಬ್ರಹ್ಮನಿಗೂ ಪತಿಯು ಶ್ರೀಹರಿಯು ಎಂದು ವಾಮನದಲ್ಲಿ ಹೇಳಿದೆ. ಸ್ವರಾಟ್-ಶಬ್ದವಾಚ್ಯನಾದ ಇಂದ್ರನಿಗೆ ಅಧಿಪತಿಗಳಾದ್ದರಿಂದ ರುದ್ರಬ್ರಹ್ಮರೂ ಸ್ವರಾಟ್ ಎನಿಸುವರು. ಅವರಿಗೂ ನಿಯಾಮಕನು ಮುಖ್ಯಸ್ವರಾಟ್ ಎಂದು ಭಾವ.

ಅಂತು ಅಭಿಮಾನಿಗಳಾದ್ದರಿಂದ ಅಭಿಮನ್ಯಮಾನ ವಸ್ತುಗಳಿಂದ ಭಿನ್ನರಾಗಿದ್ದರೂ, ಇಂದ್ರಾದಿಗಳನ್ನು ಅಭಿಮನ್ಯಮಾನಗಳಿಂದ ಅಭಿನ್ನರೆಂದು ಅಜ್ಞಾನಿಗಳು ತಿಳಿಯುವಂತೆ, ಮೂಲರೂಪದಿಂದ ಅಭಿನ್ನರಾದ ಮತ್ಸ್ಯಾದಿಗಳನ್ನು ಜ್ಞಾನರೂಪವಾಗಿದ್ದರೂ ಅಜ್ಞಾನಿಗಳು ಪ್ರಾಕೃತದೇಹವುಳ್ಳವನೆಂದು ಭ್ರಾಂತಿಯಿಂದ ತಿಳಿಯುವರು ಎಂದು ಭಾವ. ॥೨೯॥

ಹಾಗಾದರೆ ಇವನನ್ನು ಸರಿಯಾಗಿ ತಿಳಿಯುವರು ಯಾರು ? ಎಂದರೆ ಹೇಳುವರು–

**ಏತದ್ ವೈ ಶ್ರದ್ಧಯಾ ಭಕ್ತ್ಯಾ ಯೋಗಾಭ್ಯಾಸೇನ ನಿತ್ಯಶಃ ।**
**ಸಮಾಹಿತಾತ್ಮಾ ನಿಃಸಂಗೋ ವಿರಕ್ತಃ ಪರಿಪಶ್ಯತಿ ॥೩೦॥**

ಏತತ್=ಮತ್ಸ್ಯಾದಿರೂಪವನ್ನು ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ ಭಕ್ತ್ಯಾ=ಭಕ್ತಿಯಿಂದ ನಿತ್ಯಶಃ ಯೋಗಾಭ್ಯಾಸೇನ=ಪ್ರತಿಕ್ಷಣವೂ ಯಮಾದಿಯೋಗಗಳ ಅಭ್ಯಾಸ ಮಾಡುವದರಿಂದಲೂ ಸಮಾಹಿತಾತ್ಮಾ=ಶ್ರೀಹರಿಯಲ್ಲಿಯೇ ಮನಸ್ಸಿಟ್ಟವನು ನಿಃಸಂಗಃ=ದುಷ್ಟರ ಸಹವಾಸವಿಲ್ಲದವನು ಸಜ್ಜನರ ಸಂಗವನ್ನೇ ನಿರ್ಣಯಿಸಿದವನು (ನಿರ್ನಿರ್ಣಯನಿಷೇಧಯೋಃ) ವಿರಕ್ತಃ=ಎಲ್ಲವೂ ಅಸಾರ ಅನಿತ್ಯವೆಂದು ತಿಳಿದವನು ಪರಿಪಶ್ಯತಿ=ಜ್ಞಾನಾನಂದಾತ್ಮಕವೇ ಪ್ರಾಕೃತವಲ್ಲ ಎಂದು ಚೆನ್ನಾಗಿ ತಿಳಿಯುವನು. ॥೩೦॥

ಉಪಸಂಹಾರಮಾಡುವರು –

**ಇತ್ಯೇತತ್ಕಥಿತಂ ಗುರ್ವಿ ಜ್ಞಾನಂ ತದ್ ಬ್ರಹ್ಮದರ್ಶನಂ ।**
**ಯೇನೈವ ಬುಧ್ಯತೇ ತತ್ತ್ವಂ ಪ್ರಕೃತೇಃ ಪುರುಷಸ್ಯ ಚ ॥೩೧॥**

ಹೇ ಗುರ್ವಿ=ಪೂಜ್ಯಳಾದ ತಾಯಿಯೇ ಯೇನ ಏವ=ಯಾವ ಜ್ಞಾನದಿಂದ ಪ್ರಕೃತೇಃ=ಚೇತನಾಚೇತನಪ್ರಕೃತಿಯ (ಲಕ್ಷ್ಮೀದೇವಿ ಜಡಪ್ರಕೃತಿಗಳ) ಪುರುಷಸ್ಯ ಚ=ಬ್ರಹ್ಮಾದಿಜೀವರ ತತ್ತ್ವಂ=ನಿಜವಾದ ಸ್ವರೂಪವು ಬುಧ್ಯತೇ=ತಿಳಿಯಲ್ಪಡುವದೋ ತದ್=ಅಂಥ ಬ್ರಹ್ಮದರ್ಶನಂ=ಪರಬ್ರಹ್ಮವಿಷಯಕವಾದ ಜ್ಞಾನಂ=ಜ್ಞಾನಸಾಧನವಾದ ಮಾತುಗಳು ಕಥಿತಂ=ಹೇಳಲ್ಪಟ್ಟಿತು. ಈ ರೀತಿಯಾಗಿ ಪರಾಪರತತ್ತ್ವಗಳೆರಡನ್ನು ಉಪದೇಶ ಮಾಡಿದೆನೆಂದರ್ಥ. ॥೩೧॥

ಅಪರತತ್ತ್ವವಿಷಯಕ ಜ್ಞಾನವೂ, ಕೊನೆಗೆ ನನ್ನ ವಿಷಯಕವಾದರೆ ಮುಕ್ತಿ ಸಾಧನವೆಂದು ಹೇಳವರು–

**ಜ್ಞಾನಂ ಯೋಗಶ್ಚ ಮನ್ನಿಷ್ಠೋ ನೈರ್ಗುಣ್ಯೋ ಭಕ್ತಿಲಕ್ಷಣಃ ।**
**ದ್ವಯೋರಪ್ಯೇಕ ಏವಾರ್ಥೋ ಭಗವಚ್ಛಬ್ದಲಕ್ಷಣಃ ॥೩೨॥**

ಮನ್ನಿಷ್ಠಃ=ನನ್ನ ವಿಷಯಕವಾದ, ಜ್ಞಾನಂ=ಜ್ಞಾನರೂಪವಾದ ಯೋಗಃ=ಉಪಾಯವು ಭಕ್ತಿಲಕ್ಷಣಃ=ಭಕ್ತಿರೂಪವಾದ ಯೋಗಃ ಚ=ಉಪಾಯವೂ ಸಹ ನೈರ್ಗುಣ್ಯಃ=ಮುಕ್ತಿಸಾಧನವು. ಭಕ್ತಿಸಹಿತ ಜ್ಞಾನವೇ ಮುಕ್ತಿಸಾಧನ ಕೇವಲ

ಜ್ಞಾನವಲ್ಲ, (ಕಾರಣ ಜ್ಞಾನ ಮುಕ್ತಿಸಾಧನವೆಂದರೆ ಭಕ್ತಿಯನ್ನು ಉಪದೇಶ ಮಾಡುವುದು ವ್ಯರ್ಥವೆಂಬ ಶಂಕೆಗೆ ಅವಕಾಶವಿಲ್ಲವೆಂದು ಭಾವ) ದ್ವಯೋಃ ಅಪಿ=ಮಹಾತ್ಮ್ಯಜ್ಞಾನ ಮತ್ತು ಸುದೃಢಸ್ನೇಹಗಳಿಗೆ ಅರ್ಥಃ=ವಿಷಯನು ಏಕ ಏವ=ಒಬ್ಬನೇ ಭಗವಚ್ಛಬ್ದಲಕ್ಷಣಃ=ಭಗವತ್‌ಶಬ್ದವೇ ಜ್ಞಾಪಕವಾಗಿವುಳ್ಳವನು ಅಂದರೆ ಭಗವಚ್ಛಬ್ದವಾಚ್ಯನೆಂದರ್ಥ. ಇದರಿಂದ ನಿರ್ವಿಶೇಷ ಬ್ರಹ್ಮಜ್ಞಾನ ಪರಮಮುಕ್ತಿಸಾಧನ ಸಗುಣವಿಷಯಕಭಕ್ತಿಯು ಮುಕ್ತಿಸಾಧನವಲ್ಲ ಎಂದು ಕೆಲವರು ಹೇಳುವರು. ಅದು ಸರಿಯಲ್ಲ. ನಿರ್ವಿಶೇಷಜ್ಞಾನ ಮುಕ್ತಿಸಾಧನ-ವೆಂಬುದು ಅಪ್ರಾಮಾಣಿಕ ಎಂದು ಹೇಳಿದಂದಾಯಿತು.

ಇನ್ನು "ತಂ ಏವಂ ವಿದ್ವಾನಮೃತಃ" ಎಂಬಲ್ಲಿ ಕೇವಲ ಜ್ಞಾನ ಮುಕ್ತಿ-ಸಾಧನವೆಂದು, "ಭಕ್ತ್ಯಾ ತ್ವನನ್ಯಯಾ" ಎಂಬಲ್ಲಿ ಕೇವಲ ಭಕ್ತಿಗೆ, ಮತ್ತು ಎರಡು ಇಲ್ಲದೇ "ಅಪಾಸೋಮಮಮೃತಾ ಅಭೂಮ" ಎಂಬಲ್ಲಿ ಕರ್ಮವೇ ಮುಕ್ತಿಸಾಧನವೆಂದು ಹೇಳಿರುವುದಲ್ಲಾ ? ಎಂದರೆ ಪ್ರಮಾಣದಿಂದಲೇ ಉತ್ತರಿಸುವರು ಆಚಾರ್ಯರು-

**ಜ್ಞಾನಭಕ್ತೀ ವಿನಾನ್ಯೈವ ಮುಕ್ತಿಃ ಕಸ್ಯಾಪಿ ವಿದ್ಯತೇ ।**
**ತಯೋರೇಕತರೇಣಾಪಿ ವಿಷ್ಣುಗೇನೋಭಯಂ ವಿನಾ ॥**
**ಏವಮಪ್ಯೇತಯೋರೇಕಭಾವೇಽನ್ಯನಿಯತೇರ್ಧ್ರುವಮ್ ॥**
**ಏಕೇನಾಪಿ ಭವೇನ್ಮುಕ್ತಿಸ್ತದರ್ಥಂ ತ್ವನ್ಯಸಾಧನಂ । ಇತಿ ಹರಿವಂಶೇಷು ।**

ವಿಷ್ಣುವಿಷಯಕವಾದ ಜ್ಞಾನ ಮತ್ತು ಭಕ್ತಿಯೆರಡೂ ಇಲ್ಲದೆ ಯಾರಿಗೂ ಮುಕ್ತಿಯಾಗುವುದಿಲ್ಲ. ಇವೆರಡರಲ್ಲಿ ಯಾವ ಒಂದರಿಂದಲೂ ಆಗುವುದಿಲ್ಲ ಎರಡೂ ಸೇರಿದರೆನೇ ಮುಕ್ತಿಯಾಗುವುದು. ಹೀಗಿದ್ದರೂ ಅಪರೋಕ್ಷ-ಜ್ಞಾನವಿಲ್ಲದೆ ಮೋಕ್ಷ ಜನಕ ಭಕ್ತಿ ಬರಲಾರದು. ಭಕ್ತಿಯಿಲ್ಲದೇ ಅಪರೋಕ್ಷ ಜ್ಞಾನವಾಗಲಾರದು. ಆದ್ದರಿಂದ ಒಂದಿದ್ದರೆ ಇನ್ನೊಂದು ಇದ್ದೆ ಇರುವದು ಎಂಬ ಅಭಿಪ್ರಾಯದಿಂದ, ಒಂದರಿಂದ ಮುಕ್ತಿಯಾಗುವುದು ಎಂದು ಹೇಳುವುದು ಯುಕ್ತವೇ ಆಗಿದೆ. ಕರ್ಮವು ಜ್ಞಾನಭಕ್ತಿದ್ವಾರಾ ಮುಕ್ತಿಸಾಧನ ಎಂಬ ಅಭಿಪ್ರಾಯದಿಂದ ಆ ವಾಕ್ಯವು ಉಪಪನ್ನವೆಂದರ್ಥ. ॥೩೦॥

ಮುಕ್ತಿಯಲ್ಲಿ ಸಿಗುವ ವಿವಿಧಫಲ ಸಾಧನವೆಂದು ಅನೇಕ ವಿಲಕ್ಷಣ ಗುಣಗಳ ಉಪಾಸನೆ ಶಾಸ್ತ್ರದಲ್ಲಿ ಹೇಳಿದೆ. ಒಬ್ಬನೇ ಭಗವಂತನಿಗೆ ವಿಲಕ್ಷಣ ಅನೇಕ ಗುಣ ಇರಲು ಹೇಗೆ ಸಾಧ್ಯ? ಅಂದ ಮೇಲೆ ಭಗವಂತನ ಜ್ಞಾನವೇ ಮೋಕ್ಷಸಾಧನ ಎಂದು

ಹೇಳಿದ್ದು ಹೇಗೆ ಯುಕ್ತವಾಗುವುದು. ಎಂದರೆ ಒಬ್ಬನಿಗೇನೆ ನಾನಾವಿಧ ಫಲಜನಕ ಗುಣಗಳು ಇರುವುದು ಉಪಪನ್ನವೆಂದು ದೃಷ್ಟಾಂತದಿಂದ ತಿಳಿಸುವರು –

**ಯಥೇಂದ್ರಿಯೈಃ ಪೃಥಕ್‌ಚಾರೈರರ್ಥೋ ಬಹುಗುಣಾಶ್ರಯಃ ।**
**ಏಕೋ ನಾನೇಯತೇ ತದ್ವದ್ ಭಗವಾನ್ ಶಾಸ್ತ್ರವರ್ತ್ಮಭಿಃ ॥೩೩॥**

ಪೃಥಕ್ ಚಾರೈಃ=ಬೇರೆ ಬೇರೆ ವಿಷಯವನ್ನು ಗ್ರಹಿಸುವ ಇಂದ್ರಿಯೈಃ= ಚಕ್ಷುರಾದಿ ಇಂದ್ರಿಯಗಳಿಂದ ಬಹುಗುಣಾಶ್ರಯಃ=ಅನೇಕ ಗುಣಗಳಿಗೆ ಆಶ್ರಯವಾದ ಅರ್ಥಃ=ಬೆಲ್ಲ ಮುಂತಾದವು ಏಕಃ=ಒಂದೇ ನಾನಾ ಈಯತೇ= ಬೇರೆ ಬೇರೆ ಗುಣವುಳ್ಳದ್ದೆಂದು ತಿಳಿಯುವುದು. ಅಂದರೆ ಕಣ್ಣಿನಿಂದ ಕೆಂಪು ಎಂದು, ತ್ವಗಿಂದ್ರಿಯದಿಂದ ಅನುಷ್ಣಾಶೀತವೆಂದು, ನಾಲಿಗೆಯಿಂದ ಸಿಹಿಯೆಂದು, ಮೂಗಿನಿಂದ ಗಂಧವುಳ್ಳದ್ದೆಂದು, ಕೈಯಿಂದ ಭಾರವೆಂದು ತಿಳಿಯುವುದು ತದ್ವತ್=ಹಾಗೆಯೇ ಭಗವಾನ್=ಶ್ರೀಹರಿಯು ಶಾಸ್ತ್ರವರ್ತ್ಮಭಿಃ=ಮುಕ್ತಿಯಲ್ಲಿರುವ ನಾನಾವಿಧಫಲ ಕೊಡುವ ಗುಣಗಳನ್ನು ಹೇಳುವ ಶಾಸ್ತ್ರಮಾರ್ಗದಿಂದ ಆ ಆ ಗುಣವಿಶಿಷ್ಟನೆಂದು ತಿಳಿಯುವನು. ॥೩೩॥

ಭಗವಂತನ ಜ್ಞಾನಕ್ಕಾಗಿಯೇ ಕರ್ಮಾದಿಗಳನ್ನು ಹೇಳುವರು ಎಂದು ಹೇಳಿದ್ದನ್ನು ವಿವರಿಸುತ್ತ ಅಪರೋಕ್ಷಜ್ಞಾನ ಸಾಧನಗಳನ್ನು ಹೇಳುವರು –

**ಕ್ರಿಯಯಾ ಕ್ರತುಭಿರ್ದಾನೈಸ್ತಪಃಸ್ವಾಧ್ಯಾಯದರ್ಶನೈಃ ।**
**ಆತ್ಮೇಂದ್ರಿಯಜಯೇನಾಪಿ ಸಂನ್ಯಾಸೇನ ಚ ಕರ್ಮಣಾಂ ॥೩೪॥**

**ಯೋಗೇನ ವಿವಿಧಾಂಶೇನ ಭಕ್ತಿಯೋಗೇನ ಚೈವ ಹಿ ।**
**ಧರ್ಮೇಣೋಭಯಚಿಹ್ನೇನ ಯಃ ಪ್ರವೃತ್ತಿನಿವೃತ್ತಿಮಾನ್ ॥೩೫॥**

**ಆತ್ಮತತ್ತ್ವಾವಬೋಧೇನ ವೈರಾಗ್ಯೇಣ ದೃಢೇನ ಚ ।**
**ಈಯತೇ ಭಗವಾನೇಭಿಃ ಸಗುಣೋ ನಿರ್ಗುಣಃ ಸ್ವದೃಕ್ ॥೩೬॥**

ಕ್ರಿಯಾಯಾ=ನಿತ್ಯನೈಮಿತ್ತಕವಾದ ಸಂಧ್ಯಾವಂದನೆ ಶ್ರಾದ್ಧಾದಿಗಳಿಂದ ಕ್ರತುಭಿಃ= ಯಜ್ಞಯಾಗಾದಿಗಳಿಂದ ದಾನೈಃ=ವಿವಿಧ ದಾನಗಳನ್ನು ಮಾಡುವುದರಿಂದ ತಪಃ= ಕೃಚ್ಛ್ರಚಾಂದ್ರಾಯಣ ಮುಂತಾದ ಕಾಯಕ್ಲೇಶಗಳಿಂದ ಸ್ವಾಧ್ಯಾಯ=ವೇದಾಧ್ಯಯನ ದರ್ಶನೈಃ=ಭಗವಂತನ ಪ್ರತಿಮೆಗಳನ್ನು ನೋಡುವುದರಿಂದ ಆತ್ಮೇಂದ್ರಿಯಜಯೇನ =ಮನಸ್ಸು ಮತ್ತು ಇತರ ಇಂದ್ರಿಯಗಳನ್ನು ಗೆಲ್ಲುವುದರಿಂದ ಕರ್ಮಣಾಂ ಸಂನ್ಯಾಸೇನ=ಕಾಮ್ಯ ಮತ್ತು ನಿಷಿದ್ಧ ಕರ್ಮಗಳನ್ನು ಬಿಡುವುದರಿಂದಲೂ ಯೋಗೇನ

=ಧ್ಯಾನದಿಂದ ವಿವಿಧಾಂಶೇನ ಭಕ್ತಿಯೋಗೇನ=ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹದಿಂದ ಉಭಯಚಿಹ್ನೇನ=ಮೋಕ್ಷಮಾರ್ಗಪ್ರವರ್ತಕವಾದ ಸಂಸಾರದಲ್ಲಿ ವೈರಾಗ್ಯಜನಕವಾದ ಧರ್ಮೇಣ=ಹಿಂದೆ ಹೇಳಿದ ಕ್ರಿಯೆಗಳಿಂದುಂಟಾದ ಪುಣ್ಯವಿಶೇಷದಿಂದಲೂ ಯಃ=ಯಾವನು ಪ್ರವೃತ್ತಿ ನಿವೃತ್ತಿಮಾನ್=ಭಗವದು-ಪಾಸನೆಯಲ್ಲಿ ಪ್ರವೃತ್ತಿಯುಳ್ಳವನು ಹಿಂಸಾದಿಗಳಿಂದ ನಿವೃತ್ತಿಯುಳ್ಳವನೋ, ಅಂಥ ಅಧಿಕಾರಿಯಿಂದ ಆತ್ಮತತ್ವಾವಬೋಧೇನ=ಪರಮಾತ್ಮನ ನಿಜಸ್ವರೂಪವನ್ನು ತಿಳಿಯುವುದರಿಂದ ದೃಢೇನ ವೈರಾಗ್ಯೇಣ=ಬಲವಾದ ವೈರಾಗ್ಯದಿಂದಲೂ ಭಗವಾನ್=ಪರಮಾತ್ಮನು ಏಭಿಃ=ಮೇಲೆ ಹೇಳಿದ ಸಾಧನಗಳಿಂದ ಸಗುಣಃ=ಅಧಿ ಕಾರಿಯಿಂದ ಅಪೇಕ್ಷಿತ ಫಲಸಂಪಾದಕ ಗುಣಪೂರ್ಣನಾಗಿ ನಿರ್ಗುಣಃ= ಸತ್ವಾದಿಗುಣರಹಿತನಾಗಿ ಸ್ವದೃಕ್=ತನ್ನ ಭಕ್ತರನ್ನು ದಯೆಯಿಂದ ಕಾಣುವ ಭಗವಾನ್=ಶ್ರೀಹರಿಯು ಈಯತೇ=ಅಪರೋಕ್ಷವಾಗಿ ತಿಳಿಯಲ್ಪಡುವನು ಎಂದು ಭಾವ. ॥೩೪-೩೬॥

ಜ್ಞಾನಯೋಗವನ್ನು ಉಪಸಂಹಾರ ಮಾಡಿ ಜ್ಞಾನಕ್ಕೆ ಸಾಹಿತ್ಯವಿರಬೇಕೆಂದು ಹೇಳಿ ಭಕ್ತಿಸಾಧನಗಳನ್ನೂ ಹೇಳಿ ಈಗ ಭಕ್ತಿಯೋಗಾದಿಗಳ ಉಪಸಂಹಾರ ಮಾಡುವರು ಎರಡು ಶ್ಲೋಕಗಳಿಂದ-

**ಪ್ರಾವೋಚಂ ಭಕ್ತಿಯೋಗಸ್ಯ ಸ್ವರೂಪಂ ತೇ ಚತುರ್ವಿಧಮ್ ।**
**ಕಾಲಸ್ಯ ಚಾವ್ಯಕ್ತಗತೇರ್ಯೋಽಂತರ್ಧಾವತಿ ಜಂತುಷು ॥೨೭॥**

ತೇ=ನಿನಗೆ ಭಕ್ತಿಯೋಗಸ್ಯ=ಭಕ್ತಿ ಎಂಬ ಮೋಕ್ಷೋಪಾಯದ ಸ್ವರೂಪಂ= ಸ್ವರೂಪವನ್ನು ಚತುರ್ವಿಧಂ=ತ್ರಿಗುಣನಿರ್ಗುಣಭೇದದಿಂದ ನಾಲ್ಕು ವಿಧವಾಗಿ ಪ್ರಾವೋಚಂ=ಹೇಳಿದೆನು. ಯಃ=ಯಾವನು ಜಂತುಷು=ಪ್ರಾಣಿಗಳಲ್ಲಿ ಅಂತಃ ಧಾವತಿ=ಉತ್ಪತ್ತಿ ಮರಣಗಳನ್ನು ಮಾಡುವನೋ ತಸ್ಯ ಅವ್ಯಕ್ತಗತೇಃ=ತಿಳಿಯಲಾಗದ ಕಾಲಸ್ಯಚ=ಕಾಲದ ಸ್ವರೂಪವನ್ನೂ ಪ್ರಾವೋಚಂ=ಹೇಳಿದೆನು. ॥೩೩॥

**ಜೀವಸ್ಯ ಸಂಸೃತೀರ್ಬಹ್ವೀರವಿದ್ಯಾಕರ್ಮನಿರ್ಮಿತಾಃ ।**
**ಯಾಃ ಸ್ವಯಂ ಪ್ರವಿಶನ್ನಾತ್ಮಾ ನ ವೇದ ಗತಿಮಾತ್ಮನಃ ॥೩೮॥**

ಯಾಃ=ಯಾವ ಸಂಸೃತಿಗಳನ್ನು ಸ್ವಯಂ=ತಾನು ಪ್ರವಿಶನ್=ಪ್ರವೇಶ ಮಾಡಿ ಆತ್ಮಾ=ಜೀವನು ಆತ್ಮನಃ=ಪರಮಾತ್ಮನ ಗತಿಂ=ಸ್ಥಿತಿಯನ್ನು ಅಥವಾ ತನ್ನ ಗಮ್ಯವನ್ನು ನ ವೇದ=ತಿಳಿಯಲಾರನೋ ತಾಃ=ಅಂತಹ ಅವಿದ್ಯಾಕರ್ಮನಿರ್ಮಿತಾಃ=ಅಜ್ಞಾನ ಮತ್ತು ಪ್ರಾಚೀನಕರ್ಮಗಳಿಂದ ಉಂಟಾದ ಜೀವಸ್ಯ=ಜೀವರ ಬಹ್ವೀಃ=ಬಹುವಿಧ-ವಾದ ಸಂಸೃತೀಃ=ಸಂಸಾರಗಳನ್ನೂ ಪ್ರಾವೋಚಂ=ಹೇಳಿದೆನು. ॥೩೮॥

ಮೇಲೆ ಹೇಳಿದ ತತ್ವದ ಉಪದೇಶಕ್ಕೆ ಅಧಿಕಾರಿಗಳಲ್ಲದವರನ್ನು ಹೇಳುವನು -

**ನೈತತ್ ಖಲಾಯೋಪದಿಶೇನ್ನಾವಿನೀತಾಯ ಕರ್ಹಿಚಿತ್ ।**
**ನ ಸ್ತಬ್ಧಾಯ ನ ಭಿನ್ನಾಯ ನೈವ ಧರ್ಮಧ್ವಜಾಯ ಚ ॥೩೯॥**

**ನ ಲೋಲುಪಾಯೋಪದಿಶೇನ್ನ ಗೃಹಾರೂಢಚೇತಸೇ ।**
**ನಾಭಕ್ತಾಯ ಚ ಮೇ ಜಾತು ನ ಮದ್ಭಕ್ತದ್ವಿಷಾಮಪಿ ॥೪೦॥**

ಏತತ್=ಈ ತತ್ವವನ್ನು ಖಲಾಯ=ಪರೋಪದ್ರವ ಮಾಡುವ ದುರ್ಜನರಿಗೆ ಅವಿನೀತಾಯ=ವಿನಯವಿಲ್ಲದವನಿಗೆ ಸ್ತಬ್ಧಾಯ=ಗುರುವಿನ ಆಜ್ಞೆಯನ್ನು ಮೀರುವವನಿಗೆ ಭಿನ್ನಾಯ=ಅವೈಷ್ಣವಸಿದ್ಧಾಂತನಿಷ್ಠನಿಗೆ ಧರ್ಮಧ್ವಜಾಯ= ಡಾಂಭಿಕನಿಗೆ ಕರ್ಹಿಚಿತ್=ಯಾವ ಕಾಲಕ್ಕೂ ನ ಉಪದಿಶೇತ್=ಉಪದೇಶ ಮಾಡಬಾರದು. ॥೩೯॥

ಲೋಲುಪಾಯ=ವಿಷಯಾಭಿಲಾಷೆಯುಳ್ಳವನಿಗೆ ಗೃಹಾರೂಢಚೇತಸೇ= ಮನೆ ಮಡದಿಗಳಲ್ಲಿ ಆಸಕ್ತಮನಸ್ಕನಿಗೆ ಮೇ=ನನ್ನ ಅಭಕ್ತಾಯ=ಭಕ್ತನಲ್ಲದವನಿಗೆ ಮದ್ಭಕ್ತ-ದ್ವಿಷಾಂ ಅಪಿ=ನನ್ನ ಭಕ್ತರ ದ್ವೇಷ ಮಾಡುವನಿಗೆ ಜಾತು=ಯಾವ ಕಾಲದಲ್ಲೂ ಪ್ರಾಸಂಗಿಕವಾಗಿಯೂ ನ ಉಪದಿಶೇತ್=ಉಪದೇಶ ಮಾಡಬಾರದು. ॥೪೦॥

ಅಧಿಕಾರಿಗಳನ್ನು ಹೇಳುವರು -

**ಶ್ರದ್ಧಧಾನಾಯ ಭಕ್ತಾಯ ವಿನೀತಾಯಾನಸೂಯವೇ ।**
**ಭೂತೇಷು ಕೃತಮೈತ್ರಾಯ ಶುಶ್ರೂಷಾಭಿರತಾಯ ಚ ॥೪೧॥**

**ಬಹಿರ್ಜಾತವಿರಾಗಾಯ ಶಾಂತಚಿತ್ತಾಯ ದೀಯತೇ ।**
**ನಿರ್ಮತ್ಸರಾಯ ಶುಚಯೇ ಯಸ್ಯಾಹಂ ಪ್ರೇಯಸಾಂ ಪ್ರಿಯಃ ॥೪೨॥**

ಶ್ರದ್ಧಧಾನಾಯ=ಆಸ್ತಿಕ್ಯ ಬುದ್ಧಿಯುಳ್ಳವನಿಗೆ ಭಕ್ತಾಯ=ಭಕ್ತನಿಗೆ ವಿನೀತಾಯ= ವಿನಯವಿದ್ದವನಿಗೆ ಅನಸೂಯವೇ=ಗುಣಗಳನ್ನು ದೋಷವೆಂದು ತಿಳಿಯದವಗೆ (ಅಸೂಯೆ ಪಡದವನಿಗೆ) ಭೂತೇಷು ಕೃತಮೈತ್ರಾಯ=ಪ್ರಾಣಿ ದಯೆಯುಳ್ಳವ-ನಿಗೆ ಸಜ್ಜನರ ಸ್ನೇಹ ಮಾಡಿದವನಿಗೆ ಶುಶ್ರೂಷಾಭಿರತಾಯ=ಸೇವಾ ಮನೋಭಾವ-ವುಳ್ಳವಗೆ ॥೪೧॥

ಬಹಿಃ ಜಾತವಿರಾಗಾಯ=ಇತರ ಐಹಿಕ ಆಮುಷ್ಮಿಕ ವಿಷಯದಲ್ಲಿ ವಿರಕ್ತನಿಗೆ ಶಾಂತಚಿತ್ತಾಯ=ಭಗವನ್ನಿಷ್ಠ ಮನಸಿದ್ದವನಿಗೆ ನಿರ್ಮತ್ಸರಾಯ=ಮಾತ್ಸರ್ಯ-

ವಿಲ್ಲದವನಿಗೆ ಶುಚಯೇ=ಶುದ್ಧನಾದವಗೆ ಯಸ್ಯ=ಯಾವನಿಗೆ ಅಹಂ=ನಾನು ಪ್ರೇಯಸಾಂ ಪ್ರಿಯಃ=ಅತ್ಯಂತ ಪ್ರಿಯರಾದ ಸತಿಸುತರಿಗಿಂತ ಪ್ರಿಯನಾಗಿರು- ವೆನೋ ದೀಯತೇ=ದಾನ ಮಾಡುವನಿಗೆ ಉಪದೀಶೇತ್= ಉಪದೇಶ ಮಾಡಬೇಕು ॥೪೨॥

ಯ ಇದಂ ಶ್ರುಣುಯಾದಂಬ ಶ್ರದ್ಧಯಾ ಪುರುಷಃ ಸಕೃತ್ ।
ಯೋ ವಾಽಭಿಧತ್ತೇ ಮಚ್ಚಿತ್ತಃ ಸ ಹ್ಯೇತಿ ಪದವೀಂ ಚ ಮೇ ॥೪೩॥

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ತ್ರಯತ್ರಿಂಶೋಽಧ್ಯಾಯಃ ॥*

ಯಃ=ಯಾರು ಇದಂ=ನಮ್ಮ ಸಂವಾದವನ್ನು ಸಕೃತ್=ಒಮ್ಮೆ ಅಥವಾ ಸುಕೃತ್ ಪುರುಷಃ=ಪುಣ್ಯವಂತನು ಶ್ರದ್ಧಯಾ=ಶ್ರದ್ಧೆಯಿಂದ ಶ್ರುಣುಯಾತ್=ಕೇಳುವನೋ ಯಃ ಅಭಿದತ್ತೇ=ಹೇಳುವನೋ ಸಃ=ಅವನು ಮಚ್ಚಿತ್ತಃಸನ್=ನನ್ನಲ್ಲಿ ಮನಸಿಟ್ಟವನಾಗಿ ಹಿ=ಯಾವ ಕಾರಣ ಮೇ=ನನ್ನ ಪದವೀಂ=ಪದವಿಯನ್ನು ಏತಿ= ಹೊಂದುವನು ಆದ ಕಾರಣ ಶ್ರವಣಾದಿಗಳನ್ನು ಮಾಡಬೇಕು ಎಂದು ಭಾವ. ॥೪೩॥

*ಇಲ್ಲಿಗೆ ಮೂವತ್ಮೂರನೆಯ ಅಧ್ಯಾಯವು ಮುಗಿಯಿತು.*

# ಮೂವತ್ತೆರಡನೆಯ ಅಧ್ಯಾಯದ ತಾತ್ಪರ್ಯ

ಕಪಿಲ - ಪ್ರವೃತ್ತಿಕರ್ಮ ಮಾಡುವವನಿಗೆ ಆಗುವ ಫಲವನ್ನು ಹೇಳುತ್ತೇನೆ ಕೇಳು. ಮನೆಯಲ್ಲಿದ್ದುಕೊಂಡು ದೇವಪೂಜೆ, ಪಿತೃಶ್ರಾದ್ಧ ಮೊದಲಾದ ಕರ್ಮಗಳನ್ನು ಮಾಡುತ್ತ ಅದರಿಂದ ಧರ್ಮಾರ್ಥ ಕಾಮಗಳನ್ನು ಹೊಂದುವವನಾಗಿ ತನ್ನ ಸಂತತಿಯವರೂ ಅವುಗಳನ್ನು ಮಾಡುವಂತೆ ಉಪದೇಶಿಸಿ ವಿಷಯಸುಖ-ಗಳಲ್ಲಿಯೇ ಆಸಕ್ತನಾಗಿ ಶ್ರದ್ಧೆಯಿಂದ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸುವವನು 'ಪಿತೃದೇವವ್ರತ'ನೆನಿಸಿಕೊಳ್ಳುವನು. ಇವನಿಗೆ ಮೋಕ್ಷಕ್ಕೆ ಕಾರಣವಾದ ಭಗವದ್ಭಕ್ತಿ-ಯಿರುವುದಿಲ್ಲ. ಅಂದರೆ ಇಂತಹವರಲ್ಲಿ ಅಲ್ಪಸ್ವಲ್ಪ ಭಗವದ್ಭಕ್ತಿ ಇರುವವರು, ಭಗವದ್ಭಕ್ತಿಯೇ ಇಲ್ಲದವರೆಂದು ಎರಡು ಬಗೆ. ಅಲ್ಪ ಸ್ವಲ್ಪ ಭಗವದ್ಭಕ್ತಿಯಿದ್ದು ಯಜ್ಞ ಯಾಗಾದಿಕರ್ಮಗಳನ್ನು ಮಾಡಿದವರು ಅವರ ಅಪೇಕ್ಷೆಯಂತೆ ಕೆಲವು ಕಾಲ ಸ್ವರ್ಗಸುಖವನ್ನು ಅನುಭವಿಸಲು ಧೂಮಾದಿ ಮಾರ್ಗದಿಂದ ಚಂದ್ರನ ಅಧಿಕಾರಕ್ಕೆ ಒಳಪಟ್ಟ ಸ್ವರ್ಗಪ್ರದೇಶವನ್ನು ಸೇರಿ ಪುಣ್ಯದ ಫಲವನ್ನು ಅನುಭವಿಸಿ ಉಳಿದ ಸ್ವಲ್ಪ ಪುಣ್ಯಾನುಭವಕ್ಕಾಗಿ ಮತ್ತೆ ಭೂಲೋಕಕ್ಕೆ ಬರುವರು. ಭಗವದ್ಭಕ್ತಿಯೇ ಇಲ್ಲದವರು ಕೆಲಕಾಲ ಸ್ವರ್ಗದ ಏಕದೇಶದಲ್ಲಿದ್ದು ಪಾಪಫಲಾನುಭವಕ್ಕಾಗಿ ನರಕಕ್ಕೆ ಹೋಗುವರು. ಹೀಗೆ ಪ್ರವೃತ್ತಿಕರ್ಮನಿರತರಾದ ಗೃಹಸ್ಥರು ಹೊಂದುವ ಸ್ವರ್ಗಾದಿಲೋಕಗಳು ಶಾಶ್ವತವಾದವುಗಳಲ್ಲ. ಶೇಷಾಸನನಾದ ಶ್ರೀಹರಿಯು ಶೇಷಶಾಯಿಯಾಗಿ ಮಲಗಿದಾಗ (ದಿನಪ್ರಳಯದಲ್ಲಿ) ಈ ಲೋಕಗಳು ನಾಶವಾಗುವುವು.

ಆದರೆ ನಿವೃತ್ತಿಕರ್ಮನಿರತರಾದ ಭಗವದ್ಭಕ್ತರ ರೀತಿಯೇ ಬೇರೆ. ಇವರು ಜ್ಞಾನಿಗಳು, ವಿಷಯಾಸಕ್ತಿರಹಿತರು, ನಿರ್ಮಲಚಿತ್ತರು, ಶ್ರೀಹರಿಯಲ್ಲಿಯೇ ನೆಟ್ಟ ಮನಸ್ಸುಳ್ಳವರು, ಎಲ್ಲ ಕರ್ಮಗಳನ್ನೂ ಶ್ರೀಹರಿಗೇ ಸಮರ್ಪಿಸುವವರು ಧರ್ಮಾರ್ಥಕಾಮಗಳಿಗಾಗಿ ತಮ್ಮ ಧರ್ಮಗಳನ್ನು ಆಚರಿಸುವವರಲ್ಲ, ನಾನು ನನ್ನದು ಎಂಬ ಸ್ವಾತಂತ್ರ್ಯಾಭಿಮಾನರಹಿತರು, ಇವರು ಆಚರಿಸುವ ಧರ್ಮವೇ ಭಗವದ್ಭಕ್ತಿ. ಹೀಗೆ ಶುದ್ಧಾಂತಃಕರಣರಾದ ಇವರು ಅರ್ಚಿರಾದಿಮಾರ್ಗದಿಂದ 'ಮಾನವ' ಪುರುಷನನ್ನು ಹೊಂದಿ ಅಲ್ಲಿಂದ ಶ್ರೀಹರಿಯನ್ನು ಹೊಂದುವರು. ಆ ಶ್ರೀಹರಿಯು ಸರ್ವೇಶನು, ಮುಕ್ತಾಮುಕ್ತಪ್ರಪಂಚನಿಯಾಮಕನು, ಸರ್ವಜ್ಞನು

ಮತ್ತು ಈ ಜಗತ್ತಿನ ಸೃಷ್ಟಿ ಸ್ಥಿತಿ, ಸಂಹಾರ ಇತ್ಯಾದಿಗಳಿಗೆ ಕಾರಣನು. ಪ್ರತೀಕಾಲಂಬನರು ಮತ್ತು ಅಪ್ರತೀಕಾಲಂಬನರೆಂಬ ಎರಡು ಬಗೆಯ ಈ ಭಕ್ತರೂ ಶ್ರೀಹರಿಯನ್ನು ಸೇರುವ ಮುಂಚೆ ಚತುರ್ಮುಖಬ್ರಹ್ಮದೇವರನ್ನು ಸೇರಿ ದ್ವಿಪರಾರ್ಧದ ಕೊನೆಯಲ್ಲಿ ಬ್ರಹ್ಮಪ್ರಳಯವಾಗುವವರೆಗೂ ಆ ಸತ್ಯಲೋಕದಲ್ಲಿ ಶ್ರೀಹರಿಯನ್ನೇ ಧ್ಯಾನಮಾಡುತ್ತಾ ವಾಸಿಸುವರು.

ಬ್ರಹ್ಮದೇವರು ಅಧಿಕಾರಕಾಲಕ್ಕೆ ಪರಕಾಲವೆಂದು ಹೆಸರು. ಇದನ್ನು ಎರಡು ಅರ್ಧಮಾಡಿ ಹೇಳುವರು. ಆದ್ದರಿಂದ ಇದು ದ್ವಿಪರಾರ್ಧಕಾಲವೆನಿಸುವುದು. ಆಗ ಜೀವೋತ್ತಮರಾದ ಬ್ರಹ್ಮದೇವರು ಸತ್ವರಜಸ್ತಮೋಗುಣಗಳನ್ನು ಸ್ವೀಕರಿಸಿ ಸೃಷ್ಟಿ ಮೊದಲಾದ ಕಾರ್ಯದಲ್ಲಿ ಆಸಕ್ತರಾಗಿರುವರು. ಈ ದ್ವಿಪರಾರ್ಧದ ಕೊನೆಯಲ್ಲಿ ಅವರು ಶ್ರೀಹರಿಯ ಇಚ್ಛೆಯಂತೆ ತಾವು ಸೃಷ್ಟಿಸಿದ ಜಗತ್ತನ್ನು ಸಂಹರಿಸಲು ಇಚ್ಛಿಸುವರು. ಆಗ ಪಂಚಭೂತಾಭಿಮಾನಿಗಳೂ, ಇಂದ್ರಿಯಾಭಿಮಾನಿಗಳೂ, ಮನೋಭಿಮಾನಿಗಳೂ, ಶಬ್ದಾದಿ ಅರ್ಥಾಭಿಮಾನಿಗಳೂ, ಅಹಂಕಾರ ತತ್ವಾಭಿಮಾನಿಗಳೂ ತಮ್ಮ ತಮ್ಮ ಬಿಂಬರಲ್ಲಿ ಪ್ರವೇಶಿಸಿ ಗರುಡಮಾರ್ಗಗಳಿಂದ ಬ್ರಹ್ಮದೇವರನ್ನು ಪ್ರವೇಶಿಸುವರು. (ತತ್ವಗಳು ತಮ್ಮ ತಮ್ಮ ಕಾರಣಗಳಲ್ಲಿ ಲಯವಾಗುವುವು.) ಹೀಗೆ ತಮ್ಮನ್ನು ಪ್ರವೇಶಿಸಿದ ದೇವತೆಗಳೊಡನೆ ಬ್ರಹ್ಮದೇವರು ಲಕ್ಷ್ಮಿಯನ್ನು ಪ್ರವೇಶಿಸಿ ತನ್ಮೂಲಕ ಶ್ರೀಹರಿಯನ್ನು ಪ್ರವೇಶಿಸುವರು. ಹೀಗೆ ಶ್ರೀಹರಿಯನ್ನು ಸೇರಿದ ಎಲ್ಲ ಯೋಗಿಗಳೂ ವಾಯು ಮತ್ತು ಮನಸ್ಸುಗಳನ್ನು ಜಯಿಸಿ ವೈರಾಗ್ಯ ಯುಕ್ತರಾದವರೇ. ಬ್ರಹ್ಮಪರ್ಯಂತರಾದ ಈ ಎಲ್ಲ ಜೀವರೂ ಶ್ರೀಹರಿಯನ್ನು ಪ್ರವೇಶಿಸಿದ್ದರೂ 'ತಾವು ಜೀವರು' ಎಂಬ ಅಭಿಮಾನವನ್ನು ಬಿಟ್ಟಿರುವುದಿಲ್ಲ. ಅವರ ಲಿಂಗಶರೀಗಳು ಮಾತ್ರ ಹೋಗಿರುವುವು. ಶ್ರೀಹರಿಯು ನಿತ್ಯಮುಕ್ತನೂ, ಪೂರ್ಣಗುಣನೂ, ಪುರಾತನನೂ, ಸರ್ವೋತ್ತಮನೂ ಆದ್ದರಿಂದ ಅವರಿಗೆಲ್ಲ ಆಶ್ರಯನು. ಅವನು ಮತ್ತೊಬ್ಬರನ್ನು ಪ್ರವೇಶಿಸಬೇಕಾಗಿಲ್ಲ. ಸ್ಥಾವರ ಜಂಗಮ ಜೀವರಲ್ಲಿಉತ್ತಮರಾದ ಬ್ರಹ್ಮದೇವರು ಮುಕ್ತಿಯೋಗ್ಯರಾದ ಮನುಷ್ಯೋತ್ತಮರಿಂದ ಹಿಡಿದು ಶೇಷ-ಗರುಡಪರ್ಯಂತರಾದ ಸಾಧನಪೂರ್ಣ-ರಾದ ಜ್ಞಾನಿಗಳ ಸಂಗಡ ಸನತ್ಕುಮಾರ ಮೊದಲಾದ ಯೋಗೀಶ್ವರರ ಸಂಗಡ ಸೇರಿ ಶ್ರೀಹರಿಯನ್ನು ಪ್ರವೇಶಿಸಿ ಸಾಯುಜ್ಯ ಮೊದಲಾದ ಮೋಕ್ಷವನ್ನು ಹೊಂದುವರು. ಹೀಗೆ ಶ್ರೀಹರಿಯನ್ನು ಸೇರಬೇಕಾದರೆ ಇವರು ಜೀವೇಶಭೇದ, ಜೀವಜೀವಭೇದ, ಜೀವಜಡಭೇದ, ಜಡೇಶಭೇದ ಮತ್ತು ಜಡಜಡಭೇದ ಎಂಬ ಐದು ಬಗೆಯ ಪ್ರಮಾತ್ಮಕ ಭೇದಜ್ಞಾನವನ್ನೂ, ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ

ಪೂರ್ಣಜ್ಞಾನವನ್ನೂ, ನಿಷ್ಕಾಮನಯಾ ಮಾಡುವ ಕರ್ಮಗಳ ಆಚರಣೆಯನ್ನೂ ಹೊಂದಿರುವರು. ಶ್ರೀಹರಿಯು ಕರ್ತಾರನಾದ್ದರಿಂದ ಸಗುಣನೂ, ಸ್ವಾಭಾವಿಕವಾಗಿ ಗುಣಪೂರ್ಣನೂ, ಸಚ್ಚಿದಾನಂದಸ್ವರೂಪನೂ ಕ್ಷರಾಕ್ಷರಪುರುಷರಿಗಿಂತ ಉತ್ತಮನೂ ಆದ್ದರಿಂದ ಇವರಿಗೆ ಸಾಯುಜ್ಯಾದಿ ಮೋಕ್ಷಪ್ರದನಾಗಿರುವನು.

ಹೀಗೆ ಸಾಯುಜ್ಯ ಮೊದಲಾದ ಮೋಕ್ಷವನ್ನು ಹೊಂದಿದ ಬ್ರಹ್ಮಾದಿ ಜೀವರು ಮತ್ತೆ ಶ್ರೀಹರಿಯ ಗುಣವೈಷಮ್ಯರೂಪವಾದ ಸೃಷ್ಟಿಯಲ್ಲಿ ತೊಡಗಿದಾಗ ಶ್ರೀಹರಿಯ ಉದರದಿಂದ ಹೊರಗೆ ಬಂದು ಅಪ್ರಾಕೃತಗಳಾದ ಶ್ವೇತದ್ವೀಪ ಮೊದಲಾದ ಶ್ರೀಹರಿಯ ಸ್ಥಾನಗಳಲ್ಲಿ ಆನಂದಪೂರ್ಣರಾಗಿ ವಿಹರಿಸುವರು. ಆಗಲೂ ಹಿಂದೆ ಸಂಸಾರಾವಸ್ಥೆಯಲ್ಲಿದ್ದಂತೆಯೇ ಪರಸ್ಪರ ಭಿನ್ನರೂ, ತಾರತಮ್ಯವಿಶಿಷ್ಟರೂ ಆಗಿರುವರು. ಶ್ರೀಹರಿಯ ಲೋಕಗಳಲ್ಲಿ ಶ್ರೀಹರಿಯಿಂದ ಅನುಗೃಹೀತರಾದ ಇವರು ತಮ್ಮ ಸಾಧನೆಯ ಫಲವಾಗಿ ಅಣಿಮಾ ಮೊದಲಾದ ಸಮಸ್ತ ಯೋಗಸಿದ್ಧಿರೂಪಗಳಾದ ಭೋಗಸಮೂಹಗಳನ್ನು ಅನುಭವಿಸುವರು. ಮತ್ತೆ ಪ್ರಳಯ ಬಂದಾಗ ಸ್ವೋತ್ತಮರಲ್ಲಿ ಪ್ರವೇಶಿಸುವ ಮೂಲಕ ಶ್ರೀಹರಿಯ ಉದರವನ್ನು ಪ್ರವೇಶಿಸುವರು. ಹೀಗೆ ಶ್ರೀಹರಿಯ ಉದರಪ್ರವೇಶ ಮತ್ತು ಉದರದಿಂದ ಹೊರಬರುವಿಕೆಗಳು ಪ್ರತಿಪ್ರಳಯ, ಸೃಷ್ಟಿಕಾಲಗಳಲ್ಲಿ ಸಂತತವಾಗಿ ಮುಕ್ತರಿಗೂ ಆಗುತ್ತಲೇ ಇರುವುವು.

ಹೀಗೆ ಶ್ರೀಹರಿಯನ್ನು ಉಪಾಸಿಸುವುದರಿಂದ ನಿತ್ಯಾನಂದಾನುಭವರೂಪ ಮೋಕ್ಷವು ದೊರಕುವುದರಿಂದ, ಮಂಗಳಕರಳೇ, ನೀನೂ ಶ್ರೀಹರಿಯನ್ನು 'ನನ್ನ ಸ್ವಾಮಿ ಅವನು, ನಾನವನ ಕಿಂಕರಳು' ಎಂಬ ಭಾವಯುಕ್ತವಾದ ಭಕ್ತಿಯಿಂದ ಶರಣುಹೊಂದು. ಅವನ ಮಹಿಮೆಗಳು ಸರ್ವವೇದಾದಿ ಶಾಸ್ತ್ರಗಳಿಂದ ಪ್ರತಿಪಾದಿತವಾಗಿವೆ. ಅವನು ಎಲ್ಲ ಪ್ರಾಣಿಗಳ ಹೃತ್ಕಮಲಗಳಲ್ಲಿ ಮನೆಮಾಡಿ-ಕೊಂಡಿರುವನು. ಆ ಬಿಂಬರೂಪನನ್ನೇ ಭಕ್ತಿಯಿಂದ ಉಪಾಸಿಸು.

ಮನುಷ್ಯರಲ್ಲಿ ಕೆಲವರು ಸ್ವರ್ಗಾದಿಗಳ ಅಪೇಕ್ಷೆಯಿಂದ ಯಜ್ಞ ಮೊದಲಾದ ಕಾರ್ಯಗಳಲ್ಲಿ ಶ್ರದ್ಧಾಯುಕ್ತರಾಗಿರುತ್ತಾರೆ. ವಿಹಿತವಾದ ಯಾಗ ಮೊದಲಾದುವನ್ನೂ ನಿತ್ಯಕರ್ಮಗಳಾದ ಸಂಧ್ಯಾವಂದನಾದಿಗಳನ್ನೂ ಸ್ವರ್ಗಪ್ರಾಪ್ತಿಗಾಗಿಯೇ ಸ್ವಲ್ಪವೂ ನ್ಯೂನತೆಯಿಲ್ಲದಂತೆ ಮಾಡುತ್ತಾರೆ. ಮನಸ್ಸು ರಾಜಸಗುಣಪೂರ್ಣಗಿರುತ್ತದೆ; ವಿಷಯಲೋಲುಪರಾಗಿರುತ್ತಾರೆ; ಅಜಿತೇಂದ್ರಿಯರು; ಐಹಿಕ ಸುಖಾಸಕ್ತರಾಗಿರು-ತ್ತಾರೆ. ಪಿತೃಗಳನ್ನು ಯಾವಾಗಲೂ ಪೂಜಿಸುತ್ತಾರೆ. ಹೀಗೆ ಧರ್ಮಿಷ್ಠರಂತೆ ಕಂಡುಬಂದರೂ, ಅತ್ಯುತ್ತಮ ಜ್ಞಾನಿಯೂ, ಕಥನೀಯಪರಾಕ್ರಮನೂ,

ದೈತ್ಯಸೂದನನೂ ಆದ ಶ್ರೀಹರಿಯ ಕಥಾಶ್ರವಣ ಮನನಾದಿಗಳಲ್ಲಿ ಇವರಿಗೆ ಆಸಕ್ತಿ ಇರುವುದಿಲ್ಲ. ಇಂತಹ ಜನರು ಮೋಕ್ಷಕ್ಕೆ ಅನರ್ಹರು. ಹೀಗೆ ಶ್ರೀಹರಿಯ ಅಮೃತಮಯವಾದ ಕಥೆಯನ್ನು ಬಿಟ್ಟು ಮೋಕ್ಷಸಾಧನಗಳಿಲ್ಲದ ಕಾವ್ಯ ನಾಟಕ ಕತೆಗಳಲ್ಲಿಯೇ ಆಸಕ್ತರಾದ ಇವರು ಹರಿಯ ಇಚ್ಛೆಯಂತೆ ದೇಹಾವಸಾನವಾದಾಗ ಹಂದಿ, ನಾಯಿ ಮೊದಲಾದುವು ಅಮೇಧ್ಯವನ್ನೇ ತಿನ್ನುವಂತೆ ಅಸಹ್ಯವಾದ ನರಕವನ್ನೇ ಹೊಂದುವರು. ಶ್ರೀಹರಿಯ ಭಕ್ತರಲ್ಲದವರು ಮಾಡುವ ಧರ್ಮವು ಧರ್ಮವಲ್ಲ. ಇವರು ತಮೋಯೋಗ್ಯರು.

ಶ್ರೀಹರಿಯಲ್ಲಿ ಅಲ್ಪಸ್ವಲ್ಪ ಭಕ್ತಿಯಿಟ್ಟು ಈ ಮೇಲೆ ಹೇಳಿದ ಧರ್ಮಕಾರ್ಯಗಳನ್ನು ಮಾಡುವವರು ಸತ್ತಮೇಲೆ ದಕ್ಷಿಣಾನಯನ ಮಾರ್ಗದಿಂದ ಅರ್ಯಮರೆನಿಸಿದ ಪಿತೃಗಳಿಗೆ ಅಧಿಪತಿಯಾದ ಯಮನ ಲೋಕವಾದ ಪಿತೃಲೋಕಕ್ಕೆ ಹೋಗುವರು. ಅಲ್ಲಿ ಹೆಚ್ಚು ಕಾಲವಿರುವುದಿಲ್ಲ. ಮತ್ತೆ ತಮ್ಮ ಮಕ್ಕಳ ಹೊಟ್ಟೆಯಲ್ಲಿ ಜನಿಸುವರು. ಷೋಡಶ ಸಂಸ್ಕಾರಗಳನ್ನು ಮಾಡಿಕೊಂಡು ಧರ್ಮಕಾರ್ಯಗಳನ್ನು ಮಾಡಿ ಆ ಪುಣ್ಯಫಲವಾಗಿ ಸ್ವರ್ಗದಲ್ಲಿ ಕೆಲಕಾಲವಿದ್ದು ಪುಣ್ಯ ಕ್ಷೀಣವಾದಕೂಡಲೇ ದೇವತೆಗಳಿಂದ ಸ್ವರ್ಗದಿಂದ ಹೊರಗೆ ಹಾಕಲ್ಪಟ್ಟವರಾಗಿ ಮತ್ತೆ ಮನುಷ್ಯಲೋಕದಲ್ಲಿಯೇ ಜನಿಸುವರು. ಹೀಗೆ ಸ್ವರ್ಗ, ಭೂಮಿ, ಅನಿತ್ಯ ನರಕಗಳನ್ನು ಸುತ್ತುತ್ತಲೇ ಇರುವರು.

ತಾಯಿ, ಹೀಗೆ ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಮೂರುಬಗೆಯ ಜೀವರಿರುವರು.

ಶ್ರೀಹರಿಯಲ್ಲಿ ಭಕ್ತಿಮಾಡದೆ ಮೋಕ್ಷವಿಲ್ಲವಾಗಿ, ತಾಯಿ, ಮುಕ್ತಿಯೋಗ್ಯಳಾದ ನೀನು ಸರ್ವಸೇವ್ಯನೂ ಸರ್ವೋತ್ತಮನೂ ಆದ ವಿಷ್ಣುವನ್ನೇ ಲಕ್ಷ್ಮೀಬ್ರಹ್ಮಾದಿಗಗಿಂತ ಉತ್ತಮನಾದ ಶ್ರೀಹರಿಯೇ ನನ್ನ ಸ್ವಾಮಿಯೆಂಬ ಗುಣಪೂರ್ಣತಾ ಜ್ಞಾನಯುಕ್ತವೂ ಎಲ್ಲರಲ್ಲಿಯೂ ವ್ಯಾಪ್ತನೆಂಬ ಭಾವನೆಯಿಂದ ಸ್ವಯೋಗ್ಯತೋಚಿತವೂ ಆದ ಭಕ್ತಿಯಿಂದ ಸೇವಿಸು. ಶ್ರೀಹರಿಯಲ್ಲಿ ಮಾಡುವ ಭಕ್ತಿಯಿಂದ ವೈರಾಗ್ಯವೂ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾದ ಸಮೀಚೀನ ಜ್ಞಾನವೂ ಹುಟ್ಟುವುವು. ಉಪಾಸಕನ ಮನಸ್ಸು ಬಂಧಕಗಳಾದ ಶಬ್ದಾದಿವಿಷಯಗಳಲ್ಲಿ ಪ್ರಿಯ ಅಪ್ರಿಯವೆಂಬ ವಿಭಾಗವನ್ನು ಮಾಡದೆ ಎಲ್ಲ ವಿಷಯಗಳೂ ಅಪ್ರಿಯಗಳೇ ಎಂದು ತಿಳಿದು ಶ್ರೀಹರಿಯೇ ಪ್ರಿಯತಮನೆಂದು ತಿಳಿದಾಗ ಆ ಬಾಹ್ಯ ಮನಸ್ಸಿನ ಶಕ್ತಿಯು ಕುಗ್ಗಿತೆಂದರ್ಥ. ಆಗ ಸ್ವರೂಪಭೂತವಾದ ಚಿನ್ಮನಸ್ಸಿನಿಂದ ಉಪಾಸಕನು ಸಂಗರಹಿತನೂ ಯಥಾರ್ಥಜ್ಞಾನಿಯೂ ನಿರ್ದೋಷನೂ ಸದಾ ಸರ್ವೋತ್ತಮನೂ

ಪೂರ್ಣಜ್ಞಾನವನ್ನೂ, ನಿಷ್ಕಾಮನಯಾ ಮಾಡುವ ಕರ್ಮಗಳ ಆಚರಣೆಯನ್ನೂ ಹೊಂದಿರುವರು. ಶ್ರೀಹರಿಯು ಕರ್ತಾರನಾದ್ದರಿಂದ ಸಗುಣನೂ, ಸ್ವಾಭಾವಿಕವಾಗಿ ಗುಣಪೂರ್ಣನೂ, ಸಚ್ಚಿದಾನಂದಸ್ವರೂಪನೂ ಕ್ಷರಾಕ್ಷರಪುರುಷರಿಗಿಂತ ಉತ್ತಮನೂ ಆದ್ದರಿಂದ ಇವರಿಗೆ ಸಾಯುಜ್ಯಾದಿ ಮೋಕ್ಷಪ್ರದನಾಗಿರುವನು.

ಹೀಗೆ ಸಾಯುಜ್ಯ ಮೊದಲಾದ ಮೋಕ್ಷವನ್ನು ಹೊಂದಿದ ಬ್ರಹ್ಮಾದಿ ಜೀವರು ಮತ್ತೆ ಶ್ರೀಹರಿಯ ಗುಣವೈಷಮ್ಯರೂಪವಾದ ಸೃಷ್ಟಿಯಲ್ಲಿ ತೊಡಗಿದಾಗ ಶ್ರೀಹರಿಯ ಉದರದಿಂದ ಹೊರಗೆ ಬಂದು ಅಪ್ರಾಕೃತಗಳಾದ ಶ್ವೇತದ್ವೀಪ ಮೊದಲಾದ ಶ್ರೀಹರಿಯ ಸ್ಥಾನಗಳಲ್ಲಿ ಆನಂದಪೂರ್ಣರಾಗಿ ವಿಹರಿಸುವರು. ಆಗಲೂ ಹಿಂದೆ ಸಂಸಾರಾವಸ್ಥೆಯಲ್ಲಿದ್ದಂತೆಯೇ ಪರಸ್ಪರ ಭಿನ್ನರೂ, ತಾರತಮ್ಯವಿಶಿಷ್ಟರೂ ಆಗಿರುವರು. ಶ್ರೀಹರಿಯ ಲೋಕಗಳಲ್ಲಿ ಶ್ರೀಹರಿಯಿಂದ ಅನುಗೃಹೀತರಾದ ಇವರು ತಮ್ಮ ಸಾಧನೆಯ ಫಲವಾಗಿ ಅಣಿಮಾ ಮೊದಲಾದ ಸಮಸ್ತ ಯೋಗಸಿದ್ಧಿರೂಪಗಳಾದ ಭೋಗಸಮೂಹಗಳನ್ನು ಅನುಭವಿಸುವರು. ಮತ್ತೆ ಪ್ರಳಯ ಬಂದಾಗ ಸ್ವೋತ್ತಮರಲ್ಲಿ ಪ್ರವೇಶಿಸುವ ಮೂಲಕ ಶ್ರೀಹರಿಯ ಉದರವನ್ನು ಪ್ರವೇಶಿಸುವರು. ಹೀಗೆ ಶ್ರೀಹರಿಯ ಉದರಪ್ರವೇಶ ಮತ್ತು ಉದರದಿಂದ ಹೊರಬರುವಿಕೆಗಳು ಪ್ರತಿಪ್ರಳಯ, ಸೃಷ್ಟಿಕಾಲಗಳಲ್ಲಿ ಸಂತತವಾಗಿ ಮುಕ್ತರಿಗೂ ಆಗುತ್ತಲೇ ಇರುವುವು.

ಹೀಗೆ ಶ್ರೀಹರಿಯನ್ನು ಉಪಾಸಿಸುವುದರಿಂದ ನಿತ್ಯಾನಂದಾನುಭವರೂಪ ಮೋಕ್ಷವು ದೊರಕುವುದರಿಂದ, ಮಂಗಳಕರಳೇ, ನೀನೂ ಶ್ರೀಹರಿಯನ್ನು 'ನನ್ನ ಸ್ವಾಮಿ ಅವನು, ನಾನವನ ಕಿಂಕರಳು' ಎಂಬ ಭಾವಯುಕ್ತವಾದ ಭಕ್ತಿಯಿಂದ ಶರಣುಹೊಂದು. ಅವನ ಮಹಿಮೆಗಳು ಸರ್ವವೇದಾದಿ ಶಾಸ್ತ್ರಗಳಿಂದ ಪ್ರತಿಪಾದಿತವಾಗಿವೆ. ಅವನು ಎಲ್ಲ ಪ್ರಾಣಿಗಳ ಹೃತ್ಕಮಲಗಳಲ್ಲಿ ಮನೆಮಾಡಿ-ಕೊಂಡಿರುವನು. ಆ ಬಿಂಬರೂಪನನ್ನೇ ಭಕ್ತಿಯಿಂದ ಉಪಾಸಿಸು.

ಮನುಷ್ಯರಲ್ಲಿ ಕೆಲವರು ಸ್ವರ್ಗಾದಿಗಳ ಅಪೇಕ್ಷೆಯಿಂದ ಯಜ್ಞ ಮೊದಲಾದ ಕಾರ್ಯಗಳಲ್ಲಿ ಶ್ರದ್ಧಾಯುಕ್ತರಾಗಿರುತ್ತಾರೆ. ವಿಹಿತವಾದ ಯಾಗ ಮೊದಲಾದುವನ್ನೂ ನಿತ್ಯಕರ್ಮಗಳಾದ ಸಂಧ್ಯಾವಂದನಾದಿಗಳನ್ನೂ ಸ್ವರ್ಗಪ್ರಾಪ್ತಿಗಾಗಿಯೇ ಸ್ವಲ್ಪವೂ ನ್ಯೂನತೆಯಿಲ್ಲದಂತೆ ಮಾಡುತ್ತಾರೆ. ಮನಸ್ಸು ರಾಜಸಗುಣಪೂರ್ಣಗಿರುತ್ತದೆ; ವಿಷಯಲೋಲುಪರಾಗಿರುತ್ತಾರೆ; ಅಜಿತೇಂದ್ರಿಯರು; ಐಹಿಕ ಸುಖಾಸಕ್ತರಾಗಿರು-ತ್ತಾರೆ. ಪಿತೃಗಳನ್ನು ಯಾವಾಗಲೂ ಪೂಜಿಸುತ್ತಾರೆ. ಹೀಗೆ ಧರ್ಮಿಷ್ಠರಂತೆ ಕಂಡುಬಂದರೂ, ಅತ್ಯುತ್ತಮ ಜ್ಞಾನಿಯೂ, ಕಥನೀಯಪರಾಕ್ರಮನೂ,

ದೈತ್ಯಸೂದನನೂ ಆದ ಶ್ರೀಹರಿಯ ಕಥಾಶ್ರವಣ ಮನನಾದಿಗಳಲ್ಲಿ ಇವರಿಗೆ ಆಸಕ್ತಿ ಇರುವುದಿಲ್ಲ. ಇಂತಹ ಜನರು ಮೋಕ್ಷಕ್ಕೆ ಅನರ್ಹರು. ಹೀಗೆ ಶ್ರೀಹರಿಯ ಅಮೃತಮಯವಾದ ಕಥೆಯನ್ನು ಬಿಟ್ಟು ಮೋಕ್ಷಸಾಧನಗಳಿಲ್ಲದ ಕಾವ್ಯ ನಾಟಕ ಕತೆಗಳಲ್ಲಿಯೇ ಆಸಕ್ತರಾದ ಇವರು ಹರಿಯ ಇಚ್ಛೆಯಂತೆ ದೇಹಾವಸಾನವಾದಾಗ ಹಂದಿ, ನಾಯಿ ಮೊದಲಾದುವು ಅಮೇಧ್ಯವನ್ನೇ ತಿನ್ನುವಂತೆ ಅಸಹ್ಯವಾದ ನರಕವನ್ನೇ ಹೊಂದುವರು. ಶ್ರೀಹರಿಯ ಭಕ್ತರಲ್ಲದವರು ಮಾಡುವ ಧರ್ಮವು ಧರ್ಮವಲ್ಲ. ಇವರು ತಮೋಯೋಗ್ಯರು.

ಶ್ರೀಹರಿಯಲ್ಲಿ ಅಲ್ಪಸ್ವಲ್ಪ ಭಕ್ತಿಯಿಟ್ಟು ಈ ಮೇಲೆ ಹೇಳಿದ ಧರ್ಮಕಾರ್ಯಗಳನ್ನು ಮಾಡುವವರು ಸತ್ತಮೇಲೆ ದಕ್ಷಿಣಾಯನ ಮಾರ್ಗದಿಂದ ಅರ್ಯಮರೆನಿಸಿದ ಪಿತೃಗಳಿಗೆ ಅಧಿಪತಿಯಾದ ಯಮನ ಲೋಕವಾದ ಪಿತೃಲೋಕಕ್ಕೆ ಹೋಗುವರು. ಅಲ್ಲಿ ಹೆಚ್ಚು ಕಾಲವಿರುವುದಿಲ್ಲ. ಮತ್ತೆ ತಮ್ಮ ಮಕ್ಕಳ ಹೊಟ್ಟೆಯಲ್ಲಿ ಜನಿಸುವರು. ಷೋಡಶ ಸಂಸ್ಕಾರಗಳನ್ನು ಮಾಡಿಕೊಂಡು ಧರ್ಮಕಾರ್ಯಗಳನ್ನು ಮಾಡಿ ಆ ಪುಣ್ಯಫಲವಾಗಿ ಸ್ವರ್ಗದಲ್ಲಿ ಕೆಲಕಾಲವಿದ್ದು ಪುಣ್ಯ ಕ್ಷೀಣವಾದಕೂಡಲೇ ದೇವತೆಗಳಿಂದ ಸ್ವರ್ಗದಿಂದ ಹೊರಗೆ ಹಾಕಲ್ಪಟ್ಟವರಾಗಿ ಮತ್ತೆ ಮನುಷ್ಯಲೋಕದಲ್ಲಿಯೇ ಜನಿಸುವರು. ಹೀಗೆ ಸ್ವರ್ಗ, ಭೂಮಿ, ಅನಿತ್ಯ ನರಕಗಳನ್ನು ಸುತ್ತುತ್ತಲೇ ಇರುವರು.

ತಾಯಿ, ಹೀಗೆ ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಮೂರುಬಗೆಯ ಜೀವರಿರುವರು.

ಶ್ರೀಹರಿಯಲ್ಲಿ ಭಕ್ತಿಮಾಡದೆ ಮೋಕ್ಷವಿಲ್ಲವಾಗಿ, ತಾಯಿ, ಮುಕ್ತಿಯೋಗ್ಯಳಾದ ನೀನು ಸರ್ವಸೇವ್ಯನೂ ಸರ್ವೋತ್ತಮನೂ ಆದ ವಿಷ್ಣುವನ್ನೇ ಲಕ್ಷ್ಮೀಬ್ರಹ್ಮಾದಿಗಗಿಂತ ಉತ್ತಮನಾದ ಶ್ರೀಹರಿಯೇ ನನ್ನ ಸ್ವಾಮಿಯೆಂಬ ಗುಣಪೂರ್ಣತಾ ಜ್ಞಾನಯುಕ್ತವೂ ಎಲ್ಲರಲ್ಲಿಯೂ ವ್ಯಾಪ್ತನೆಂಬ ಭಾವನೆಯಿಂದ ಸ್ವಯೋಗ್ಯತೋಚಿತವೂ ಆದ ಭಕ್ತಿಯಿಂದ ಸೇವಿಸು. ಶ್ರೀಹರಿಯಲ್ಲಿ ಮಾಡುವ ಭಕ್ತಿಯಿಂದ ವೈರಾಗ್ಯವೂ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾದ ಸಮೀಚೀನ ಜ್ಞಾನವೂ ಹುಟ್ಟುವುವು. ಉಪಾಸಕನ ಮನಸ್ಸು ಬಂಧಕಗಳಾದ ಶಬ್ದಾದಿವಿಷಯಗಳಲ್ಲಿ ಪ್ರಿಯ ಅಪ್ರಿಯವೆಂಬ ವಿಭಾಗವನ್ನು ಮಾಡದೆ ಎಲ್ಲ ವಿಷಯಗಳೂ ಅಪ್ರಿಯಗಳೇ ಎಂದು ತಿಳಿದು ಶ್ರೀಹರಿಯೇ ಪ್ರಿಯತಮನೆಂದು ತಿಳಿದಾಗ ಆ ಬಾಹ್ಯ ಮನಸ್ಸಿನ ಶಕ್ತಿಯು ಕುಗ್ಗಿತೆಂದರ್ಥ. ಆಗ ಸ್ವರೂಪಭೂತವಾದ ಚೆನ್ಮನಸ್ಸಿನಿಂದ ಉಪಾಸಕನು ಸಂಗರಹಿತನೂ ಯಥಾರ್ಥಜ್ಞಾನಿಯೂ ನಿರ್ದೋಷನೂ ಸದಾ ಸರ್ವೋತ್ತಮನೂ

ಆದ ಬಿಂಬರೂಪಿ ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಳ್ಳುವನು. ಭಗವಂತನು ಒಬ್ಬನೇ. ದೃಶ್ಯ-ಸ್ಪೃಶ್ಯ ಎಂದು ಜಡಪದಾರ್ಥಗಳನ್ನು ಹೇಳುವ ಧರ್ಮಗಳಿಗಿಂತ ಭಿನ್ನಗಳಾದ ಶಬ್ದಪ್ರವೃತ್ತಿನಿಮಿತ್ತರೂಪಲಿಂಗಗಳಿಂದ ಅವನನ್ನೇ ಬೇರೆ ಬೇರೆ ಶಬ್ದಗಳಿಂದ ಕರೆಯುವರು. ಜ್ಞಾನವೇ ಪ್ರಮಾಣವಾಗಿ ಉಳ್ಳವನಾದ್ದರಿಂದ ಜ್ಞಾನಮಾತ್ರನು; ಬ್ರಹ್ಮಸೂತ್ರ ತತ್ವಗಳಲ್ಲಿ ಉತ್ತಮನಾದ್ದರಿಂದ ಪರಬ್ರಹ್ಮನು; ಜೀವರಿಗಿಂತ ಉತ್ತಮನಾದ್ದರಿಂದ ಪರಮಾತ್ಮನು, ನಿಯಮನ ಶಕ್ತಿಯುಕ್ತನಾದ್ದರಿಂದ ಈಶ್ವರನು; ಅಕುಂಠಿತ ಪುಂಶಕ್ತಿಯುತನಾದ್ದರಿಂದ ಪುಮಾಂಸನು; ಮತ್ತು ಸಮಗ್ರ ಐಶ್ವರ್ಯವಂತನಾದ್ದರಿಂದ ಭಗವಂತನು. ಹೀಗೆ ಅವನನ್ನು ಉಪಾಸಿಸುವ ಉಪಾಸಕನ ಭಕ್ತಿಯೋಗವು ಸಿದ್ಧಿಯಾದಲ್ಲಿ ಅವನ ಆ ಸಮಗ್ರಭಕ್ತಿಗೆ ಸಂಪೂರ್ಣವಾಗಿ ಲಿಂಗಭಂಗ(ಮುಕ್ತಿ) ವಾಗುವುದೇ ಅಂಗೀಕೃತ ಪ್ರಯೋಜನವೆಂಬುದು ಯುಕ್ತವಲ್ಲವೇ!

ಸರ್ವೋತ್ತಮನೂ ಸ್ವಗತಭೇದರಹಿತನೂ ಆದ ಶ್ರೀಹರಿಯು ಮತ್ಸ್ಯಾದಿ ರೂಪಗಳಿಂದ ಅನೇಕ ಸಂಖ್ಯನಾಗಿ ಕಾಣುವನು. ಇವುಗಳೂ ಜ್ಞಾನರೂಪಿಗಳೇ ಆಗಿ ಅಪ್ರಾಕೃತದೇಹಯುಕ್ತವಾದುವು. ಆದರೆ ವಿಷಯಾಸಕ್ತರಾದ ಅಜ್ಞಜನರು ತಮ್ಮ ಇಂದ್ರಿಯಗಳಿಂದ ಈ ಅವತಾರರೂಪಗಳನ್ನು ಭೌತಿಕಶರೀರಯುಕ್ತಗಳೆಂದು ಭ್ರಾಂತಿಯಿಂದ ತಿಳಿಯುವರು. ಹಾಗೆ ತಿಳಿಯುವುದು ಅಂಧಂತಮಸ್ಸಿಗೆ ಕಾರಣವಾಗುವುದು. ಮಹತ್ತತ್ವಾಭಿಮಾನಿಗಳಾದ ಬ್ರಹ್ಮದೇವರಿಗೂ, ಮೂರು ಬಗೆಯ ಅಹಂಕಾರ ತತ್ವಾಭಿಮಾನಿಗಳಾದ ರುದ್ರ ಮೊದಲಾದವರಿಗೂ, ಪಂಚಭೂತಾಭಿಮಾನಿಗಳೂ ಏಕಾದಶೇಂದ್ರಿಯಾಭಿಮಾನಿಗಳೂ ಆದ ಇಂದ್ರದೇವರಿಗೂ ಅವರವರ ಜ್ಞಾನಮಯವಾದ ಚಿದ್ದೇಹದೊಂದಿಗೆ ಈ ಬ್ರಹ್ಮಾಂಡದಿಂದ ಬಂದ ಭೌತಿಕ (ತತ್ವರೂಪ) ದೇಹವನ್ನೂ ತಿಳಿದಂತೆ ಅಜ್ಞಾನಿಗಳು ಶ್ರೀಹರಿಯ ಅವತಾರಗಳೂ ಭೌತಿಕ ದೇಹಯುಕ್ತಗಳೆಂದು ತಿಳಿಯುವರು. ಬ್ರಹ್ಮಾದಿಗಳ ವಿಷಯದಲ್ಲಿ ಇದು ಯುಕ್ತವಾದರೂ ಶ್ರೀಹರಿಯ ವಿಷಯದಲ್ಲಿ ಇದು ಭ್ರಾಂತಿಯೇ ಸರಿ. ಯಾವುದಕ್ಕೂ ಅಭಿಮಾನಿಯಲ್ಲದ ಅವನಿಗೆ ಪ್ರಾಕೃತ ದೇಹವೆಲ್ಲಿ ಬಂತು ? ಯಾರಾದರೂ ನಿತ್ಯವೂ ಶ್ರದ್ಧಾಭಕ್ತಿಗಳಿಂದ ಯೋಗಾಭ್ಯಾಸಮಾಡಿ ಶ್ರೀಹರಿಯಲ್ಲಿಯೇ ಮನಸ್ಸಿಟ್ಟು ದುರ್ಜನಸಂಗವನ್ನು ಬಿಟ್ಟು ಸಜ್ಜನಸಂಗವನ್ನೇ ಮಾಡಿ ವೈರಾಗ್ಯಯುಕ್ತರಾಗಿರುವರೋ ಅವರಿಗೆ ಈ ಅವತಾರರೂಪಗಳು ಪ್ರಾಕೃತದೇಹರೂಪದೋಷರಹಿತಗಳೆಂದೂ ಅನಂತಗುಣಪೂರ್ಣಬ್ರಹ್ಮರೂಪಗಳೆಂದೂ ಸಾಕ್ಷಾತ್ಕರಿಸಲಾಗುವುದು. ಇದಕ್ಕೆ ವಿರುದ್ಧವಾದ ಸಾಧನಸಂಪತ್ತಿಯುಳ್ಳವರಿಗೆ ಎಂದೂ ಯಥಾರ್ಥಜ್ಞಾನವಾಗುವುದಿಲ್ಲ.

ಗೌರವಾರ್ಹಳೇ. ಇದುವರೆಗೂ ನಾನು ಮಾಡಿದ ಉಪದೇಶದಿಂದ ಪ್ರಕೃತಿಯೆಂದು ಕರೆಸಿಕೊಳ್ಳುವ ಲಕ್ಷ್ಮೀ ಬ್ರಹ್ಮಾದಿ ಚೇತನರ (ಜಡಪ್ರಕೃತಿಯ) ಮತ್ತು ಪುರುಷನೆಂದು ಕರೆಸಿಕೊಳ್ಳುವ ಶ್ರೀಹರಿಯ ಯಥಾರ್ಥಜ್ಞಾನ(ರೂಪ)ವನ್ನು ತಿಳಿಯಲಾಗುವುದು. ಇದರಿಂದಲೇ ಶ್ರೀಹರಿಯ ಸಾಕ್ಷಾತ್ಕಾರವಾಗುವುದು. ಇಂತಹ ಜ್ಞಾನವನ್ನು ಪ್ರತಿಯೊಬ್ಬ ಮುಮುಕ್ಷುವೂ ಅವಶ್ಯ ಸಂಪಾದಿಸಬೇಕು.

ಶ್ರೀಹರಿಯಲ್ಲಿಯೇ ಆಸಕ್ತಿಯಿಟ್ಟು ಮಾಡುವ ಏಕಾಂತಭಕ್ತಿಗೆ ನಿರ್ಗುಣಭಕ್ತಿ-ಯೆಂದು ಮತ್ತೊಂದು ಹೆಸರು. ಈ ಭಕ್ತಿಯೋಗವೂ ಮತ್ತು ಜ್ಞಾನಯೋಗವೂ ಒಂದನ್ನೊಂದು ಬಿಟ್ಟಿರುವುದಿಲ್ಲ. ಒಂದು ಪ್ರಧಾನವಾದರೆ ಮತ್ತೊಂದು ಅಂಗವಾಗುವುದು. ಇವೆರಡಕ್ಕೂ ಶ್ರೀಹರಿಯೇ ವಿಷಯನು. ಇವೆರಡೂ ಮುಕ್ತಿಗೆ ಅವಶ್ಯ ಸಾಧನೆಗಳು. ಶಬ್ದ ಸ್ಪರ್ಶ ಮೊದಲಾದ ಅನೇಕ ಗುಣಗಳಿಂದ ಕೂಡಿದ ಒಂದೇ ಪದಾರ್ಥವು ಆಯಾಯಾ ಗುಣಗಳನ್ನು ಗ್ರಹಿಸುವ ಅನೇಕ ಇಂದ್ರಿಯಗಳಿಗೆ ವಿಷಯವಾಗಿ ಅನೇಕವಾಗಿ ತೋರುವಂತೆ ಶ್ರೀಹರಿಯೊಬ್ಬನೇ ಶಾಸ್ತ್ರಮಾರ್ಗಗಳಿಂದ ಆನಂದವುಳ್ಳವನು, ಜ್ಞಾನವುಳ್ಳವನು ಇತ್ಯಾದಿ ಅನಂತಗುಣ-ವಿಷಯನಾಗಿ ತಿಳಿಯಲ್ಪಡುವನು. ಕೇವಲ ಜ್ಞಾನ-ಭಕ್ತಿಗಳಿಗೇ ಶ್ರೀಹರಿಯು ವಿಷಯನೆಂದಲ್ಲ. ಸಂಧ್ಯಾವಂದನೆ, ಯಜ್ಞಯಾಗಾದಿಗಳು, ಸಾತ್ವಿಕದಾನ, ಚಾಂದ್ರಾಯಣ ಮೊದಲಾದ ಉಪವಾಸಗಳು, ವೇದಾದಿ ಶಾಸ್ತ್ರಾಧ್ಯಯನ, ಚಲಾಚಲಪ್ರತಿಮೆಗಳ ಸಂದರ್ಶನ, ಇಂದ್ರಿಯನಿಗ್ರಹ, ಕರ್ಮನ್ಯಾಸ, ಅಷ್ಟಾಂಗ-ಯೋಗ, ಉಪಾಸನಾಪ್ರವೃತ್ತಿ ಹಿಂಸಾ ನಿವೃತ್ತಿರೂಪ ಉಭಯ ಚಿಹ್ನೆಗಳಿಂದ ಯುಕ್ತವಾದ ವರ್ಣಾಶ್ರಮಧರ್ಮ, ಯಥಾರ್ಥಜ್ಞಾನ, ದೃಢವಾದ ವೈರಾಗ್ಯ ಇವೆಲ್ಲಕ್ಕೂ ಶ್ರೀಹರಿಯೇ ವಿಷಯನು. ಅವನು ಅನಂತಕಲ್ಯಾಣಗುಣವಿಶಿಷ್ಟ-ನಾದ್ದರಿಂದ ಸಗುಣನು; ಪ್ರಾಕೃತಗುಣರಹಿತನಾದ್ದರಿಂದ ನಿರ್ಗುಣನು; ಸ್ವತಂತ್ರನಾದ್ದರಿಂದ ಸ್ವಜ್ಞಾನಿಯು. ಅಮ್ಮಾ ! ಭಕ್ತಳಾದ ನಿನಗೆ ಸಾತ್ವಿಕ, ರಾಜಸ, ತಾಮಸ, ಭಕ್ತಿಗಳ ಸ್ವರೂಪವನ್ನೂ ನಾಲ್ಕನೆಯದಾದ ಏಕಾಂತ (ನಿರ್ಗುಣ) ಭಕ್ತಿಯ ಸ್ವರೂಪವನ್ನೂ, ಪ್ರಾಣಿಗಳು ವಿಚಾರ ಮಾಡದೆ ತಿಳಿಯಲಾಗದಿರುವ ಪ್ರಾಣಿಗಳ ಒಳಗೇ ಧಾವಿಸುತ್ತಿರುವ ಕಾಲನಿಯಾಮಕ ಶ್ರೀಹರಿಯ ಸ್ವರೂಪವನ್ನೂ ಸ್ಪಷ್ಟವಾಗಿ ವಿವರಿಸಿದ್ದೇನೆ. ಇವುಗಳ ಜೊತೆಗೆ ಅವಿದ್ಯಾ ಕರ್ಮಫಲವಾಗಿ ಅನೇಕ ಜನ್ಮಗಳನ್ನು ಹೊಂದಿ ತನಗೆ ದಿಕ್ಕಾದ ಶ್ರೀಹರಿಯನ್ನು ತಿಳಿಯದೆ ಮತ್ತೆ ಮತ್ತೆ ಜೀವನು ಅನುಭವಿಸುವ ಅನೇಕ ಸಾಂಸಾರಿಕಗತಿಗಳನ್ನು ವಿವರಿಸಿರುವೆನು.

ಈ ತತ್ತ್ವಜ್ಞಾನವನ್ನು ಇಂದ್ರಿಯಗಳನ್ನು ತೃಪ್ತಿಪಡಿಸುವದರಲ್ಲಿಯೇ ಆಸಕ್ತನಿಗೂ, ಅವಿಧೇಯನಿಗೂ, ಗುರುದ್ರೋಹಿಗೂ, ಅವೈಷ್ಣವನಿಗೂ, ಡಾಂಭಿಕನಿಗೂ, ವಿಷಯಾಸಕ್ತನಿಗೂ ಮನೆ ಮುಂತಾದವುಗಳಲ್ಲಿ ಮಮತಾಪೂರ್ಣನಿಗೂ ಹೇಳಬಾರದು. ನನ್ನ ಭಕ್ತನಲ್ಲದವನಿಗೆ ನನ್ನ ಭಕ್ತರನ್ನು ದ್ವೇಷಿಸುವವನಿಗೆ ಸರ್ವಥಾ ಹೇಳಲೇಕೂಡದು.

ಶ್ರದ್ಧಾಳುವೂ, ವಿನೀತನೂ, ಅಸೂಯಾರಹಿತನೂ, ಸರ್ವಪ್ರಾಣಿಮಿತ್ರನೂ, ಗುರುಶುಶ್ರೂಷಾಪರನೂ, ಸ್ವರ್ಗಾದಿ ನಶ್ವರಫಲಗಳಲ್ಲಿ ವಿರಕ್ತನೂ, ಶ್ರೀಹರಿಯಲ್ಲಿಯೇ ಮನಸ್ಸಿಟ್ಟವನೂ, ಮಾತ್ಸರ್ಯರಹಿತನೂ, ಬಹಿರಂತಃಶುದ್ಧನೂ, ಎಲ್ಲ ಪ್ರಿಯವಾದ ವಸ್ತುಗಳಿಗಿಂತ ಪರಮಾತ್ಮನೇ ಪ್ರಿಯತಮನೆಂದು ತಿಳಿದವನೂ ಆದ ಭಕ್ತನಿಗೆ ಮಾತ್ರ ಇದನ್ನು ಉಪದೇಶಿಸಬೇಕು.

ತಾಯಿ, ನನ್ನಲ್ಲಿ ಮನಸ್ಸಿಟ್ಟು ಕರ್ಮಗಳನ್ನು ಮಾಡಿದರೆ ಅವು ಸುಕೃತವಾಗುವುವು. ಆ ಬಗೆಯ ಕರ್ಮಗಳನ್ನು ಮಾಡುವ ಭಕ್ತನು ಶ್ರದ್ಧೆಯಿಂದ ಇದನ್ನು ಕೇಳಿದರೆ, ಶ್ರದ್ಧೆಯಿಂದ ಹೇಳಿದರೆ ಪುನರಾವೃತ್ತಿ ಇಲ್ಲದ ಅತ್ಯುತ್ತಮವಾದ ನನ್ನ ಸ್ಥಾನವನ್ನು ಹೊಂದಿಯೇ ಹೊಂದುವನು. ಆದ್ದರಿಂದ ಪ್ರತಿಯೊಬ್ಬ ಭಕ್ತನೂ ಇದನ್ನು ಶ್ರವಣ ಮಾಡಬೇಕು. ಮತ್ತು ಯೋಗ್ಯನಿಗೆ ಉಪದೇಶಿಸಬೇಕು.



## ಅಥ ಚತುಸ್ತ್ರಿಂಶೋऽಧ್ಯಾಯಃ

ಶ್ರೀಕಪಿಲನಾಮಕಪರಮಾತ್ಮನು ಉಪದೇಶ ಮಾಡಿದ ತತ್ವದ ಜ್ಞಾನವು ದೇವಹೂತಿಗೆ ಆಗಿದೆ, ಎಂಬುದನ್ನು ಅವಳು ಮಾಡಿದ ಸ್ತುತಿಯವ್ಯಾಜದಿಂದ ತಿಳಿಸುವರು ಈ ಅಧ್ಯಾಯದಲ್ಲಿ -

**ಮೈತ್ರೇಯ ಉವಾಚ -**

> **ಏವಂ ನಿಶಮ್ಯ ಕಪಿಲಸ್ಯ ವಚೋ ಜನಿತ್ರೀ**
> **ಸಾ ಕರ್ದಮಸ್ಯ ದಯಿತಾ ಕಿಲ ದೇವಹೂತಿಃ ।**
> **ವಿಸ್ರಸ್ತಮೋಹಪಟಲಾ ತಮಭಿಪ್ರಣಮ್ಯ**
> **ತುಷ್ಟಾವ ತತ್ವವಿಷಯಾಖಿಲಸಿದ್ಧಭೂಮಿಮ್ ॥೧॥**

ಜನಿತ್ರೀ=ತಾಯಿಯಾದ ಕರ್ದಮಸ್ಯ ದಯಿತಾ ಸಾ ದೇವಹೂತಿಃ=ಕರ್ದಮರ ನಿರಂತರ ಸೇವೆ ಮಾಡಿ ಅವರ ಅತಿಪ್ರಿಯಳಾದ ಆ ದೇವಹೂತಿಯು ಏವಂ=ಈ ರೀತಿಯಾದ ಕಪಿಲಸ್ಯ=ಪರಮಾತ್ಮನ ವಚಃ=ಮಾತುಗಳನ್ನು ನಿಶಮ್ಯ=ಕೇಳಿ ವಿಸ್ರಸ್ತಮೋಹಪಟಲಾ=ಮೋಹದ ಆವರಣ ಕಳಚಿದವಳಾಗಿ ತತ್ವವಿಷಯಾಖಿಲ-ಸಿದ್ಧಭೂಮಿಂ=ತತ್ವ ವಿಷಯದಲ್ಲಿ ಜ್ಞಾನಿಗಳಾದ ಎಲ್ಲ ಸಾಂಖ್ಯಾಚಾರ್ಯರಿಗೆ ಆಶ್ರಯನಾದ ತಂ=ಪರಮಾತ್ಮನನ್ನು ಅಭಿಪ್ರಣಮ್ಯ=ಭಕ್ತಿಯಿಂದ ನಮಸ್ಕರಿಸಿ ತುಷ್ಟಾವ=ಸ್ತುತಿಸಿದಳು. ॥೧॥

**ದೇವಹೂತಿರುವಾಚ -**

> **ಅಥಾಪ್ಯಯಾಂತೇ ಸಲಿಲೇ ಶಯಾನಂ**
> **ಭೂತೇಂದ್ರಿಯಾರ್ಥಾತ್ಮಮಯಂ ವಪುಸ್ತೇ ।**
> **ಗುಣಪ್ರವಾಹಂ ಸದಶೇಷಬೀಜಂ**
> **ದಧ್ಯೌ ಸ್ವಯಂ ಯಜ್ಜಠರಾಬ್ಜಜಾತಃ ॥೨॥**

> **ಸ ಏವ ವಿಶ್ವಸ್ಯ ಭವಾನ್ ವಿಧತ್ತೇ**
> **ಗುಣಪ್ರವಾಹೇಷು ವಿಭಕ್ತವೀರ್ಯಃ ।**

ಸರ್ಗಾದ್ಯನೀಹೋಽವಿತಥಾಭಿಸಂಧಿ-
ರಾತ್ಮೇಶ್ವರೋಽತರ್ಕ್ಯಸಹಸ್ರಶಕ್ತಿಃ ॥೩॥

ಸ ತ್ವಂ ಭೃತೋ ಮೇ ಜಠರೇಣ ನಾಥ
ಕಥಂ ನು ಯಸ್ಯೋದರ ಏತದಾಸೀತ್ ।
ವಿಶ್ವಂ ಯುಗಾಂತೇ ವಟಪತ್ರ ಏಕಃ
ಶೇತೇ ಸ್ಮ ಮಾಯಾಶಿಶುರಂಘ್ರಿಪಾನಃ ॥೪॥

ಅಥಶಬ್ದವು ಮಂಗಲ ಪ್ರಯೋಜನಕವು ಸ್ತೋತ್ರಪ್ರಾರಂಭಾರ್ಥಕವು

ಅಪ್ಯಯಾಂತೇ=ಪ್ರಳಯದಲ್ಲಿ ಸಲಿಲೇ=ನೀರಿನಲ್ಲಿ ಶಯಾನಂ=ಮಲಗಿರುವ ಭೂತೇಂದ್ರಿಯಾರ್ಥಾತ್ಮಮಯಂ=ಆಕಾಶಾದಿಪಂಚಭೂತಗಳು, ದಶೇಂದ್ರಿಯ-ಗಳು, ಶಬ್ದಾದಿವಿಷಯಗಳು, ಮನಸ್ಸು ಈ ಎಲ್ಲ ಅಭಿಮಾನಿದೇವತೆಗಳಿಗಿಂತ ಉತ್ತಮನಾದ ಗುಣಪ್ರವಾಹಂ=ಕಾರ್ಯಪ್ರವಾಹಕ್ಕೆ ಆಶ್ರಯವಾದ ಅಥವಾ ಸೃಷ್ಟ್ಯಾದಿಗಳಲ್ಲಿ ಸತ್ವಾದಿಗುಣಗಳನ್ನು ಪ್ರೇರಿಸುವ ಅಥವಾ ಜ್ಞಾನಾದಿಗುಣಗಳ ಪ್ರವಾಹವುಳ್ಳ ಸತ್=ನಿರ್ದುಷ್ಟವಾದ ಅಶೇಷಬೀಜಂ=ಸರ್ವಜಗತ್ತಿಗೆ ವ್ಯಂಜಕವಾದ ಯತ್=ಯಾವುದನ್ನು ಯಜ್ಜಠರಾಬ್ಜಜಾತಃ=ಯಾವನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮನು ಸ್ವಯಂ=ಸಾಕ್ಷಾತ್ತಾಗಿ ತೇ=ನಿನ್ನ ವಪುಃ=ದೇಹವನ್ನು ದಧ್ಯೌ=ಪ್ರಳಯದ ಕೊನೆಗೆ ಧ್ಯಾನಿಸಿದನೋ.

ಸ ಏವ=ಅವನೇ ಅಂಥ ದೇಹವುಳ್ಳವನೇ ಯಃ ಭವಾನ್=ಯಾವ ನೀನು ವಿಶ್ವಸ್ಯ=ಪ್ರಪಂಚದ ಸರ್ಗಾದಿ ವಿಧತ್ತೇ=ಸೃಷ್ಟ್ಯಾದಿಗಳನ್ನು ಮಾಡುವಿ ಗುಣಪ್ರವಾಹೇಷು=ರಜೋಗುಣಾದಿಗಳ ಕಾರ್ಯಗಳಾದ ಸೃಷ್ಟ್ಯಾದಿಪ್ರವಾಹಗಳಲ್ಲಿ ವಿಭಕ್ತವೀರ್ಯಃ=ಬ್ರಹ್ಮಾದಿರೂಪದಿಂದ ವಿಭಜಿಸಲ್ಪಟ್ಟ ಜಗತ್‌ಸೃಷ್ಟ್ಯಾದಿ ಮಹಾತ್ಮ್ಯವುಳ್ಳ ಅನೀಹಃ=ಪ್ರಯೋಜನಚೇಷ್ಟೆಯಿಲ್ಲದೇ, ಕಷ್ಟಕರ ವ್ಯಾಪಾರವಿಲ್ಲದೆ ಅವಿತಥಾಭಿಸಂಧಿಃ=ಸತ್ಯಸಂಕಲ್ಪನಾದ ಆತ್ಮೇಶ್ವರಃ=ಎಲ್ಲ ಚೇತನರಿಗೆ ಸ್ವಾಮಿಯಾದ ಅತರ್ಕ್ಯಸಹಸ್ರಶಕ್ತಿಃ=ಅಚಿಂತ್ಯವಾದ ಅನಂತಶಕ್ತಿಯುಳ್ಳ.

ಹೇ ನಾಥ=ಸ್ವಾಮಿಯೇ ಯಸ್ಯ ಉದರೇ=ಯಾವ ನಿನ್ನ ಹೊಟ್ಟೆಯಲ್ಲಿ ಏತತ್ ವಿಶ್ವಂ ಆಸೀತ್=ಈ ಪ್ರಪಂಚವಿತ್ತೋ ಮತ್ತು ಯುಗಾಂತೇ=ಪ್ರಲಯದಲ್ಲಿ ವಟಪತ್ರೇ=ಆಲದೆಲೆಯ ಮೇಲೆ ಅಂಘ್ರಿಪಾನಃ=ಕಾಲ್ಬೆರಳನ್ನು ಚೀಪುತ್ತಾ ಶೇತೇ ಸ್ಮ ಮಾಯಾಶಿಶುಃ=ಇಚ್ಛೆಯಿಂದಗೃಹೀತವಾದ ಮಗುವಿನ ರೂಪದದಿಂದ ಮಲಗಿರಿ-ವಿಯೋ ಸಃ ತ್ವಂ=ಅಂತಹ ನೀನು ನು=ಈಗ ಮೇ=ನನ್ನಿಂದ ಜಠರೇಣ ಭೃತಃ=

ಉದರದಲ್ಲಿ ಧರಿಸಲ್ಪಟ್ಟಿ ಸ್ವಲ್ಪ ಭಾರವನ್ನೂ ಹೊರಲು ಅಸಮರ್ಥಳಾದ ನಾನು, ಎಲ್ಲ ಜಗದಾಧಾರನಾದ ನಿನ್ನನ್ನು ಹೊರಬಲ್ಲೆನೇ ! ಸಾಧ್ಯವಿಲ್ಲ . ಅಗಮ್ಯನಾದ ನೀನು ಪ್ರಲಯಕಾಲದಲ್ಲಿ ಸ್ವೇಚ್ಛೆಯಿಂದ ಶಿಶುರೂಪ ಸ್ವೀಕರಿಸಿದಂತೆ ಈಗ ನನ್ನ ಉದರದಲ್ಲಿ ಶಿಶುರೂಪಧರಿಸಿರುವಿ. ಕಾರಣ ನೀನು ನನ್ನ ಮಗನಲ್ಲವೆಂದು ಭಾವ ॥೨-೩-೪॥

ಎರಡನೇ ಶ್ಲೋಕದಲ್ಲಿಯ 'ಭೂತೇಂದ್ರಿಯಾರ್ಥಾತ್ಮಮಯಂ' ಎಂಬುದಕ್ಕೆ ಭೂತಾದ್ಯಾತ್ಮಕ ಎಂಬ ಅರ್ಥವಲ್ಲವೆಂದು ತಿಳಿಸಲು ವ್ಯಾಖ್ಯಾನಿಸುವರು–

**ಭೂತೇಂದ್ರಿಯಾರ್ಥಾತ್ಮಮಯಂ ತೇಭ್ಯಃ ಪ್ರಧಾನಂ ।**

ಈ ವಿಷಯದಲ್ಲಿ ಪ್ರಮಾಣ ಹೇಳುವರು –

**ತ್ವಂ ಪ್ರಧಾನಮಯೋ ದೇವ ಪ್ರಧಾನಾದಧಿಕೋ ಯತಃ ।ಇತಿ ವಾರಾಹೇ**

ಭೂತಾದಿಶಬ್ದಗಳಿಂದ ಅವುಗಳ ಅಭಿಮಾನಿಗಳನ್ನು ಸ್ವೀಕರಿಸಿ ಅವರಿಗಿಂತ ಪ್ರಧಾನನೆಂದರ್ಥ.

('ಮಯಂ ಪ್ರಧಾನಮುದ್ದಿಷ್ಟಂ' ಎಂದು ಪ್ರಮಾಣವಿದೆ) ಪ್ರಮಾಣದಲ್ಲಿಯ ಪ್ರಧಾನಶಬ್ದಗಳೆರಡೂ ಭೂತಾದಿಗಳಿಗೆ ಉಪಲಕ್ಷಕವು. ಕಾರಣ ಉದಾಹರಿಸಿದ್ದು ಅಸಂಗತವಲ್ಲ. ಹೇ ಹರಿಯೇ ನೀನು ಭೂತ, ಇಂದ್ರಿಯ,ವಿಷಯ,ಮನಸ್ಸು ಇವುಗಳಿಗೆಲ್ಲ ಅಭಿಮಾನಿಗಳಾದ ಎಲ್ಲ ದೇವತೆಗಳು ಮತ್ತು ಲಕ್ಷ್ಮಿದೇವಿಗಿಂತಲೂ ಉತ್ತಮನಾದುದರಿಂದ ಪ್ರಧಾನಮಯ. ಅರ್ಥಾತ್ ಭೂತೇಂದ್ರಿಯಾರ್ಥಾತ್ಮ-ಮಯನೆನಿಸುವಿ ಎಂದು ವರಾಹ ಪುರಾಣದಲ್ಲಿದೆ. ॥೪॥

**ತ್ವಂ ದೇಹತಂತ್ರಃ ಪ್ರಶಮಾಯ ಪಾಪ್ಮನಾಂ**
**ನಿದೇಶಭಾಜಾಂ ಚ ವಿಭೋ ವಿಭೂತಯೇ ।**
**ಯಥಾವತಾರಾಸ್ತವ ಸೂಕರಾದಯ-**
**ಸ್ತಥಾಽಯಮಪ್ಯಾತ್ಮಪಥೋಪಲಬ್ಧಯೇ ॥೫॥**

ಹೇ ವಿಭೋ=ಸ್ವಾಮಿಯಾದ ಕಪಿಲನೇ ತ್ವಂ=ನೀನು ದೇಹತಂತ್ರಃ=ಇರುವ ದೇಹವನ್ನೇ ಪ್ರಕಾಶಗೊಳಿಸುವವನು ಯಥಾ=ಹೇಗೆ ತವ=ನಿನ್ನ ಸೂಕರಾದಯಃ ಅವತಾರಾಃ=ವರಾಹ ಮೊದಲಾದ ಅವತಾರಗಳು ಪಾಪ್ಮನಾಂ=ಪಾಪಿಷ್ಠರಾದ ಹಿರಣ್ಯಾಕ್ಷ ಮುಂತಾದವರ ಪ್ರಶಮಾಯ=ನಾಶಮಾಡುವುದಕ್ಕಾಗಿ ನಿದೇಶಭಾಜಾಂ =ಆಜ್ಞಾಧಾರಿಗಳಾದ ಬ್ರಹ್ಮಾದಿಗಳ ವಿಭೂತಯೇ=ಐಶ್ವರ್ಯಕ್ಕಾಗಿ ಕೃತಾಃ

ಮಾಡಲ್ಪಟ್ಟಿರುವವೋ ತಥಾ=ಹಾಗೆಯೇ ಅಯಂಅಪಿ=ಈಕಪಿಲಾವಾತಾರವು ನಿದೇಶಕಾರಿಣಾಂ=ಆಜ್ಞಾಧಾರಕರಿಗೆ ಆತ್ಮಪಥೋಪಲಬ್ಧಯೇ=ಪರಮಾತ್ಮನ ಜ್ಞಾನ ಮಾರ್ಗವನ್ನು ತಿಳಿಸಲು ಕೃತಃ=ಮಾಡಲ್ಪಟ್ಟಿದೆ. ॥೫॥

'ದೇಹತಂತ್ರ' ಎಂದರೆ ದೇಹಾಧೀನವೆಂದರ್ಥ ತೋರುವುದು. ಕಾರಣ ವ್ಯಾಖ್ಯಾನಿಸುವರು–

**ದೇಹತಂತ್ರಃ ದೇಹಪ್ರಕಾಶಃ ।**
**ತತಿಃ ಪ್ರಕಾಶೋ ವಿಸ್ತಾರಃ ತಂತ್ರಂ ಚೇತ್ಯಭಿಧೀಯತೇ ॥**
**ಇತಿ ತಂತ್ರಮಾಲಾಯಾಂ ।**

'ಮೊದಲೇ ಇರುವ ಸ್ವರೂಪದೇಹವನ್ನೇ ವ್ಯಕ್ತಗೊಳಿಸುವವನು. (ಜೀವನಂತೆ ಇಲ್ಲದ ಹೊಸದೇಹದ ಉತ್ಪತ್ತಿ ಉಳ್ಳವನಲ್ಲ ತತಿ, ವಿಸ್ತಾರ, ತಂತ್ರವೆಂದು ಪ್ರಕಾಶವು ಹೇಳಲ್ಪಡುವುದು' ಎಂದು ತಂತ್ರಮಾಲಾದಲ್ಲಿದೆ. ॥೫॥

ನಿನ್ನ ದರ್ಶನದಿಂದ ಕೃತಾರ್ಥಳಾಗಿರುವೆನೆಂದು ಕೈಮುತ್ಯದಿಂದ ಹೇಳುವಳು–

**ಯನ್ನಾಮಧೇಯಶ್ರವಣಾನುಕೀರ್ತನಾದ್**
**ಯತ್ಪ್ರಹ್ವಣಾದ್ ಯತ್ಸ್ಮರಣಾದಪಿ ಕ್ವಚಿತ್ ।**
**ಶ್ವಾದೋಽಪಿ ಸದ್ಯಃ ಸವನಾಯ ಕಲ್ಪತೇ**
**ಕುತಃ ಪುನಸ್ತೇ ಭಗವನ್ ನು ದರ್ಶನಾತ್ ॥೬॥**

ಯನ್ನಾಮಧೇಯಶ್ರವಣಾನುಕೀರ್ತನಾತ್=ಯಾವನ ನಾಮವನ್ನು ಕೇಳುವುದರಿಂದಲೂ ಉಚ್ಚರಿಸುವುದರಿಂದಲೂ, ಯತ್ಪ್ರಹ್ವಣಾತ್=ಯಾವನಿಗೆ ನಮ್ರನಾಗುವುದರಿಂದ, ಯತ್ಸ್ಮರಣಾದಪಿ=ಯಾವನ ಸ್ಮರಣದಿಂದಲೂ, ಶ್ವಾದಃ ಅಪಿ=ನಾಯಿ ತಿನ್ನುವ ಚಂಡಾಲನೂ ಸಹ, ಸದ್ಯಃ=ತತ್ಕ್ಷಣದಲ್ಲಿ ಸವನಾಯ= ಸೋಮವನ್ನು ಅವಹನನ ಮಾಡಲು ಅರ್ಥಾತ್ ಯಜ್ಞ ಮಾಡಲು ಕಲ್ಪತೇ= ಸಮರ್ಥನಾಗುವನು. ಪವಿತ್ರನಾಗಿ ಪೂಜ್ಯನಾಗುವನು ಅಂದ ಮೇಲೆ ಹೇ ಭಗವಾನ್ ನು=ಈಗ ತೇ=ನಿನ್ನ ದರ್ಶನಾತ್ ಪುನಃ ಕುತಃ=ದರ್ಶನದಿಂದ ಪುನೀತಳಾದೆನೆಂದೇನು ಪ್ರತ್ಯೇಕ ಹೇಳುವುದು. ಸಿದ್ಧವೆಂದು ಭಾವ. ॥೬॥

ಅದನ್ನೇ ಉಪಪಾದಿಸುವಳು –

**ಅಹೋ ಬತ ಶ್ವಪಚೋಽತೋ ಗರೀಯಾನ್**
**ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಂ ।**

**ತೇಪುಸ್ತಪಸ್ತೇ ಜುಹುವುಃ ಸಸ್ನುರಾರ್ಯಾ**
**ಬ್ರಹ್ಮಾನೂಚುರ್ನಾಮ ಗೃಣಂತಿ ಯೇ ತೇ ॥೭॥**

(ಯತ್=ಯಾವ ಕಾರಣ) ಜಿಹ್ವಾಗ್ರೇ=ಯಾವನ ನಾಲಿಗೆಯಲ್ಲಿ ತುಭ್ಯಂ= ನಿನ್ನ ನಾಮ=ನಾಮವು ವರ್ತತೇ=ಇರುವುದೋ ಅತಃ=ಆ ಕಾರಣ ಶ್ವಪಚಃ= ಚಂಡಾಲನು ಗರೀಯಾನ್=ಶ್ರೇಷ್ಠನು 'ಬಹುನಾಜನ್ಮನಾಂ ಅಂತೇ ಕೃಷ್ಣಭಕ್ತಿಃ ಪ್ರಜಾಯತೇ'ಎಂದಿರುವುದರಿಂದ, ತಪಸ್ಸು ಮುಂತಾದವನ್ನು ಮಾಡಿದ ಶುದ್ಧಾಂತಃ-ಕರಣದವರಿಗೆನೇ ನಾಮ ಸಂಕೀರ್ತನ ಸಾಧ್ಯ. ಆದ್ದರಿಂದ ಶ್ವಪಚನಿಗೆ ಹೇಗೆ ಸಾಧ್ಯ?ಎಂದರೆ ಉತ್ತರಿಸುವರು ಯೇ=ಯಾರು ತೇ=ನಿನ್ನ ನಾಮ ಗೃಣಂತಿ= ನಾಮೋಚ್ಚಾರ ಮಾಡುವರೋ ತೇ=ಅವರು ತಪಃ ತೇಪುಃ=ಪೂರ್ವಜನ್ಮದಲ್ಲಿ ತಪಸ್ಸು ಮಾಡಿರುವರು. ಜುಹುವುಃ=ಹೋಮ ಮಾಡಿರುವರು. ಬ್ರಹ್ಮ ಅನೂಚುಃ= ವೇದಾಧ್ಯಯನ ಮಾಡಿರುವರು, ಎಂದು ತಿಳಿಯುವುದು. ಅಥವಾ ಗರಿಷ್ಠರಾಗ-ಬೇಕಾದರೆ ತಪಸ್ಸು ಮುಂತಾದವು ಬೇಕು. ಚಂಡಾಲನಿಗೆ ಅವುಗಳಿಲ್ಲ ಕೇವಲ ನಾಮಸಂಕೀರ್ತನದಿಂದ ಹೇಗೆ ಉತ್ತಮನಾಗುವನು ? ಎಂದರೆ ಹೇಳುವರು ತಪಸ್ಸು ಮೊದಲಾದವುಗಳಿಂದ ಬರುವ ಪುಣ್ಯವಂತರೂ ಅವರೆಂದು ಹೇಳುವರು; ಯೇ ತೇ ನಾಮಗೃಣಂತಿ ತೇ ಏವ ನಿನ್ನ ನಾಮಸ್ಮರಣ ಮಾಡುವರೇ ತಪಃತೇಪುಃ ಜುಹುವುಃ=ತಪವಗೈದವರು, ಹೋಮ ಮಾಡಿದವರು ಸಸ್ನುಃ=ತೀರ್ಥಸ್ನಾನ ಮಾಡಿದವರು ಆರ್ಯಾಃ=ಸದಾಚಾರಿಗಳು ಬ್ರಹ್ಮ ಅನೂಚುಃ=ವೇದಾಧ್ಯಯನ ಮಾಡಿದವರು. ಅಂದರೆ ನಿನ್ನ ನಾಮಕೀರ್ತನದಿಂದಲೇ ಎಲ್ಲದರ ಫಲ ಪಡೆದವರೆಂದು ಭಾವ. ॥೭॥

ಕಪಿಲನಿಗೆ ಪರಬ್ರಹ್ಮತ್ವವನ್ನು ಸ್ಪಷ್ಟಪಡಿಸುತ್ತ ಸ್ತೋತ್ರವನ್ನು ಉಪಸಂಹರಿಸುವಳು.

**ತಂ ತ್ವಾದ್ಧಾಹಂ ಬ್ರಹ್ಮ ಪರಂ ಪುಮಾಂಸಂ**
**ಪ್ರತ್ಯಕ್ ಸ್ರೋತಸ್ಯಾತ್ಮನಿ ಸಂವಿಭಾವ್ಯಮ್ ।**
**ಸ್ವತೇಜಸಾ ಧ್ವಸ್ತಗುಣಪ್ರವಾಹಂ**
**ವಂದೇ ವಿಷ್ಣುಂ ಕಪಿಲಂ ವೇದಗರ್ಭಮ್ ॥೮॥**

ಬ್ರಹ್ಮ=ಗುಣಪೂರ್ಣನಾದ ಪರಂ ಪುಮಾಸಂ=ಸರ್ವೋತ್ತಮ ಪುರುಷನಾದ ಪ್ರತ್ಯಕ್‌ಸ್ರೋತಸಿ=ವಿಷಯ ಸಂಚಾರವನ್ನು ತ್ಯಜಿಸಿ ಅಂತರ್ಮುಖಿಯಾದ ಆತ್ಮನಿ= ಮನಸ್ಸಿನಲ್ಲಿ ಸಂವಿಭಾವ್ಯಂ=ಪ್ರತ್ಯಕ್ಷೀಕರಿಸಲು ಯೋಗ್ಯನಾದ ಸ್ವತೇಜಸಾ=ಸ್ವರೂಪ ಸಾಮರ್ಥ್ಯದಿಂದ ಧ್ವಸ್ತಗುಣಪ್ರವಾಹಂ=ನಿತ್ಯದಲ್ಲೂ ಸಂಸಾರವನ್ನು ದೂರೀಕರಿಸಿದ

ವೇದಗರ್ಭಂ=ವೇದಪ್ರತಿಪಾದ್ಯನಾದ ಕಪಿಲಂ=(ಸುಖಪಾನ ಮಾಡುವ, ಭಕ್ತರನ್ನು ಸ್ವೀಕರಿಸಿದ) ಕಪಿಲನಾಮಕನಾದ ವಿಷ್ಣುಂ=ವ್ಯಾಪ್ತನಾದ ತಂ ತ್ವಾ=ಹಿಂದೆಸ್ತುತಿಸಿದ ಆ ನಿನ್ನನ್ನು ವಂದೇ=ನಮಸ್ಕರಿಸುವೆನು. ॥೮॥

**ಮೈತ್ರೇಯ ಉವಾಚ**

**ಈಡಿತೋ ಭಗವಾನೇವಂ ಕಪಿಲಾಖ್ಯಃ ಪರಃ ಪುಮಾನ್ ।**
**ವಾಚಾಽವಿಕ್ಲವಯೇತ್ಯಾಹ ಮಾತರಂ ಮಾತೃವತ್ಸಲಃ ॥೯॥**

ಏವಂ=ಈ ರೀತಿಯಾಗಿ ಈಡಿತಃ=ಸ್ತುತಿಸಲ್ಪಟ್ಟ ಭಗವಾನ್=ಐಶ್ವರ್ಯ ಸಂಪನ್ನನಾದ ಪರಃಪುಮಾನ್=ಸರ್ವೋತ್ತಮನಾದ ಕಪಿಲಾಖ್ಯಃ=ಕಪಿಲನಾಮಕ ಶ್ರೀಹರಿಯು ಮಾತೃವತ್ಸಲಃ=ತಾಯಿಯು ತನ್ನಲ್ಲಿ ಮಾಡುವ ಭಕ್ತಿಯ ಪ್ರಯುಕ್ತ, ಅವಳಲ್ಲಿ ವಾತ್ಸಲ್ಯವುಳ್ಳವನಾಗಿ ಮಾತರಂ=ತಾಯಿಯನ್ನು ಕುರಿತು ಅವಿಕ್ಲವಯಾ ವಾಚಾ=ಗಂಭೀರವಾದ ಮಾತುಗಳಿಂದ ಇತಿ ಆಹ=ಈ ರೀತಿ ಹೇಳಿದನು. ॥೯॥

**ಭಗವಾನುವಾಚ**

**ಮಾರ್ಗೇಣಾನೇನ ಮಾತಸ್ತೇ ಸುಸೇವ್ಯೇನೋದಿತೇನ ಮೇ ।**
**ಆಸ್ಥಿತೇನ ಪರಾಂ ಕಾಷ್ಠಾಮಚಿರಾದವರೋತ್ಸ್ಯಸಿ ॥೧೦॥**

ಹೇ ಮಾತಃ=ತಾಯಿಯೇ ತೇ=ನಿನ್ನಿಂದ ಆಸ್ಥಿತೇನ=ಅನುಸರಿಸಿದ ಮೇ= ನನ್ನಿಂದ ಉದಿತೇನ=ಹೇಳಲ್ಪಟ್ಟ ಅನೇನ ಮಾರ್ಗೇಣ=ಈ ಭಕ್ತಿಸಹಿತ ಜ್ಞಾನಮಾರ್ಗ ದಿಂದ ಅಚಿರಾತ್=ಶೀಘ್ರದಲ್ಲಿ ಪರಾಂ ಕಾಷ್ಠಾಂ ಅವರೋತ್ಸ್ಯಸಿ=ಸಂಪೂರ್ಣ ಸ್ವರೂಪಾನಂದಾಭಿವ್ಯಕ್ತಿಯನ್ನು ಹೊಂದುವಿ. ॥೧೦॥

**ಶ್ರದ್ಧತ್ಸ್ವೈತನ್ಮತಂ ಮಹ್ಯಂ ಜುಷ್ಟಂ ಯದ್ ಬ್ರಹ್ಮವಾದಿಭಿಃ ।**
**ಯೇನ ಮಾಮಭಯಂ ಯಾಯಾನ್ಮೃತ್ಯುಮೃಚ್ಛಂತ್ಯತದ್ವಿದಃ ॥೧೧॥**

ಯತ್=ಯಾವುದು ಬ್ರಹ್ಮವಾದಿಭಿಃ=ವೇದವಾದಿಗಳಿಂದ ಜುಷ್ಟಂ=ಸೇವಿತ- ವಾದುದೋ=ಯೇನ=ಯಾವುದರಿಂದ ಅಭಯಂ=ಭಯರಹಿತನಾದ ಮಾಂ= ನನ್ನನ್ನು ಯಾಯಾತ್=ಹೊಂದುವನೋ ಮಹ್ಯಂ ತನ್ಮತಂ=ಆ ನನ್ನ ಸಿದ್ಧಾಂತವನ್ನು (ತತ್ವವನ್ನು) ಶ್ರದ್ಧತ್ಸ್ವ=ವಿಶ್ವಾಸಮಾಡು. ಅತದ್ವಿದಃ=ಅದನ್ನು ತಿಳಿಯದವರು ಮೃತ್ಯುಂ=ಸಂಸಾರವನ್ನು ಋಚ್ಛಂತಿ=ಹೊಂದುವರು. ಅಥವಾ ನನ್ನ ಮತಕ್ಕೆ ವಿರುದ್ಧವಾದ ಐಕ್ಯಮತವನ್ನು ತಿಳಿದವರು ನಿತ್ಯಮರಣರೂಪ ಅಂಧಂತಮಸ್ಸನ್ನೂ ಹೊಂದುವರು. ॥೧೧॥

**ಮೈತ್ರೇಯ ಉವಾಚ**

**ಇತಿ ಪ್ರದರ್ಶ್ಯ ಭಗವಾನುಶತೀಮಾತ್ಮನೋ ಗತಿಮ್ ।**
**ಸ್ವಮಾತ್ರಾ ಬ್ರಹ್ಮವಾದಿನ್ಯಾ ಕಪಿಲೋಽನುಮತೋ ಯಯೌ ॥೧೨॥**

ಭಗವಾನ್=ಕಪಿಲನು ಉಶತೀಂ=ಅಭೀಷ್ಟವಾದ (ಅಪೇಕ್ಷಿತವಾದ) ಆತ್ಮನಃ ಗತಿಂ=ತನ್ನ ಸ್ವರೂಪವನ್ನು ಇತಿ=ಈ ರೀತಿ ಉಪದೇಶದಿಂದ ಪ್ರದರ್ಶ್ಯ=ತೋರಿಸಿ (ತಿಳಿಸಿ) ಸ್ವಮಾತ್ರಾ ಬ್ರಹ್ಮವಾದಿನ್ಯಾ=ಬ್ರಹ್ಮಜ್ಞಾನಿಯಾದ ತನ್ನ ತಾಯಿಯಿಂದ ಅನುಮತಃ=ಆಜ್ಞಪ್ತನಾಗಿ ಯಯೌ=ಹೊರಟು ಹೋದನು. ॥೧೨॥

**ಸಾ ಚಾಪಿ ತನಯೋಕ್ತೇನ ಯೋಗಾದೇಶೇನ ಯೋಗಯುಕ್ ।**
**ತಸ್ಮಿನ್ನಾಶ್ರಮ ಆಸೀನಾ ಸರಸ್ವತ್ಯಾ ಸಮಾಹಿತಾ ॥೧೩॥**

ಸಾ ಅಪಿ=ಆ ದೇವಹುತಿಯಾದರೂ ತನಯೋಕ್ತೇನ=ಮಗನು ಹೇಳಿದ ಯೋಗಾದೇಶೇನ=ಯೋಗೋಪದೇಶದಿಂದ ಯೋಗಯುಕ್=ಭಕ್ತಿ ಮುಂತಾದ ಯೋಗದಿಂದ ಕೂಡಿದವಳಾಗಿ ಸರಸ್ವತ್ಯಾಃ=ಸರಸ್ವತಿ ನದಿಯ ತೀರದಲ್ಲಿರುವ ತಸ್ಮಿನ್ ಆಶ್ರಮೇ=ಆ ಆಶ್ರಮದಲ್ಲಿ ಆಸೀನಾ=ಕುಳಿತು ಸಮಾಹಿತಾ=ಅಸಂಪ್ರಜ್ಞಾತ ಸಮಾಧಿ-ಯುತಳಾದಳು. ॥೧೩॥

ಸ್ನಾನ, ತಪಸ್ಸು, ವೈರಾಗ್ಯ ಮುಂತಾದ ಸಾಧನಗಳನ್ನು ಹೇಳುವ ಮೂಲಕ ಇದನ್ನೇ ವಿವರಿಸುವರು –

**ಅಭೀಕ್ಷ್ಣಾವಗಾಹಕಪಿಶಾನ್ ಜಟಿಲಾನ್ ಕುಟಿಲಾಲಕಾನ್ ।**
**ಆತ್ಮಾನಂ ಚೋಗ್ರತಪಸಾ ಬಿಭ್ರತೀ ಚೀರಿಣಂ ಕೃಶಮ್ ॥೧೪॥**

ಅಭೀಕ್ಷ್ಣಂ=ಮೂರು ಹೊತ್ತು ಅವಗಾಹ=ಸ್ನಾನಮಾಡುವುದರಿಂದ ಕಪಿಶಾನ್=ಕಂದು ಬಣ್ಣವನ್ನು ಹೊಂದಿದ ಜಟಿಲಾನ್=ಜಡೆಗಟ್ಟಿದ ಕುಟಿಲಾಲಕಾನ್=ಸ್ವಾಭಾವಿಕ ಗುಂಗರು ಕೂದಲನ್ನೂ, ಉಗ್ರತಪಸಾ=ಕ್ರೂರವಾದ ತಪಸ್ಸಿನಿಂದ ಕೃಶಂ=ಸೊರಗಿದ ಆತ್ಮಾನಂ=ದೇಹವನ್ನು, ಚೀರಿಣಂ=ಹರಕು ವಸ್ತ್ರವನ್ನು ಧಾರಣ ಮಾಡಿದ (ದೇಹವನ್ನು) ಬಿಭ್ರತೀ ಸತೀ=ಧರಿಸಿದವಳಾಗಿ ॥೧೪॥

**ಪ್ರಜಾಪತೇಃ ಕರ್ದಮಸ್ಯ ತಪೋಯೋಗವಿಜೃಂಭಿತಮ್ ।**
**ಸ್ವಗಾರ್ಹಸ್ಥ್ಯಮನೌಪಮ್ಯಂ ಪ್ರಾರ್ಥ್ಯಂ ವೈಮಾನಿಕೈರಪಿ ॥೧೫॥**

ಪ್ರಜಾಪತೇಃ ಕರ್ದಮಸ್ಯ=ಕರ್ದಮಪ್ರಜೇಶ್ವರರ ತಪೋಯೋಗವಿಜೃಂಭಿತಂ=ತಪಸ್ಸು ಮತ್ತು ಯೋಗಗಳಿಂದ ಅತಿಶಯಿತವಾದ ಅನೌಪಮ್ಯಂ=ಅಸದೃಶವಾದ ವೈಮಾನಿಕೈಃ ಅಪಿ=ದೇವತೆಗಳಿಂದಲೂ ಪ್ರಾರ್ಥ್ಯಂ=ಅಪೇಕ್ಷಣೀಯವಾದ ಸ್ವಗಾರ್ಹಸ್ಥ್ಯಂ=ತನ್ನ ಗೃಹಸ್ಥಾಶ್ರಮವನ್ನು ಹಿತ್ವಾ ಕಿಂಚಿತ್ ಚಕಾರ ಎಂದು ೨೦ನೇ ಶ್ಲೋಕದಿಂದ ಅನ್ವಯ. ॥೧೬॥

ಗಾರ್ಹಸ್ಥ್ಯ ಹೇಗಿತ್ತು ಎಂದು ಹೇಳುವರು –

**ಪಯಃ ಫೇನನಿಭಾಃ ಶಯ್ಯಾ ದಾಂತಾ ರುಕ್ಮಪರಿಚ್ಛದಾಃ ।**
**ಆಸನಾನಿ ಚ ಹೈಮಾನಿ ಸುಸ್ಪರ್ಶಾಸ್ತರಣಾನಿ ಚ ॥೧೬॥**

ಯತ್ರ=ಯಾವಗಾರ್ಹಸ್ಥ್ಯದಲ್ಲಿ ಪಯಃಫೇನನಿಭಾಃ=ಹಾಲಿನ ಬುರುಗಿನಂತೆ ಶುಭ್ರ ಮತ್ತು ಮೃದುವಾದ ಶಯ್ಯಾಃ=ಹಾಸಿಗೆಗಳು ದಾಂತಾಃ= ಆನೆಯದಂತದಿಂದ ನಿರ್ಮಿಸಿದ ರುಕ್ಮಪರಿಚ್ಛದಾಃ=ಬಂಗಾರದ ಸಲಕರಣೆಗಳಿಂದ ಕೂಡಿದ ಮಂಚಗಳು ಹೈಮಾನಿ=ಚಿನ್ನದ ಆಸನಾನಿ=ಪೀಠೋಪಕರಣಗಳು ಸುಸ್ಪರ್ಶಾಸ್ತರಣಾನಿ ಚ=ಸುಖಕರ ಸ್ಪರ್ಶವುಳ್ಳ(ಮೆತ್ತನೆಯ)ರತ್ನಗಂಬಳಿ ಮುಂತಾದವು ಇರುವುವೋ ಎಂದರ್ಥ. ॥೧೬॥

**ಸ್ವಚ್ಛಸ್ಫಟಿಕಕುಡ್ಯೇಷು ಮಹಾಮರಕತೇಷು ಚ ।**
**ರತ್ನದೀಪಾರ್ಚಿಷೋ ಭಾಂತಿ ಲಲನಾರತ್ನಸಂಯುತಾಃ ॥೧೭॥**

ಮಹಾಮರಕತೇಷು=ಉತ್ತಮ ಪಚ್ಚೆಯ ಕುಡ್ಯೇಷು=ಗೋಡೆಗಳಲ್ಲಿ ಸ್ವಚ್ಛ-ಸ್ಫಟಿಕಕುಡ್ಯೇಷು=ಸ್ವಚ್ಛವಾದ ಸ್ಫಟಿಕದ ಗೋಡೆಗಳಲ್ಲಿಯೂ ಲಲನಾರತ್ನಸಂಯುತಾಃ =ಸ್ತ್ರೀ ರತ್ನಗಳ ಕೈಯಲ್ಲಿ ಆಭರಣವಾಗಿರುವ ರತ್ನಗಳಿಂದ ಕೂಡಿದ ರತ್ನ ದೀಪಾರ್ಚಿಷಃ=ರತ್ನಗಳೆಂಬ ದೀಪದ ಕಾಂತಿಯು ಭಾಂತಿ=ಶೋಭಿಸುವವು. ॥೧೭॥

**ಗೃಹೋದ್ಯಾನಂ ಕುಸುಮಿತೈ ರಮ್ಯಂ ಬಹ್ವಮರದ್ರುಮೈಃ ।**
**ಕೂಜದ್ವಿಹಂಗಮಿಥುನಂ ಗಾಯನ್ಮತ್ತಮಧುವ್ರತಮ್ ॥೧೮॥**

ಕುಸುಮಿತೈಃ=ಹೂಗಳನ್ನು ಬಿಟ್ಟ ಬಹ್ವಮರದ್ರುಮೈಃ=ದೇವದಾರುಗಿಡಗಳಿಂದ ರಮ್ಯಂ=ಮನೋಹರವಾದ ಕೂಜದ್ವಿಹಂಗಮಿಥುನಂ=ಧ್ವನಿ ಮಾಡುವ ಪಕ್ಷಿಗಳ ಧ್ವಂದ್ವವುಳ್ಳ ಗಾಯನ್ಮತ್ತಮಧುವ್ರತಂ=ಗಾನ ಮಾಡುವ ಸಂತುಷ್ಟವಾದ ಭ್ರಮರಗಳುಳ್ಳ ಗೃಹೋದ್ಯಾನಂ=ಮನೆ ಮುಂದಿನ ತೋಟವು ಇರುವುದು. ॥೧೮॥

**ಯತ್ರ ಪ್ರವಿಷ್ಟಮಾತ್ಮಾನಂ ವಿಬುಧಾನುಚರಾ ಜಗುಃ ।**
**ವಾಪ್ಯಾಮುತ್ಪಲಗಂಧಿನ್ಯಾಂ ಕರ್ದಮೇನೋಪಪಾಲಿತಂ ॥೧೯॥**

ಯತ್ರ=ಯಾವ ಉದ್ಯಾನದಲ್ಲಿ ಉತ್ಪಲಗಂಧಿನ್ಯಾಂ=ಕಮಲದ ವಾಸನೆಯುಳ್ಳ ವಾಪ್ಯಾಂ=ಭಾವಿಯಲ್ಲಿ ಪ್ರವಿಷ್ಟಂ=ಪ್ರವೇಶಿಸಿದ ಕರ್ದಮೇನಉಪಲಾಲಿತಂ= ಕರ್ದಮರಿಂದ ಆದರಿಸಲ್ಪಟ್ಟ ಆತ್ಮಾನಂ=ತನ್ನನ್ನು ವಿಬುಧಾನುಚರಾ=ಗಂಧರ್ವರು ಜಗುಃ=ಗಾನ ಮಾಡಿದರು. ॥೧೯॥

**ಹಿತ್ವಾ ತದೀಪ್ಸಿತತಮಪ್ಯಾಖಂಡಲಯೋಷಿತಾಂ ।**
**ಕಿಂಚಿಚ್ಚಕಾರ ವದನಂ ಪುತ್ರವಿಶ್ಲೇಷಣಾತುರಾ ॥೨೦॥**

ಆಖಂಡಲಯೋಷಿತಾಂ=ಇಂದ್ರಸ್ತ್ರೀಯರಿಗೂಸಹ ಈಪ್ಸಿತತಮಂ=ಅತ್ಯಂತ ಅಪೇಕ್ಷಣಿಯವಾದ ತತ್=ಗಾರ್ಹಸ್ಥ್ಯವನ್ನು ಹಿತ್ವಾ=ಬಿಟ್ಟು (ಅಭಿಮಾನ ಬಿಟ್ಟು) ಪುತ್ರವಿಶ್ಲೇಷಣಾತುರಾ=ಮಗನ ವಿಯೋಗದಿಂದ ದುಃಖಿತಳಾಗಿ ವದನಂ ಕಿಂಚಿತ್ ಚಕಾರ=ಮುಖವನ್ನು ಸಣ್ಣದಾಗಿಸಿದಳು. ॥೨೦॥

**ವನಂ ಪ್ರವ್ರಜಿತೇ ಪತ್ಯಾವಪತ್ಯವಿರಹಾತುರಾ ।**
**ಜ್ಞಾತತತ್ತ್ವಾಪ್ಯಭೂನ್ನಷ್ಟವತ್ಸಾ ಗೌರಿವ ವತ್ಸಲಾ ॥೨೧॥**

ಪತ್ಯೌ=ಗಂಡನು ವನಂ ಪ್ರವ್ರಜಿತೇ=ವನಕ್ಕೆ ಹೋಗುತ್ತಿರಲು ಜ್ಞಾತತತ್ತ್ವಾಪಿ= ತತ್ತ್ವ ತಿಳಿದಳಾದರೂ ನಷ್ಟವತ್ಸಾ=ಕರುವನ್ನು ಕಳೆದುಕೊಂಡ ವತ್ಸಲಾ ಗೌರಿವ= ಕರುವಿನ ಮೇಲೆ ಪ್ರೀತಿ ಇರುವ ಹಸುವಿನಂತೆ ಅಪತ್ಯವಿರಹಾತುರಾ ಅಭೂತ್= ಮಗನ ವಿಯೋಗದಿಂದ ದುಃಖಿತಳಾದಳು. ॥೨೧॥

**ತಮೇವ ಧ್ಯಾಯತೀ ದೇವಮಪತ್ಯಂ ಕಪಿಲಂ ಹರಿಮ್ ।**
**ಬಭೂವಾವಿರತೋತ್ಸಾಹಾ ನಿಃಸ್ಪೃಹಾ ತಾದೃಶೇ ಗೃಹೇ ॥೨೨॥**

ಅಪತ್ಯಂ=ಮಗನಾಗಿ ಅವತರಿಸಿದ ದೇವಂ=ಪ್ರಕಾಶಮಾನನಾದ ಕಪಿಲಂ ಹರಿಂ=ಕಪಿಲನಾಮಕ ಶ್ರೀಹರಿಯನ್ನು ಧ್ಯಾಯತೀ=ಧ್ಯಾನಮಾಡುತ್ತ ತಾದೃಶೇ ಗೃಹೇ=ಹಿಂದೆ ವರ್ಣಿಸಿದ ಮನೆಯಲ್ಲಿ ನಿಸ್ಪೃಹಾ=ಆಸೆಯಿಲ್ಲದವಳು, ವಿರತೋ- ತ್ಸಾಹಾ ಬಭೂವ=ಅತ್ಯಂತ ಉತ್ಸಾಹ ರಹಿತಳಾದಳು, ಅಥವಾ ಅವಿರತೋತ್ಸಾಹಾ ಬಭೂವ ಧ್ಯಾನದಲ್ಲಿ ನಿರಂತರ ಉತ್ಸಾಹ ಭರಿತಳಾದಳು, ಹೀಗೂ ಅರ್ಥ ಮಾಡಬಹುದು. ॥೨೨॥

**ಧ್ಯಾಯತೀ ಭಗವದ್ರೂಪಂ ಯದಾಹ ಧ್ಯಾನಗೋಚರಮ್ ।**
**ಸುತಂ ಪ್ರಸನ್ನವದನಂ ಸಮಸ್ತವ್ಯಸ್ತಚಿಂತಯಾ ॥೨೩॥**

ಯದಾಹ=ಭದವಂತನು ಉಪದೇಶಿಸಿದಂತೆ,ದೇವಹೂತಿಯು ಸಮಸ್ತವ್ಯಸ್ತ-ಚಿಂತಯಾ=ಸಂಕುಚಿತಧ್ಯಾನ, ವಿಸ್ತೃತಧಾನ್ಯಗಳಿಂದ ಅಥವಾ ಏಕೈಕಾವಯವ ಧ್ಯಾನದಿಂದ ಮತ್ತು ಎಲ್ಲ ಅವಯವಧ್ಯಾನದಿಂದಲೂ ಧ್ಯಾನಗೋಚರಂ= ಧ್ಯಾನವಿಷಯನಾದ ಪ್ರಸನ್ನವದನಂ ಸಂತುಷ್ಟಮುಖವುಳ್ಳ ಸುತಂ=ಮಗನನ್ನು ಭಗವದ್ರೂಪಂ ಧ್ಯಾಯತೀ=ಶ್ರೀಹರಿಯ ರೂಪವನ್ನು ಧ್ಯಾನಿಸುತ್ತಾ ॥೨೩॥

**ಭಕ್ತಿಪ್ರವಾಹಯೋಗೇನ ವೈರಾಗ್ಯೇಣ ಬಲೀಯಸಾ ।**
**ಯುಕ್ತಾನುಷ್ಠಾನಜಾತೇನ ಜ್ಞಾನೇನ ಬ್ರಹ್ಮಹೇತುನಾ ॥೨೪॥**

ಭಕ್ತಿಪ್ರವಾಹಯೋಗೇನ=ಮಾಹ್ಯಾತ್ಮಜ್ಞಾನಪೂರ್ವಕ ನಿರತಿಶಯ ಪ್ರೇಮರೂಪ ಭಕ್ತಿರೂಪ ಉಪಾಯದಿಂದ ಬಲೀಯಸಾ ವೈರಾಗ್ಯೇಣ=ದೃಢವಾದ ವೈರಾಗ್ಯದಿಂದ ಯುಕ್ತಾನುಷ್ಠಾನಜಾತೇನ=ಮಾಡಿದ ಅಖಂಡಧ್ಯಾನದಿಂದುಂಟಾದ ಬ್ರಹ್ಮಹೇತುನಾ =ಶ್ರೀಹರಿಪ್ರಸಾದದಿಂದುಂಟಾದ ಬ್ರಹ್ಮಹೇತುನಾ=ಬ್ರಹ್ಮನ ವಶೀಕರಣಕ್ಕೆ ಆಯುಧ-ದಂತಿರುವ ಜ್ಞಾನೇನ=ಇದಂ ಇತ್ಥಂ ಎಂಬ ನಿಶ್ಚಯಾತ್ಮಕಜ್ಞಾನರೂಪ ನಿಮಿತ್ತದಿಂದ ॥೨೪॥

**ವಿಶುದ್ಧೇನ ತದಾತ್ಮಾನಮಾತ್ಮನಾ ವಿಶ್ವತೋಮುಖಂ ।**
**ಸ್ವಾನುಭೂತ್ಯಾ ತಿರೋಭೂತಮಾಯಾಗುಣವಿಶೇಷಣಂ ॥೨೫॥**

ವಿಶುದ್ಧೇನ=ಏಕಾಗ್ರವಾದ ಆತ್ಮನಾ=ಮನಸ್ಸಿನಿಂದ ಆತ್ಮಾನಂ=ತನ್ನ ಬಿಂಬವಾದ ವಿಶ್ವತೋಮುಖಂ=ಸರ್ವತ್ರವ್ಯಾಪ್ತವಾದ ಸ್ವಾನುಭೂತ್ಯಾ=ತನ್ನ ಸ್ವರೂಪಪ್ರಜ್ಞೆ-ಯಿಂದ, ತಿರೋಭೂತ=ದೂರಿಕರಿಸಿದ ಮಾಯಾಗುಣವಿಶೇಷಣಂ=ಪ್ರಕೃತಿಗುಣ-ಗಳಾದ ಸತ್ವಾದಿಗುಣನಿರ್ಮಿತ ದೇಹಬಂಧಾದಿರೂಪ ಕಾರ್ಯವುಳ್ಳ ಪ್ರಾಕೃತ-ದೇಹರಹಿತವಾದ ಭಗವದ್ರೂಪವನ್ನು ॥೨೫॥

**ಬ್ರಹ್ಮಣ್ಯವಸ್ಥಿತಮತಿರ್ಭಗವತ್ಯಾತ್ಮಸಂಶ್ರಯೇ ।**
**ನಿವೃತ್ತಜೀವೋಪಾಧಿತ್ವಾತ್ ವೀತಕ್ಲೇಶಾಪ್ತನಿರ್ವೃತಿಃ ॥೨೬॥**

**ನಿತ್ಯರೂಢಸಮಾಧಿತ್ವಾತ್ ಪರಾವೃತಗುಣಭ್ರಮಾ ।**
**ನ ಸಸ್ಮಾರ ತದಾತ್ಮಾನಂ ಸ್ವಪ್ನದೃಷ್ಟಮಿವೋತ್ಥಿತಃ ॥೨೭॥**

ಹಿಂದಿನ ಶ್ಲೋಕದಲ್ಲಿ ಹೇಳಿದ ಭಗವದ್ರೂಪನಾದ ಮಗನನ್ನು ಧ್ಯಾಯತೀ= ಅಪರೋಕ್ಷವಾಗಿ ನೋಡುವಳಾಗಿ ಆತ್ಮಸಂಶ್ರಯೇ=ತನ್ನಲ್ಲಿರುವ ಭಗವತಿ ಬ್ರಹ್ಮಣಿ= ಷಡ್ಗುಣಸಂಪನ್ನ ಶ್ರೀಹರಿಯಲ್ಲಿ ಅವಸ್ಥಿತಮತಿಃ=ನೆಲೆಸಿರುವ ಮನಸ್ಸುಳವಳಾದಾಗ

ಉತ್ಥಿತಃ=ಜಾಗ್ರದವಸ್ಥೆಯನ್ನು ಪಡೆದವನು ಸ್ವಪ್ನದೃಷ್ಟಂ ಇವ=ಕನಸಿನಲ್ಲಿ ಕಂಡ ದೇಹವನ್ನು ಸ್ಮರಿಸದಿರುವಂತೆ ನಿವೃತ್ತಜೀವೋಪಾಧಿತ್ವಾತ್=ಅಭಿಮಾನವಿಲ್ಲದಿರು-ವುದರಿಂದ, ದಗ್ಧಪಟದಂತೆ ಅಕಿಂಚಿತ್ಕರವಾದ್ದರಿಂದ ನಿವೃತ್ತವೆನಿಸುವ ಲಿಂಗದೇಹವುಳ್ಳವಳಾದ್ದರಿಂದ ನಿತ್ಯರೂಢಸಮಾಧಿತ್ವಾತ್=ಲಬ್ಧಪ್ರತಿಷ್ಠವಾದ ಸಮಾಧಿ ಉಳ್ಳವಳಾ-ದ್ದರಿಂದ ಪರಾವೃತ್ತಗುಣಭ್ರಮಾ=ವಿಷಯಗಳಲ್ಲಿ ಸುಖಸಾಧನತ್ವಭ್ರಮ ಕಳೆದು-ಕೊಂಡವಳಾಗಿ ಆತ್ಮಾನಂ=ದೇಹವನ್ನು ನ ಸಸ್ಮಾರ=ತಿಳಿಯಲಿಲ್ಲ. ಅಸಂಪ್ರಜ್ಞಾತ ಸಮಾಧಿಸ್ಥಳಾದಳೆಂದರ್ಥ.

ಇಲ್ಲಿ ಜೀವನ ಬಾಹ್ಯೋಪಾಧಿಯಾದ ಲಿಂಗದೇಹ ಮುಂತಾದವು ಸಂಪೂರ್ಣ ಹೋಗಿವೆ ಎಂದು ಹೇಳಿದಂತೆ ಕಾಣುವುದು ಕಾರಣ ಪ್ರಮಾಣದಿಂದ ತಾತ್ಪರ್ಯ ಹೇಳುವರು –

**ಜೀವೋಪಾಧಿಪ್ರಭೃತಯಃ ಆಮುಕ್ತೇಃ ಸರ್ವದೇಹಿನಾಂ ।**
**ನಿಯಮಾತ್ ಸಂತ್ಯಭಾವಸ್ತು ನಿಷ್ಫಲತ್ವಾತ್ ಉದೀರ್ಯತೇ ।ಇತಿ ವರಾಹೇ**

ಜೀವನ ಬಾಹ್ಯೋಪಾಧಿಗಳಾದ ಲಿಂಗದೇಹ, ಕಾಮ-ಕರ್ಮಾದಿಗಳು ಎಲ್ಲ ಜೀವರಿಗೆ, ಲಿಂಗದೇಹಭಂಗರೂಪ ಮುಕ್ತಿ ಆಗುವವರೆಗೆ ಇದ್ದೇ ಇರುವುವು. ಫಲವಿಲ್ಲದಿರುವುದರಿಂದ (ಕಾರ್ಯಕಾರಿ ಆಗದ್ದರಿಂದ) ಇಲ್ಲವೆಂದು ಹೇಳಲ್ಪಡುವುವು ಎಂದು ವರಾಹದಲ್ಲಿದೆ. ॥೨೬॥

**ತದ್ದೇಹಃ ಪರತಃ ಪೋಷ್ಯೋಽಪ್ಯಕೃಶಶ್ಚಾಧ್ಯಸಂಭವಾತ್ ।**
**ಬಭೌ ಮಲೈರವಚ್ಛನ್ನಃ ಸಧೂಮ ಇವ ಪಾವಕಃ ॥೨೮॥**

ಪರತಃ ಪೋಷ್ಯಃ=ದಾಸಿಯರಿಂದ ಪೋಷಿಸಬೇಕಾದ ತದ್ದೇಹಃ=ದೇವ-ಹೂತಿಯ ದೇಹವು ಅವರಿಲ್ಲದ್ದರಿಂದ ಮಲೈಃ ಅವಚ್ಛನ್ನಃ=ಕೊಳೆಯಿಂದ ಕೂಡಿ ಸಧೂಮಃ ಪಾವಕಃ ಇವ=ಹೊಗೆಯಿಂದ ಕೂಡಿದ ಅಗ್ನಿಯಂತೆ ಬಭೌ=ಶೋಭಿಸಿತು ಆಧ್ಯಸಂಭವಾತ್=ಶರೀರಕೃಶವಾಗಲು ಕಾರಣವಾದ ಮಾನಸಿಕ ವ್ಯಥೆ ಇಲ್ಲದ್ದರಿಂದ ಅಕೃಶಃ ಚ=ಸೊರಗಿರಲಿಲ್ಲ 'ಅಕೃತ' ಎಂಬ ಪಾಠವಿದ್ದಾಗ ಅಭ್ಯಂಗ ಮುಂತಾದ ಸಂಸ್ಕಾರವಿಲ್ಲದ ಎಂದರ್ಥ. ॥ ೨೮॥

**ಸ್ವಾಂಗಂ ತಪೋಯೋಗಮಯಂ ಮುಕ್ತಕೇಶಂ ಗತಾಂಬರಂ ।**
**ದೈವಗುಪ್ತಂ ನ ಬುಬುಧೇ ವಾಸುದೇವಪ್ರವಿಷ್ಟಧೀಃ ॥೨೯॥**

ತಪೋಯೋಗಮಯಂ=ಬಹಳ ತಪಸ್ಸು ಭಕ್ತಿಯೋಗದಿಂದ ಯುಕ್ತವಾದ ಮುಕ್ತಕೇಶಂ=ಹರವಿದ ಕೂದಲಗಳುಳ್ಳ ಗತಾಂಬರಂ=ವಸ್ತ್ರವಿಲ್ಲದ ದೈವಗುಪ್ತಂ= ಶ್ರೀಹರಿಯಿಂದ ರಕ್ಷಿತವಾದ ಸ್ವಾಂಗಂ=ತನ್ನ ದೇಹವನ್ನು ವಾಸುದೇವಪ್ರವಿಷ್ಟಧೀಃ= ಶ್ರೀಹರಿಯಲ್ಲಿ ಆಸಕ್ತವಾದ ಮನಸ್ಸುಳ್ಳವಳಾಗಿ ನ ಬುಭುಧೇ=ತಿಳಿಯಲಿಲ್ಲ. ॥೨೯॥

**ಏವಂ ಸಾ ಕಪಿಲೋಕ್ತೇನ ಮಾರ್ಗೇಣಾವಿರತಂ ಪರಂ ।**
**ಆತ್ಮಾನಂ ಬ್ರಹ್ಮ ನಿರ್ವಾಣಂ ಭಗವಂತಮವಾಪ ಹ ॥೩೦॥**

ಏವಂ=ಈ ರೀತಿಯಾಗಿ ಸಾ=ದೇವಹೂತಿಯು ಕಪಿಲೋಕ್ತೇನ ಮಾರ್ಗೇಣ= ಕಪಿಲನಿಂದ ಉಪದಿಷ್ಟವಾದ ಮಾರ್ಗದಿಂದ ಅವಿರತಂ=ಅಪರಿಚ್ಛನ್ನನಾದ ಪರಂ= ಸರ್ವೋತ್ತಮನಾದ ಆತ್ಮಾನಂ=ಸರ್ವಾಂತರ್ಯಾಮಿಯಾದ ನಿರ್ವಾಣಂ= ಪ್ರಾಕೃತದೇಹರಹಿತನಾದ ಬ್ರಹ್ಮ=ಪೂರ್ಣನಾದ ಭಗವಂತಂ ಶ್ರೀಹರಿಯನ್ನು ಅವಾಪ ಹ= ಹೊಂದಿದಳಷ್ಟೇ ! ॥೩೦॥

**ತದ್ ವೀರಾಸೀತ್ ಪುಣ್ಯತಮಂ ಕ್ಷೇತ್ರಂ ತ್ರೈಲೋಕ್ಯವಿಶ್ರುತಮ್ ।**
**ನಾಮ್ನಾ ಸಿದ್ಧಪದಂ ಯತ್ರ ಸಾ ಸಂಸಿದ್ಧಮುಪೇಯುಷೀ ॥೩೧॥**

ಹೇ ವೀರ=ಎಲೋ ವಿದುರನೇ ತದ್ ಪುಣ್ಯತಮಂ ಕ್ಷೇತ್ರಂ=ಹಿಂದೆ ಶುಕ್ಲನಾಮಕ ಶ್ರೀಹರಿಯ ಕಣ್ಣೀರಿನ (ಆನಂದಬಾಷ್ಪ) ಬಿಂದು ಬಿದ್ದುದರಿಂದ ಬಿಂದುಸರೋವರವೆನಿಸಿದ ಆ ಪುಣ್ಯಸ್ಥಳವು ಯತ್ರ=ಎಲ್ಲಿಯೋ ಅಲ್ಲಿ ಸಾ= ದೇವಹೂತಿಯು ಸಿದ್ಧಿ=ತಪಃಸಿದ್ಧಿಯನ್ನು ಉಪೇಯುಷೀ=ಹೊಂದಿದಳು. ಕಾರಣ ನಾಮ್ನಾ=ಹೆಸರಿನಿಂದ ಸಿದ್ಧಪದಂ=ಸಿದ್ಧಿಗೆ ಕಾರಣವಾದ್ದರಿಂದ ಸಿದ್ಧಪದವೆಂದು ತ್ರೈಲೋಕ್ಯವಿಶ್ರುತಂ ಆಸೀತ್=ಮೂರು ಲೋಕದಲ್ಲಿಯು ಪ್ರಸಿದ್ಧವಾಯಿತು (ಸಿದ್ಧಪೂರ ಮಾತೃಗಯಾ ಎಂದು ಈಗ) ॥೩೧॥

**ತಸ್ಯಾಸ್ತದ್ ಯೋಗವಿಧುತಮಾಶು ಮರ್ತ್ಯಮಭೂತ್ ಸರಿತ್ ।**
**ಸ್ರೋತಸಾಂ ಪ್ರವರಾ ಸೌಮ್ಯ ಸಿದ್ಧಿದಾ ಸಿದ್ಧಸೇವಿತಾ ॥೩೨॥**

ತಸ್ಯಾಃ=ದೇವಹೂತಿಯ ಯೋಗವಿಧುತಂ=ಯೋಗಸಾಮರ್ಥ್ಯದಿಂದ ಬಿಡಲ್ಪಟ್ಟ ತತ್ ಮರ್ತ್ಯಂ=ಆ ಶರೀರವು ಆಶು=ಬೇಗನೆ ಸಿದ್ದಿದಾ=ಸಿದ್ಧಿಪ್ರದವಾದ ಸಿದ್ಧಸೇವಿತಾ= ಸಿದ್ಧರಿಂದ ಸೇವಿಸಲ್ಪಡುವ ಸ್ರೋತಸಾಂ ಪ್ರವರಾ=ನದಿಗಳಿಗೆ ಶ್ರೇಷ್ಠವಾದ ಸರಿತ್ ಆಸೀತ್=ನದಿಯಾಗಿ ಪರಿಣಮಿಸಿತು. ॥೩೨॥

**ಕಪಿಲೋಽಪಿ ಮಾಹಯೋಗೀ ಭಗವಾನ್ ಪಿತುರಾಶ್ರಮಾತ್ ।**
**ಮಾತರಂ ಸಮನುಜ್ಞಾಪ್ಯ ಪ್ರಾಗುದೀಚಿಂ ದಿಶಂ ಯಯೌ ॥೩೩॥**

ಮಹಾಯೋಗೀ=ಯೋಗೇಶ್ವರನಾದ ಭಗವಾನ್ ಕಪಿಲಃ ಅಪಿ=ಐಶ್ವರ್ಯಶಾಲಿಯಾದ ಕಪಿಲ ಪರಮಾತ್ಮನೂ ಸಹ ಪಿತುರಾಶ್ರಮಾತ್=ತಂದೆಯ ಆಶ್ರಮದಿಂದ ಮಾತರಂ=ತಾಯಿಯನ್ನು ಸಮನುಜ್ಞಾಪ್ಯ=ಹೋಗಿಬರುವೆನೆಂದು ತಿಳಿಸಿ ಪ್ರಾಗುದೀಚಿಂ ದಿಶಂ=ಈಶಾನ ದಿಕ್ಕಿಗೆ ಯಯೌ=ಹೋದನು. ॥೩೩॥

**ಸಿದ್ಧಚಾರಣಗಂಧರ್ವೈಮುನಿಭಿಶ್ಚಾಪ್ಸರೋಗಣೈಃ ।**
**ಸ್ತೂಯಮಾನಃ ಸಮುದ್ರೇಣ ದತ್ತಾರ್ಹಣನಿಕೇತನಃ ॥೩೪॥**

ಸಿದ್ಧಚಾರಣಗಂಧರ್ವೈಃ=ಸಿದ್ಧರು, ಚಾರಣರು, ಗಂಧರ್ವರುಗಳಿಂದ ಚ= ಮತ್ತು ಮುನಿಭಿಃ=ಮುನಿಗಳಿಂದ ಅಪ್ಸರೋಗಣೈಃ=ಅಪ್ಸರಾಸ್ತ್ರೀಯರ ಸಮೂಹದಿಂದಲೂ ಸ್ತೂಯಮಾನಃ=ಸ್ತೋತ್ರ ಮಾಡಿಸಿಕೊಳ್ಳುತ್ತ ಸಮುದ್ರೇಣ=ಸಮುದ್ರರಾಜನಿಂದ ದತ್ತಾರ್ಹಣನಿಕೇತನಃ=ಕೊಡಲ್ಪಟ್ಟ ಪೂಜಾ ಹಾಗು ನಿವಾಸಸ್ಥಾನವುಳ್ಳವನಾಗಿ ॥೩೪॥

**ಆಸ್ತೇ ಯೋಗಂ ಸಮಾಖ್ಯಾಯ ಸಾಂಖ್ಯಾಚಾರ್ಯೈರಭಿಷ್ಟುತಃ ।**
**ತ್ರಯಾಣಾಮಪಿ ಲೋಕಾನಾಮುಪಶಾಂತ್ಯೈ ಸಮಾಹಿತಃ ॥೩೫॥**

ತ್ರಯಾಣಾಂಅಪಿ ಲೋಕಾನಾಂ= ಮೂರುಲೋಕಗಳಿಗೂ ಉಪಶಾಂತ್ಯೈ= ಮಂಗಲಕ್ಕಾಗಿ ಸಮಾಹಿತಃ=ಸ್ವಸ್ಥಚಿತ್ತನಾಗಿ ಸಾಂಖ್ಯಾಚಾರ್ಯೈಃ=ಯಥಾರ್ಥ ಜ್ಞಾನೋಪದೇಶಕರಾದ ಸನಕಾದಿಗಳಿಂದ ಅಭಿಷ್ಟುತಃ=ಸ್ತುತನಾಗಿ ಯೋಗಂ= ಧ್ಯಾನಪ್ರಾಣಾಯಾಮಾದಿಗಳನ್ನು ಸಮಾಖ್ಯಾಯ= ಹೇಳಿ ಆಸ್ತೇ=ಇರುವನು.

**ಮೈತ್ರೇಯ ಉವಾಚ**

**ಏತನ್ನಿಗದಿತಂ ತಾತ ಯತ್ ಪೃಷ್ಟೋಽಹಂ ತವಾನಘ ।**
**ಕಪಿಲಸ್ಯ ಚ ಸಂವಾದೋ ದೇವಹೂತ್ಯಾಶ್ಚ ಪಾವನಃ ॥೩೬॥**

ಹೇ ತಾತ ಅನಘ=ಪಾಪರಹಿತನಾದ ವಿದುರನೇ ಯತ್ತ್ವಯಾ ಪೃಷ್ಟಃ ಅಹಂ= ನಾನು ನಿನ್ನಿಂದ ಏನು ಪ್ರಶ್ನಿಸಲ್ಪಟ್ಟನೋ ಏತತ್=ಆ ಈ ಕಪಿಲಸ್ಯ=ಕಪಿಲಪರಮಾತ್ಮನ ಚ=ಮತ್ತು ದೇವಹೂತ್ಯಾಃ=ದೇವಹೂತಿಯ ಪಾವನಃ=ಪವಿತ್ರವಾದ ಸಂವಾದಃ= ಪ್ರಶ್ನೋತ್ತರ ರೂಪವಾದ ಸಂವಾದವು ನಿಗದಿತಂ=ನನ್ನಿಂದ ಹೇಳಲ್ಪಟ್ಟಿತು. ॥೩೬॥

ತಪೋಯೋಗಮಯಂ=ಬಹಳ ತಪಸ್ಸು ಭಕ್ತಿಯೋಗದಿಂದ ಯುಕ್ತವಾದ ಮುಕ್ತಕೇಶಂ=ಹರವಿದ ಕೂದಲಗಳುಳ್ಳ ಗತಾಂಬರಂ=ವಸ್ತ್ರವಿಲ್ಲದ ದೈವಗುಪ್ತಂ= ಶ್ರೀಹರಿಯಿಂದ ರಕ್ಷಿತವಾದ ಸ್ವಾಂಗಂ=ತನ್ನ ದೇಹವನ್ನು ವಾಸುದೇವಪ್ರವಿಷ್ಟಧೀಃ= ಶ್ರೀಹರಿಯಲ್ಲಿ ಆಸಕ್ತವಾದ ಮನಸ್ಸುಳ್ಳವಳಾಗಿ ನ ಬುಭುಧೇ=ತಿಳಿಯಲಿಲ್ಲ. ॥೨೯॥

**ಏವಂ ಸಾ ಕಪಿಲೋಕ್ತೇನ ಮಾರ್ಗೇಣಾವಿರತಂ ಪರಂ ।**
**ಆತ್ಮಾನಂ ಬ್ರಹ್ಮ ನಿರ್ವಾಣಂ ಭಗವಂತಮವಾಪ ಹ ॥೩೦॥**

ಏವಂ=ಈ ರೀತಿಯಾಗಿ ಸಾ=ದೇವಹೂತಿಯು ಕಪಿಲೋಕ್ತೇನ ಮಾರ್ಗೇಣ= ಕಪಿಲನಿಂದ ಉಪದಿಷ್ಟವಾದ ಮಾರ್ಗದಿಂದ ಅವಿರತಂ=ಅಪರಿಚ್ಛಿನ್ನನಾದ ಪರಂ= ಸರ್ವೋತ್ತಮನಾದ ಆತ್ಮಾನಂ=ಸರ್ವಾಂತರ್ಯಾಮಿಯಾದ ನಿರ್ವಾಣಂ= ಪ್ರಾಕೃತದೇಹರಹಿತನಾದ ಬ್ರಹ್ಮ=ಪೂರ್ಣನಾದ ಭಗವಂತಂ ಶ್ರೀಹರಿಯನ್ನು ಅವಾಪ ಹ= ಹೊಂದಿದಳಷ್ಟೇ ! ॥೩೦॥

**ತದ್ ವೀರಾಸೀತ್ ಪುಣ್ಯತಮಂ ಕ್ಷೇತ್ರಂ ತ್ರೈಲೋಕ್ಯವಿಶ್ರುತಮ್ ।**
**ನಾಮ್ನಾ ಸಿದ್ಧಪದಂ ಯತ್ರ ಸಾ ಸಂಸಿದ್ಧಮುಪೇಯುಷೀ ॥೩೧॥**

ಹೇ ವೀರ=ಎಲೋ ವಿದುರನೇ ತದ್ ಪುಣ್ಯತಮಂ ಕ್ಷೇತ್ರಂ=ಹಿಂದೆ ಶುಕ್ಲನಾಮಕ ಶ್ರೀಹರಿಯ ಕಣ್ಣೀರಿನ (ಆನಂದಬಾಷ್ಪ) ಬಿಂದು ಬಿದ್ದುದರಿಂದ ಬಿಂದುಸರೋವರವೆನಿಸಿದ ಆ ಪುಣ್ಯಸ್ಥಳವು ಯತ್ರ=ಎಲ್ಲಿಯೋ ಅಲ್ಲಿ ಸಾ= ದೇವಹೂತಿಯು ಸಿದ್ಧಿ=ತಪಃಸಿದ್ಧಿಯನ್ನು ಉಪೇಯುಷೀ=ಹೊಂದಿದಳು. ಕಾರಣ ನಾಮ್ನಾ=ಹೆಸರಿನಿಂದ ಸಿದ್ಧಪದಂ=ಸಿದ್ಧಿಗೆ ಕಾರಣವಾದ್ದರಿಂದ ಸಿದ್ಧಪದವೆಂದು ತ್ರೈಲೋಕ್ಯವಿಶ್ರುತಂ ಆಸೀತ್=ಮೂರು ಲೋಕದಲ್ಲಿಯು ಪ್ರಸಿದ್ಧವಾಯಿತು (ಸಿದ್ಧಪೂರ ಮಾತೃಗಯಾ ಎಂದು ಈಗ) ॥೩೧॥

**ತಸ್ಯಾಸ್ತದ್ ಯೋಗವಿಧುತಮಾಶು ಮರ್ತ್ಯಮಭೂತ್ ಸರಿತ್ ।**
**ಸ್ರೋತಸಾಂ ಪ್ರವರಾ ಸೌಮ್ಯ ಸಿದ್ಧಿದಾ ಸಿದ್ಧಸೇವಿತಾ ॥೩೨॥**

ತಸ್ಯಾಃ=ದೇವಹೂತಿಯ ಯೋಗವಿಧುತಂ=ಯೋಗಸಾಮರ್ಥ್ಯದಿಂದ ಬಿಡಲ್ಪಟ್ಟ ತತ್ ಮರ್ತ್ಯಂ=ಆ ಶರೀರವು ಆಶು=ಬೇಗನೆ ಸಿದ್ಧಿದಾ=ಸಿದ್ಧಿಪ್ರದವಾದ ಸಿದ್ಧಸೇವಿತಾ= ಸಿದ್ಧರಿಂದ ಸೇವಿಸಲ್ಪಡುವ ಸ್ರೋತಸಾಂ ಪ್ರವರಾ=ನದಿಗಳಿಗೆ ಶ್ರೇಷ್ಠವಾದ ಸರಿತ್ ಆಸೀತ್=ನದಿಯಾಗಿ ಪರಿಣಮಿಸಿತು. ॥೩೨॥

**ಕಪಿಲೋಽಪಿ ಮಾಹಯೋಗೀ ಭಗವಾನ್ ಪಿತುರಾಶ್ರಮಾತ್ ।**
**ಮಾತರಂ ಸಮನುಜ್ಞಾಪ್ಯ ಪ್ರಾಗುದೀಚಿಂ ದಿಶಂ ಯಯೌ ॥೩೩॥**

ಮಹಾಯೋಗೀ=ಯೋಗೇಶ್ವರನಾದ ಭಗವಾನ್ ಕಪಿಲಃ ಅಪಿ=ಐಶ್ವರ್ಯಶಾಲಿಯಾದ ಕಪಿಲ ಪರಮಾತ್ಮನೂ ಸಹ ಪಿತುರಾಶ್ರಮಾತ್=ತಂದೆಯ ಆಶ್ರಮದಿಂದ ಮಾತರಂ=ತಾಯಿಯನ್ನು ಸಮನುಜ್ಞಾಪ್ಯ=ಹೋಗಿಬರುವೆನೆಂದು ತಿಳಿಸಿ ಪ್ರಾಗುದೀಚಿಂ ದಿಶಂ=ಈಶಾನ ದಿಕ್ಕಿಗೆ ಯಯೌ=ಹೋದನು. ॥೩೩॥

**ಸಿದ್ಧಚಾರಣಗಂಧರ್ವೈಮುನಿಭಿಶ್ಚಾಪ್ಸರೋಗಣೈಃ ।**
**ಸ್ತೂಯಮಾನಃ ಸಮುದ್ರೇಣ ದತ್ತಾರ್ಹಣನಿಕೇತನಃ ॥೩೪॥**

ಸಿದ್ಧಚಾರಣಗಂಧರ್ವೈಃ=ಸಿದ್ಧರು, ಚಾರಣರು, ಗಂಧರ್ವರುಗಳಿಂದ ಚ= ಮತ್ತು ಮುನಿಭಿಃ=ಮುನಿಗಳಿಂದ ಅಪ್ಸರೋಗಣೈಃ=ಅಪ್ಸರಾಸ್ತ್ರೀಯರ ಸಮೂಹದಿಂದಲೂ ಸ್ತೂಯಮಾನಃ=ಸ್ತೋತ್ರ ಮಾಡಿಸಿಕೊಳ್ಳುತ್ತ ಸಮುದ್ರೇಣ=ಸಮುದ್ರರಾಜನಿಂದ ದತ್ತಾರ್ಹಣನಿಕೇತನಃ=ಕೊಡಲ್ಪಟ್ಟ ಪೂಜಾ ಹಾಗು ನಿವಾಸಸ್ಥಾನವುಳ್ಳವನಾಗಿ ॥೩೮॥

**ಆಸ್ತೇ ಯೋಗಂ ಸಮಾಖ್ಯಾಯ ಸಾಂಖ್ಯಾಚಾರ್ಯೈರಭಿಷ್ಟುತಃ ।**
**ತ್ರಯಾಣಾಮಪಿ ಲೋಕಾನಾಮುಪಶಾಂತ್ಯೈ ಸಮಾಹಿತಃ ॥೩೫॥**

ತ್ರಯಾಣಾಂಅಪಿ ಲೋಕಾನಾಂ= ಮೂರುಲೋಕಗಳಿಗೂ ಉಪಶಾಂತ್ಯೈ= ಮಂಗಲಕ್ಕಾಗಿ ಸಮಾಹಿತಃ=ಸ್ವಸ್ಥಚಿತ್ತನಾಗಿ ಸಾಂಖ್ಯಾಚಾರ್ಯೈಃ=ಯಥಾರ್ಥಜ್ಞಾನೋಪದೇಶಕರಾದ ಸನಕಾದಿಗಳಿಂದ ಅಭಿಷ್ಟುತಃ=ಸ್ತುತನಾಗಿ ಯೋಗಂ= ಧ್ಯಾನಪ್ರಾಣಾಯಾಮಾದಿಗಳನ್ನು ಸಮಾಖ್ಯಾಯ= ಹೇಳಿ ಆಸ್ತೇ=ಇರುವನು.

**ಮೈತ್ರೇಯ ಉವಾಚ**

**ಏತನ್ನಿಗದಿತಂ ತಾತ ಯತ್ ಪೃಷ್ಟೋಽಹಂ ತವಾನಘ ।**
**ಕಪಿಲಸ್ಯ ಚ ಸಂವಾದೋ ದೇವಹೂತ್ಯಾಶ್ಚ ಪಾವನಃ ॥೩೬॥**

ಹೇ ತಾತ ಅನಘ=ಪಾಪರಹಿತನಾದ ವಿದುರನೇ ಯತ್ತ್ವಯಾ ಪೃಷ್ಟಃ ಅಹಂ= ನಾನು ನಿನ್ನಿಂದ ಏನು ಪ್ರಶ್ನಿಸಲ್ಪಟ್ಟನೋ ಏತತ್=ಆ ಈ ಕಪಿಲಸ್ಯ=ಕಪಿಲಪರಮಾತ್ಮನ ಚ=ಮತ್ತು ದೇವಹೂತ್ಯಾಃ=ದೇವಹೂತಿಯ ಪಾವನಃ=ಪವಿತ್ರವಾದ ಸಂವಾದಃ= ಪ್ರಶ್ನೋತ್ತರ ರೂಪವಾದ ಸಂವಾದವು ನಿಗದಿತಂ=ನನ್ನಿಂದ ಹೇಳಲ್ಪಟ್ಟಿತು. ॥೩೬॥

**ಯ ಇದಮನುಶ್ರುಣೋತಿ ಯೋಽಭಿಧತ್ತೇ**
**ಕಪಿಲಮುನೇರ್ಮತಮಾತ್ಮಯೋಗಗುಹ್ಯಂ ।**
**ಭಗವತಿ ಕೃತಧೀಃ ಸುಪರ್ಣಕೇತಾ-**
**ವುಪಲಭತೇ ಭಗವತ್ಪದಾರವಿಂದಮ್ ॥೩೭॥**

ಯಃ=ಯಾರು ಇದಂ=ಈ ಸಂವಾದವನ್ನು ಅನುಶ್ರುಣೋತಿ=ವಿಧಾನ-ಪೂರ್ವಕವಾಗಿ ಕೇಳುವನು ಯಃ=ಯಾವನು ಕಪಿಲಮುನೇಃ=ಕಪಿಲನಾಮಕ ಭಗವಂತನ ಮತಂ=ಸಿದ್ಧಾಂತವನ್ನು (ಸಮ್ಮತವನ್ನು) ಆತ್ಮಯೋಗಗುಹ್ಯಂ=ಪರಮಾತ್ಮಜ್ಞಾನೋಪಾಯರಹಸ್ಯವನ್ನು ಅಭಿದತ್ತೇ=ಹೇಳುವನೋ ಸಃ=ಅವನು ಸುಪರ್ಣಕೇತೌ=ಗರುಡಧ್ವಜನಾದ ಭಗವತಿ=ಪರಮಾತ್ಮನ ವಿಷಯದಲ್ಲಿ ಕೃತಧೀಃ=ಅಪರೋಕ್ಷ ಜ್ಞಾನಪಡೆದವನಾಗಿ ಭಗವತ್ಪದಾರವಿಂದಂ ಉಪಲಭತೇ=ಶ್ರೀಹರಿಯ ಪಾದಾರವಿಂದವನ್ನು ತಲುಪುವನು. ॥೩೭॥

ಇಲ್ಲಿಗೆ ಶ್ರೀಮದ್ಭಾಗವತ ತೃತೀಯ ಸ್ಕಂಧದ ಯಾದುಪತ್ಯ ವಿಜಯಧ್ವಜೀ ಅನುಸಾರ ತಾತ್ಪರ್ಯ ಸಹಿತ ಕನ್ನಡಾನುವಾದ ಸಮಾಪ್ತವಾಯಿತು ಶ್ರೀಅಸ್ಮದ್‌ಗುರ್ವಂತರ್ಗತಶ್ರೀಮಧ್ವಾಂತರ್ಗತಬಾದರಾಯಣಃಪ್ರೀಯತಾಂ.

*ಇಲ್ಲಿಗೆ ತೃತೀಯಸ್ಕಂಧಮುಗಿಯಿತು.*

*॥ ಶ್ರೀಕೃಷ್ಣಾರ್ಪಣಮಸ್ತು ॥*

# ಮೂವತ್ನಾಲ್ಕನೆಯೆ ಅಧ್ಯಾಯದ ತಾತ್ಪರ್ಯ

ಮೈತ್ರೇಯ - ವಿದುರ ! ತನ್ನ ಶುಶ್ರೂಷೆಯಿಂದ ಕರ್ದಮರನ್ನು ಒಲಿಸಿಕೊಂಡು ಅವರ ಪ್ರೀತಿಯನ್ನು ಸಂಪಾದಿಸಿದ್ದ ಕಪಿಲರೂಪಿಯಾದ ಶ್ರೀಹರಿಯ ತಾಯಿಯೆನಿಸಿದ್ದ ದೇವಹೂತಿಯು ಕಪಿಲನ ಈ ಉಪದೇಶವನ್ನು ಸಾವಧಾನ ಮನಸ್ಸಿನಿಂದ ಕೇಳಿ ತನ್ನ ಅಜ್ಞಾನಾಂಧಕಾರವನ್ನು ಹೋಗಲಾಡಿಸಿಕೊಂಡಳು. ಅವಳಿಗೆ ಶ್ರೀಹರಿಯ ವಿಷಯದಲ್ಲಿದ್ದ ಅಜ್ಞಾನವು ಹೋಯಿತು. ತತ್ವಜ್ಞಾನಿಗಳಾದ ಬ್ರಹ್ಮಮೊದಲಾದ ಸಿದ್ಧಪುರುಷರಿಗೆ ಆಶ್ರಯನಾದ ಕಪಿಲನಿಗೆ ತಾನು ತಾಯಿಯೆಂಬ ಅಭಿಮಾನವನ್ನು ತೊರೆದು ಭಕ್ತಿಯಿಂದ ಬಲವಂದು ನಮಸ್ಕರಿಸಿದಳು.

ಆಗ ಆಕೆ ಕೈಗಳನ್ನು ಜೋಡಿಸಿ 'ಪ್ರಭೋ ! ಸಮಸ್ತ ಜಗತ್ತಿಗೂ ಮಂಗಳವಾಗಲಿ. ಪ್ರಳಯದ ಕೊನೆಯಲ್ಲಿ ನಿನ್ನ ನಾಭಿಕಮಲದಿಂದ ಸೃಷ್ಟರಾದ ಚತುರ್ಮುಖ ಬ್ರಹ್ಮದೇವರು ಆ ಪ್ರಳಯೋದಕದಲ್ಲಿ ಮಲಗಿದ್ದ ನಿನ್ನ ರೂಪವನ್ನು ಧ್ಯಾನಮಾಡಿದರು. ಪಂಚಭೂತಗಳಿಗೂ ಇಂದ್ರಿಯಗಳಿಗೂ ವಿಷಯಗಳಿಗೂ ಮನಸ್ಸಿಗೂ ಉಪಾದಾನಕಾರಣವಾದ ಪ್ರಕೃತಿಗೆ ನಿಯಾಮಕಳಾದ ಲಕ್ಷ್ಮಿಗೂ ಪ್ರಧಾನನು ನೀನು. ಸೃಷ್ಟಿಕಾಲದಲ್ಲಿ ಸತ್ವ ಮೊದಲಾದ ಗುಣಗಳನ್ನು ಪ್ರವರ್ತಿಸುವವನು ನೀನು. ಸಂತತವಾಗಿ ಜ್ಞಾನಾನಂದಾದಿ ಗುಣಪೂರ್ಣನು ನೀನು. ಆ ನಿನ್ನ ಚಿದಾನಂದಾತ್ಮಕ ದೇಹವು ಸತ್ಯವಾದುದು; ಮಾಯಿಕವಲ್ಲ. ನೀನು ಸಮಸ್ತ ಜಗತ್ತನ್ನೂ ಸೃಷ್ಟಿಸಿ ಅದಕ್ಕೆ ನಿಮಿತ್ತ ಕಾರಣನಾಗಿರುವೆ. ನಿನ್ನ ದೇಹಕ್ಕೂ ನಿನಗೂ ಸ್ವಲ್ಪವೂ ಭೇದವಿಲ್ಲ. ಸೃಷ್ಟರಾದ ಬ್ರಹ್ಮಾದಿ ಚೇತನರಲ್ಲಿ ಪ್ರವರ್ತಕರೂಪಗಳಿಂದ ನೀನೇ ಇದ್ದುಕೊಂಡು ನಿನ್ನ ಸಾಮರ್ಥ್ಯವನ್ನು ವಿಭಾಗಮಾಡಿಕೊಂಡಿರುವೆ. ಸತ್ಯಸಂಕಲ್ಪನಾದ ನಿನಗೆ ಸೃಷ್ಟ್ಯಾದಿ ಕಾರ್ಯಗಳು ಆಯಾಸಕರಗಳಲ್ಲ. ನಿನಗೆ ನಿಯಾಮಕರಿಲ್ಲ. ನೀನೇ ಸರ್ವರಿಗೂ ನಿಯಾಮಕನು. ನಿನ್ನ ಅನಂತ ಸಾಮರ್ಥ್ಯವನ್ನು ಯಾರೂ ಊಹಿಸಲಾರರು. ವಟಪತ್ರಶಾಯಿಯಾಗಿದ್ದ ನೀನೇ ಜಗತ್ತಿನ ಸೃಷ್ಟ್ಯಾದ್ಯಷ್ಟಕಗಳನ್ನು ನ್ಯೂನಾತಿರೇಕ-ಗಳಿಲ್ಲದೆ ಮಾಡುತ್ತೀ. ಪ್ರಳಯಕಾಲದಲ್ಲಿ ಈ ಎಲ್ಲ ಜಗತ್ತನ್ನೂ ನಿನ್ನ ಉದರದಲ್ಲಿಟ್ಟುಕೊಂಡು ನಿನ್ನ ಇಚ್ಛೆಯಿಂದಲೇ ಶಿಶುರೂಪನಾಗಿ ಕಾಲ ಹೆಬ್ಬೆರಳನ್ನು ಸವಿಯುತ್ತಾ ಒಬ್ಬನೇ ವಟಪತ್ರದಲ್ಲಿ ಪವಡಿಸುವೆ. ಹೀಗೆ ಜಗದುದರನಾದ ನಿನ್ನನ್ನು

ಈ ನನ್ನ ಸಣ್ಣ ಉದರವು ಧರಿಸಲಾದೀತೇ ? ಆದರೂ ಧರಿಸಿದ್ದೆನೆಂಬುದು ಅತ್ಯಾಶ್ಚರ್ಯ. ಇದೂ ನಿನ್ನ ಅಚಿಂತ್ಯಾದ್ಭುತಶಕ್ತಿಯ ಒಂದು ನಿದರ್ಶನವಲ್ಲವೇ ! ಸರ್ವತ್ರ ವ್ಯಾಪ್ತನಾದ ನೀನು ನನ್ನ ದೇಹದಿಂದ ಪ್ರಕಾಶವನ್ನು ಹೊಂದಿದೆ. ನಿನ್ನ ಚಿದಾನಂದಾತ್ಮಕ ದೇಹಕ್ಕೆ ನನ್ನ ಭೌತಿಕದೇಹವು ಎಂದೂ ಕಾರಣವಲ್ಲ. ನೀನು ವರಾಹಾದ್ಯವತಾರಗಳನ್ನು ಮಾಡಿ ಹಿರಣ್ಯಾಕ್ಷಾದಿ ದೈತ್ಯರನ್ನು ಸಂಹರಿಸಿ ನಿನ್ನ ಆಜ್ಞಾನುವರ್ತಿಗಳಾದ ದೇವತೆಗಳಿಗೆ ಅಭ್ಯುದಯವನ್ನು ತಂದುಕೊಟ್ಟಂತೆ ಈ ಕಪಿಲಾವತಾರವನ್ನೂ ಮಾಡಿ ಕಾಲಕ್ರಮದಲ್ಲಿ ನಷ್ಟವಾಗಿದ್ದ ನಿನ್ನ ಜ್ಞಾನಮಾರ್ಗವನ್ನು ಮತ್ತೆ ಪ್ರಕಾಶಮಾಡಿ ಸಜ್ಜನರನ್ನು ಉದ್ಧರಿಸಿದೆ. ಎಂತಹ ಶ್ವಪಚನಾದರೂ ನಿನ್ನ ನಾಮಗಳ ಶ್ರವಣ, ಕೀರ್ತನ, ಭಕ್ತಿ ಮತ್ತು ಸವಿನೆನಪುಗಳಿಂದ ಒಮ್ಮೆ ಮಾಡಿದರೂ ಕೂಡಲೆ ಪವಿತ್ರನಾಗಿ ಯಾಗಾರ್ಹನಾಗುವನು. ಅಂದಮೇಲೆ ನಿನ್ನನ್ನು ಕಂಡೂ ಕೃತಾರ್ಥನಾಗದಿರುವನಿರುವನೇ ? ನಿನ್ನ ದರ್ಶನವನ್ನು ಪಡೆದ ನಾನು ಸ್ತ್ರೀಯಾದರೂ ಧನ್ಯಳಾದೆನು. ಯಾವಾಗಲೂ ಭಕ್ತಿಯಿಂದ ನಿನ್ನ ನಾಮಸ್ಮರಣೆ ಮಾಡುವ ಚಂಡಾಲನು ನಿನ್ನ ಭಕ್ತನಲ್ಲದ ಸೋಮಾದಿ ಯಾಗಕರ್ತನಾದ ಬ್ರಾಹ್ಮಣನಿಗಿಂತ ಉತ್ತಮೋತ್ತಮನು. ನಿನ್ನ ನಾಮದ ಮಹಿಮೆಯೇ ಇದು. ನಿನ್ನ ಭಕ್ತರಾದ ಚಂಡಾಲರು ಈ ಹುಟ್ಟಿನಲ್ಲಿ ಚಂಡಾಲರಾಗಿದ್ದರೂ ಹಿಂದೆ ನಿನ್ನನ್ನು ಕುರಿತು ತಪಸ್ಸು ಮಾಡಿದವರೇ; ದೇವತೆಗಳನ್ನು ಉದ್ದೇಶಿಸಿ ಯಾಗಗಳನ್ನು ಮಾಡಿದವರೇ. ವೇದವನ್ನು ಅಧ್ಯಯನ ಮಾಡಿದವರೇ. ಹಾಗಿಲ್ಲದಿದ್ದಲ್ಲಿ ವಿಷ್ಣುಭಕ್ತಿಯು ಅವರಿಗೆ ಬರುತ್ತಿರಲಿಲ್ಲ.

ನನಗೆ ನಿನ್ನ ಉಪದೇಶದ ಫಲವಾಗಿ ದೇಹಾಭಿಮಾನವು ಬಿಟ್ಟುಹೋಗಿದೆ. ನಿನ್ನನ್ನು ಪರಿಪೂರ್ಣಗುಣನೆಂದೂ ಸರ್ವೋತ್ತಮನೆಂದೂ ವಿಷಯಾಸಕ್ತಿಯನ್ನು ಬಿಟ್ಟು ನಿನ್ನಲ್ಲಿಯೇ ಸಂತತವಾಗಿ ಮನಸ್ಸನ್ನಿಟ್ಟು ಧ್ಯಾನಿಸುವವರಿಗೆ ಮಾತ್ರ ಪ್ರತ್ಯಕ್ಷನಾಗುವನೆಂದೂ ನಿನ್ನ ಸಾಮರ್ಥ್ಯದಿಂದಲೇ ನಿತ್ಯಮುಕ್ತನಾಗಿರುವನೆಂದೂ ತಿಳಿದಿದ್ದೇನೆ. ಸರ್ವತ್ರ ವ್ಯಾಪ್ತನಾಗಿ ಬಲಾನಂದಸ್ವರೂಪನಾದ ವಿಷ್ಣುವೇ (ನಾರಾಯಣನೇ) ಕಪಿಲನಾದ ನೀನು. ನಿನ್ನನ್ನು ಹೀಗೆಂದು ವೇದಗಳು ಹೇಳುತ್ತಿವೆ. ನೀನೇ ಸಕಲವೇದ ತಾತ್ಪರ್ಯನು. ವೇದಗಳನ್ನು ನಿನ್ನಲ್ಲಿ ಧರಿಸಿರುವ ನೀನು ಗುಣಗಾನ ಮಾಡುವುದರಿಂದ ಅತಿಪ್ರಿಯಗಳಾದ ಅವುಗಳಲ್ಲಿ ಪ್ರವೇಶಿಸಿರುವೆ. ಆ ವೇದಗಳನ್ನು ವಿಸ್ತರಿಸಿ ಕಾಪಾಡುವವನೂ ನೀನೇ. ಇದೋ ನಿನಗೆ ಸಾಷ್ಟಾಂಗ ನಮಸ್ಕಾರ ಎಂದು ಸ್ತೋತ್ರಮಾಡಿ ಪ್ರಣಾಮ ಮಾಡಿದಳು.

ಮೈತ್ರೇಯ - ಹೀಗೆ ಪರಮಪುರುಷನಾದ ಕಪಿಲರೂಪಿ ಶ್ರೀಹರಿಯು ತಾಯಿಯಿಂದ ಸ್ತೋತ್ರಮಾಡಿಸಿಕೊಂಡು ಭಕ್ತಳಾದ ತಾಯಿಯಲ್ಲಿ ವಾತ್ಸಲ್ಯಯುಕ್ತ-ನಾಗಿ ಆಕೆಯಲ್ಲಿ ಅನುಗ್ರಹ ಮಾಡುತ್ತಾ ವೈಕ್ಲವ್ಯರಹಿತವಾದ ಮಾತುಗಳಿಂದ ಅಮ್ಮಾ! ನಾನು ಹೇಳಿದ ಈ ಮಾರ್ಗವು ಮುಕ್ತಿಯೋಗ್ಯರಿಂದ ಭಕ್ತಿಪೂರ್ವಕ ಸೇವ್ಯವಾದುದು. ಈ ಮಾರ್ಗವನ್ನು ನೀನೂ ಅನುಷ್ಠಾನಮಾಡು. ವಿಳಂಬವಿಲ್ಲದೆ ನಿನ್ನ ಯೋಗ್ಯತೆಗೆ ತಕ್ಕಂತೆ ಪೂರ್ಣವಾದ ನಿನ್ನ ಸ್ವರೂಪಾನಂದಾತಿಶಯವು ಅಭಿವ್ಯಕ್ತವಾಗುವುದು. ಅದು ನಿತ್ಯವಾಗಿರುವುದು. ನಾನು ಹೇಳಿದ ಈ ಮತವನ್ನು ತಾಂತ್ರಿಕವೆಂದು ತಿಳಿಯಬೇಡ. ಇದು ವೈದಿಕರು ಅನುಷ್ಠಿಸುವ ವೇದದ ಮತ. ಇದರಂತೆ ಉಪಾಸಿಸುವವನು ಸರ್ವಭಯರಹಿತನಾಗಿ ಅಭಯನಾದ ನನ್ನನ್ನು ಹೊಂದುವನು. ಈ ನನ್ನ ಮತವನ್ನು ಪ್ರಾಮಾಣಿಕವೆಂದು ನಂಬು. ಇದನ್ನು ನಂಬದೆ ಇದರಂತೆ ಉಪಾಸನೆ ಮಾಡದೆ ಇರುವವರು ಸಂಸಾರದಲ್ಲಿಯೇ ತೊಳಲುವರು. ಇದಕ್ಕೆ ವಿರುದ್ಧವಾದ ಐಕ್ಯಮತವನ್ನು ಪ್ರಾಮಾಣಿಕವೆಂದು ಉಪಾಸಿಸುವವರು ಅಂಧಂತಮಸ್ಸೆಂಬ ನಿತ್ಯಮೃತ್ಯುರೂಪವಾದ ನರಕವನ್ನು ಸೇರುವರು.' ಎಂದು ನುಡಿದನು.

ಮೈತ್ರೇಯ - ವಿದುರ ! ಕಪಿಲನು ತಾಯಿಗೆ ಉಪದೇಶಿಸಿದ ಈ ಪರಮಾತ್ಮಜ್ಞಾನವು ಶ್ರೀಹರಿಯ ಅತ್ಯುತ್ತಮ ಪ್ರಸಾದಕ್ಕೆ ಕಾರಣವಾದುದು. ಮೋಕ್ಷ ಮೊದಲಾದ ಸಮಸ್ತಾಭೀಷ್ಟಗಳನ್ನೂ ಕೊಡುವುದು. ಇದನ್ನು ತಾಯಿಗೆ ಉಪದೇಶಿಸಿದ ಕಪಿಲನು ಆಕೆಗೆ ಅದರಲ್ಲಿ ನಂಬುಗೆ ಹುಟ್ಟುವಂತೆ ತನ್ನ ಸ್ವರೂಪ ಸ್ಥಿತಿಯನ್ನೂ ತೋರಿಸಿ, ಬ್ರಹ್ಮವಾದಿನಿಯಾದ ಆಕೆಯಿಂದ ಅನುಮತಿಯನ್ನು ಪಡೆದು ಆ ಆಶ್ರಮದಿಂದ ಹೊರಹೊರಟನು. ಬ್ರಹ್ಮಜ್ಞಾನಿಯಾದ ಆಕೆಯು ಕಪಿಲನ ವಿರಹವು ಅಪರಿಹಾರ್ಯವೆಂದೂ, ಅಂತರ್ಯಾಮಿಯಾಗಿ ಅವನು ತನ್ನಲ್ಲಿಯೇ ನೆಲಸಿರುವನೆಂದೂ ತಿಳಿದವಳಾದ್ದರಿಂದ ಮಗನಿಗೆ ಹೊರಡಲು ಅನುಮತಿಯಿತ್ತಳು.

ದೇವಹೂತಿಯಾದರೋ ಸರಸ್ವತೀ ನದೀತೀರದ ಆ ಆಶ್ರಮದಲ್ಲಿಯೇ ಉಳಿದಳು. ಮಗನೆನಿಸಿದ ಕಪಿಲರೂಪಿಯು ಉಪದೇಶಿಸಿದ ಜ್ಞಾನೋಪಾಯದ ಫಲವಾಗಿ ಅವಳ ಮನಸ್ಸು ಸಮಾಧಾನದಿಂದ ಕೂಡಿತ್ತು. ಯಾವಾಗಲೂ ಭಗವದ್ಧ್ಯಾನದಲ್ಲಿಯೇ ನಿರತಳಾದಳು. ನಿತ್ಯವೂ ಕೊಳದಲ್ಲಿ ಸ್ನಾನಮಾಡಿ ಅವಳ ಕೂದಲು ಮಾಸಲುಕೆಂಪಾಯಿತು. ಜಡೆ ಹೊಸೆದುಕೊಂಡಿತು. ಮುಂಗೂದಲು ವಕ್ರವಾಗಿ ಹಣೆಯಲ್ಲಿ ಬೀಳುತ್ತಿತ್ತು. ಉಗ್ರವಾದ ತಪಸ್ಸಿನಿಂದ ದೇಹವು ಕೃಶವಾಯಿತು. ಮೈಮೇಲಿನ ಬಟ್ಟೆಯು ಹರಿದುಹೋಯಿತು. ಅವಳು

ಅನುಭವಿಸಿದ್ದ ಗಾರ್ಹಸ್ಥ್ಯವೇನೂ ಸಾಮಾನ್ಯವಾದುದಾಗಿರಲಿಲ್ಲ. ಪ್ರಜೇಶ್ವರರಾದ ಕರ್ದಮರು ತಮ್ಮ ತಪಃ ಪ್ರಭಾವದಿಂದ ದೇವತೆಗಳೂ ಅಪೇಕ್ಷಿಸುವ ಅನುಪಮವಾದ ಗೃಹವನ್ನು ಸೃಷ್ಟಿಸಿದ್ದರು. ಅದರಲ್ಲಿ ಆನೆಯ ದಂತದ ಮಂಚಗಳಲ್ಲಿ ಬಂಗಾರದ ಅಲಂಕರಣಗಳೊಂದಿಗೆ ಹಾಲಿನ ನೊರೆಯಂತೆ ಮೃದು ಮತ್ತು ಬೆಳ್ಳಗಿರುವ ಹಾಸಿಗೆಗಳು ಸಜ್ಜಗೊಂಡಿದ್ದವು. ಎಲ್ಲಿ ನೋಡಿದರೂ ಬಂಗಾರದ ಪೀಠಗಳು. ಅವುಗಳ ಮೇಲೆ ಮೆತ್ತನೆಯ ಮೇಲ್ಹಾಸುಗಳು. ಕೆಲವೆಡೆ ಶುದ್ಧವಾದ ಸ್ಫಟಿಕಶಿಲೆಯ ಗೋಡೆಗಳು. ಮತ್ತೆ ಕೆಲವೆಡೆ ಮಹಾಮರಕತಮಣಿಯ ಭಿತ್ತಿಗಳು. ಇವುಗಳಲ್ಲಿ ರೂಪಿಸಿದ್ದ ಸುಂದರ ಸ್ತ್ರೀಯರ ಕೈಗಳಲ್ಲಿ ಶೋಭಿಸುತ್ತಿದ್ದ ರತ್ನದೀಪಿಗೆಗಳ ಪ್ರಕಾಶವು ಎಲ್ಲೆಡೆಯಲ್ಲೂ ಪ್ರಸರಿಸುತ್ತಿತ್ತು. ಮನೆಯ ಮುಂದೆ ರಮ್ಯವಾದ ಉದ್ಯಾನ. ಅನೇಕಾನೇಕ ದೇವವೃಕ್ಷಗಳು ಹೂಗಳಿಂದ ತುಂಬಿ ಶೋಭಿಸುತ್ತಿದ್ದುವು. ಅವುಗಳಲ್ಲಿ ಕುಳಿತಿದ್ದ ಹಕ್ಕಿ ಮಿಥುನಗಳು ದನಿಗೈಯ್ಯುತ್ತಿದ್ದುವು. ಮದಿಸಿದ ದುಂಬಿಗಳ ಝೇಂಕಾರವು ಬೇರೆ. ಆ ಉದ್ಯಾನದಲ್ಲೊಂದು ಕೊಳ. ಅದರ ನೀರು ನೈದಿಲೆಹೂಗಳಿಂದ ಸುವಾಸಿತವಾಗಿತ್ತು. ಪತಿಯಾದ ಕರ್ದಮರ ಪ್ರೀತಿಗೆ ಪಾತ್ರಳಾದ ದೇವಹೂತಿಯು ಆ ನೀರಿನಲ್ಲಿ ಮೀಯುತ್ತಿದ್ದಳು. ಆಕೆಯನ್ನು ಗಂಧರ್ವರು ಗಾನಮಾಡುತ್ತಿದ್ದರು. ಇಂದ್ರನ ಸ್ತ್ರೀಯರೂ ಅಪೇಕ್ಷೆಪಡುವ ಎಂತಹ ಗೃಹಸ್ಥ ಸೌಖ್ಯವದು ! ಇದನ್ನೂ ಅಸಾರತಾಬುದ್ಧಿಯಿಂದ ತ್ಯಜಿಸಿದ್ದ ದೇವಹೂತಿಗೆ ದುಃಖವಿರಲಿಲ್ಲ. ಆದರೆ ಮಗನಾದ ಕಪಿಲನು ಹೋದಮೇಲೆ ವಿರಹದುಃಖದಿಂದ ಭಕ್ತಳಾದ ಆಕೆಯ ಮುಖವು ಸ್ವಲ್ಪ ಬಾಡಿತು. ಜ್ಞಾನಿಯಾದ ಆಕೆಗೆ ಅದಕ್ಕಿಂತ ಹೆಚ್ಚು ದುಃಖವಾಗಲಿಲ್ಲ. ಪತಿಯು ಅರಣ್ಯಕ್ಕೆ ಹೋದಾಗಲೂ ಆಕೆ ದುಃಖಪಡದೆ ಇದ್ದರು. ಮಗನಿಂದ ತತ್ತ್ವೋಪದೇಶವನ್ನು ಪಡೆದೂ ಮಗನ ವಿರಹದಿಂದ ಕಾತುರರಾದರು. ವತ್ಸಲೆಯಾದ ಆಕೆ ಕರುವನ್ನು ಕಳೆದುಕೊಂಡ ಹಸುವಿನಂತೆ ಕೊರಗಿದರು.

ಹೀಗೆ ದುಃಖಕ್ಕೀಡಾಗಿದ್ದರೂ ದೇವಹೂತಿ ಶ್ರೀಹರಿಯ ಉಪಾಸನೆಯನ್ನು ಬಿಡಲಿಲ್ಲ. ತನಗೆ ತತ್ತ್ವೋಪದೇಶ ಮಾಡಿದ ಕಪಿಲನನ್ನೇ ಶ್ರೀಹರಿಯೆಂದು ಧ್ಯಾನಿಸುತ್ತ ಗೃಹಸ್ಥಸುಖಗಳಲ್ಲಿ ನಿರಾಶರಾದರು. ಭಗವಂತನ ಉಪದೇಶದಂತೆ ಶ್ರೀಹರಿಯರೂಪನಾದ ಕಪಿಲನ ಮಗನ ಪ್ರಸನ್ನವಾದ ಮುಖವನ್ನೇ ಧ್ಯಾನಮಾಡು-ತ್ತಿದ್ದರು. ಒಮ್ಮೆ ಅವನ ಸಮಗ್ರರೂಪವನ್ನೇ ಧ್ಯಾನಿಸುವರು. ಮತ್ತೊಮ್ಮೆ ಅವನ ಒಂದೊಂದು ಅವಯವಗಳನ್ನೇ ಧ್ಯಾನಿಸುವರು. ಹೀಗೆ ಶ್ರೀಹರಿಯಲ್ಲಿ ಸರ್ವೋತ್ತಮನೆಂಬ ಜ್ಞಾನದಿಂದ ಕೂಡಿದ ಆಕೆಯ ಭಕ್ತಿಯು ಪ್ರವಾಹದಂತೆ ಸಂತತವಾಗಿ ಹರಿಯ ತೊಡಗಿತು. ಸ್ವರ್ಗಾದಿ ಸುಖಗಳು ಪುರುಷಾರ್ಥಗಳಲ್ಲವೆಂಬ ದಾರ್ಢ್ಯವು ಹೆಚ್ಚಿ ಜಗತ್ತೇ ಅಸಾರವೆಂಬ ಭಾವನೆಯು ಬಲವಾಯಿತು. ಶಾಸ್ತ್ರಾರ್ಥ

ನಿಶ್ಚಯವು ಚೆನ್ನಾಗಿ ಆಗಿದ್ದುದರಿಂದ ಜೀವ ಪರಮಾತ್ಮರು ಒಂದೇ ಎಂಬ ಜ್ಞಾನವಾಗಲಿ, ಒಂದೋ ಏನೋ ಎಂಬ ಸಂದೇಹವಾಗಲಿ ಆಕೆಗೆ ಉಳಿದಿರಲಿಲ್ಲ. ಇಂತಹ ಶುದ್ಧವಾದ ಶ್ರೀಹರಿಯ ಜ್ಞಾನವು ಅಖಂಡ ಧ್ಯಾನದ ಫಲವಾಗಿ ಆಕೆಗೆ ಮೂಡಿತ್ತು. ಅಂತಹ ಜ್ಞಾನವೇ ಶ್ರೀಹರಿಯ ಪ್ರಸಾದಕ್ಕೆ ಕಾರಣವಾದುದು. ಶ್ರೀಹರಿಯು ಪ್ರಸನ್ನನಾಗಿ ತನ್ನ ಚಿದಾನಂದರೂಪವನ್ನು ಆಕೆಗೆ ತೋರಿಸಿದನು. ದೇವಹೂತಿ ತಮ್ಮ ಸ್ವರೂಪ ಮನಸ್ಸಿನಿಂದ ಬಿಂಬರೂಪನಾದ ಶ್ರೀಹರಿಯನ್ನು ಕಂಡರು. ಸರ್ವಜ್ಞನೂ ಸ್ವಾಭಾವಿಕವಾಗಿ ಸ್ವಾನುಭವದಿಂದ ಪ್ರಕೃತಿಗುಣಸಂಬಂಧ-ರಹಿತನೂ ಆದ ಶ್ರೀಹರಿಯ ಅಪರೋಕ್ಷಕ್ಕಿಂತ ಉತ್ತಮವಾದ ಮತ್ತೊಂದು ಪುರುಷಾರ್ಥವಿಲ್ಲ. ಬಿಂಬಾಪರೋಕ್ಷವನ್ನು ಪಡೆದ ದೇವಹೂತಿಯು ಜೀವನ್ಮುಕ್ತಾ-ವಸ್ಥೆಯಲ್ಲಿದ್ದರು. ತನಗೆ ತಾನೇ ಆಶ್ರಯನೂ, ಸರ್ವಗುಣಪೂರ್ಣನೂ ಕಾಲ ದೇಶ ಗುಣಗಳಿಂದ ವ್ಯಾಪ್ತನೂ ಆದ ಶ್ರೀಹರಿಯಲ್ಲಿ ಆಕೆಯ ಮನಸ್ಸು ಏಕಾಗ್ರವಾಗಿ ಸ್ಥಿರವಾಗಿತ್ತು. ಲಿಂಗಶರೀರವಿದ್ದರೂ ತತ್ತ್ರಯುಕ್ತವಾದ ಶರೀರಾಭಿಮಾನವು ಹೋಗಿತ್ತಾದ್ದರಿಂದ ಬಾಹ್ಯವಾದ ಜೀವೋಪಾಧಿಯು ಹೋದಂತಾಗಿತ್ತು. ಶರೀರಾಭಿಮಾನವೇ ಇಲ್ಲದ ಮೇಲೆ ದುಃಖವೆಲ್ಲಿ ? ಆಕೆ ಪರಮಾನಂದ ಮಗ್ನರಾಗಿದ್ದರು. ಯಾವಾಗಲೂ ಶ್ರೀಹರಿಯನ್ನೇ ಧ್ಯಾನಿಸುತ್ತಿದ್ದ ದೇವಹೂತಿಗೆ ಶಬ್ದಾದಿ ವಿಷಯಗಳು ಸುಖಕರವೆಂಬ ಭ್ರಾಂತಿಯು ಸಂಪೂರ್ಣವಾಗಿ ನಾಶವಾಯಿತು. ಸ್ವಪ್ನದಿಂದ ಎಚ್ಚೆತ್ತವನು ನಶ್ವರವಾದ ಸ್ವಪ್ನಪದಾರ್ಥಗಳನ್ನು ಅಪೇಕ್ಷಿಸದೆ ಇರುವಂತೆ ಆಕೆಯೂ ತನ್ನ ದೇಹಾಪೇಕ್ಷೆಯನ್ನು ತೊರೆದು ಭೌತಿಕದೇಹವನ್ನು ನೆನಸದಾದರು. ಆಕೆಯ ದೇಹವು ಯಾವ ವಿಧವಾದ ಪೋಷಣೆಯಿಲ್ಲದಿದ್ದರೂ ಕೃಶವಾಗಲಿಲ್ಲ. ಮನೋವ್ಯಥೆಗೆ ಅವಕಾಶವೇ ಇರಲಿಲ್ಲವಾಗಿ ದೇಹಕೃಶತೆಗೂ ಕಾರಣವಿರಲಿಲ್ಲ. ಧೂಳು ಮುಚ್ಚಿದ್ದ ಆಕೆಯ ದೇಹವು ಹೊಗೆಯಿಂದ ಕೂಡಿದ್ದ ಬೆಂಕಿಯಂತೆ ಒಳಗೇ ಹೊಳೆಯುತ್ತಿತ್ತು. ತಪೋಯೋಗದಿಂದ ಪೂರ್ಣವಾಗಿದ್ದ ಆ ದೇಹವನ್ನು ಶ್ರೀಹರಿಯೇ ಕಾಪಾಡುತ್ತಿದ್ದನು. ತಪಸ್ವಿನಿಯಾದ ದೇವಹೂತಿ ಶ್ರೀಹರಿಯನ್ನೇ ಧ್ಯಾನಿಸುತ್ತಿದ್ದುದರಿಂದ ಕೂದಲು ಬಿಚ್ಚಿಹೋದುದನ್ನಾಗಲಿ ಬಟ್ಟೆಯು ಜಾರಿದುದನ್ನಾಗಲಿ ಅರಿಯಲಿಲ್ಲ. ಹೀಗೆ ಶರೀರಾಭಿಮಾನವನ್ನೇ ಬಿಟ್ಟಿದ್ದ ಆಕೆಗೆ ಮನೋದುಃಖವೆಲ್ಲಿಯದು ? ಕೆಲಕಾಲಾ-ನಂತರ ಪ್ರಾರಬ್ಧಕರ್ಮವು ಮುಗಿದಮೇಲೆ ಆ ಭೌತಿಕದೇಹವು ಬಿದ್ದು ಹೋಯಿತು. ಕಪಿಲೋಪದೇಶದಂತೆ ಧ್ಯಾನಿಸುತ್ತಿದ್ದ ದೇವಹೂತಿಯ ಜೀವವು ಸರ್ವವ್ಯಾಪಿಯೂ, ಸರ್ವಸ್ವಾಮಿಯೂ, ಅಪ್ರಾಕೃತಸುಖಶರೀರಿಯೂ, ಗುಣಪೂರ್ಣನೂ, ಸರ್ವೋತ್ತಮನೂ ಆದ ನಾರಾಯಣನನ್ನು (ಕಾಲಕ್ರಮದಲ್ಲಿ) ಹೊಂದಿತು.

ವಿದುರ ! ಹೀಗೆ ದೇವಹೂತಿಯು ತಪಸ್ಸಿದ್ಧಿಯನ್ನು ಪಡೆದದ್ದರಿಂದ ಆ ಪವಿತ್ರತಮವಾದ ಬಿಂದುಸರೋವರವು ಮೂರುಲೋಕದಲ್ಲಿಯೂ 'ಸಿದ್ಧಪದ' ಎಂಬ ಹೊಸ ಹೆಸರಿನಿಂದ ಪ್ರಸಿದ್ಧವಾಯಿತು. ಯೋಗಾಭ್ಯಾಸದಿಂದ ದೇವಹೂತಿಯು ಬಿಟ್ಟಿದ್ದ ಆ ದೇಹವಾದರೂ ನಾಯಿ ನರಿಗಳ ಪಾಲಾಗಲಿಲ್ಲ. ಕೂಡಲೇ ಅದು (ಕಪಿಲಾ) ನದಿಯಾಗಿ ಹರಿಯಲಾರಂಭಿಸಿತು. ಅನೇಕ ಸಿದ್ಧರು ಸ್ನಾನಪಾನಗಳಿಂದ ಅದನ್ನು ಸೇವಿಸಿದರು. ಆ ಉತ್ತಮವಾದ ನದಿಯು ಸೇವಿಸುವ ತಪಸ್ವಿಗಳಿಗೆ ಸಿದ್ಧಿಯನ್ನು ಕೊಡುವುದಾಗಿದೆ.

ತಾಯಿಯ ಅನುಮತಿಯನ್ನು ಪಡೆದ ಪೂರ್ಣಜ್ಞಾನಿ ಕಪಿಲರೂಪಿ ಶ್ರೀಹರಿಯು ತಂದೆಯ ಆಶ್ರಮದಿಂದ ಹೊರಹೊರಟು ಈಶಾನ್ಯದಿಕ್ಕಿಗೆ ನಡೆದನು. ಅವನನ್ನು ಸಿದ್ಧರೂ ಚಾರಣರೂ ಗಂಧರ್ವರೂ ಋಷಿಗಳೂ ಅಪ್ಸರೆಯರೂ ಸ್ತೋತ್ರಮಾಡುತ್ತಿದ್ದರು. ಸಮುದ್ರರಾಜನು ಬಂದು ಕಪಿಲನನ್ನು ಪೂಜಿಸಿ ತನ್ನಲ್ಲಿಯೇ ನೆಲಸಬೇಕೆಂದು ಪ್ರಾರ್ಥಿಸಿದನು. ಸನಕಾದಿ ಯೋಗೀಶ್ವರರೂ ಬ್ರಹ್ಮಾದಿ ದೇವತೆಗಳೂ ಸ್ತೋತ್ರಮಾಡುತ್ತಿರುವರು. ಶ್ರೀಕಪಿಲಭಗವಂತನು ಲೋಕಕಲ್ಯಾಣಕ್ಕಾಗಿ ಇಂದಿಗೂ ಧ್ಯಾನಯೋಗದಲ್ಲಿ ಸಮಾಧಿಸ್ಥನಾಗಿರುವನು.

ವಿಷ್ಣುಭಕ್ತನಾದ ವಿದುರ ! ಹೇಳೆಂದು ನೀನು ಕೇಳಿದ ಕಪಿಲದೇವಹೂತಿಯರ ಸಂವಾದವನ್ನು ವಿಶದವಾಗಿ ಹೇಳಿದ್ದೇನೆ. ಇದು ಪವಿತ್ರವಾದುದು. ಎಲ್ಲ ಮುಮುಕ್ಷುಗಳಿಗೂ ಅವಶ್ಯಕವಾದುದು. ಪರಮಾತ್ಮನನ್ನು ಹೊಂದುವ ಜ್ಞಾನೋಪಾಯಗಳಲ್ಲಿ ರಹಸ್ಯವಾದುದು. ಶ್ರೀಹರಿಯೇ ಉಪದೇಶಿಸಿರುವುದು. ಗರುಡಧ್ವಜನಾದ ಶ್ರೀಹರಿಯಲ್ಲಿ ಮನಸ್ಸಿಟ್ಟಿರುವ ಭಕ್ತೋತ್ತಮನು ಇದನ್ನು ಹೇಳಿದರೂ ಕೇಳಿದರೂ, ಅನುಷ್ಠಿಸಿದರೂ ಶ್ರೀಹರಿಯನ್ನು ಅಪರೋಕ್ಷೀಕರಿಸಿ-ಕೊಳ್ಳುವುದರಲ್ಲಿ ಸಂದೇಹವಿಲ್ಲ.

*॥ ಶ್ರೀಕೃಷ್ಣಾರ್ಪಣಮಸ್ತು ॥*

*ಇಲ್ಲಿಗೆ ಮೂರನೆಯ ಸ್ಕಂಧ ಮುಗಿಯಿತು.*



ಸಂಚಿಂತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಂ ।
ಉತ್ತುಂಗರಕ್ತವಿಲಸನ್ನಖಚಕ್ರವಾಳಜ್ಯೋತ್ಸ್ನಾಭಿರಾಹತಮಹದ್ಧೃದಯಾಂಧಕಾರಮ್ ॥



ಯಚ್ಛೌಚನಿಃಸ್ಸೃತಸರಿತ್ಪ್ರವರೋದಕೇನ ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ।
ಧ್ಯಾತುರ್ಮನಃಶಮಲಶೈಲನಿಸ್ಸೃಷ್ಟವಜ್ರಂ ಧ್ಯಾಯೇಚ್ಚಿರಂ ಭಗವತಶ್ಚರಣಾರವಿಂದಮ್ ॥